ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ವೈಷ್ಣವಖಂಡ

## ೮—೯

## ಅಯೋಧ್ಯಾಮಾಹಾತ್ಮ್ಯ

ಮತ್ತು

## ಶ್ರೀ ವಾಸುದೇವಮಾಹಾತ್ಮ್ಯಗಳು

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ :
ಆಸ್ಥಾನ ವಿದ್ವಾನ್
ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೬

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ವೈಷ್ಣವಖಂಡ

## ೮—೯

## ಅಯೋಧ್ಯಾಮಾಹಾತ್ಮ್ಯ

ಮತ್ತು

## ಶ್ರೀ ವಾಸುದೇವಮಾಹಾತ್ಮ್ಯಗಳು

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೭

# ಅರಿಕೆ

ಈ ಸಂಪುಟದಲ್ಲಿ ವರ್ಣಿತವಾಗಿರುವ ಶ್ರೀ ವಾಸುದೇವ ಮಾಹಾತ್ಮ್ಯದೊಂದಿಗೆ ಶ್ರೀ ಸ್ಕಾಂದಮಹಾಪುರಾಣದ ದ್ವಿತೀಯ ಮೂಲ ಖಂಡವಾದ ವೈಷ್ಣವ ಖಂಡವು ಪರಿಸಮಾಪ್ತವಾಗಿರುತ್ತದೆ. ಇಲ್ಲಿಂದ ಮುಂದಕ್ಕೆ ತೃತೀಯ ಮೂಲ ಖಂಡವಾದ ಬ್ರಹ್ಮಖಂಡವು ಉಪಕ್ರಮವಾಗುವುದು.

ಶ್ರೀ ವಾಸುದೇವ ಮಾಹಾತ್ಮ್ಯವು ವೈಷ್ಣವ ಖಂಡದಲ್ಲಿ ಬಹುಮುಖ್ಯವಾದ ಭಾಗ. ಇದು ಈ ಖಂಡದ ಜೀವರತ್ನಪ್ರಾಯವಾಗಿದೆಯೆನ್ನಬಹುದು. ಇದರಲ್ಲಿ ಬಹು ರಸವತ್ತಾಗಿ ವಿವೃತವಾಗಿರುವ ಆಧ್ಯಾತ್ಮವಿಚಾರಗಳು ಸರ್ವರಿಗೂ ಗ್ರಾಹ್ಯಗಳಾಗಿವೆ. ಭಗವಾನ್ ಕೃಷ್ಣದ್ವೈಪಾಯನರು ಶ್ರೀ ವಾಸುದೇವನ ದಿವ್ಯಸ್ವರೂಪವನ್ನೂ, ಆತನ ಅಖಂಡ ವೈಭವವನ್ನೂ ಇಲ್ಲಿ, ಮುಮುಕ್ಷುಗಳಿಗೆ ಅತ್ಯಂತ ಸುಲಭವಾಗಿ ಮನದಟ್ಟು ಮಾಡಿಕೊಟ್ಟಿರುತ್ತಾರೆ. ಅಲ್ಲದೆ ಈ ಮಾಹಾತ್ಮ್ಯದಲ್ಲಿ ವರ್ಣಿತವಾಗಿರುವ ಭಕ್ತಿ, ಭಕ್ತ, ಆರಾಧನಾಕ್ರಮ ವೊದಲಾದ ವಿಷಯಗಳು ಕಣ್ಣಿಟ್ಟು ನೋಡತಕ್ಕುವಾಗಿವೆ.

ಮಹಾಪುಣ್ಯಸಂಪಾದಕವಾದ ಈ ಮಾಹಾತ್ಮ್ಯದಲ್ಲಿಯ ಈ ಎರಡು ಶ್ಲೋಕಗಳು ಸತತವೂ, ಮನನಾರ್ಹವಾದುವು :

**ನ ವಾಸುದೇವಾತ್ಪರಮಸ್ತಿ ಪಾವನಂ**
**ನ ವಾಸುದೇವಾತ್ಪರಮಸ್ತಿ ಮಂಗಳಂ ।**
**ನ ವಾಸುದೇವಾತ್ಪರಮಸ್ತಿ ದೈವತಂ**
**ನ ವಾಸುದೇವಾತ್ಪರಮಸ್ತಿ ವಾಂಛಿತಂ ॥**

**ಯನ್ನಾಮಧೇಯಂ ಸಕೃದಪ್ಯಬುದ್ಧ್ಯಾ**
**ದೇಹಾವಸಾನೇಽಪಿ ಗೃಣಾತಿ ಯೋಽತ್ರ ।**
**ಸ ಪುಲ್ಕಸೋಽಪ್ಯಾಶು ಭವಪ್ರವಾಹಾ**
**ದ್ವಿಮುಚ್ಯತೇ ತಂ ಭಜ ವಾಸುದೇವಂ ॥**

ವಾಸುದೇವನಿಗಿಂತಲೂ ಮೇಲಾದ ಪಾವನವಸ್ತುವು ಮತ್ತೊಂದಿಲ್ಲ. ವಾಸುದೇವನಿಗಿಂತಲೂ ಬೇರೆಯಾದ ಮಂಗಳವಿಲ್ಲ. ವಾಸುದೇವನಿಗಿಂತಲೂ ಶ್ರೇಷ್ಠವಾದ ದೇವರಿಲ್ಲ. ವಾಸುದೇವನಿಗಿಂತಲೂ ಬೇರೆಯಾದ ವಾಂಛಿತವಿಲ್ಲ.

ಯಾರ ನಾಮವನ್ನು ಒಂದೇಸಲವಾದರೂ, ಬುದ್ಧಿಪೂರ್ವಕವಾಗಿ ಅಲ್ಲದಿದ್ದರೂ, ಮರಣಕಾಲದಲ್ಲಿಯೇ ಆದರೂ ಯಾವನು ಸ್ಮರಿಸುವನೋ ಅವನು ಚಂಡಾಲನೇ ಆದರೂ ಸಂಸಾರಪ್ರವಾಹದಿಂದ ಬಹುಬೇಗನೆಯೆ ಬಿಡುಗಡೆ ಹೊಂದಿಸಲ್ಪಡುತ್ತಾನೆಯೋ ಅಂಥ ವಾಸುದೇವನನ್ನು ಭಜಿಸು.

ಒಟ್ಟಿನಲ್ಲಿ ಈ ಎರಡು ಶ್ಲೋಕಗಳೇ ಈ ಮಾಹಾತ್ಮ್ಯದ ಸಾರಸರ್ವಸ್ವವೆನ್ನಬಹುದು.

ಶ್ರೀಸ್ಕಾಂದಮಹಾಪುರಾಣವು ಮೊದಲು ಮುದ್ರಿತವಾದ ಸಮಯದಲ್ಲಿ ಈ ಮಾಹಾತ್ಮ್ಯವು ದೊರಕಲಿಲ್ಲವೆಂದೂ ಇತ್ತೀಚಿಗೆ ದೊರಕಿದುದರಿಂದ ಇದೀಗ ಮುದ್ರಣಮಾಡಲಾಗಿದೆಯೆಂದೂ ಶ್ರೀ ವೇಂಕಟೇಶ್ವರ ಮುದ್ರಣಾಲಯಾಧಿಕಾರಿಗಳು ತಿಳಿಸಿರುತ್ತಾರೆ. ಶ್ರೀ ನಾರದಪುರಾಣದಲ್ಲಿ ಈ ಮಾಹಾತ್ಮ್ಯವು ಮೊದಲನೆಯ ಮಾಹೇಶ್ವರಖಂಡದಲ್ಲಿಯೇ ಬರತಕ್ಕುದೆಂದು ಹೇಳಿದೆಯಾದರೂ, ಪ್ರಸಂಗಬಲದಿಂದಲೂ ಸ್ಕಾಂದಮಹಾಪುರಾಣದ ಇತರ ಮಾತೃಕೆಗಳಲ್ಲಿ ವೈಷ್ಣವ ಖಂಡದಲ್ಲಿಯೆ ಬಂದಿರುವುದರಿಂದಲೂ ವೈಷ್ಣವ ಖಂಡಕ್ಕೇ ಸೇರತಕ್ಕುದೆಂದು ನಿರ್ಣಯಿಸಿ ಅಲ್ಲಿಯೇ ಅಚ್ಚುಮಾಡಲಾಗಿದೆಯೆಂದೂ ಅವರು ತಿಳಿಸಿದ್ದಾರೆ; ಇದು ಸೂಕ್ತವಾಗಿದೆ. ಮಾಹೇಶ್ವರ ಖಂಡದಲ್ಲಿ ಶಿವಸರ್ವೋತ್ಕೃಷ್ಟತ್ವವೂ, ವಿಷ್ಣುಖಂಡದಲ್ಲಿ ವಿಷ್ಣುಸರ್ವೋತ್ಕೃಷ್ಟತ್ವವೂ ಪ್ರತಿಪಾದಿತವಾಗಿರುವುದರಿಂದ ಶ್ರೀ ವಾಸುದೇವ ಮಾಹಾತ್ಮ್ಯವು ವೈಷ್ಣವ ಖಂಡಕ್ಕೇ ಸೇರಬೇಕಾಗಿದೆ.

ಈ ಸಂಪುಟದಲ್ಲಿ ಪ್ರಕಟವಾಗಿರುವ ಮತ್ತೊಂದು ಮಾಹಾತ್ಮ್ಯ ಅಯೋಧ್ಯಾ ಮಾಹಾತ್ಮ್ಯ; ಇದು ಎಂಟನೆಯದು; ಒಂಬತ್ತನೆಯದೇ ಶ್ರೀ ವಾಸುದೇವ ಮಾಹಾತ್ಮ್ಯವು.

ಈ ಸಂಪುಟದ ಅನುವಾದ ಕಾರ್ಯದಲ್ಲಿ ನನ್ನ ಮಾನ್ಯ ಮಿತ್ರರಾದ ಶ್ರೀ॥ ಎಲ್. ಗುಂಡಪ್ಪ, ಎಂ.ಎ. ಅವರು ಸಹಭಾಗಿಗಳು; ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳನ್ನು ಸೂಚಿಸಬಯಸುತ್ತೇನೆ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯನ್ನೆಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಽಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

## ಶ್ರೀ ಅಯೋಧ್ಯಾಮಾಹಾತ್ಮ್ಯ

ಪುಟ ಸಂಖ್ಯೆ

ಒಂದನೆಯ ಅಧ್ಯಾಯ—

ಶ್ರೀವಿಷ್ಣುಹರಿಮಾಹಾತ್ಮ್ಯವರ್ಣನ .. .. .. ೧– ೧೯

ಎರಡನೆಯ ಅಧ್ಯಾಯ—

ಬ್ರಹ್ಮಕುಂಡ, ಸಹಸ್ರಧಾರಾತೀರ್ಥಮಾಹಾತ್ಮ್ಯವರ್ಣನ .. ೨೦– ೩೪

ಮೂರನೆಯ ಅಧ್ಯಾಯ—

ಸಹಸ್ರಚಂದ್ರವ್ರತೋದ್ಯಾಪನವಿಧಿವರ್ಣನ .. .. ೩೫– ೪೮

ನಾಲ್ಕನೆಯ ಅಧ್ಯಾಯ—

ಧರ್ಮಹರಿ–ಸ್ವರ್ಣಖನಿಗಳ ಮಾಹಾತ್ಮ್ಯವರ್ಣನ .. .. ೪೯– ೬೧

ಐದನೆಯ ಅಧ್ಯಾಯ—

ತಿಲೋದಕೀಪ್ರಭಾವವರ್ಣನ .. .. .. ೬೨– ೬೬

ಆರನೆಯ ಅಧ್ಯಾಯ—

ಸ್ವರ್ಗದ್ವಾರ–ಗೋಪ್ರತಾರತೀರ್ಥಮಾಹಾತ್ಮ್ಯವರ್ಣನ .. ೬೭–೧೦೨

ಏಳನೆಯ ಅಧ್ಯಾಯ—

ಬೃಹಸ್ಪತಿಕುಂಡ, ರುಕ್ಮಿಣೀಕುಂಡ, ಧನಯಕ್ಷತೀರ್ಥ, ವಸಿಷ್ಠ
ಕುಂಡ, ಸಾಗರಕುಂಡ, ಯೋಗಿನೀಕುಂಡ, ಉರ್ವಶೀಕುಂಡ,
ಘೋಷಾರ್ಕಕುಂಡಗಳ ಮಾಹಾತ್ಮ್ಯವರ್ಣನ .. .. ೧೦೩–೧೨೫

ಎಂಟನೆಯ ಅಧ್ಯಾಯ—

ಮಹಾರತ್ನತೀರ್ಥ, ದುರ್ಭರತೀರ್ಥ, ಮಹಾಭರತೀರ್ಥ,
ಮಹಾವಿದ್ಯಾತೀರ್ಥ, ಸಿದ್ಧಪೀಠ, ಕ್ಷೀರೇಶ್ವರ, ಸೀತಾಕುಂಡ,
ಸುಗ್ರೀವತೀರ್ಥ, ಹನುಮತ್ಕುಂಡ, ವಿಭೀಷಣಸರಸ್ತೀರ್ಥ,
ಅಯೋಧ್ಯಾಯಾತ್ರಾವಿಧಿಕ್ರಮವರ್ಣನ .. .. ೧೨೬–೧೪೫

ಒಂಬತ್ತನೆಯ ಅಧ್ಯಾಯ—

ಗಯಾಕೂಪ, ಪಿಶಾಚಮೋಚನತೀರ್ಥ, ಮಾನಸತೀರ್ಥ,
ತಮಸಾನದಿ, ಮಾಂಡವ್ಯಾದ್ಯಾಶ್ರಮ, ಸೀತಾಕುಂಡ,
ದುಗ್ಧೇಶ್ವರ, ಭೈರವ, ಭರತಕುಂಡ, ಜಟಾಕುಂಡಗಳ
ಮಾಹಾತ್ಮ್ಯವರ್ಣನ .. .. .. ೧೪೬–೧೫೬

ಹತ್ತನೆಯ ಅಧ್ಯಾಯ—

ಅಯೋಧ್ಯಾಯಾತ್ರಾವಿಧಿಕ್ರಮವರ್ಣನ .. .. ೧೫೭–೧೮೧

## ಶ್ರೀ ವಾಸುದೇವಮಾಹಾತ್ಮ್ಯ


ಪುಟ ಸಂಖ್ಯೆ

ಒಂದನೆಯ ಅಧ್ಯಾಯ —
ಸಾವರ್ಣಿಯ ಪ್ರಶ್ನೆ .. .. .. ೧೭೩–೧೭೮

ಎರಡನೆಯ ಅಧ್ಯಾಯ —
ನಾರದನರನಾರಾಯಣ ಸಮಾಗಮವರ್ಣನ .. .. ೧೭೯–೧೮೫

ಮೂರನೆಯ ಅಧ್ಯಾಯ —
ಶ್ರೀವಾಸುದೇವ ಸರ್ವೋಪಾಸ್ಯತ್ವವರ್ಣನ .. .. ೧೮೬–೧೯೨

ನಾಲ್ಕನೆಯ ಅಧ್ಯಾಯ —
ಶ್ವೇತದ್ವೀಪಮುಕ್ತವರ್ಣನ .. .. .. ೧೯೩–೧೯೯

ಐದನೆಯ ಅಧ್ಯಾಯ —
ಉಪರಿಚರವಸುಸದ್ಗುಣವರ್ಣನ .. .. .. ೨೦೦–೨೦೫

ಆರನೆಯ ಅಧ್ಯಾಯ —
ಉಪರಿಚರವಸುವಿನ ಅಧಃಪತನವೃತ್ತಾಂತವರ್ಣನ .. .. ೨೦೬–೨೧೪

ಏಳನೆಯ ಅಧ್ಯಾಯ —
ಉಪರಿಚರವಸುಮೋಕ್ಷನಿರೂಪಣ .. .. .. ೨೧೫–೨೨೧

ಎಂಟನೆಯ ಅಧ್ಯಾಯ —
ದೇವೇಂದ್ರಶಾಪವರ್ಣನ .. .. .. ೨೨೨–೨೨೭

ಒಂಬತ್ತನೆಯ ಅಧ್ಯಾಯ —
ಹಿಂಸಾಯಜ್ಞಪ್ರವೃತ್ತಿಹೇತುನಿರೂಪಣ .. .. ೨೨೮–೨೩೩

ಹತ್ತನೆಯ ಅಧ್ಯಾಯ —
ಶ್ರೀವಾಸುದೇವಪ್ರಸಾದನಿರೂಪಣ .. .. .. ೨೩೪–೨೪೧

ಹನ್ನೊಂದನೆಯ ಅಧ್ಯಾಯ —
ಅಮೃತಮಥನ–ವಿಷೋತ್ಪತ್ತಿವರ್ಣನ .. .. ೨೪೨–೨೪೮

ಹನ್ನೆರಡನೆಯ ಅಧ್ಯಾಯ —
ಅಮೃತಮಥನ–ಚತುರ್ದಶರತ್ನೋತ್ಪತ್ತಿವರ್ಣನ .. .. ೨೪೯–೨೫೪

ಹದಿಮೂರನೆಯ ಅಧ್ಯಾಯ —
ದೇವತೆಗಳ ಅಮೃತಪಾನ ವರ್ಣನ .. .. .. ೨೫೫–೨೬೦

ಪುಟ ಸಂಖ್ಯೆ

ಹದಿನಾಲ್ಕನೆಯ ಅಧ್ಯಾಯ —
ಶ್ರೀಲಕ್ಷ್ಮೀನಾರಾಯಣವಿವಾಹೋತ್ಸವವರ್ಣನ .. .. ೨೬೧–೨೭೧

ಹದಿನೈದನೆಯ ಅಧ್ಯಾಯ —
ಶ್ರೀಲಕ್ಷ್ಮೀನಾರಾಯಣಸ್ತೋತ್ರನಿರೂಪಣ .. .. ೨೭೨–೨೮೫

ಹದಿನಾರನೆಯ ಅಧ್ಯಾಯ —
ಗೋಲೋಕವರ್ಣನ .. .. .. ೨೮೬–೨೯೪

ಹದಿನೇಳನೆಯ ಅಧ್ಯಾಯ —
ವಾಸುದೇವದರ್ಶನವರ್ಣನ .. .. .. ೨೯೫–೩೦೩

ಹದಿನೆಂಟನೆಯ ಅಧ್ಯಾಯ —
ಶ್ರೀವಾಸುದೇವಾವತಾರಾದಿಕಥನ .. .. .. ೩೦೪–೩೧೫

ಹತ್ತೊಂಬತ್ತನೆಯ ಅಧ್ಯಾಯ —
ನಾರದನರನಾರಾಯಣಸಮಾಗಮವರ್ಣನ .. .. ೩೧೬–೩೨೦

ಇಪ್ಪತ್ತನೆಯ ಅಧ್ಯಾಯ —
ಚಾತುರ್ವರ್ಣ್ಯಧರ್ಮನಿರೂಪಣ .. .. .. ೩೨೧–೩೩೦

ಇಪ್ಪತ್ತೊಂದನೆಯ ಅಧ್ಯಾಯ —
ಬ್ರಹ್ಮಚಾರಿಧರ್ಮನಿರೂಪಣ .. .. .. ೩೩೧–೩೩೪

ಇಪ್ಪತ್ತೆರಡನೆಯ ಅಧ್ಯಾಯ —
ಗೃಹಸ್ಥಧರ್ಮನಿರೂಪಣ .. .. .. ೩೩೫–೩೪೬

ಇಪ್ಪತ್ತಮೂರನೆಯ ಅಧ್ಯಾಯ —
ವಾನಪ್ರಸ್ಥಯತಿಧರ್ಮನಿರೂಪಣ .. .. .. ೩೪೭–೩೫೪

ಇಪ್ಪತ್ತನಾಲ್ಕನೆಯ ಅಧ್ಯಾಯ —
ಜ್ಞಾನಸ್ವರೂಪನಿರೂಪಣ .. .. .. ೩೫೫–೩೬೭

ಇಪ್ಪತ್ತೈದನೆಯ ಅಧ್ಯಾಯ —
ವೈರಾಗ್ಯಭಕ್ತಿನಿರೂಪಣ .. .. .. ೩೬೮–೩೭೯

ಇಪ್ಪತ್ತಾರನೆಯ ಅಧ್ಯಾಯ —
ಕ್ರಿಯಾಯೋಗಾಧಿಕಾರಾದಿನಿರೂಪಣ .. .. ೩೮೦–೩೮೬

ಇಪ್ಪತ್ತೇಳನೆಯ ಅಧ್ಯಾಯ —
ಪೂಜಾಮಂಡಲವಿಧಿನಿರೂಪಣ .. .. .. ೩೮೭–೪೦೩

ಪುಟ ಸಂಖ್ಯೆ

ಇಪ್ಪತ್ತೆಂಟನೆಯ ಅಧ್ಯಾಯ —
ಶ್ರೀರಾಧಾಕೃಷ್ಣಸ್ವರೂಪಧ್ಯಾನನಿರೂಪಣ .. .. ೪೦೪–೪೦೯

ಇಪ್ಪತ್ತೊಂಬತ್ತನೆಯ ಅಧ್ಯಾಯ —
ಶ್ರೀವಾಸುದೇವಪೂಜಾವಿಧಿನಿರೂಪಣ .. .. ೪೧೦–೪೧೮

ಮೂವತ್ತನೆಯ ಅಧ್ಯಾಯ —
ಅಷ್ಟಾಂಗಯೋಗನಿರೂಪಣ .. .. .. ೪೧೯–೪೨೪

ಮೂವತ್ತೊಂದನೆಯ ಅಧ್ಯಾಯ —
ಶ್ರೀನರನಾರಾಯಣಸ್ತುತಿನಿರೂಪಣ.. .. .. ೪೨೫–೪೩೦

ಮೂವತ್ತೆರಡನೆಯ ಅಧ್ಯಾಯ —
ಗ್ರಂಥಸಂಪ್ರದಾಯಪ್ರವೃತ್ತಿನಿರೂಪಣ .. .. ೪೩೧–೪೩೬

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

ಶ್ರೀಶಂಕರಃ ಶಂಕರಃ

# ಶ್ರೀ ಸ್ಕಾಂದಮಹಾಪುರಾಣಂ

## ಅಥಾಽಯೋಧ್ಯಾಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಶ್ರೀವಿಷ್ಣುಹರಿಮಾಹಾತ್ಮ್ಯವರ್ಣನಂ

**ಜಯತಿ ಪರಾಶರಸೂನುಃ ಸತ್ಯವತೀಹೃದಯನಂದನೋ ವ್ಯಾಸಃ ।**
**ಯಸ್ಯಾಸ್ಯಕಮಲಗಲಿತಂ ವಾಙ್ಮಯಮಮೃತಂ ಜಗತ್ಪಿಬತಿ ॥ ೧ ॥**
**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥ ೨ ॥**

---

## ಕನ್ನಡದ ಅನುವಾದ

### ಶ್ರೀವಿಷ್ಣುಹರಿಮಾಹಾತ್ಮ್ಯವರ್ಣನ

೧. ಯಾರ ಮುಖಕಮಲದಿಂದ ಹೊರಹೊಮ್ಮಿದ ವಾಙ್ಮಯರೂಪವಾದ ಅಮೃತವನ್ನು ಜಗತ್ತೆಲ್ಲ ಪಾನಮಾಡುವುದೋ ಅಂಥ ಪರಾಶರಪುತ್ರನೂ, ಸತ್ಯವತೀಹೃದಯಾನಂದಕರನೂ ಆದ ವೇದವ್ಯಾಸಮಹರ್ಷಿಯು ವಿಜಯಿಯಾಗುತ್ತಾನೆ.

೨. ಶ್ರೀಮನ್ನಾರಾಯಣನನ್ನೂ, ನರೋತ್ತಮನಾದ ನರ (ಅರ್ಜುನ) ನನ್ನೂ, ಸರಸ್ವತೀದೇವಿಯನ್ನೂ ನಮಸ್ಕರಿಸಿ ಆ ಬಳಿಕ ಜಯವನ್ನು (ಭಾರತವನ್ನು) ಹೇಳಬೇಕು.

ವ್ಯಾಸ ಉವಾಚ :—
ಹಿಮವದ್ವಾಸಿನಃ ಸರ್ವೇ ಮುನಯೋ ವೇದಪಾರಗಾಃ ।
ತ್ರಿಕಾಲಜ್ಞಾ ಮಹಾತ್ಮಾನೋ ನೈಮಿಶಾರಣ್ಯವಾಸಿನಃ ॥ ೩ ॥
ಯೇಽಬುರ್ದಾರಣ್ಯನಿರತಾ ದಂಡಕಾರಣ್ಯವಾಸಿನಃ ।
ಮಹೇಂದ್ರಾದ್ರಿರತಾ ಯೇ ವೈ ಯೇ ಚ ವಿಂಧ್ಯಾನಿವಾಸಿನಃ ॥ ೪ ॥
ಜಂಬೂವನರತಾ ಯೇ ಚ ಯೇ ಗೋದಾವರಿವಾಸಿನಃ ।
ವಾರಾಣಸೀಶ್ರಿತಾ ಯೇ ಚ ಮಥುರಾವಾಸಿನಸ್ತಥಾ ॥ ೫ ॥
ಉಜ್ಜಯಿನ್ಯಾಂ ರತಾ ಯೇ ಚ ಪ್ರಮಥಾಶ್ರಮವಾಸಿನಃ ।
ದ್ವಾರಾವತೀಶ್ರಿತಾ ಯೇ ಚ ಬದರ್ಯಾಶ್ರಯಿಣಸ್ತಥಾ ॥ ೬ ॥
ಮಾಯಾಪುರೀಶ್ರಿತಾ ಯೇ ಚ ಯೇ ಚ ಕಾಂತಿನಿವಾಸಿನಃ ।
ಏತೇ ಚಾನ್ಯೇ ಚ ಮುನಯಃ ಸಶಿಷ್ಯಾ ಬಹವೋಽಮಲಾಃ ॥ ೭ ॥
ಕುರುಕ್ಷೇತ್ರೇ ಮಹಾಕ್ಷೇತ್ರೇ ಸತ್ರೇ ದ್ವಾದಶವಾರ್ಷಿಕೇ ।
ವರ್ತಮಾನೇ ಚ ರಾಮಸ್ಯ ಕ್ಷಿತೀಶಸ್ಯ ಮಹಾತ್ಮನಃ ।
ಸಮಾಗತಾಃ ಸಮಾಹೂತಾಃ ಸರ್ವೇ ತೇ ಮುನಯೋಽಮಲಾಃ ॥ ೮ ॥
ಸರ್ವೇ ತೇ ಶುದ್ಧಮನಸೋ ವೇದವೇದಾಂಗಪಾರಗಾಃ ।
ತತ್ರ ಸ್ನಾತ್ವಾ ಯಥಾನ್ಯಾಯಂ ಕೃತ್ವಾ ಕರ್ಮ ಜಪಾದಿಕಂ ॥ ೯ ॥

---

೩–೮. ವ್ಯಾಸಮುನಿಯು ಹೇಳುತ್ತಾನೆ:—ವೇದವೇದಾಂಗಪಾರಂಗತರೂ, ತ್ರಿಕಾಲಜ್ಞಾನಿಗಳೂ, ಮಹಾತ್ಮರೂ ಆದ ಹಿಮವತ್ಪರ್ವತನಿವಾಸಿಗಳೂ, ನೈಮಿಷಾರಣ್ಯವಾಸಿಗಳೂ, ಅರ್ಬುದಾರಣ್ಯದಲ್ಲಿ ನೆಲಸಿದವರೂ, ದಂಡಕಾರಣ್ಯನಿವಾಸಿಗಳೂ, ಮಹೇಂದ್ರಪರ್ವತದಲ್ಲಿ ನೆಲಸಿದವರೂ, ವಿಂಧ್ಯವಾಸಿಗಳೂ, ಜಂಬೂವನದಲ್ಲಿ ನೆಲಸಿದವರೂ, ಗೋದಾವರೀತೀರವಾಸಿಗಳೂ, ವಾರಣಾಸೀ (ಕಾಶೀ) ಪಟ್ಟಣದಲ್ಲಿ ವಾಸಿಸುವವರೂ, ಮಧುರಾನಗರನಿವಾಸಿಗಳೂ, ಉಜ್ಜಯಿನಿಯಲ್ಲಿ ವಾಸಮಾಡುವವರೂ, ಪ್ರಮಥಾಶ್ರಮದಲ್ಲಿ ವಾಸಿಸುವವರೂ, ದ್ವಾರಾವತಿಯನ್ನಾಶ್ರಯಿಸಿದವರೂ, ಬದರೀಕ್ಷೇತ್ರನಿವಾಸಿಗಳೂ, ಮಾಯಾಪುರಿಯಲ್ಲಿ ವಾಸಿಸುವವರೂ, ಕಾಂತಿಪುರನಿವಾಸಿಗಳೂ, ಇನ್ನೂ ಇತರ ಬಹು ಮಂದಿ ನಿರ್ಮಲರಾದ ಮಹಾಮುನಿಗಳೂ ಶಿಷ್ಯಸಮೇತರಾಗಿ ಮಹಾಕ್ಷೇತ್ರವೆನಿಸಿದ ಕುರುಕ್ಷೇತ್ರಕ್ಕೆ ಬಂದು ಸೇರಿದರು. ನಿರ್ಮಲಹೃದಯರಾದ ಆ ಮುನಿಗಳೆಲ್ಲರೂ ಮಹಾತ್ಮನಾದ ಶ್ರೀರಾಮರಾಜನ ಹನ್ನೆರಡು ವರ್ಷಗಳ ಕಾಲ ನಡೆಯುವ ಸತ್ರಯಾಗವು ನಡೆಯುತ್ತಿರಲು ಆತನಿಂದ ಆಹ್ವಾನವನ್ನು ಪಡೆದು ಅಲ್ಲಿಗೆ ಬಂದು ಸೇರಿದರು.

೯–೧೧. ಶುದ್ಧವಾದ ಮನಸ್ಸುಳ್ಳವರೂ, ವೇದವೇದಾಂಗಪಾರಂಗತರೂ ಆದ ಅವರೆಲ್ಲರೂ ಅಲ್ಲಿ ಸ್ನಾನಮಾಡಿ ವಿಧಿಪ್ರಕಾರವಾಗಿ ಜಪಾದಿ ಕರ್ಮಗಳನ್ನು

ಭಾರದ್ವಾಜಂ ಪುರಸ್ಕೃತ್ಯ ವೇದವೇದಾಂಗಪಾರಗಂ ।
ಆಸನೇಷು ವಿಚಿತ್ರೇಷು ಬೃಸ್ಯಾದಿಷು ಹ್ಯನುಕ್ರಮಾತ್ ॥ ೧೦ ॥
ಉಪವಿಷ್ಟಾಃ ಕಥಾಶ್ಚಕ್ರುರ್ನಾನಾತೀರ್ಥಾಶ್ರಿತಾಸ್ತದಾ ।
ಕರ್ಮಾಂತರೇಷು ಸತ್ರಸ್ಯ ಸುಖಾಸೀನಾಃ ಪರಸ್ಪರಂ ॥ ೧೧ ॥
ಕಥಾಂತೇಷು ತತಸ್ತೇಷಾಂ ಮುನೀನಾಂ ಭಾವಿತಾತ್ಮನಾಂ ।
ಆಜಗಾಮ ಮಹಾತೇಜಾಸ್ತತ್ರ ಸೂತೋ ಮಹಾಮತಿಃ ॥ ೧೨ ॥
ವ್ಯಾಸಶಿಷ್ಯಃ ಪುರಾಣಜ್ಞೋ ರೋಮಹರ್ಷಣಸಂಜ್ಞಕಃ ।
ತಾನ್ಪ್ರಣಮ್ಯ ಯಥಾ ನ್ಯಾಯಂ ಮುನೀನುಪವಿವೇಶ ಸಃ ।
ಉಪವಿಷ್ಟೋ ಯಥಾನ್ಯಾಯಂ ಮುನೀನಾಂ ವಚನೇನ ಸಃ ॥ ೧೩ ॥
ವ್ಯಾಸಶಿಷ್ಯಂ ಮುನಿವರಂ ಸೂತಂ ವೈ ರೋಮಹರ್ಷಣಂ ।
ತಂ ಪಪ್ರಚ್ಛುರ್ಮುನಿವರಾ ಭಾರದ್ವಾಜಾದಯೋಽಮಲಾಃ ॥ ೧೪ ॥
ಋಷಯ ಊಚುಃ:—
ತ್ವತ್ತಃ ಶ್ರುತಾ ಮಹಾಭಾಗ ನಾನಾತೀರ್ಥಾಶ್ರಿತಾಃ ಕಥಾಃ ।
ಸರಹಸ್ಯಾನಿ ಸರ್ವಾಣಿ ಪುರಾಣಾನಿ ಮಹಾಮತೇ ॥ ೧೫ ॥

---

ನೆರವೇರಿಸಿ, ವೇದವೇದಾಂಗಪಾರಂಗತನಾದ ಭಾರದ್ವಾಜನನ್ನು ಮುಂದು ಮಾಡಿಕೊಂಡು ದರ್ಭಾಸನ ಮೊದಲಾದ ಚಿತ್ರವಿಚಿತ್ರವಾದ ಪೀಠಗಳಲ್ಲಿ ಕುಳಿತು, ಸತ್ರಕರ್ಮಗಳ ನಡುವೆ ಬಿಡುವು ದೊರೆತಾಗ ಸುಖವಾಗಿ ಕುಳಿತು ನಾನಾ ತೀರ್ಥಗಳಿಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಪರಸ್ಪರವಾಗಿ ಮಾತುಕತೆ ಗಳನ್ನಾಡುತ್ತಿದ್ದರು.

೧೨. ಆತ್ಮಜ್ಞಾನಿಗಳಾದ ಆ ಮುನಿಗಳ ಮಾತುಕತೆಗಳು ಮುಗಿಯಲಾಗಿ ಅಷ್ಟುಹೊತ್ತಿಗೆ ಮಹಾತೇಜಸ್ವಿಯೂ, ಮಹಾಮತಿಯೂ ಆದ ಸೂತಪುರಾಣಿ ಕನು ಅಲ್ಲಿಗೆ ಬಂದನು.

೧೩. ವ್ಯಾಸಶಿಷ್ಯನೂ, ಪುರಾಣಗಳನ್ನು ಚೆನ್ನಾಗಿ ಬಲ್ಲವನೂ, ರೋಮ ಹರ್ಷಣನೆಂಬ ಹೆಸರುಳ್ಳವನೂ ಆದ ಸೂತಮುನಿಯು ಆ ಮುನಿಗಳಿಗೆ ವಿಧಿಪ್ರಕಾರವಾಗಿ ಪ್ರಣಾಮಮಾಡಿ ಅವರ ಅಪ್ಪಣೆಯನ್ನು ಪಡೆದು ಅಲ್ಲಿಯೇ ಕುಳಿತುಕೊಂಡನು.

೧೪. ವ್ಯಾಸಶಿಷ್ಯನೂ, ಮುನಿಶ್ರೇಷ್ಠನೂ ಆದ ಆ ಸೂತ (ರೋಮರ್ಷಣ) ನನ್ನು ಭಾರದ್ವಜನೇ ಮೊದಲಾದ ನಿರ್ಮಲಮನಸ್ಸಿನ ಆ ಮುನಿವರರು ಈ ರೀತಿ ಪ್ರಶ್ನೆಮಾಡಿದರು.

೧೫–೧೬. ಋಷಿಗಳು ಕೇಳುತ್ತಾರೆ:—"ಅಯ್ಯಾ ಮಹಾಭಾಗನೆ! ನಾನಾ ತೀರ್ಥಗಳಿಗೆ ಸಂಬಂಧಿಸಿದ ಕಥೆಗಳನ್ನು ನಾವೆಲ್ಲರೂ ನಿನ್ನಿಂದ ಕೇಳಿದ್ದೇವೆ.

ಸಾಂಪ್ರತಂ ಶ್ರೋತುಮಿಚ್ಛಾಮಃ ಸರಹಸ್ಯಂ ಸನಾತನಂ ।
ಅಯೋಧ್ಯಾಯಾ ಮಹಾಪುರ್ಯಾ ಮಹಿಮಾನಂ ಗುಣೋಜ್ವಲಂ ॥೧೬॥
ಕೀದೃಶೀ ಸಾ ಸದಾ ಮೇಧ್ಯಾಽಯೋಧ್ಯಾ ವಿಷ್ಣುಪ್ರಿಯಾ ಪುರೀ ।
ಆದ್ಯ ಸಾ ಗೀಯತೇ ವೇದೇ ಪುರೀಣಾಂ ಮುಕ್ತಿದಾಯಿಕಾ ॥ ೧೭ ॥
ಸಂಸ್ಥಾನಂ ಕೀದೃಶಂ ತಸ್ಯಾಸ್ತಸ್ಯಾಂ ಕೇ ಚ ಮಹೀಭುಜಃ ।
ಕಾನಿ ತೀರ್ಥಾನಿ ಪುಣ್ಯಾನಿ ಮಾಹಾತ್ಮ್ಯಂ ತೇಷು ಕೀದೃಶಂ ॥ ೧೮ ॥
ಅಯೋಧ್ಯಾಸೇವನಾನ್ನೄಣಾಂ ಫಲಂ ಸ್ಯಾತ್ಸೂತ ಕೀದೃಶಂ ।
ಕಿಂ ಚರಿತ್ರಂ ಸೂತ ತಸ್ಯಾಃ ಕಾ ನದ್ಯಃ ಕೇಚ ಸಂಗಮಾಃ ॥ ೧೯ ॥
ತತ್ರ ಸ್ನಾನೇನ ಕಿಂ ಪುಣ್ಯಂ ದಾನೇನ ಚ ಮಹಾಮತೇ ।
ತತ್ಸರ್ವಂ ಶ್ರೋತುಮಿಚ್ಛಾಮಸ್ತ್ವತ್ತಃ ಸೂತ ಗುಣಾಧಿಕ ॥ ೨೦ ॥
ಏತತ್ಸರ್ವಂ ಕ್ರಮೇಣೈವ ತಥ್ಯಂ ತ್ವಂ ವೇತ್ಥ ಸಾಂಪ್ರತಂ ।
ಅಯೋಧ್ಯಾಯಾ ಮಹಾಪುರ್ಯಾ ಮಾಹಾತ್ಮ್ಯಂ ವಕ್ತುಮರ್ಹಸಿ॥೨೧॥

---

ಎಲೈ ಮಹಾಬುದ್ಧಿಶಾಲಿಯೆ ! ಸಮಸ್ತಪುರಾಣಗಳನ್ನೂ ರಹಸ್ಯಸಮೇತವಾಗಿ ನಿನ್ನಿಂದಲೇ ಕೇಳಿ ತಿಳಿದಿರುತ್ತೇವೆ. ಶುಭಗುಣಗಳಿಂದ ಬೆಳಗುತ್ತಿರುವುದೂ, ಸನಾತನವೂ ಆದ ಅಯೋಧ್ಯಾಪುರಿಯ ಮಹಿಮೆಯನ್ನು ರಹಸ್ಯಸಮೇತವಾಗಿ ನಿನ್ನಿಂದ ಕೇಳಬೇಕೆಂದು ಇದೀಗ ಇಚ್ಛಿಸುತ್ತಿದ್ದೇವೆ.

೧೭. ಸದಾಕಾಲದಲ್ಲಿಯೂ ಪವಿತ್ರವೂ, ವಿಷ್ಣುವಿಗೆ ಪ್ರಿಯವೂ ಆಗಿರುವ ಆ ಅಯೋಧ್ಯಾಪುರಿಯು ಎಂತಿರುವುದು? ಮುಕ್ತಿಯನ್ನು ಕೊಡತಕ್ಕ ಆ ಪಟ್ಟಣವು ಪಟ್ಟಣಗಳಲ್ಲೆಲ್ಲ ಮೊದಲಿನದಾಗಿ ವೇದದಲ್ಲಿ ಹೇಳಲ್ಪಟ್ಟಿದೆ.

೧೮. ಆ ಪಟ್ಟಣವಿರುವ ನೆಲೆಕಟ್ಟಿನ ರೀತಿಯೆಂಥದು? ಆ ಪಟ್ಟಣದಲ್ಲಿ ಯಾವ ಯಾವ ರಾಜರಿದ್ದರು? ಅಲ್ಲಿನ ಪುಣ್ಯತೀರ್ಥಗಳಾವುವು? ಅವುಗಳ ಮಾಹಾತ್ಮ್ಯವೇನು?

೧೯. ಎಲೈ ಸೂತನೆ! ಈ ಅಯೋಧ್ಯೆಯನ್ನು ಸೇರುವುದರಿಂದ ಮಾನವರಿಗೆ ಯಾವ ಫಲವುಂಟಾಗುತ್ತದೆ? ಆ ಪಟ್ಟಣದ ಚರಿತ್ರೆಯೇನು? ಅಲ್ಲಿನ ನದಿಗಳಾವುವು? ಸಂಗಮಸ್ಥಳಗಳು ಯಾವುವು?

೨೦–೨೧. ಅಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ ಯಾವ ಪುಣ್ಯವುಂಟಾಗುತ್ತದೆ? ಗುಣಾಧಿಕನಾಗಿಯೂ ಮಹಾಮತಿಯಾಗಿಯೂ ಇರುವ ಎಲೈ ಸೂತನೇ! ಇದೆಲ್ಲವನ್ನೂ ನಿನ್ನಿಂದ ಕೇಳಬೇಕೆಂದು ಬಯಸುತ್ತಿದ್ದೇವೆ. ಎಲ್ಲವನ್ನೂ ಕ್ರಮವಾಗಿಯೂ, ಯಥಾರ್ಥವಾಗಿಯೂ ನೀನು ಬಲ್ಲವನಾಗಿದ್ದೀಯೆ. ಆದುದರಿಂದ ಈಗ ಆ ಮಹಾಪುರಿಯ ಮಾಹಾತ್ಮ್ಯವನ್ನು ವಿಸ್ತರಿಸಿ ಹೇಳುವವನಾಗು.''

ಸೂತ ಉವಾಚ :—

ವ್ಯಾಸಪ್ರಸಾದಾಜ್ಜಾನಾಮಿ ಪುರಾಣಾನಿ ತಪೋಧನಾಃ ।
ಸೇತಿಹಾಸಾನಿ ಸರ್ವಾಣಿ ಸರಹಸ್ಯಾನಿ ತತ್ತ್ವತಃ ॥ ೨೨ ॥
ತಂ ಪ್ರಣಮ್ಯ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಭವದಗ್ರತಃ ।
ಅಯೋಧ್ಯಾಯಾ ಮಹಾಪುರ್ಯಾ ಯಥಾವತ್ಸರಹಸ್ಯಕಂ ॥ ೨೩ ॥
ವಿದ್ಯಾವಂತಂ ವಿಪುಲಮತಿದಂ ವೇದವೇದಾಂಗವೇದ್ಯಂ
ಶ್ರೇಷ್ಠಂ ಶಾಂತಂ ಶಮಿತವಿಷಯಂ ಶುದ್ಧತೇಜೋವಿಶಾಲಂ ।
ವೇದವ್ಯಾಸಂ ಸತತವಿನತಂ ವಿಶ್ವವೇದ್ಯೈಕಯೋನಿಂ
ಪಾರಾಶರ್ಯಂ ಪರಮಪುರುಷಂ ಸರ್ವದಾಹಂ ನಮಾಮಿ ॥ ೨೪ ॥
ಓಂ ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ।
ಯಸ್ಯ ಪ್ರಸಾದಾಜ್ಜಾನಾಮಿ ಹ್ಯಯೋಧ್ಯಾಮಹಿಮಾಮಹಂ ॥ ೨೫ ॥
ಶೃಣ್ವಂತು ಮುನಯಃ ಸರ್ವೇ ಸಾವಧಾನಾಃ ಸಶಿಷ್ಯಕಾಃ ।
ಮಾಹಾತ್ಮ್ಯಂ ಕಥಯಿಷ್ಯಾಮ್ಯಯೋಧ್ಯಾಯಾ ಮಹೋದಯಂ ॥ ೨೬ ॥

---

೨೨. ಸೂತಪುರಾಣಿಕನು ಹೇಳುತ್ತಾನೆ:—"ಎಲೈ ತಪೋಧನರೇ ! ವ್ಯಾಸಮಹರ್ಷಿಗಳ ಅನುಗ್ರಹದಿಂದ ಸಮಸ್ತಪುರಾಣಗಳನ್ನೂ, ಇತಿಹಾಸಗಳನ್ನೂ ರಹಸ್ಯಸಮೇತವಾಗಿ ತಿಳಿದಿದ್ದೇನೆ; ಅವುಗಳ ತತ್ತ್ವವನ್ನೂ ಬಲ್ಲವನಾಗಿದ್ದೇನೆ.

೨೩. ಆತನಿಗೆ ಪ್ರಣಾಮಮಾಡಿ ಅಯೋಧ್ಯಾಮಹಾಪುರಿಯ ಮಾಹಾತ್ಮ್ಯವನ್ನು ರಹಸ್ಯಸಮೇತವಾಗಿ ಇದ್ದುದನ್ನಿದ್ದಂತೆಯೆ ನಿಮಗೆ ವಿವರಿಸಿ ಹೇಳುತ್ತೇನೆ.

೨೪. ವಿದ್ಯಾವಂತನೂ, ವಿಪುಲವಾದ ಬುದ್ಧಿಯನ್ನು ಕೊಡತಕ್ಕವನೂ, ವೇದವೇದಾಂಗಗಳಿಂದ ಮಾತ್ರವೇ ತಿಳಿಯಲ್ಪಡತಕ್ಕವನೂ, ಶ್ರೇಷ್ಠನೂ, ಶಾಂತನೂ, ವಿಷಯಗಳನ್ನೆಲ್ಲ ಶಮನಗೊಳಿಸಿಕೊಂಡಿರುವವನೂ, ಶುದ್ಧವಾದ ತೇಜಸ್ಸಿನಿಂದ ತುಂಬಿ ಬೆಳಗುವವನೂ, ಸದಾ ವಿನಯವಂತನಾಗಿರುವವನೂ, ಸಮಸ್ತ ವಿಶ್ವವೂ ಅರಿತಿರುವ ಒಂದೇ ಒಂದು ಮೂಲಕಾರಣಸ್ವರೂಪನೂ ಆಗಿರುವ ಪರಾಶರಪುತ್ರನಾದ ಪರಮಪುರುಷ ವೇದವ್ಯಾಸಮಹರ್ಷಿಯನ್ನು ನಾನು ಸದಾಕಾಲವೂ ನಮಸ್ಕರಿಸುತ್ತೇನೆ.

೨೫. ಅಮಿತವಾದ ತೇಜಸ್ಸುಳ್ಳ ಆ ವ್ಯಾಸಭಗವಂತನಿಗೆ ನಮಸ್ಕಾರವು! ಆತನ ಪ್ರಸಾದದಿಂದಲೇ ನಾನು ಅಯೋಧ್ಯೆಯ ಮಹಿಮೆಯನ್ನು ಬಲ್ಲವನಾಗಿದ್ದೇನೆ.

೨೬. ಸಮಸ್ತ ಮುನಿಗಳೂ ಶಿಷ್ಯರಿಂದೊಡಗೂಡಿ ಸಾವಧಾನರಾಗಿ ಕೇಳಬೇಕು. ಅತ್ಯಂತ ಶ್ರೇಷ್ಠವಾದ ಅಯೋಧ್ಯೆಯ ಮಾಹಾತ್ಮ್ಯವನ್ನು ಹೇಳುತ್ತೇನೆ.

ಉದೀರಿತಮಗಸ್ತ್ಯಾಯ ಸ್ಕಂದೇನಾಶ್ರಾವಿ ನಾರದಾತ್ ।
ಅಗಸ್ತ್ಯೇನ ಪುರಾ ಪ್ರೋಕ್ತಂ ಕೃಷ್ಣದ್ವೈಪಾಯನಾಯ ತತ್ ॥ ೨೭ ॥
ಕೃಷ್ಣದ್ವೈಪಾಯನಾಚ್ಚೈತನ್ಮಯಾ ಪ್ರಾಪ್ತಂ ತಪೋಧನಾಃ ।
ತದಹಂ ವಚ್ಮಿ ಯುಷ್ಮಭ್ಯಂ ಶ್ರೋತುಕಾಮೇಭ್ಯ ಆದರಾತ್ ॥ ೨೮ ॥
ನಮಾಮಿ ಪರಮಾತ್ಮಾನಂ ರಾಮಂ ರಾಜೀವಲೋಚನಂ ।
ಅತಸೀಕುಸುಮಶ್ಯಾಮಂ ರಾವಣಾಂತಕಮವ್ಯಯಂ ॥ ೨೯ ॥
ಅಯೋಧ್ಯಾ ಸಾ ಪುರೀ ಮೇಧ್ಯಾ ಪುರೀ ದುಷ್ಕೃತಿದುರ್ಲಭಾ ।
ಕಸ್ಯ ಸೇವ್ಯಾ ಚ ನಾಽಯೋಧ್ಯಾ ಯಸ್ಯಾಂ ಸಾಕ್ಷಾದ್ಧರಿಃ ಸ್ವಯಂ ॥ ೩೦ ॥
ಸರಯೂತೀರಮಾಸಾದ್ಯ ದಿವ್ಯಾ ಪರಮಶೋಭನಾ ।
ಅಮರಾವತೀನಿಭಾ ಪ್ರಾಯಃ ಶ್ರಿತಾ ಬಹುತಪೋಧನೈಃ ॥ ೩೧ ॥
ಹಸ್ತ್ಯಶ್ವರಥಪತ್ತ್ಯಾಢ್ಯಾ ಸಂಪದುಚ್ಚಾ ಚ ಸಂಸ್ಥಿತಾ ।
ಪ್ರಾಕಾರಾಢ್ಯಪ್ರತೋಲೀಭಿಸ್ತೋರಣೈಃ ಕಾಂಚನಪ್ರಭೈಃ ॥ ೩೨ ॥

---

೨೭. ಈ ಮಾಹಾತ್ಮ್ಯೆಯು ಅಗಸ್ತ್ಯನಿಗೆ ಸ್ಕಂದನಿಂದ ಹೇಳಲ್ಪಟ್ಟಿತೆಂಬ ಸಂಗತಿಯನ್ನು ನಾರದನಿಂದ ನಾನು ತಿಳಿದೆನು. ಇದೇ ಸಂಗತಿಯನ್ನೇ ಪೂರ್ವದಲ್ಲಿ ಅಗಸ್ತ್ಯನು ಕೃಷ್ಣದ್ವೈಪಾಯನನಿಗೂ ಹೇಳಿದನು.

೨೮. ಎಲೈ ತಪೋಧನರೇ! ಈ ಮಾಹಾತ್ಮ್ಯವನ್ನು ಕೃಷ್ಣದ್ವೈಪಾಯನನಿಂದ ನಾನು ಪಡೆದುಕೊಂಡೆನು. ಅದನ್ನು ಕೇಳಬೇಕೆಂದು ಆಸೆಗೊಂಡಿರುವ ನಿಮಗೆ ಆದರದಿಂದ ನಾನು ತಿಳಿಸುತ್ತೇನೆ.

೨೯. ಕಮಲನೇತ್ರನೂ, ಅಗಸೆಯ ಹೂವಿನಂತೆ ಶ್ಯಾಮಲವರ್ಣವುಳ್ಳವನೂ, ರಾವಣಾಂತಕನೂ, ನಾಶರಹಿತನೂ, ಪರಮಾತ್ಮನೂ ಆದ ಶ್ರೀರಾಮನನ್ನು ನಮಸ್ಕರಿಸಿ ಆ ಮಾಹಾತ್ಮ್ಯವನ್ನು ಹೇಳುವೆನು.

೩೦. ಅಯೋಧ್ಯಾಪಟ್ಟಣವು ಬಹು ಪವಿತ್ರವಾದುದು. ಅದು ದುಷ್ಕೃತ್ಯಗಳನ್ನು ಮಾಡಿದವರಿಗೆ ಪಡೆಯಲು ಸಾಧ್ಯವಲ್ಲದುದು. ಯಾವ ಪಟ್ಟಣದಲ್ಲಿ ಶ್ರೀಹರಿಯೇ ಸಾಕ್ಷಾತ್ತಾಗಿ ನೆಲಸಿರುವನೋ ಆ ಅಯೋಧ್ಯೆಯು ಯಾರಿಗೆತಾನೆ ಸೇವ್ಯವೆನಿಸುವುದಿಲ್ಲ!

೩೧. ಸರಯೂನದಿಯ ತೀರವನ್ನಾಶ್ರಯಿಸಿ ಆ ದಿವ್ಯನಗರಿಯು ಪರಮಮಂಗಳಮಯವಾದ ಅಮರಾವತಿಯಂತೆ ರಾರಾಜಿಸುತ್ತಿರುವುದು; ಬಹುಮಂದಿ ತಪೋಧನರಿಗೆ ಆಶ್ರಯವಾಗಿ ಮೆರೆಯುತ್ತಿರುವುದು.

೩೨–೩೩. ಆನೆ, ಕುದುರೆ, ರಥ, ಪದಾತಿಗಳಿಂದ ತುಂಬಿರುವುದು; ಸಂಪತ್ತಿನಲ್ಲಿ ಅತ್ಯುನ್ನತವಾಗಿರುವುದು; ಭದ್ರವಾಗಿ ಕಟ್ಟಲ್ಪಟ್ಟ, ಪ್ರಾಕಾರಗಳಿಂದಲೂ, ರಾಜಬೀದಿಗಳಿಂದಲೂ, ಕಂಚಿನ ಪ್ರಭೆಯನ್ನು ಚೆಲ್ಲುವ ತೋರಣ

ಸಾನೂಪವೇಷ್ಯೈಃ ಸರ್ವತ್ರ ಸುವಿಭಕ್ತಚತುಷ್ಟಯಾ ।
ಅನೇಕಭೂಮಿಪ್ರಾಸಾದಾ ಬಹುಭಿತ್ತಿಸುವಿಕ್ರಿಯಾ ॥ ೩೩ ॥
ಪದ್ಮೋತ್ಫುಲ್ಲಶುಭೋದಾಭಿರ್ವಾಪೀಭಿರುಪಶೋಭಿತಾ ।
ದೇವತಾಯತನೈರ್ದಿವ್ಯೈರ್ವೇದಘೋಷೈಶ್ಚ ಮಂಡಿತಾ ॥ ೩೪ ॥
ವೀಣಾವೇಣುಮೃದಂಗಾದಿ ಶಬ್ದೈರುತ್ಕೃಷ್ಟತಾಂ ಗತಾ ।
ಸಾಲೈಸ್ತಾಲೈರ್ನಾರಿಕೇರೈಃ ಪನಸಾಮಲಕೈಸ್ತಥಾ ॥ ೩೫ ॥
ತಥೈವಾಮ್ರಕಪಿತ್ಥಾದ್ಯೈರಶೋಕೈರುಪಶೋಭಿತಾ ।
ಆರಾಮೈರ್ವಿವಿಧೈರ್ಯುಕ್ತಾ ಸರ್ವರ್ತುಫಲಪಾದಪೈಃ ॥ ೩೬ ॥
ಮಾಲತೀಜಾತಿಬಕುಲಪಾಟಲೀನಾಗಚಂಪಕೈಃ ।
ಕರವೀರೈಃ ಕರ್ಣಿಕಾರೈಃ ಕೇತಕೀಭಿರಲಂಕೃತಾ ॥ ೩೭ ॥
ನಿಂಬಜಂಬೀರಕದಲೀ ಮಾತುಲಿಂಗ ಮಹಾಫಲೈಃ ।
ಲಸಚ್ಚಂದನಗಂಧಾಢ್ಯೈರ್ನಾಗರೈರುಪಶೋಭಿತಾ ॥ ೩೮ ॥
ದೇವತುಲ್ಯಪ್ರಭಾಯುಕ್ತೈರ್ನೃಪಪುತ್ರೈಶ್ಚ ಸಂಯುತಾ ।
ಸರೂಪಾಭಿರ್ವರಸ್ತ್ರೀಭಿರ್ದೇವಸ್ತ್ರೀಭಿರಿವಾವೃತಾ ॥ ೩೯ ॥

---

ಗಳಿಂದಲೂ ಕೂಡಿ ಎಲ್ಲ ಕಡೆಯೂ ಚೆನ್ನಾಗಿ ವಿಭಾಗಿಸಿ ಕಟ್ಟಲ್ಪಟ್ಟಿರುವ ಗೋಡೆಗಳಿಂದಲೂ ಮೆರೆಯುತ್ತಿರುವುದು; ಚಿತ್ರವಿಚಿತ್ರವಾದ ಅನೇಕ ಪೌಳಿಗಳಿಂದ ಕೂಡಿ ಅನೇಕ ಅಂತಸ್ತುಗಳ ಮಹಡಿ ಮನೆಗಳಿಂದ ತುಂಬಿರುವುದು.

೩೪. ಅರಳಿದ ತಾವರೆಗಳು ತುಂಬಿ ಶುಭಜಲಸಮೃದ್ಧಿಯನ್ನೊಳಕೊಂಡಿರುವ ಅನೇಕ ಬಾವಿಗಳಿಂದ ಶೋಭಿಸುತ್ತಿರುವುದು; ದೇವಾಲಯಗಳಿಂದಲೂ, ವೇದಘೋಷಗಳಿಂದಲೂ ಮಂಡಿತವಾಗಿರುವುದು;

೩೫–೩೬. ವೀಣೆ, ಕೊಳಲು, ಮೃದಂಗ, ಮೊದಲಾದ ವಾದ್ಯಗಳ ಶಬ್ದಗಳಿಂದ ಉತ್ಕೃಷ್ಟವೆನಿಸಿರುವುದು; ಸಾಲ, ತಾಲ, ತೆಂಗು, ಹಲಸು, ನೆಲ್ಲಿ, ಮಾವು, ಬೇಲ, ಮೊದಲಾದ ಮರಗಳಿಂದಲೂ, ಅಶೋಕವೃಕ್ಷಗಳಿಂದಲೂ ಶೋಭಿಸುತ್ತಿರುವುದು. ಎಲ್ಲ ಋತುಗಳಲ್ಲಿಯೂ ಫಲ ಬಿಡುವ ಮರಗಳಿಂದ ತುಂಬಿ ತುಳುಕುವ ಅನೇಕ ಬಗೆಯ ತೋಟಗಳಿಂದ ನಿಬಿಡವಾಗಿರುವುದು.

೩೭. ಮಾಲತಿ, ಜಾಜಿ, ಬಕುಲ, ಪಾಟಲ, ನಾಗಸಂಪಿಗೆ, ಕರವೀರ, ಕರ್ಣಿಕಾರ, ಕೇದಗೆ ಮೊದಲಾದ ಪುಷ್ಪವೃಕ್ಷಗಳಿಂದ ಅಲಂಕೃತವಾಗಿರುವುದು.

೩೮. ಬೇವು, ನಿಂಬೆ, ಬಾಳೆ, ಮಾದಳ ಮೊದಲಾದ ಮಹಾಫಲವೃಕ್ಷಗಳಿಂದ ರಂಜಿಸುತ್ತಿರುವುದು; ಸೊಗಸಾದ ಚಂದನಗಂಧವನ್ನು ಪೂಸಿ ನಲಿಯುವ ನಗರನಿವಾಸಿಗಳಿಂದ ಶೋಭಿಸುತ್ತಿರುವುದು.

೩೯. ದೇವತೆಗಳಿಗೆ ಸಮಾನವಾದ ಕಾಂತಿಯಿಂದೊಡಗೂಡಿದ ರಾಜಪುತ್ರ

ಶ್ರೇಷ್ಠೈಃ ಸತ್ಕವಿಭಿರ್ಯುಕ್ತಾ ಬೃಹಸ್ಪತಿಸಮೈರ್ದ್ವಿಜೈಃ ।
ವಣಿಗ್ಜನೈಸ್ತಥಾ ಪೌರೈಃ ಕಲ್ಪವೃಕ್ಷೈರಿವಾವೃತಾ ॥ ೪೦ ॥
ಅಶ್ವೈರುಚ್ಚೈಃಶ್ರವಸ್ತುಲ್ಯೈರ್ದಂತಿಭಿರ್ದಿಗ್ಗಜೈರಿವ ।
ಇತಿ ನಾನಾವಿಧೈರ್ಭಾವೈರುಪೇಂದ್ರಪುರೀಸಮಾ ॥ ೪೧ ॥
ಯಸ್ಯಾಂ ಜಾತಾ ಮಹೀಪಾಲಾಃ ಸೂರ್ಯವಂಶಸಮುದ್ಭವಾಃ ।
ಇಕ್ಷ್ವಾಕುಪ್ರಮುಖಾಃ ಸರ್ವೇ ಪ್ರಜಾಪಾಲನತತ್ಪರಾಃ ॥ ೪೨ ॥
ಯಸ್ಯಾಸ್ತೀರೇ ಪುಣ್ಯತೋಯಾ ಕೂಜದ್ಭೃಂಗವಿಹಂಗಮಾ ।
ಸರಯೂರ್ನಾಮ ತಟಿನೀ ಮಾನಸಪ್ರಭವೋಲ್ಲಸಾ ॥ ೪೩ ॥
ಘರ್ಮದ್ರವಪರೀತಾ ಸಾ ಘುರ್ಘರೋತ್ತಮಸಂಗಮಾ ।
ಮುನೀಶ್ವರಾಶ್ರಿತತಟಾ ಜಾಗರ್ತಿ ಜಗದುಚ್ಛ್ರಿತಾ ॥ ೪೪ ॥
ದಕ್ಷಿಣಾಚರಣಾಂಗುಷ್ಠಾನ್ನಿಃಸೃತಾ ಜಾಹ್ನವೀ ಹರೇಃ ।
ವಾಮಾಂಗುಷ್ಠಾನ್ಮುನಿವರಾಃ ಸರಯೂರ್ನಿರ್ಗತಾ ಶುಭಾ ॥ ೪೫ ॥

---

ರಿಂದ ರಂಜಿಸುತ್ತಿರುವುದು; ದೇವಸ್ತ್ರೀಯರಂತೆ ಕಂಗೊಳಿಸುವ ಸುರೂಪಿಣಿಯುರಾದ ವರಸ್ತ್ರೀಯರಿಂದ ಆವರಿಸಲ್ಪಟ್ಟಿರುವುದು.

೪೦. ಶ್ರೇಷ್ಠರಾದ ಸತ್ಕವಿಗಳಿಂದಲೂ, ಬೃಹಸ್ಪತಿಗೆ ಸಮಾನರಾದ ಬ್ರಾಹ್ಮಣರಿಂದಲೂ ಕೂಡಿರುವುದು; ವ್ಯಾಪಾರಿಗಳಿಂದಲೂ, ಪೌರರಿಂದಲೂ ಆ ನಗರವು ಕಲ್ಪವೃಕ್ಷಗಳಿಂದಲೋ ಎಂಬಂತೆ ತುಂಬಿರುವುದು.

೪೧. ಇಂದ್ರನ ಉಚ್ಚೈಃಶ್ರವಸ್ಸಿಗೆ ಸಮಾನವಾದ ಕುದುರೆಗಳಿಂದಲೂ, ದಿಗ್ಗಜಗಳೋ ಎಂಬಂತಿರುವ ಆನೆಗಳಿಂದಲೂ ಕೂಡಿರುವುದು; ಹೀಗೆ ನಾನಾ ವಿಧಗಳಾದ ಚಿತ್ತಾಕರ್ಷಕಭಾವಗಳಿಂದ ಆ ನಗರವು ಇಂದ್ರಪುರಿಗೆ ಸರಿಯೆನಿಸಿರುವುದು.

೪೨. ಆ ಪಟ್ಟಣದಲ್ಲಿ ಹುಟ್ಟಿದ ಸೂರ್ಯವಂಶೋತ್ಪನ್ನರಾದ ಇಕ್ಷ್ವಾಕು ಮೊದಲಾದ ಭೂಮಿಪತಿಗಳೆಲ್ಲರೂ ಪ್ರಜಾಪಾಲನೆಯಲ್ಲಿ ತತ್ಪರರಾಗಿದ್ದರು.

೪೩. ತೀರದಲ್ಲಿ ಪುಣ್ಯಕರವಾದ ಜಲವುಳ್ಳುದಾಗಿ, ಧ್ವನಿಮಾಡುತ್ತಿರುವ ದುಂಬಿಗಳಿಂದಲೂ, ಹಕ್ಕಿಗಳಿಂದಲೂ ಕೂಡಿ, ಮಾನಸಸರೋವರದಲ್ಲಿ ಉದ್ಭವಿಸಿದುದಾದ ಸರಯೂವೆಂಬ ನದಿಯು ಆ ಪಟ್ಟಣದ ಬಳಿ ಹರಿಯುತ್ತಿರುವುದು.

೪೪. ಆ ನದಿಯು ಸ್ವಲ್ಪ ಬೆಚ್ಚನೆಯ ನೀರಿನಿಂದ ಕೂಡಿ ಘುರ್ಘರಧ್ವನಿಯನ್ನು ಹೊಮ್ಮಿಸುವ ಸಂಗಮಗಳುಳ್ಳುದಾಗಿ ಮುನೀಶ್ವರರಿಂದ ಆಶ್ರಯಿಸಲ್ಪಟ್ಟ ತೀರಪ್ರದೇಶಗಳುಳ್ಳುದಾಗಿ ಜಗತ್ತಿನಲ್ಲಿಯೇ ಶ್ರೇಷ್ಠವೆನಿಸಿ ಮೆರೆಯುತ್ತಿರುವುದು.

೪೫. ಶ್ರೀಹರಿಯ ಬಲಗಾಲಿನ ಅಂಗುಷ್ಠದಿಂದ ಜಾಹ್ನವಿಯು ಹೊರ

ತಸ್ಮಾದಿಮೇ ಪುಣ್ಯತಮೇ ನದ್ಯೌ ದೇವನಮಸ್ಕೃತೇ ।
ಏತಯೋಃ ಸ್ನಾನಮಾತ್ರೇಣ ಬ್ರಹ್ಮಹತ್ಯಾ ವ್ಯಪೋಹತಿ ॥ ೪೬ ॥
ತಾಮಯೋಧ್ಯಾಮಥ ಪ್ರಾಪ್ತೋಽಗಸ್ತ್ಯಃ ಕುಂಭೋದ್ಭವೋ ಮುನಿಃ ।
ಯಾತ್ರಾರ್ಥಂ ತೀರ್ಥಮಾಹಾತ್ಮ್ಯಂ ಜ್ಞಾತ್ವಾ ಸ್ಕಂದಪ್ರಸಾದತಃ ॥ ೪೭ ॥
ಆಗತ್ಯ ತು ಪುನಃ ಸೋಽಪಿ ಕೃತ್ವಾ ಯಾತ್ರಾಂ ಕ್ರಮೇಣ ಚ ।
ಯಥೋಕ್ತೇನ ವಿಧಾನೇನ ಸ್ನಾತ್ವಾ ಸಂತರ್ಪ್ಯ ತಾನ್ಪಿತೄನ್ ॥ ೪೮ ॥
ಪೂಜಯಿತ್ವಾ ಯಥಾನ್ಯಾಯಂ ದೇವತಾಃ ಸಕಲಾ ಅಪಿ ।
ಸರ್ವಾಣ್ಯಪಿ ಚ ತೀರ್ಥಾನಿ ನಮಸ್ಕೃತ್ಯ ಯಥಾವಿಧಿ ॥ ೪೯ ॥
ಕೃತಕೃತ್ಯೋಽರ್ಜಿತಾನಂದಸ್ತೀರ್ಥಮಾಹಾತ್ಮ್ಯದರ್ಶನಾತ್ ।
ಅಭೂದಗಸ್ತ್ಯೋ ರೂಪೇಣ ಪುಲಕಾಂಚಿತವಿಗ್ರಹಃ ॥ ೫೦ ॥
ಸ ತ್ರಿರಾತ್ರಂ ಸ್ಥಿತಸ್ತತ್ರ ಯಾತ್ರಾಂ ಕೃತ್ವಾ ಯಥಾವಿಧಿ ।
ಸ್ತುವನ್ನಯೋಧ್ಯಾಮಾಹಾತ್ಮ್ಯಂ ಪ್ರತಸ್ಥೇ ಮುನಿಸತ್ತಮಃ ॥ ೫೧ ॥

---

ಹರಿಯಿತು. ಎಲೈ ಮುನಿವರರೇ! ಆತನ ಎಡಗಾಲಿನ ಅಂಗುಷ್ಠದಿಂದ ಶುಭಕರವಾದ ಈ ಸರಯೂ ನದಿಯು ಹೊರಹರಿಯಿತು.

೪೬. ಆದುದರಿಂದ ಈ ಎರಡು ನದಿಗಳೂ ಪುಣ್ಯತಮುಗಳಾಗಿ ದೇವತೆಗಳಿಂದ ನಮಸ್ಕರಿಸಲ್ಪಟ್ಟಿರುವುವು. ಇವುಗಳಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಬ್ರಹ್ಮಹತ್ಯೆಯು ಪರಿಹಾರವಾಗುತ್ತದೆ.

೪೭. ಕುಂಭೋದ್ಭವನಾದ ಅಗಸ್ತ್ಯಮುನಿಯು ಸ್ಕಂದಸ್ವಾಮಿಯ ಪ್ರಸಾದದಿಂದ ಈ ಸರಯೂತೀರ್ಥಮಾಹಾತ್ಮ್ಯವನ್ನು ತಿಳಿದು, ಯಾತ್ರಾರ್ಥವಾಗಿ ಅಯೋಧ್ಯಾಪಟ್ಟಣಕ್ಕೆ ಬಂದು ಸೇರಿದನು.

೪೮–೫೦. ಅಗಸ್ತ್ಯಮುನಿಯು ಆ ಪಟ್ಟಣಕ್ಕೆ ಬಂದು ಅದಕ್ಕಾಗಿ ಹೇಳಿರುವ ವಿಧಾನವನ್ನನುಸರಿಸಿ ಕ್ರಮವಾಗಿ ಯಾತ್ರೆಯನ್ನು ಮಾಡಿ ಸರಯೂನದಿಯಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು, ಸಕಲದೇವತೆಗಳನ್ನೂ ವಿಧ್ಯುಕ್ತಪ್ರಕಾರದಿಂದ ಪೂಜೆಮಾಡಿ, ಸರ್ವತೀರ್ಥಗಳನ್ನೂ ವಿಧಿಗನುಸಾರವಾಗಿ ನಮಸ್ಕರಿಸಿ, ತೀರ್ಥಮಾಹಾತ್ಮ್ಯದರ್ಶನದಿಂದ ಕೃತಕೃತ್ಯನಾಗಿ ಅಮಿತಾನಂದವನ್ನು ಪಡೆದನು; ಅವನಿಗೆ ಆ ಆನಂದಾತಿರೇಕದಿಂದ ರೋಮಾಂಚವಾಯಿತು.

೫೧. ಆತನು ಮೂರು ರಾತ್ರಿಗಳ ಕಾಲ ಅಲ್ಲಿ ನಿಂತನು. ಯಥಾವಿಧಿಯಾಗಿ ಯಾತ್ರೆಮಾಡಿದ ಬಳಿಕ ಅಯೋಧ್ಯಾಮಾಹಾತ್ಮ್ಯವನ್ನು ಸ್ತೋತ್ರಮಾಡುತ್ತ ಮುಂದಕ್ಕೆ ಪ್ರಯಾಣಮಾಡಿದನು.

ತಮಾಯಾಂತಂ ವಿಲೋಕ್ಯಾಥ ಬಹುಲಾನಂದಸುಂದರಂ ।
ಕೃಷ್ಣದ್ವೈಪಾಯನೋ ವ್ಯಾಸಃ ಪಪ್ರಚ್ಛಾನಂದಕಾರಣಂ ॥ ೫೨ ॥
ವ್ಯಾಸ ಉವಾಚ :-
ಕುತಃ ಸಮಾಗತೋ ಬ್ರಹ್ಮನ್ಸಾಂಪ್ರತಂ ಮುನಿಸತ್ತಮಃ ।
ಪರಮಾನಂದಸಂದೋಹಃ ಸಮುಭೂತ್ಸಾಂಪ್ರತಂ ತವ ॥ ೫೩ ॥
ಕಸ್ಮಾದಾನಂದಪೋಷೋಽಭೂತ್ತವ ಬ್ರಹ್ಮನ್ವದಸ್ವ ಮೇ ।
ಮಮಾಪಿ ಭವದಾನಂದಾತ್ಪ್ರಮೋದೋ ಹೃದಿ ಜಾಯತೇ ॥ ೫೪ ॥
ಅಗಸ್ತ್ಯ ಉವಾಚ :-
ಅಹೋ ಮಹದಥಾಶ್ಚರ್ಯಂ ವಿಸ್ಮಯೋ ಮುನಿಸತ್ತಮ ।
ದೃಷ್ಟ್ವಾ ಪ್ರಭಾವಂ ಮೇಽದ್ಯಾಭೂದಯೋಧ್ಯಾಯಾಸ್ತಪೋಧನ ॥ ೫೫ ॥
ತಸ್ಮಾದಾನಂದಸಂದೋಹಃ ಸಮುಭೂನ್ಮಮ ಸಾಂಪ್ರತಂ ।
ತಚ್ಛ್ರುತ್ವಾಗಸ್ತ್ಯವಚನಂ ವ್ಯಾಸಃ ಪ್ರೋವಾಚ ತಂ ಮುನಿಂ ॥ ೫೬ ॥
ವ್ಯಾಸ ಉವಾಚ :-
ಭಗವನ್ಬ್ರೂಹಿ ತತ್ತ್ವೇನ ವಿಸ್ತರಾತ್ಸರಹಸ್ಯಕಂ ।
ಅಯೋಧ್ಯಾಯಾ ಮಹಾಪುರ್ಯಾ ಮಹಿಮಾನಂ ಗುಣಾಧಿಕಂ ॥ ೫೭ ॥

---

೫೨. ಅಮಿತಾನಂದಭರಿತನಾಗಿ ದರ್ಶನೀಯನಾಗಿ ತೋರಿಬರುತ್ತಿರುವ ಆತನನ್ನು ಕಂಡು ಕೃಷ್ಣದ್ವೈಪಾಯನನಾದ ವ್ಯಾಸಮುನಿಯು ಆ ಆನಂದಕ್ಕೆ ಕಾರಣವೇನೆಂದು ಆತನನ್ನು ಕೇಳಿದನು.

೫೩. ವ್ಯಾಸಮುನಿಯು ಕೇಳುತ್ತಾನೆ:—"ಭೋ ಬ್ರಹ್ಮನ್! ನೀನು ಈಗ ಎಲ್ಲಿಂದ ಬಿಜೆಗೈಸಿದೆ? ಎಲೈ ಮುನಿಶ್ರೇಷ್ಠನೇ! ಈಗ ನಿನಗೆ ಪರಮಾನಂದ ವಾಗಿರುವುದಷ್ಟೆ.

೫೪. ಏತರಿಂದ ನಿನಗೆ ಈ ರೀತಿ ಅಪರಿಮಿತವಾದ ಆನಂದವುಂಟಾಯಿತು? ಭೋ ಬ್ರಹ್ಮನ್! ಇದನ್ನು ನನಗೆ ತಿಳಿಸುವವನಾಗು. ನಿನ್ನ ಆನಂದದಿಂದ ನನ್ನ ಹೃದಯದಲ್ಲಿ ಅತ್ಯಂತ ಸಂತೋಷವುಂಟಾಗುತ್ತಿದೆ."

೫೫. ಅಗಸ್ತ್ಯನು ಹೇಳುತ್ತಾನೆ:— ಎಲೈ ಮುನಿಶ್ರೇಷ್ಠನೇ! ಅಯೋಧ್ಯೆಯ ಮಹಾಪ್ರಭಾವವನ್ನು ಪ್ರತ್ಯಕ್ಷನಾಗಿ ಕಂಡು ನನಗೆ ಆಶ್ಚರ್ಯ ವಿಸ್ಮಯಗಳು ಏಕಕಾಲದಲ್ಲಿಯೆ ಸಮನಿಸಿದುವು.

೫೬. ಆ ಆಶ್ಚರ್ಯದಿಂದಲೇ ಇದೀಗ ಬಹಳ ಆನಂದವೂ ಉಂಟಾಗಿದೆ." ಅಗಸ್ತ್ಯನ ಆ ಮಾತನ್ನು ಕೇಳಿ ವ್ಯಾಸಮುನಿಯು ಅವನನ್ನು ಕುರಿತು ಮತ್ತೆ ಈ ರೀತಿ ಕೇಳಿದನು.

೫೭. ವ್ಯಾಸಮುನಿಯು ಕೇಳುತ್ತಾನೆ:—ಭಗವನ್! ಅಯೋಧ್ಯಾಮಹಾ

ಕಃ ಕ್ರಮಸ್ತೀರ್ಥಯಾತ್ರಾಯಾಃ ಕಾನಿ ತೀರ್ಥಾನಿ ಕೋ ವಿಧಿಃ ।
ಕಿಂ ಫಲಂ ಸ್ನಾನತಸ್ತತ್ರ ದಾನಸ್ಯ ಚ ಮಹಾಮುನೇ ।
ಏತತ್ಸರ್ವಂ ಸಮಾಚಕ್ಷ್ವ ವಿಸ್ತರಾದ್ವದತಾಂ ವರ ॥ ೫೮ ॥

ಅಗಸ್ತ್ಯ ಉವಾಚ :—

ಅಹೋ ಧನ್ಯತಮಾ ಬುದ್ಧಿಸ್ತವ ಜಾತಾ ತಪೋಧನ ।
ದೃಶ್ಯತೇ ಯೇನ ಪೃಚ್ಛಾ ತೇ ಹ್ಯಯೋಧ್ಯಾಮಹಿಮಾಶ್ರಿತಾ ॥ ೫೯ ॥
ಅಕಾರೋ ಬ್ರಹ್ಮ ಚ ಪ್ರೋಕ್ತಂ ಯಕಾರೋ ವಿಷ್ಣುರುಚ್ಯತೇ ।
ಧಕಾರೋ ರುದ್ರರೂಪಶ್ಚ ಅಯೋಧ್ಯಾನಾಮ ರಾಜತೇ ॥ ೬೦ ॥
ಸರ್ವೋಪಪಾತಕೈರ್ಯುಕ್ತೈರ್ಬ್ರಹ್ಮಹತ್ಯಾದಿಪಾತಕೈಃ ।
ನಾಯೋಧ್ಯಾ ಶಕ್ಯತೇ ಯಸ್ಮಾತ್ತಾಮಯೋಧ್ಯಾಂ ತತೋ ವಿದುಃ ॥೬೧॥
ವಿಷ್ಣೋರಾದ್ಯಾ ಪುರೀ ಯೇಯಂ ಕ್ಷಿತಿಂ ನ ಸ್ಪೃಶತಿ ದ್ವಿಜ ।
ವಿಷ್ಣೋಃ ಸುದರ್ಶನೇ ಚಕ್ರೇ ಸ್ಥಿತಾ ಪುಣ್ಯಕರೀ ಕ್ಷಿತೌ ॥ ೬೨ ॥

---

ಪುರಿಯ ಗುಣಭರಿತವಾದ ಮಹಾಮಹಿಮೆಯನ್ನು ರಹಸ್ಯಸಮೇತವಾಗಿ ಇದ್ದುದನ್ನಿದ್ದಂತೆ ನನಗೆ ತಿಳಿಸಬೇಕು.

೫೮. ತೀರ್ಥಯಾತ್ರೆಯ ಕ್ರಮವೇನು? ಅಲ್ಲಿರುವ ತೀರ್ಥಗಳು ಯಾವುವು? ಸ್ನಾನವಿಧಿಯೆಂತು? ಅಲ್ಲಿ ಸ್ನಾನಮಾಡಿದುದರಿಂದ ಬರುವ ಫಲವೇನು? ಅಲ್ಲಿ ಮಾಡಿದ ದಾನದ ಫಲವೇನು? ಸಮಸ್ತ ವಿಷಯಗಳನ್ನೂ ವಿವರಿಸಿ ತಿಳಿಸುವುದರಲ್ಲಿ ಶ್ರೇಷ್ಠನಾದ ಎಲೈ ಮಹಾಮುನಿಯೇ! ಇದೆಲ್ಲವನ್ನೂ ವಿಸ್ತಾರವಾಗಿ ತಿಳಿಯಹೇಳು.''

೫೯. ಅಗಸ್ತ್ಯನು ಹೇಳುತ್ತಾನೆ:—''ಎಲೈ ತಪೋಧನನೇ! ನಿನ್ನ ಪ್ರಶ್ನೆಯು ಅಯೋಧ್ಯಾಮಹಿಮೆಯನ್ನು ಆಶ್ರಯಿಸಿರುವುದರಿಂದ ನಿನ್ನ ಬುದ್ಧಿಯೇ ಧನ್ಯತಮವಾದಂತೆ ಕಾಣುತ್ತದೆ.

೬೦. 'ಅ'ಕಾರವು ಬ್ರಹ್ಮವೆಂದು ಹೇಳಲ್ಪಡುತ್ತದೆ. 'ಯ'ಕಾರವು ವಿಷ್ಣುವೆಂದು ಹೇಳಿದೆ. 'ಧ'ಕಾರವು ರುದ್ರರೂಪವೆನಿಸಿಕೊಂಡಿದೆ. ಅಯೋಧ್ಯೆಯೆಂಬ ಹೆಸರು ಹೀಗೆ ತ್ರಿಮೂರ್ತಿಗಳ ಸ್ವರೂಪದಿಂದಲೇ ವಿರಾಜಿಸುತ್ತಿದೆ.

೬೧. ಈ ಮಹಾಪುರಿಯು ಸಮಸ್ತ ಉಪಪಾತಕಗಳಿಂದಲೂ ಒಡಗೂಡಿದ ಬ್ರಹ್ಮಹತ್ಯವೇ ಮೊದಲಾದ ಪಾತಕಗಳಿಗೂ ಜಯಿಸಲು ಅಸದಳವಾದುದರಿಂದ ಅದನ್ನು ಅಯೋಧ್ಯೆಯೆನ್ನುತ್ತಾರೆ.

೬೨. ಅಯ್ಯಾ ದ್ವಿಜನೇ! ಇದು ವಿಷ್ಣುವಿನ ಮೊತ್ತಮೊದಲಿನ ಪಟ್ಟಣವು. ಇದು ಭೂಮಿಯನ್ನು ಸೋಕದೆ ವಿಷ್ಣುವಿನ ಸುದರ್ಶನಚಕ್ರದಲ್ಲಿಯೇ ನೆಲಸಿ ಭೂಮಿಯಲ್ಲಿಯೇ ಬಹು ಪುಣ್ಯಕರವಾಗಿರುವುದು.

**ಕೇನ ವರ್ಣಯಿತುಂ ಶಕ್ಯೋ ಮಹಿಮಾಽಸ್ಯಾಸ್ತಪೋಧನ ।**
**ಯತ್ರ ಸಾಕ್ಷಾತ್ಸ್ವಯಂ ದೇವೋ ವಿಷ್ಣುರ್ವಸತಿ ಸಾದರಃ ॥ ೬೩ ॥**
**ಸಹಸ್ರಧಾರಾಮಾರಭ್ಯ ಯೋಜನಂ ಪೂರ್ವತೋ ದಿಶಿ ।**
**ಪ್ರತೀಚೀ ದಿಶಿ ತಥೈವ ಯೋಜನಂ ಸಮತೋಽವಧಿಃ ॥ ೬೪ ॥**
**ದಕ್ಷಿಣೋತ್ತರಭಾಗೇ ತು ಸರಯೂತಮಸಾವಧಿಃ ।**
**ಏತತ್ಕ್ಷೇತ್ರಸ್ಯ ಸಂಸ್ಥಾನಂ ಹರೇರಂತರ್ಗೃಹಂ ಸ್ಥಿತಂ ।**
**ಮತ್ಸ್ಯಾಕೃತಿರಿಯಂ ವಿಪ್ರ ಪುರೀ ವಿಷ್ಣೋರುದೀರಿತಾ ॥ ೬೫ ॥**
**ಪಶ್ಚಿಮೇ ತಸ್ಯ ಮೂರ್ಧಾ ತು ಗೋಪ್ರತಾರಾಸಿತಾ ದ್ವಿಜ ॥ ೬೬ ॥**
**ಪೂರ್ವತಃ ಪೃಷ್ಠಭಾಗೋ ಹಿ ದಕ್ಷಿಣೋತ್ತರಮಧ್ಯಮಃ ।**
**ತಸ್ಯಾಂ ಪುರ್ಯಾಂ ಮಹಾಭಾಗ ನಾಮ್ನಾ ವಿಷ್ಣುಹರಿಃ ಸ್ವಯಂ ।**
**ಪೂರ್ವಂ ದೃಷ್ಟಪ್ರಭಾವೋಽಸೌ ಪ್ರಾಧಾನ್ಯೇನ ವಸತ್ಯಪಿ ॥ ೬೭ ॥**
**ವ್ಯಾಸ ಉವಾಚ :—**
**ಭಗವನ್ಕಿಂ ಪ್ರಭಾವೋಽಸೌ ಯೋಽಯಂ ವಿಷ್ಣುಹರಿಸ್ತ್ವಯಾ ।**
**ಕೀರ್ತಿತೋ ಮುನಿಶಾರ್ದೂಲ ಪ್ರಸಿದ್ಧಿಂ ಗತವಾನ್ಕಥಂ ।**
**ಏತತ್ಸರ್ವಂ ಸಮಾಚಕ್ಷ್ವ ವಿಸ್ತರೇಣ ಮಮಾಗ್ರತಃ ॥ ೬೮ ॥**

---

೬೩. ಎಲೈ ತಪೋಧನನೇ! ಇದರ ಮಹಿಮೆಯನ್ನು ಯಾರಿಂದ ವರ್ಣಿಸಲು ಶಕ್ಯವಾದೀತು? ಇಲ್ಲಿ ದೇವದೇವನಾದ ವಿಷ್ಣುವು ಆದರದಿಂದ ತಾನೇ ಸಾಕ್ಷಾತ್ತಾಗಿ ವಾಸಮಾಡುತ್ತಿರುವನು.

೬೪–೬೫. ಸಹಸ್ರಧಾರದಿಂದ ಮೊದಲಾಗಿ ಪೂರ್ವದಿಕ್ಕಿನಲ್ಲಿ ಒಂದು ಯೋಜನ; ಪಶ್ಚಿಮ ದಿಕ್ಕಿನಲ್ಲಿ ಅದೇ ರೀತಿ 'ಸಮ'ವೆಂಬೆಡೆಯಿಂದ ಒಂದು ಯೋಜನದವರೆಗೆ; ದಕ್ಷಿಣೋತ್ತರ ಭಾಗಗಳಲ್ಲಿ ಸರಯೂ ಮತ್ತು ತಮಸಾ ನದಿಗಳವರೆಗೆ ಇದು ಕ್ಷೇತ್ರದ ಹರವು. ಇದು ಶ್ರೀಹರಿಯ ಅಂತರ್ಗೃಹವಾಗಿರುವುದು. ಎಲೈ ವಿಪ್ರನೇ! ವಿಷ್ಣುವಿನ ಈ ಪಟ್ಟಣವು ಮತ್ಸ್ಯಾಕೃತಿಯಾಗಿರುವುದೆಂದು ಹೇಳಿದೆ.

೬೬. ಅಯ್ಯಾ ದ್ವಿಜನೆ! ಗೋಪ್ರತಾರದಿಂದ ಪಶ್ಚಿಮದಲ್ಲಿ ಅದರ ಶಿರಸ್ಸು ನೆಲಸಿರುವುದು.

೬೭. ಅದರಿಂದ ಪೂರ್ವಕ್ಕೆ ಪೃಷ್ಠ (ಬೆನ್ನು) ಭಾಗ ದಕ್ಷಿಣೋತ್ತರಗಳು ಮಧ್ಯಪ್ರದೇಶ. ಎಲೈ ಮಹಿಮಾವಂತನೇ! ಆ ಪಟ್ಟಣದಲ್ಲಿ ವಿಷ್ಣುನಾಮಕನಾದ ಶ್ರೀಹರಿಯು ಸಾಕ್ಷಾತ್ತಾಗಿ ವಾಸಮಾಡುತ್ತಾನೆ. ಆ ಪಟ್ಟಣದ ಪೂರ್ವದಿಶೆಯಲ್ಲಿ ಮಹಾಪ್ರಭಾವವು ಗೋಚರವಾಗಿದೆ."

೬೮. ವ್ಯಾಸಮುನಿಯು ಕೇಳುತ್ತಾನೆ:—"ಭಗವನ್! ನೀನು ಹೇಳಿದ

ಅಗಸ್ತ್ಯ ಉವಾಚ :—

ವಿಷ್ಣುಶರ್ಮೇತಿ ವಿಖ್ಯಾತಃ ಪುರಾಭೂದ್ಬ್ರಾಹ್ಮಣೋತ್ತಮಃ ।
ವೇದವೇದಾಂಗ ತತ್ತ್ವಜ್ಞೋ ಧರ್ಮಕರ್ಮಸಮಾಶ್ರಿತಃ ॥ ೬೯ ॥
ಅಯೋಧ್ಯಾನಗರತೋ ನಿತ್ಯಂ ವಿಷ್ಣುಭಕ್ತಿಪರಾಯಣಃ ।
ಸ ಕದಾಚಿತ್ತೀರ್ಥಯಾತ್ರಾಂ ಕುರ್ವನ್ವೈಷ್ಣವಸತ್ತಮಃ ।
ಅಯೋಧ್ಯಾಮಾಗತೋ ವಿಷ್ಣುರ್ವಿಷ್ಣುಃ ಸಾಕ್ಷಾದ್ವಸೇದಿತಿ ॥ ೭೦ ॥
ಚಿಂತಯನ್ಮನಸಾ ವೀರಸ್ತಪಃ ಕರ್ತುಂ ಸಮುದ್ಯತಃ ।
ಸ ವೈ ತತ್ರ ತಪಸ್ತೇಪೇ ಶಾಕಮೂಲಫಲಾಶನಃ ॥ ೭೧ ॥
ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ಹ್ಯತಪತ್ಸ ಮಹಾತಪಾಃ ।
ವಾರ್ಷಿಕೇ ಚ ನಿರಾಲಂಬೋ ಹೇಮಂತೇ ಚ ಸರೋವರೇ ॥ ೭೨ ॥
ಸ್ನಾತ್ವಾ ಯಥೋಕ್ತವಿಧಿನಾ ಕೃತ್ವಾ ವಿಷ್ಣೋಸ್ತಥಾರ್ಚನಂ ।
ವಶೀಕೃತ್ಯೇಂದ್ರಿಯಗ್ರಾಮಂ ವಿಶುದ್ಧೇನಾಂತರಾತ್ಮನಾ ॥ ೭೩ ॥
ಮನೋ ವಿಷ್ಣೌ ಸಮಾವೇಶ್ಯ ವಿಧಾಯ ಪ್ರಾಣಸಂಯಮಂ ।
ಓಂಕಾರೋಚ್ಚಾರಣಾದ್ಧೀಮಾನ್ಹೃದಿ ಪದ್ಮಂ ವಿಕಾಸಯನ್ ॥ ೭೪ ॥

---

ಆ ವಿಷ್ಣುಹರಿಯ ಪ್ರಭಾವವೇನು ? ಓ ಮುನಿಶ್ರೇಷ್ಠ ! ಆ ಸ್ವಾಮಿಯು ಪ್ರಸಿದ್ಧಿ ಹೊಂದಿದುದೆಂತು ? ಇದೆಲ್ಲವನ್ನೂ ನನಗೆ ವಿವರವಾಗಿ ಹೇಳಬೇಕು" ಎಂದನು.

೬೯–೭೧. ಅಗಸ್ತ್ಯನು ಹೇಳುತ್ತಾನೆ :—"ಪೂರ್ವದಲ್ಲಿ ವಿಷ್ಣುಶರ್ಮನೆಂದು ವಿಖ್ಯಾತನಾದ ಬ್ರಾಹ್ಮಣೋತ್ತಮನೊಬ್ಬನಿದ್ದನು. ಅವನು ವೇದವೇದಾಂಗಗಳ ತತ್ತ್ವವನ್ನರಿತವನು; ಧರ್ಮಕರ್ಮಗಳನ್ನು ಬಿಡದೆ ನಡೆಸುವವನು; ಯಾವಾಗಲೂ ಯೋಗಧ್ಯಾನಗಳಲ್ಲಿಯೆ ನಿರತನಾಗಿರುವವನು, ವಿಷ್ಣುಭಕ್ತಿಯಲ್ಲಿ ತತ್ಪರನಾಗಿರುವವನು. ವೈಷ್ಣವಶ್ರೇಷ್ಠನಾದ ಆ ವಿಷ್ಣುಶರ್ಮನು ಒಂದಾನೊಂದು ಕಾಲದಲ್ಲಿ ತೀರ್ಥಯಾತ್ರೆಯನ್ನು ಮಾಡುತ್ತ ಅಯೋಧ್ಯೆಗೆ ಬಂದನು. 'ಇಲ್ಲಿ ವಿಷ್ಣುವು ಸಾಕ್ಷಾತ್ತಾಗಿ ವಾಸಮಾಡುವನೆಂ'ದು ಮನಸ್ಸಿನಲ್ಲಿ ನೆನೆಯುತ್ತ ಆ ವೀರನು ಅಲ್ಲಿಯೇ ಸೊಪ್ಪು ಗೆಡ್ಡೆ ಹಣ್ಣುಗಳನ್ನು ಆಹಾರಮಾಡಿಕೊಂಡು ತಪಸ್ಸು ಮಾಡತೊಡಗಿದನು.

೭೨. ಆ ಮಹಾತಪಸ್ವಿಯು ಗ್ರೀಷ್ಮಕಾಲದಲ್ಲಿ ಪಂಚಾಗ್ನಿಯ ಮಧ್ಯದಲ್ಲಿ ನಿಂತು ತಪಸ್ಸು ಮಾಡಿದನು. ಮಳೆಗಾಲದಲ್ಲಿ ಯಾವ ಅವಲಂಬನವೂ ಇಲ್ಲದೆಯೂ, ಹಿಮಗಾಲದಲ್ಲಿ ಸರೋವರದಲ್ಲಿ ನೆಲಸಿಯೂ ತಪಸ್ಸುಮಾಡಿದನು.

೭೩–೭೪. ಅದಕ್ಕಾಗಿ ಹೇಳಲ್ಪಟ್ಟಿರುವ ವಿಧಿಪ್ರಕಾರವಾಗಿ ಸ್ನಾನಮಾಡಿ, ವಿಷ್ಣುವನ್ನರ್ಚಿಸಿ ಇಂದ್ರಿಯಸಮೂಹವನ್ನೆಲ್ಲ ವಶಪಡಿಸಿಕೊಂಡು ಪರಿಶುದ್ಧವಾದ

ತನ್ಮಧ್ಯೇ ರವಿಸೋಮಾಗ್ನಿಮಂಡಲಾನಿ ಯಥಾವಿಧಿ ।
ಕಲ್ಪಯಿತ್ವಾ ಹರಿಂ ಮೂರ್ತಂ ಯಸ್ಮಿಂದೇಶೇ ಸನಾತನಂ ॥ ೭೫ ॥
ಪೀತಾಂಬರಧರಂ ವಿಷ್ಣುಂ ಶಂಖಚಕ್ರಗದಾಧರಂ ।
ತಂ ಚ ಪುಷ್ಪೈಃ ಸಮಭ್ಯರ್ಚ್ಯ ಮನಸ್ತಸ್ಮಿನ್ನಿವೇಶ್ಯ ಚ ॥ ೭೬ ॥
ಬ್ರಹ್ಮರೂಪಂ ಹರಿಂ ಧ್ಯಾಯನ್ ಜಪನ್ವೈ ದ್ವಾದಶಾಕ್ಷರಂ ।
ವಾಯುಭಕ್ಷಃ ಸ್ಥಿತಸ್ತತ್ರ ವಿಪ್ರಸ್ತ್ರೀನ್ವತ್ಸರಾನ್ವಸನ್ ॥ ೭೭ ॥
ತತೋ ದ್ವಿಜವರೋ ಧ್ಯಾತ್ವಾ ಸ್ತುತಿಂ ಚಕ್ರೇ ಹರೇರಿಮಾಂ ।
ಪ್ರಣಿಪತ್ಯ ಜಗನ್ನಾಥಂ ಚರಾಚರಗುರುಂ ಹರಿಂ ।
ವಿಷ್ಣುಶರ್ಮಾಥ ತುಷ್ಟಾವ ನಾರಾಯಣಮತಂದ್ರಿತಃ ॥ ೭೮ ॥

ವಿಷ್ಣುಶರ್ಮೋವಾಚ :—

ಪ್ರಸೀದ ಭಗವನ್ವಿಷ್ಣೋ ಪ್ರಸೀದ ಪುರುಷೋತ್ತಮ ।
ಪ್ರಸೀದ ದೇವದೇವೇಶ ಪ್ರಸೀದ ಕಮಲೇಕ್ಷಣ ॥ ೭೯ ॥

---

ತನ್ನ ಮನಸ್ಸನ್ನು ವಿಷ್ಣುವಿನಲ್ಲಿ ನೆಲೆಗೊಳಿಸಿ, ಪ್ರಾಣಾಯಾಮ ಮಾಡಿ, ಓಂಕಾರದ ಉಚ್ಚಾರಣೆಯಿಂದ ಆ ಧೀಮಂತನು ಹೃತ್ಪದ್ಮವನ್ನು ವಿಕಾಸಗೊಳಿಸುತ್ತಿದ್ದನು.

೭೫–೭೭. ಆ ಹೃತ್ಪದ್ಮಮಧ್ಯದಲ್ಲಿ ಸೂರ್ಯ, ಚಂದ್ರ, ಅಗ್ನಿದೇವತಾ ಮಂಡಲಗಳನ್ನು ವಿಧಿಪ್ರಕಾರವಾಗಿ ಕಲ್ಪಿಸಿಕೊಂಡು, ಆ ಪ್ರದೇಶದಲ್ಲಿ ಪೀತಾಂಬರ ಧಾರಿಯೂ, ಶಂಖಚಕ್ರಗದಾಪಾಣಿಯೂ ಆದ ಮಹಾವಿಷ್ಣುವನ್ನು—ಮೂರ್ತಿಮತ್ತಾದ ಹರಿಯನ್ನು—ಭಾವಿಸಿಕೊಳ್ಳುತ್ತಿದ್ದನು. ಆ ಸ್ವಾಮಿಯನ್ನು ಪುಷ್ಪಗಳಿಂದ ಪೂಜಿಸಿ ಮನಸ್ಸನ್ನು ಅವನಲ್ಲಿಯೇ ನೆಲೆಗೊಳಿಸಿ, ಬ್ರಹ್ಮಸ್ವರೂಪಿಯಾದ ಆತನನ್ನೇ ಧ್ಯಾನಿಸುತ್ತಲೂ, ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತಲೂ, ವಾಯುಭಕ್ಷಣ ಮಾಡುತ್ತಲೂ ಆ ಬ್ರಾಹ್ಮಣನು ಅಲ್ಲಿಯೇ ನೆಲಸಿ ಮೂರು ವರ್ಷಗಳ ಕಾಲ ವಾಸಮಾಡಿದನು.

೭೮. ಬಳಿಕ ಆ ವಿಷ್ಣುಶರ್ಮನು ಹರಿಯನ್ನು ಧ್ಯಾನಮಾಡಿ, ಜಗನ್ನಾಥನೂ, ಚರಾಚರ ಗುರುವೂ ಆದ ಶ್ರೀಹರಿಗೆ ದಂಡಪ್ರಣಾಮಮಾಡಿ ಜಡತೆಯಿಲ್ಲದವನಾಗಿ ನಾರಾಯಣನನ್ನು ಈ ರೀತಿ ಸ್ತೋತ್ರಮಾಡಿದನು.

೭೯. ವಿಷ್ಣುಶರ್ಮನು ಸ್ತುತಿಸುತ್ತಾನೆ:— "ಓ ಭಗವಂತಾ! ಮಹಾವಿಷ್ಣುವಾದ ನೀನು ನನ್ನಲ್ಲಿ ಪ್ರಸನ್ನನಾಗಬೇಕು. ಪುರುಷೋತ್ತಮಾ! ಪ್ರಸನ್ನನಾಗು. ಆದಿದೇವನೂ, ದೇವತೆಗಳಿಗೆಲ್ಲ ಒಡೆಯನೂ ಆದ ಓ ಸ್ವಾಮಿಯೇ! ಪ್ರಸನ್ನನಾಗು. ಕಮಲನೇತ್ರ! ಪ್ರಸನ್ನನಾಗು.

ಜಯ ಕೃಷ್ಣ ಜಯಾಚಿಂತ್ಯ ಜಯ ವಿಷ್ಣೋ ಜಯಾವ್ಯಯ ।
ಜಯ ಯಜ್ಞಪತೇ ನಾಥ ಜಯ ವಿಷ್ಣೋ ಪತೇ ವಿಭೋ ॥ ೬೦ ॥
ಜಯ ಪಾಪಹರಾನಂತ ಜಯ ಜನ್ಮಜ್ವರಾಪಹ ।
ನಮಃ ಕಮಲನಾಭಾಯ ನಮಃ ಕಮಲಮಾಲಿನೇ ॥ ೬೧ ॥
ನಮಃ ಸರ್ವೇಶ ಭೂತೇಶ ನಮಃ ಕೈಟಭಸೂದನ ।
ನಮಸ್ತ್ರೈಲೋಕ್ಯನಾಥಾಯ ಜಗನ್ಮೂಲ ಜಗತ್ಪತೇ ॥ ೬೨ ॥
ನಮೋ ದೇವಾಧಿದೇವಾಯ ನಮೋ ನಾರಾಯಣಾಯ ತೇ ।
ನಮಃ ಕೃಷ್ಣಾಯ ರಾಮಾಯ ನಮಶ್ಚಕ್ರಾಯುಧಾಯ ಚ ॥ ೬೩ ॥
ತ್ವಂ ಮಾತಾ ಸರ್ವಲೋಕಾನಾಂ ತ್ವಮೇವ ಜಗತಃ ಪಿತಾ ।
ಭಯಾರ್ತಾನಾಂ ಸುಹೃನ್ಮಿತ್ರಂ ತ್ವಂ ಪಿತಾ ತ್ವಂ ಪಿತಾಮಹಃ ॥ ೬೪ ॥
ತ್ವಂ ಹವಿಸ್ತ್ವಂ ವಷಟ್ಕಾರಸ್ತ್ವಂ ಪ್ರಭುಸ್ತ್ವಂ ಹುತಾಶನಃ ।
ಕರಣಂ ಕಾರಣಂ ಕರ್ತಾ ತ್ವಮೇವ ಪರಮೇಶ್ವರಃ ॥ ೬೫ ॥
ಶಂಖಚಕ್ರಗದಾಪಾಣೇ ಮಾಂ ಸಮುದ್ಧರ ಮಾಧವ ॥ ೬೬ ॥

---

೬೦. ಕೃಷ್ಣಾ! ಜಯಶಾಲಿಯಾಗು! ಯೋಗಿಗಳಿಗೂ ಊಹಿಸಲಸದಳನಾದ ಅಚಿಂತ್ಯಸ್ವರೂಪನೇ, ಜಯಶಾಲಿಯಾಗು! ಎಲೈ ವಿಷ್ಣುವೆ! ಜಯ ಹೊಂದು! ಅವ್ಯಯನೇ ಜಯಿಸು! ಯಜ್ಞಪತಿಯೇ, ನಾಥಾ, ವಿಷ್ಣುವೇ, ಜಗತ್ಪತಿಯೇ, ವಿಭುವೇ, ಜಯ ಜಯ.

೬೧–೬೩. ಎಲೈ ಪಾಪಪರಿಹಾರಕನೇ, ಅನಂತಾ, ವಿಜಯಿಸು! ಜನ್ಮವೆಂಬ ಜ್ವರನನ್ನು ಪರಿಹರಿಸುವ ಓ ಸ್ವಾಮಿಯೆ! ಭಕ್ತರ ಸಲುವಾಗಿ ಜಯಶೀಲನಾಗು! ಓ ಕಮಲನಾಭ, ನಿನಗೆ ನಮಸ್ಕಾರವು! ಎಲೈ ಕಮಲಮಾಲಿಯೆ! ನಿನಗೆ ನಮಸ್ಕಾರವು. ಸರ್ವೇಶ, ಭೂತೇಶ, ನಿನಗೆ ನಮೋ ನಮಃ! ಕೈಟಭನನ್ನು ಕೊಂದವನೂ, ತ್ರೈಲೋಕ್ಯನಾಥನೂ, ಜಗನ್ಮೂಲನೂ, ಜಗತ್ಪತಿಯೂ ಆದ ನಿನಗೆ ನಮಸ್ಕಾರವು. ದೇವಾಧಿದೇವ! ನಾರಾಯಣನೂ, ಕೃಷ್ಣನೂ, ರಾಮನೂ ಚಕ್ರಾಯುಧಸ್ವರೂಪನೂ ಆದ ನಿನಗೆ ನಮಸ್ಕಾರವು.

೬೪. ಸರ್ವ ಲೋಕಗಳಿಗೂ ತಂದೆಯೂ ತಾಯಿಯೂ ನೀನೇ ಆಗಿರುವೆ. ಭಯದಿಂದ ಆರ್ತರಾದವರಿಗೆ ಸಹೃದಯನಾದ ಮಿತ್ರನೂ, ತಂದೆಯೂ ನೀನೇ, ಪಿತಾಮಹನೂ ನೀನೇ ಆಗಿರುವೆ.

೬೫. ಪ್ರಭುವೆ! ನೀನೇ ಹವಿಸ್ಸು. ವಷಟ್ಕಾರವೂ ನೀನೇ ಆಗಿರುವೆ. ನೀನೇ ಹುತಾಶನನು. ಕರಣ, ಕಾರಣ, ಕರ್ತೃ ಎಲ್ಲವೂ ನೀನೇ. ನೀನೇ ಪರಮೇಶ್ವರನು.

೬೬. ಶಂಖ, ಚಕ್ರ, ಗದೆಗಳನ್ನು ಕೈಯಲ್ಲಿ ಧರಿಸಿರುವ ಓ ಮಾಧವಾ! ನನ್ನನ್ನು ಉದ್ಧಾರಮಾಡು.

**ಪ್ರಸೀದ ಮಂದರಧರ ಪ್ರಸೀದ ಮಧುಸೂದನ ।**
**ಪ್ರಸೀದ ಕಮಲಾಕಾಂತ ಪ್ರಸೀದ ಭುವನಾಧಿಪ ॥ ೮೭ ॥**

**ಅಗಸ್ತ್ಯ ಉವಾಚ :—**

**ಇತ್ಯೇವಂ ಸ್ತುವತಸ್ತಸ್ಯ ಮನೋಭಕ್ತ್ಯಾ ಮಹಾತ್ಮನಃ ।**
**ಆವಿರ್ಬಭೂವ ವಿಶ್ವಾತ್ಮಾ ವಿಷ್ಣುರ್ಗರುಡವಾಹನಃ ॥ ೮೮ ॥**
**ಶಂಖಚಕ್ರಗದಾಪಾಣಿಃ ಪೀತಾಂಬರಧರೋಽಚ್ಯುತಃ ।**
**ಉವಾಚ ಸ ಪ್ರಸನ್ನಾತ್ಮಾ ವಿಷ್ಣುಶರ್ಮಾಣಮವ್ಯಯಃ ॥ ೮೯ ॥**

**ಶ್ರೀ ಭಗವಾನುವಾಚ :—**

**ತುಷ್ಟೋಽಸ್ಮಿ ಭವತೋ ವತ್ಸ ಮಹತಾ ತಪಸಾಽಧುನಾ ।**
**ಸ್ತೋತ್ರೇಣಾನೇನ ಸುಮತೇ ನಷ್ಟಪಾಪೋಽಸಿ ಸಾಂಪ್ರತಂ ॥ ೯೦ ॥**
**ವರಂ ವರಯ ವಿಪ್ರೇಂದ್ರ ವರದೋಽಹಂ ತವಾಗ್ರತಃ ।**
**ನಾಽತಪ್ತತಪಸಾ ದ್ರಷ್ಟುಂ ಶಕ್ಯಃ ಕೇನಾಪ್ಯಹಂ ದ್ವಿಜ ॥ ೯೧ ॥**

**ವಿಷ್ಣುಶರ್ಮೋವಾಚ :—**

**ಕೃತಕೃತ್ಯೋಽಸ್ಮಿ ದೇವೇಶ ಸಾಂಪ್ರತಂ ತವ ದರ್ಶನಾತ್ ।**
**ತ್ವದ್ಭಕ್ತಿಮಚಲಾಮೇಕಾಂ ಮಮ ದೇಹಿ ಜಗತ್ಪತೇ ॥ ೯೨ ॥**

---

೮೭. ಮಂದರಧರನೇ! ಪ್ರಸನ್ನನಾಗು. ಮಧುಸೂದನಾ! ಪ್ರಸನ್ನನಾಗು. ಕಮಲಾಕಾಂತಾ, ಪ್ರಸನ್ನನಾಗು. ಭುವನಾಧಿಪತಿಯೇ, ಪ್ರಸಾದವನ್ನನು ಗ್ರಹಿಸು.''

೮೮–೮೯. ಅಗಸ್ತ್ಯನು ಹೇಳುತ್ತಾನೆ:—ಈ ರೀತಿಯಾಗಿ ಸ್ತುತಿಸುತ್ತಿದ್ದ ಆ ಮಹಾತ್ಮನ ಮನೋಭಕ್ತಿಯಿಂದ ವಿಶ್ವಾತ್ಮನಾದ ವಿಷ್ಣುವು ಗರುಡವಾಹನನಾಗಿ ಅಲ್ಲಿಯೇ ಪ್ರತ್ಯಕ್ಷನಾದನು. ಶಂಖ ಚಕ್ರ ಗದೆಗಳನ್ನು ಕೈಯಲ್ಲಿ ಹಿಡಿದು, ಪೀತಾಂಬರವನ್ನು ಧರಿಸಿ ಆ ಅಚ್ಯುತನು ವಿಷ್ಣುಶರ್ಮನಿಗೆ ಗೋಚರನಾದನು. ಆ ಅವ್ಯಯನು ಪ್ರಸನ್ನಾತ್ಮನಾಗಿ ಆ ವಿಷ್ಣುಶರ್ಮನನ್ನು ಕುರಿತು ಈ ರೀತಿ ಹೇಳಿದನು.

೯೦. ಶ್ರೀಭಗವಂತನು ಹೇಳುತ್ತಾನೆ:—''ಎಲೆ ವತ್ಸಾ! ಮಹತ್ತರವಾದ ನಿನ್ನ ತಪಸ್ಸಿನಿಂದಲೂ, ಈ ಸ್ತೋತ್ರದಿಂದಲೂ ನಾನೀಗ ಸಂತುಷ್ಟನಾಗಿದ್ದೇನೆ. ಎಲೈ ಸುಮತಿಯೇ! ಈಗ ನಿನ್ನ ಪಾಪಗಳೆಲ್ಲವೂ ನಾಶವಾದುವು.

೯೧. ಎಲೈ ವಿಪ್ರೇಂದ್ರಾ! ವರವನ್ನು ಕೇಳು; ವರದನಾಗಿ ನಾನು ನಿನ್ನೆದುರಿಗೆ ಬಂದಿದ್ದೇನೆ. ಅಯ್ಯಾ ಬ್ರಾಹ್ಮಣನೇ! ತಪಸ್ಸು ಮಾಡದ ಯಾವನಿಂದಲೂ ನನ್ನನ್ನು ನೋಡಲು ಶಕ್ಯವಲ್ಲವು.''

೯೨. ವಿಷ್ಣುಶರ್ಮನು ಕೇಳುತ್ತಾನೆ:—'' ದೇವೇಶಾ! ನಿನ್ನ ದರ್ಶನದಿಂದ

ಶ್ರೀ ಭಗವಾನುವಾಚ :—

ಭಕ್ತಿರಸ್ತ್ವಚಲಾ ಮೇ ವೈ ವೈಷ್ಣವೀ ಮುಕ್ತಿದಾಯಿನೀ ।
ಅತ್ರೈವಾಸ್ತ್ವಚಲಾ ಮೇ ವೈ ಜಾಹ್ನವೀ ಮುಕ್ತಿದಾಯಿನೀ ॥ ೯೩ ॥
ಇದಂ ಸ್ಥಾನಂ ಮಹಾಭಾಗ ತ್ವನ್ನಾಮ್ನಾ ಖ್ಯಾತಿಮೇಷ್ಯತಿ ॥ ೯೪ ॥

ಅಗಸ್ತ್ಯ ಉವಾಚ :—

ಇತ್ಯುಕ್ತ್ವಾ ದೇವದೇವೇಶಶ್ಚಕ್ರೇಣೋತ್ಖಾಯ ತತ್ಸ್ಥಲಂ ।
ಜಲಂ ಪ್ರಕಟಯಾಮಾಸ ಗಾಂಗಂ ಪಾತಾಲಮಂಡಲಾತ್ ॥ ೯೫ ॥
ಜಲೇನ ತೇನ ಭಗವಾನ್ ಪವಿತ್ರೇಣ ದಯಾಂಬುಧಿಃ ।
ನೀರಜಸ್ತು ಭೂಮಿತಲಂ ಕ್ಷಣಾಚ್ಚಕ್ರೇ ಕೃಪಾವಶಾತ್ ॥ ೯೬ ॥
ಚಕ್ರತೀರ್ಥಮಿತಿ ಖ್ಯಾತಂ ತತಃ ಪ್ರಭೃತಿ ತದ್ದ್ವಿಜ ।
ಜಾತಂ ತ್ರೈಲೋಕ್ಯ ವಿಖ್ಯಾತಮಘೌಘಧ್ವಂಸಕೃಚ್ಛುಭಂ ॥ ೯೭ ॥
ತತ್ರಸ್ನಾನೇನ ದಾನೇನ ವಿಷ್ಣುಲೋಕಂ ವ್ರಜೇನ್ನರಃ ॥ ೯೮ ॥
ತತಃ ಸ ಭಗವಾನ್ಭೂಯೋ ವಿಷ್ಣುಶರ್ಮಾಣಮಚ್ಯುತಃ ।
ಕೃಪಯಾ ಪರಯಾ ಯುಕ್ತ ಉವಾಚ ದ್ವಿಜವತ್ಸಲಃ ॥ ೯೯ ॥

---

ಈಗ ನಾನು ಕೃತಕೃತ್ಯನಾಗಿದ್ದೇನೆ. ಓ ಜಗತ್ಪತಿಯೇ! ನಿನ್ನಲ್ಲಿ ಅಚಲವಾದ ಭಕ್ತಿಯೊಂದನ್ನುಮಾತ್ರ ನನಗೆ ದಯಪಾಲಿಸು.''

೯೩. ಶ್ರೀಭಗವಂತನು ಹೇಳುತ್ತಾನೆ:—''ಮುಕ್ತಿಯನ್ನುಂಟುಮಾಡುವ ನನ್ನ ವೈಷ್ಣವೀ ಭಕ್ತಿಯು ನಿನಗೆ ಅಚಲವಾಗಿರಲಿ. ಮುಕ್ತಿದಾಯಿನಿಯಾದ ಜಾಹ್ನವಿಯು ಇಲ್ಲಿಯೇ ಅಚಲವಾಗಿ ನೆಲಸಿರಲಿ.

೯೪. ಎಲೈ ಮಹಾಭಾಗನೇ! ಈ ಸ್ಥಾನವು ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುತ್ತದೆ.''

೯೫–೯೬. ಅಗಸ್ತ್ಯನು ಹೇಳುತ್ತಾನೆ:—ಆ ದೇವೇಶ್ವರನು ಇಂತೆಂದು ನುಡಿದು ಆ ಸ್ಥಳವನ್ನು ಚಕ್ರದಿಂದ ಅಗೆದು ಪಾತಾಲಮಂಡಲದಿಂದ ಗಂಗಾಜಲವನ್ನು ಪ್ರಕಟಪಡಿಸಿದನು. ದಯಾಸಮುದ್ರನಾದ ಆ ಭಗವಂತನು ಪವಿತ್ರವಾದ ಆ ಜಲದಿಂದ ಆ ನೆಲವನ್ನು ಕ್ಷಣಮಾತ್ರದಲ್ಲಿಯೇ ಪಾಪರಹಿತವಾಗಿ ಮಾಡಿದನು.

೯೭. ಅಯ್ಯಾ ದ್ವಿಜನೇ! ಅಂದು ಮೊದಲಾಗಿ ಅದು ಚಕ್ರತೀರ್ಥವೆಂದು ಪ್ರಸಿದ್ಧವಾಗಿದೆ. ಅದು ಪಾಪಸಮೂಹಗಳನ್ನು ಧ್ವಂಸಮಾಡುವುದೂ ಶುಭಕರವೂ ಎನಿಸಿ ಮೂರುಲೋಕದಲ್ಲಿಯೂ ವಿಖ್ಯಾತವಾಯಿತು.

೯೮. ಅಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ ನರನು ವಿಷ್ಣುಲೋಕವನ್ನು ಪಡೆಯುತ್ತಾನೆ.

೯೯. ಬಳಿಕ ದ್ವಿಜವತ್ಸಲನಾದ ಭಗವಾನ್ ಅಚ್ಯುತನು ಪರಮಕೃಪೆಯಿಂದ ಕೂಡಿದವನಾಗಿ ಆ ವಿಷ್ಣುಶರ್ಮನನ್ನು ಕುರಿತು ಮತ್ತೆ ಹೇಳತೊಡಗಿದನು :—

ಶ್ರೀ ಭಗವಾನುವಾಚ :—
ತ್ವನ್ನಾಮಪೂರ್ವಿಕಾ ವಿಪ್ರ ಮನ್ಮೂರ್ತಿರಿಹ ತಿಷ್ಠತು ।
ವಿಷ್ಣುಹರೀತಿ ವಿಖ್ಯಾತಾ ಭಕ್ತಾನಾಂ ಮುಕ್ತಿದಾಯಿನೀ ॥ ೧೦೦ ॥
ಅಗಸ್ತ್ಯ ಉವಾಚ :—
ಇತಿ ಶ್ರುತ್ವಾ ವಚೋ ವಿಪ್ರೋ ವಾಸುದೇವಸ್ಯ ಬುದ್ಧಿಮಾನ್ ।
ಸ್ವನಾಮಪೂರ್ವಿಕಾಂ ಮೂರ್ತಿಂ ಸ್ಥಾಪಯಾಮಾಸ ಚಕ್ರಿಣಃ ॥ ೧೦೧ ॥
ತತಃ ಪ್ರಭೃತಿ ವಿಪ್ರೇಶ ಶಂಖಚಕ್ರಗದಾಧರಃ ।
ಪೀತವಾಸಾಶ್ಚತುರ್ಬಾಹುರ್ನಾಮ್ನಾ ವಿಷ್ಣುಹರಿಃ ಸ್ಥಿತಃ ॥ ೧೦೨ ॥
ಕಾರ್ತಿಕೇ ಶುಕ್ಲಪಕ್ಷಸ್ಯ ಪ್ರಾರಭ್ಯ ದಶಮೀತಿಥಿಂ ।
ಪೂರ್ಣಿಮಾಮವಧಿಂ ಕೃತ್ವಾ ಯಾತ್ರಾ ಸಾಂವತ್ಸರೀ ಭವೇತ್ ॥ ೧೦೩ ॥
ಚಕ್ರತೀರ್ಥೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಬಹುವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೧೦೪ ॥
ಪಿತೄನುದ್ದಿಶ್ಯ ಯಸ್ತತ್ರ ಪಿಂಡಾನ್ನಿರ್ವಾಪಯಿಷ್ಯತಿ ।
ತೃಪ್ತಾಸ್ತು ಪಿತರೋ ಯಾಂತಿ ವಿಷ್ಣುಲೋಕಂ ನ ಸಂಶಯಃ ॥ ೧೦೫ ॥

---

೧೦೦. ಶ್ರೀಭಗವಂತನು ಹೇಳುತ್ತಾನೆ:—"ಎಲೈ ವಿಪ್ರನೇ! ನಿನ್ನ ಹೆಸರಿನಿಂದ ಆವಿರ್ಭವಿಸುವ ನನ್ನ ಮೂರ್ತಿಯೂ ಇಲ್ಲಿಯೆ ನೆಲಸಲಿ. ಆ ಮೂರ್ತಿಯು 'ವಿಷ್ಣುಹರಿ' ಎಂದು ವಿಖ್ಯಾತವಾಗಿ ಭಕ್ತರಿಗೆ ಮುಕ್ತಿದಾಯಕವಾಗಲಿ."

೧೦೧. ಅಗಸ್ತ್ಯನು ಹೇಳುತ್ತಾನೆ:—ವಾಸುದೇವನ ಈ ಮಾತನ್ನಾಲಿಸಿ ಬುದ್ಧಿವಂತನಾದ ಆ ವಿಪ್ರನು ತನ್ನ ಹೆಸರಿನಿಂದ ಆವಿರ್ಭವಿಸಿದ ಆ ಚಕ್ರಧರನ ಮೂರ್ತಿಯನ್ನು ಅಲ್ಲಿ ಸ್ಥಾಪಿಸಿದನು.

೧೦೨. ಎಲೈ ವಿಪ್ರಶ್ರೇಷ್ಠನೇ! ಅಂದಿನಿಂದಲೂ ಶಂಖಚಕ್ರಗದಾಧರನೂ, ಪೀತಾಂಬರವುಟ್ಟವನೂ, ನಾಲ್ಕು ಬಾಹುಗಳುಳ್ಳವನೂ ಆದ ಭಗವಂತನು ವಿಷ್ಣುಹರಿಯೆಂಬ ಹೆಸರಿನಿಂದ ಇಲ್ಲಿ ನೆಲಸಿದ್ದಾನೆ.

೧೦೩. ಕಾರ್ತಿಕಶುಕ್ಲಪಕ್ಷದಲ್ಲಿ ದಶಮೀತಿಥಿ ಮೊದಲುಗೊಂಡು ಹುಣ್ಣಿಮೆಯವರೆಗೂ ಪ್ರತಿವರ್ಷವೂ ಈ ಕ್ಷೇತ್ರದಲ್ಲಿ ಯಾತ್ರೆಯು ನಡೆಯುತ್ತಿರುತ್ತದೆ.

೧೦೪. ಚಕ್ರತೀರ್ಥದಲ್ಲಿ ಸ್ನಾನಮಾಡಿದರೆ ನರನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ. ಅಂತಹನು ಸಹಸ್ರವರ್ಷಗಳವರೆಗೂ ಸ್ವರ್ಗಲೋಕದಲ್ಲಿ ಮಾಹಾತ್ಮ್ಯವನ್ನು ಮೆರೆಯುತ್ತಿರುತ್ತಾನೆ.

೧೦೫. ಯಾವನು ಪಿತೃಗಳನ್ನುದ್ದೇಶಿಸಿ ಅಲ್ಲಿ ಪಿಂಡಗಳನ್ನು ಹಾಕುತ್ತಾನೆಯೋ ಅವನ ಪಿತೃಗಳು ತೃಪ್ತರಾಗಿ ವಿಷ್ಣುಲೋಕಕ್ಕೆ ಹೋಗುತ್ತಾರೆ. ಇದರಲ್ಲಿ ಸಂಶಯವಿರುವುದಿಲ್ಲ.

ಚಕ್ರತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ವಿಷ್ಣುಹರಿಂ ವಿಭುಂ ।
ಸರ್ವಪಾಪಕ್ಷಯಂ ಪ್ರಾಪ್ಯ ನಾಕಪೃಷ್ಠೇ ಮಹೀಯತೇ ॥ ೧೦೬ ॥
ಸ್ವಶಕ್ತ್ಯಾ ತತ್ರ ದಾನಾನಿ ದತ್ವಾ ನಿಷ್ಕಲ್ಮಷೋ ನರಃ ।
ವಿಷ್ಣುಲೋಕೇ ವಸೇದ್ಧೀಮಾನ್ಯಾವದಿಂದ್ರಾಶ್ಚತುರ್ದಶ ॥ ೧೦೭ ॥
ಅನ್ಯದಾಪಿ ನರಸ್ತತ್ರ ಚಕ್ರತೀರ್ಥೇ ಜಿತೇಂದ್ರಿಯಃ ।
ದೃಷ್ಟ್ವಾ ಸಕೃದ್ಧರಿಂ ದೇವಂ ಸರ್ವಪಾಪೈಃ ಪ್ರಮುಚ್ಯತೇ ॥ ೧೦೮ ॥
ಇತಿ ಸಕಲಗುಣಾಬ್ಧಿರ್ಧ್ಯೇಯಮೂರ್ತಿಶ್ಚಿದಾತ್ಮಾ
ಹರಿರಿಹ ಪರಮೂರ್ತ್ಯಾ ತಸ್ಥಿವಾನ್ ಮುಕ್ತಿಹೇತೋಃ ।
ತಮಿಹ ಬಹುಲಭಕ್ತ್ಯಾ ಚಕ್ರತೀರ್ಥಾಭಿಷೇಕೀ
ವಸತಿ ಸುಕೃತಮೂರ್ತಿರ್ಯೋಽರ್ಚಯೇದ್ವಿಷ್ಣುಲೋಕೇ ॥ ೧೦೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ವಿಷ್ಣುಹರಿಮಾಹಾತ್ಮ್ಯ ವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೧೦೬. ಚಕ್ರತೀರ್ಥದಲ್ಲಿ ಸ್ನಾನಮಾಡಿ ವಿಭುವಾದ ವಿಷ್ಣುಹರಿಯ ದರ್ಶನವನ್ನು ಮಾಡಿದ ನರನು ಸರ್ವಪಾಪಗಳನ್ನೂ ಹೋಗಲಾಡಿಸಿಕೊಂಡು ಸ್ವರ್ಗದಲ್ಲಿ ಮಾಹಾತ್ಮನೆನಿಸುವನು.

೧೦೭. ಆ ಕ್ಷೇತ್ರದಲ್ಲಿ ತನ್ನ ಶಕ್ತಿಗನುಸಾರವಾಗಿ ದಾನಮಾಡಿದ ಮನುಷ್ಯನು ನಿಷ್ಕಲ್ಮಷನಾಗುತ್ತಾನೆ. ಆ ಧೀಮಂತನು ಹದಿನಾಲ್ಕುಮಂದಿ ಇಂದ್ರರು ಆಗಿಹೋಗುವಷ್ಟುಕಾಲ ವಿಷ್ಣುಲೋಕದಲ್ಲಿ ವಾಸಮಾಡುತ್ತಾನೆ.

೧೦೮. ಬೇರೆ ಕಾಲಗಳಲ್ಲಿಯೂ ಆ ಚಕ್ರತೀರ್ಥದಲ್ಲಿ ಜಿತೇಂದ್ರಿಯನಾಗಿ ದೇವನಾದ ಹರಿಯನ್ನು ಒಮ್ಮೆ ದರ್ಶನಮಾಡಿದ ನರನೂ ಸಹ ಸಕಲ ಪಾಪದೂರನಾಗಿ ಮುಕ್ತನಾಗುತ್ತಾನೆ.

೧೦೯. ಈ ರೀತಿಯಾಗಿ ಸಕಲಸದ್ಗುಣಸಮುದ್ರನೂ, ಧ್ಯೇಯಮೂರ್ತಿಯೂ, ಚಿದಾತ್ಮನೂ ಆದ ಶ್ರೀಹರಿಯು ಭಕ್ತರಿಗೆ ಮುಕ್ತಿಯನ್ನು ದೊರೆಯಿಸಲೋಸುಗ ತನ್ನ ಶ್ರೇಷ್ಠಮೂರ್ತಿಯಿಂದ ಇಲ್ಲಿ ನೆಲಸಿ ನಿಂತನು. ಯಾವನು ಚಕ್ರತೀರ್ಥದಲ್ಲಿ ಸ್ನಾನಮಾಡಿ ಆ ಹರಿಯ ಮೂರ್ತಿಯನ್ನು ಬಹುಭಕ್ತಿಯಿಂದ ಅರ್ಚಿಸುತ್ತಾನೆಯೋ ಆ ಸುಕೃತಿಯು ವಿಷ್ಣುಲೋಕದಲ್ಲಿ ವಾಸಮಾಡುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ವಿಷ್ಣುಹರಿಮಾಹಾತ್ಮ್ಯವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ಬ್ರಹ್ಮಕುಂಡ, ಸಹಸ್ರಧಾರಾತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

**ಅಗಸ್ತ್ಯಮುನಿರಿತ್ಯುಕ್ತ್ವಾ ಚಕ್ರತೀರ್ಥಾಶ್ರಯಾಂ ಕಥಾಂ ।**
**ವಿಭೋರ್ವಿಷ್ಣೋರ್ಹರೇಶ್ಚಾಪಿ ಪುನರಾಹ ದ್ವಿಜೋತ್ತಮಾಃ ॥ ೧ ॥**

ಅಗಸ್ತ್ಯ ಉವಾಚ :—

**ಪುರಾ ಬ್ರಹ್ಮಾ ಜಗತ್ಸ್ರಷ್ಟಾ ವಿಜ್ಞಾಯ ಹರಿಮಚ್ಯುತಂ ।**
**ಅಯೋಧ್ಯಾವಾಸಿನಂ ದೇವಂ ತತ್ರ ಚಕ್ರೇ ಸ್ಥಿತಿಂ ಸ್ವಯಂ ॥ ೨ ॥**
**ಆಗತ್ಯ ಕೃತವಾಂಸ್ತತ್ರ ಯಾತ್ರಾಂ ಬ್ರಹ್ಮಾ ಯಥಾವಿಧಿ ।**
**ಯಜ್ಞಂ ಚ ವಿಧಿವಚ್ಚಕ್ರೇ ನಾನಾಸಂಭಾರಸಂಯುತಂ ॥ ೩ ॥**
**ತತಃ ಸ ಕೃತವಾಂಸ್ತತ್ರ ಬ್ರಹ್ಮಾ ಲೋಕಪಿತಾಮಹಃ ।**
**ಕುಂಡಂ ಸ್ವನಾಮ್ನಾ ವಿಪುಲಂ ನಾನಾದೇವಸಮನ್ವಿತಂ ॥ ೪ ॥**
**ವಿಸ್ತೀರ್ಣಜನಕಲ್ಲೋಲಕಲಿತಂ ಕಲುಷಾಪಹಂ ।**
**ಕುಮುದೋತ್ಪಲಕಲ್ಹಾರಪುಂಡರೀಕಕುಲಾಕುಲಂ ॥ ೫ ॥**

---

## ಕನ್ನಡದ ಅನುವಾದ

### ಬ್ರಹ್ಮಕುಂಡ, ಸಹಸ್ರಧಾರಾತೀರ್ಥಮಾಹಾತ್ಮ್ಯವರ್ಣನ

೧. ಸೂತಪುರಾಣಿಕನು ಹೇಳುತ್ತಾನೆ:— ಎಲೈ ದ್ವಿಜೋತ್ತಮರೇ! ಅಗಸ್ತ್ಯಮುನಿಯು ಈ ರೀತಿ ಚಕ್ರತೀರ್ಥಕ್ಕೆ ಸಂಬಂಧಿಸಿದ ಕಥೆಯನ್ನೂ, ವಿಭುವಾದ ವಿಷ್ಣುಹರಿಯ ಕಥೆಯನ್ನೂ ತಿಳಿಸಿದ ಬಳಿಕ ಮತ್ತೆ ಈ ರೀತಿ ಹೇಳತೊಡಗಿದನು.

೨. ಅಗಸ್ತ್ಯನು ಹೇಳುತ್ತಾನೆ:— ಪೂರ್ವದಲ್ಲಿ ಬ್ರಹ್ಮನು ಜಗತ್ತನ್ನು ಸೃಜಿಸಿದ ಬಳಿಕ ಅಚ್ಯುತನಾದ ಶ್ರೀಹರಿಯು ಅಯೋಧ್ಯಾವಾಸಿಯಾಗಿರುವನೆಂದರಿತು ತಾನೂ ಅಲ್ಲಿಯೇ ನೆಲಸಿದ್ದನು.

೩. ಬ್ರಹ್ಮನು ಅಲ್ಲಿಗೆ ಬಂದ ತರುವಾಯ ಯಥಾವಿಧಿಯಾಗಿ ಯಾತ್ರೆಯನ್ನು ಮಾಡಿದನು. ಅಲ್ಲಿಯೇ ನಾನಾ ಸಾಮಗ್ರಿಗಳನ್ನು ಕೂಡಿಸಿಕೊಂಡು ವಿಧಿವತ್ತಾಗಿ ಯಜ್ಞವನ್ನೂ ಮಾಡಿದನು.

೪. ಬಳಿಕ ಲೋಕಪಿತಾಮಹನಾದ ಆ ಬ್ರಹ್ಮನು ಅಲ್ಲಿ ನಾನಾ ದೇವತೆಗಳಿಂದ ಕೂಡಿರುವ ವಿಸ್ತಾರವಾದ ಕುಂಡವನ್ನು ತನ್ನ ಹೆಸರಿನಿಂದ ನಿರ್ಮಿಸಿದನು.

೫–೬. ಆ ಕುಂಡವು ವಿಸ್ತಾರವಾದ ನೀರಿನ ತೆರೆಗಳಿಂದ ಕೂಡಿದುದಾಗಿಯೂ, ಪಾಪವನ್ನು ಪರಿಹರಿಸುವುದಾಗಿಯೂ, ಕುಮುದ, ಉತ್ಪಲ,

ಹಂಸಸಾರಸಚಕ್ರಾದಿವಿಹಂಗಮಮನೋಹರಂ ।
ತಟಾಂತವಿಟಪೋಲ್ಲಾಸಿಪತತ್ರಿಗಣಸಂಕುಲಂ ॥ ೬ ॥
ತತ್ರ ಕುಂಡೇ ಸುರಾಃ ಸರ್ವೇ ಸ್ನಾತಾಃ ಶುದ್ಧಿಸಮನ್ವಿತಾಃ ।
ಬಭೂವುರದ್ಧಾ ವಿಗತರಾಜಸ್ಕಾ ವಿಮಲತ್ವಿಷಃ ॥ ೭ ॥
ತದಾಶ್ಚರ್ಯಂ ಮಹದ್ದೃಷ್ಟ್ವಾ ತೇ ಸರ್ವೇ ಸಹಸಾ ಸುರಾಃ ।
ಬ್ರಹ್ಮಾಣಂ ಪ್ರಣಿಪತ್ಯೋಚುರ್ಭಕ್ತ್ಯಾ ಪ್ರಾಂಜಲಯಸ್ತದಾ ॥ ೮ ॥

ದೇವಾ ಊಚುಃ :—

ಭಗವನ್ ಬ್ರೂಹಿ ತತ್ವೇನ ಮಾಹಾತ್ಮ್ಯಂ ಕಮಲಾಸನ ।
ಅಸ್ಯ ಕುಂಡಸ್ಯ ಸಕಲಂ ಖ್ಯಾತಸ್ಯ ವಿಮಲತ್ವಿಷಃ ॥ ೯ ॥
ಅತ್ರ ಸ್ನಾನೇನ ಸರ್ವೇಷಾಮಸ್ಮಾಕಂ ವಿಗತಂ ರಜಃ ।
ಮಹದಾಶ್ಚರ್ಯಮೇತಸ್ಯ ದೃಷ್ಟ್ವಾ ಕುಂಡಸ್ಯ ವಿಸ್ಮಿತಾಃ ।
ಸರ್ವೇ ವಯಂ ಸುರಶ್ರೇಷ್ಠ ಕೃಪಯಾ ತ್ವಮತೋ ವದ ॥ ೧೦ ॥

ಬ್ರಹ್ಮೋವಾಚ :—

ಶೃಣ್ವಂತು ಸರ್ವೇ ತ್ರಿದಶಃ ಸಾವಧಾನಾಃ ಸವಿಸ್ಮಯಾಃ ।
ಕುಂಡಸ್ಯೈತಸ್ಯ ಮಾಹಾತ್ಮ್ಯಂ ನಾನಾಫಲಸಮನ್ವಿತಂ ॥ ೧೧ ॥

---

ಕಲ್ಹಾರ, ಪುಂಡರೀಕ—ಪುಷ್ಪಗಳ ಗುಂಪಿನಿಂದ ನಿಬಿಡವಾಗಿಯೂ, ಹಂಸ, ಸಾರಸ, ಚಕ್ರವಾಕವೇ ಮೊದಲಾದ ಹಕ್ಕಿಗಳಿಂದ ತುಂಬಿ ಮನೋಹರವಾಗಿಯೂ, ದಡದಲ್ಲಿ ಬೆಳೆದುನಿಂತ ಮರಗಳಲ್ಲಿ ಉಲ್ಲಾಸದಿಂದೆಸೆಯುವ ಪಕ್ಷಿಗಣದಿಂದ ಕೂಡಿದುದಾಗಿಯೂ ರಂಜಿಸುತ್ತಿರುವುದು.

೭–೮. ಸಮಸ್ತ ದೇವತೆಗಳೂ ಆ ಕುಂಡದಲ್ಲಿ ಸ್ನಾನಮಾಡಿ ನಿಜವಾಗಿಯೂ ಶುದ್ಧರಾಗಿ ನಿಷ್ಕಲ್ಮಷರೂ ನಿರ್ಮಲಕಾಂತಿಯುಕ್ತರೂ ಆದರು. ಮಹತ್ತಾದ ಆ ಆಶ್ಚರ್ಯವನ್ನು ಕಂಡು ಸಮಸ್ತ ದೇವತೆಗಳೂ ತಟಕ್ಕನೆ ಬ್ರಹ್ಮನಿಗೆ ಅಡ್ಡ ಬಿದ್ದು ಭಕ್ತಿಯಿಂದ ಅಂಜಲಿಯನ್ನು ಕಲ್ಪಿಸಿಕೊಂಡು ಬಿನ್ನಹ ಮಾಡಿದರು.

೯. ದೇವತೆಗಳು ಕೇಳುತ್ತಾರೆ:—"ಭಗವನ್ ಕಮಲಾಸನಾ! ನಿರ್ಮಲ ಕಾಂತಿಯಿಂದೊಡಗೂಡಿದ ಈ ಕುಂಡದ ಮಾಹಾತ್ಮ್ಯವೆಲ್ಲವನ್ನೂ ಯಥಾರ್ಥ ವಾಗಿ ನಮಗೆ ತಿಳಿಸು.

೧೦. ಇಲ್ಲಿ ಸ್ನಾನಮಾಡಿದುದರಿಂದ ನಮಗೆಲ್ಲರಿಗೂ ಕಲ್ಮಷವು ಕಳೆಯಿತು. ಈ ಕುಂಡದಲ್ಲಿ ಇಂತಹ ಮಹದಾಶ್ಚರ್ಯವನ್ನು ಕಂಡು ನಾವೆಲ್ಲರೂ ವಿಸ್ಮಿತ ರಾಗಿದ್ದೇವೆ. ಆದುದರಿಂದ ಎಲೈ ಸುರಶ್ರೇಷ್ಠನೇ! ಇದರ ಮಾಹಾತ್ಮ್ಯವನ್ನು ಕೃಪೆಯಿಂದ ನಮಗೆ ತಿಳಿಯಹೇಳು."

೧೧. ಬ್ರಹ್ಮನು ಹೇಳುತ್ತಾನೆ:— "ವಿಸ್ಮಯಹೊಂದಿರುವ ಸಮಸ್ತ

ಅತ್ರ ಸ್ನಾನೇನ ವಿಧಿವತ್ಪಾಪಾತ್ಮಾನೋಽಪಿ ಜಂತವಃ ।
ವಿಮಾನಂ ಹಂಸಸಂಯುಕ್ತಮಾಸ್ಥಾಯ ರುಚಿರಾಂಬರಾಃ ।
ನಿವಸಂತಿ ಬ್ರಹ್ಮಲೋಕೇ ಯಾವದಾಭೂತಸಂಪ್ಲವಂ ॥ ೧೨ ॥
ಅತ್ರ ದಾನೇನ ಹೋಮೇನ ಯಥಾಶಕ್ತ್ಯಾ ಸುರೋತ್ತಮಾಃ ।
ತುಲಾಶ್ವಮೇಧಯೋಃ ಪುಣ್ಯಂ ಪ್ರಾಪ್ನುಯುರ್ಮುನಿಸತ್ತಮಾಃ ॥ ೧೩ ॥
ಮಮಾಸ್ಮಿನ್ಸರಸಿ ಶ್ರೀಮಾನ್ ಜಾಯತೇ ಸ್ನಾನತೋ ನರಃ ।
ತಸ್ಮಾದತ್ರ ವಿಧಾನೇನ ಸ್ನಾನಂ ದಾನಂ ಜಪಾದಿಕಂ ॥ ೧೪ ॥
ಸರ್ವಯಜ್ಞಸಮಂ ಸ್ಯಾದ್ವೈ ಮಹಾಪಾತಕನಾಶನಂ ।
ಬ್ರಹ್ಮಕುಂಡಮಿತಿ ಖ್ಯಾತಿಮಿತೋ ಯಾಸ್ಯತ್ಯನುತ್ತಮಾಂ ॥ ೧೫ ॥
ಅಸ್ಮಿನ್ ಕುಂಡೇ ಚ ಸಾನ್ನಿಧ್ಯಂ ಭವಿಷ್ಯತಿ ಸದಾ ಮಮ ।
ಕಾರ್ತಿಕೇ ಶುಕ್ಲಪಕ್ಷಸ್ಯ ಚತುರ್ದಶ್ಯಾಂ ಸುರೋತ್ತಮಾಃ ॥ ೧೬ ॥
ಯಾತ್ರಾ ಭವಿಷ್ಯತಿ ಸದಾ ಸುರಾಃ ಸಾಂವತ್ಸರೀ ಮಮ ।
ಶುಭಪ್ರದಾ ಮಹಾಪಾಪರಾಶಿನಾಶಕರೀ ತದಾ ॥ ೧೭ ॥

---

ದೇವತೆಗಳೂ ಈ ಕುಂಡದ ಮಾಹಾತ್ಮ್ಯವನ್ನು ಸಾವಧಾನರಾಗಿ ಕೇಳಿರಿ. ಈ ಮಾಹಾತ್ಮ್ಯವು ನಾನಾ ಫಲಗಳಿಂದ ಕೂಡಿರುವುದು.

೧೨. ಪಾಪಾತ್ಮರಾದ ಮಾನವರು ಕೂಡ ಇಲ್ಲಿ ವಿಧಿಪ್ರಕಾರವಾಗಿ ಸ್ನಾನ ಮಾಡುವುದರಿಂದ ಹಂಸಗಳನ್ನು ಹೂಡಿದ ವಿಮಾನಗಳನ್ನೇರಿ ಮನೋಹರವಾದ ಬಟ್ಟೆಗಳನ್ನುಟ್ಟು ಸಮಸ್ತ ಭೂತಗಳೂ ಪ್ರಳಯಹೊಂದುವವರೆಗೂ ಬ್ರಹ್ಮಲೋಕದಲ್ಲಿ ವಾಸಮಾಡುತ್ತಾರೆ.

೧೩. ಎಲೈ ಸುರೋತ್ತಮರೇ! ಇಲ್ಲಿ ಯಥಾಶಕ್ತಿಯಾಗಿ ದಾನಮಾಡುವುದರಿಂದಲೂ, ಹೋಮಮಾಡುವುದರಿಂದಲೂ ತುಲಾಶ್ವಮೇಧಗಳ ಪುಣ್ಯವನ್ನು ಪಡೆಯುತ್ತಾರೆ.

೧೪–೧೫. ನನ್ನ ಹೆಸರಿನ ಈ ಸರೋವರದಲ್ಲಿ ಸ್ನಾನಮಾಡುವುದರಿಂದ ನರನು ಶ್ರೀಮಂತನಾಗುತ್ತಾನೆ. ಆದುದರಿಂದ ಇಲ್ಲಿ ವಿಧಿಪ್ರಕಾರವಾಗಿ ಮಾಡಿದ ಸ್ನಾನ, ದಾನ, ಜಪ ಮೊದಲಾದವು ಸರ್ವಯಜ್ಞಗಳಿಗೂ ಸಮಾನವಾಗಿರುತ್ತವೆಯಲ್ಲದೆ, ಮಹಾಪಾತಕಗಳನ್ನೂ ನಾಶಮಾಡುತ್ತವೆ. ಇನ್ನು ಮುಂದೆ ಇದು ಬ್ರಹ್ಮಕುಂಡವೆಂದು ಪ್ರಖ್ಯಾತಿಯನ್ನು ಪಡೆಯುತ್ತದೆ.

೧೬–೧೭. ಈ ಕುಂಡದಲ್ಲಿ ಸದಾಕಾಲವೂ ನನ್ನ ಸಾನ್ನಿಧ್ಯವಿರುತ್ತದೆ. ಎಲೈ ಸುರೋತ್ತಮರೇ! ಕಾರ್ತಿಕಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ಇಲ್ಲಿ ವಾರ್ಷಿಕ ಜಾತ್ರೆಯು ನಡೆಯುತ್ತದೆ. ಆಗ ಆ ಜಾತ್ರೆಯು ಶುಭವನ್ನು ಕೊಡತಕ್ಕದ್ದೂ, ಮಹಾಪಾಪಗಳ ರಾಶಿಯನ್ನು ನಾಶಮಾಡತಕ್ಕದ್ದೂ ಆಗುವುದು.

ಸ್ವರ್ಣಂ ಚೈವ ಸದಾ ದೇಯಂ ವಾಸಾಂಸಿ ವಿವಿಧಾನಿ ಚ ।
ನಿಜಶಕ್ತ್ಯಾ ಪ್ರಕರ್ತವ್ಯಾ ಸುರಾಸ್ತೃಪ್ತಿರ್ದ್ವಿಜನ್ಮನಾಂ ॥ ೧೮ ॥
ಅಗಸ್ತ್ಯ ಉವಾಚ :—
ಇತ್ಯುಕ್ತ್ವಾ ದೇವದೇವೋಽಯಂ ಬ್ರಹ್ಮಾ ಲೋಕ ಪಿತಾಮಹಃ ।
ಅಂತರ್ದಧೇ ಸುರೈಃ ಸಾರ್ಧಂ ತೀರ್ಥಂ ದೃಷ್ಟ್ವಾ ತಪೋಧನ ॥ ೧೯ ॥
ತದಾಪ್ರಭೃತಿ ತತ್ಕುಂಡಂ ವಿಖ್ಯಾತಂ ಪರಮಂ ಭುವಿ ।
ಚಕ್ರತೀರ್ಥಾಚ್ಚ ಪೂರ್ವಸ್ಯಾಂ ದಿಶಿ ಕುಂಡಂ ಸ್ಥಿತಂ ಮಹತ್ ॥ ೨೦ ॥
ಸೂತ ಉವಾಚ :—
ಇತ್ಯುಕ್ತ್ವಾ ಸ ತಪೋರಾಶಿರಗಸ್ತ್ಯಃ ಕುಂಭಸಂಭವಃ ।
ಪುನಃ ಪೃಷ್ಟೋ ಮುನಿವರೋ ವ್ಯಾಸಾಯಾವೀವದತ್ಕಥಾಂ ॥ ೨೧ ॥
ಅಗಸ್ತ್ಯ ಉವಾಚ :—
ಅನ್ಯಚ್ಛೃಣು ಮಹಾಭಾಗ ತೀರ್ಥಂ ದುಷ್ಕೃತಿದುರ್ಲಭಂ ।
ಋಣಮೋಚನ ಸಂಜ್ಞಂ ತು ಸರಯೂತೀರಸಂಗತಂ ॥ ೨೨ ॥
ಬ್ರಹ್ಮಕುಂಡಾನ್ಮುನಿವರ ಧನುಃಸಪ್ತಶತೇಸ ಚ ।
ಪೂರ್ವೋತ್ತರದಿಶಾಭಾಗೇ ಸಂಸ್ಥಿತಂ ಸರಯೂಜಲೇ ॥ ೨೩ ॥

---

೧೮. ಎಲೈ ಸುರರೇ! ವ್ರತಿಯಾದವನೂ, ಯಾತ್ರಿಕನೂ ಸದಾಕಾಲವೂ ಈ ತೀರ್ಥದಲ್ಲಿ ವಿಪ್ರರಿಗೆ ತನ್ನ ಶಕ್ತಿಗೆ ತಕ್ಕಂತೆ ಚಿನ್ನವನ್ನೂ, ವಿವಿಧ ವಸ್ತ್ರಗಳನ್ನೂ ದಾನಮಾಡಬೇಕು. ಸ್ವಶಕ್ತಿಗನುಸಾರವಾಗಿ ಬ್ರಾಹ್ಮಣರಿಗೆ ತೃಪ್ತಿಯನ್ನುಂಟು ಮಾಡಬೇಕು.''

೧೯–೨೦. ಅಗಸ್ತ್ಯನು ಹೇಳುತ್ತಾನೆ:— ಎಲೈ ತಪೋಧನನೇ! ಲೋಕ ಪಿತಾಮಹನೂ, ದೇವದೇವನೂ ಆದ ಬ್ರಹ್ಮನು ಇಂತೆಂದು ನುಡಿದು, ತೀರ್ಥ ವನ್ನು ಅನುಗ್ರಹಿಸಿ ದೇವತೆಗಳೊಡನೆ ಅಂತರ್ಧಾನಹೊಂದಿದನು. ಅಂದು ಮೊದಲಾಗಿ ಆ ಬ್ರಹ್ಮಕುಂಡವು ಭೂಮಿಯಲ್ಲಿಯೇ ಬಹಳ ವಿಖ್ಯಾತವಾಯಿತು. ಮಹತ್ತಾದ ಆ ಕುಂಡವು ಚಕ್ರತೀರ್ಥಕ್ಕೆ ಪೂರ್ವದಿಕ್ಕಿನಲ್ಲಿ ನೆಲಸಿರುವುದು.

೨೧. ಸೂತಪುರಾಣಿಕನು ಹೇಳುತ್ತಾನೆ:— ತಪೋರಾಶಿಯೂ, ಕುಂಭ ಸಂಭವನೂ ಆದ ಆ ಅಗಸ್ತ್ಯಮುನಿಯು ಹೀಗೆ ಹೇಳಿ ಮತ್ತೆ ಪ್ರಶ್ನಿಸಲ್ಪಟ್ಟವ ನಾಗಿ ವ್ಯಾಸಮುನಿಗೆ ಆ ಕಥೆಯನ್ನು ಹೇಳಿದನು.

೨೨. ಅಗಸ್ತ್ಯನು ಹೇಳುತ್ತಾನೆ:—ಎಲೈ ಪುಣ್ಯವಂತನೇ! ದುಷ್ಕೃತ ಮಾಡಿದವರಿಗೆ ದುರ್ಲಭವಾದ ಮತ್ತೊಂದು ತೀರ್ಥವನ್ನು ತಿಳಿಸುತ್ತೇನೆ, ಕೇಳು. ಅದಕ್ಕೆ 'ಋಣಮೋಚನ'ವೆಂದು ಹೆಸರು. ಅದು ಸರಯೂನದಿಯ ತೀರದಲ್ಲಿರುವುದು.

೨೩. ಎಲೈ ಮುನಿಶ್ರೇಷ್ಠನೇ! ಬ್ರಹ್ಮಕುಂಡದಿಂದ ಏಳುನೂರು ಧನಸ್ಸುಗಳ

ತತ್ರ ಪೂರ್ವಂ ಮುನಿವರೋ ಲೋಮಶೋ ನಾಮ ನಾಮತಃ ।
ತೀರ್ಥಯಾತ್ರಾಪ್ರಸಂಗೇನ ಸ್ನಾನಂ ಚಕ್ರೇ ವಿಧಾನತಃ ॥ ೨೪ ॥
ತತಃ ಸ ಋಣನಿರ್ಮುಕ್ತೋ ಬಭೂವ ಗತಕಲ್ಮಷಃ ।
ತದಾಶ್ಚರ್ಯಂ ಮಹದ್ದೃಷ್ಟ್ವಾ ಮುನೀನ್ ಸಾನಂದಮಬ್ರವೀತ್ ॥ ೨೫ ॥
ಪಶ್ಯಂತ್ವೇತಸ್ಯ ಮಹತೋ ಗುಣಾಂಸ್ತೀರ್ಥವರಸ್ಯ ವೈ ।
ಭುಜಾವೂರ್ಧ್ವಂ ತಥಾ ಕೃತ್ವಾ ಹರ್ಷೇಣಾಹಾಽಶ್ರುಲೋಚನಃ ॥ ೨೬ ॥
ಲೋಮಶ ಉವಾಚ :—
ಋಣಮೋಚನಸಂಜ್ಞಂ ತು ತೀರ್ಥಮೇತದನುತ್ತಮಂ ।
ಯತ್ರಸ್ನಾನೇನ ಜಂತೂನಾಮೃಣನಿರ್ಯಾತನಂ ಭವೇತ್ ॥ ೨೭ ॥
ಐಹಿಕಂ ಪಾರಲೌಕಿಕ್ಯಂ ಯದೃಣತ್ರಿತಯಂ ನೃಣಾಂ ।
ತತ್ಸರ್ವಂ ಸ್ನಾನಮಾತ್ರೇಣ ತೀರ್ಥೇಽಸ್ಮಿನ್ನಶ್ಯತಿ ಕ್ಷಣಾತ್ ॥ ೨೮ ॥
ಸರ್ವತೀರ್ಥೋತ್ತಮಂ ಚೈತತ್ಸದ್ಯಃ ಪ್ರತ್ಯಯಕಾರಕಂ ।
ಮಯಾಚಾಸ್ಯ ಫಲಂ ಸಮ್ಯಗನುಭೂತಮ್ಮಿಹಾದಿಹ ॥ ೨೯ ॥

---

ದೂರದಲ್ಲಿ ಪೂರ್ವೋತ್ತರ ದಿಕ್ಕಿನ (ಈಶಾನ್ಯ) ಭಾಗದಲ್ಲಿ ಸರಯೂನದಿಯ ಜಲದಲ್ಲಿಯೇ ಆ ತೀರ್ಥವಿರುವುದು.

೨೪–೨೫. ಅಲ್ಲಿ ಪೂರ್ವದಲ್ಲಿ ಲೋಮಶಮುನಿಶ್ರೇಷ್ಠನು ತೀರ್ಥಯಾತ್ರೆಯ ಸಂದರ್ಭದಲ್ಲಿ ವಿಧಿಪ್ರಕಾರವಾಗಿ ಸ್ನಾನಮಾಡಿದನು. ಆಗ ಆತನು ಋಣವಿಮುಕ್ತ ನಾಗಿ ಕಲ್ಮಷರಹಿತನಾದನು. ಮಹತ್ತಾದ ಆ ಆಶ್ಚರ್ಯವನ್ನು ಕಂಡು ಆನಂದ ಗೊಂಡು ಮುನಿಗಳನ್ನು ಕುರಿತು ಆತನು ಇಂತೆಂದನು :—

೨೬. "ಎಲೈ ಮುನಿಗಳಿರಾ! ಮಹತ್ತರವಾದ ಈ ತೀರ್ಥಶ್ರೇಷ್ಠದ ಗುಣಗಳನ್ನು ನೋಡಿರಿ" ಎಂದು ಭುಜಗಳನ್ನು ಮೇಲಕ್ಕೆತ್ತಿ ಆತನು ಹರ್ಷದಿಂದ ಕಣ್ಣೀರು ಸುರಿಸುತ್ತ ಹೇಳತೊಡಗಿದನು.

೨೭. ಲೋಮಶನು ಹೇಳುತ್ತಾನೆ:—"ಇದು 'ಋಣಮೋಚನ'ವೆಂಬ ಸರ್ವಶ್ರೇಷ್ಠವಾದ ತೀರ್ಥವು. ಇಲ್ಲಿ ಸ್ನಾನಮಾಡುವುದರಿಂದ ಜಂತುಗಳಿಗೆ ಋಣಪರಿಹಾರವುಂಟಾಗುತ್ತದೆ.

೨೮. ಮನುಷ್ಯರಿಗೆ ಐಹಿಕ ಮತ್ತು ಪಾರಲೌಕಿಕವಾದ ಋಣತ್ರಯಗಳು ಯಾವುವಿವೆಯೋ ಅವೆಲ್ಲವೂ ಈ ತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದ ಒಂದು ಕ್ಷಣದಲ್ಲಿಯೇ ನಾಶವಾಗುತ್ತದೆ.

೨೯. ಇದು ತೀರ್ಥಗಳಲ್ಲೆಲ್ಲ ಉತ್ತಮವಾದುದು. ತಕ್ಷಣವೇ ನಂಬಿಕೆ ಯನ್ನುಂಟುಮಾಡಿಕೊಡುವಂಥದು. ನನಗೆ ಕೂಡ ಇದರ ಫಲವು ಈಗ ಚೆನ್ನಾಗಿ ಅನುಭವಕ್ಕೆ ಬಂದಿದೆ.

ತಸ್ಮಾದತ್ರ ವಿಧಾನೇನ ಸ್ನಾನಂ ದಾನಂ ಚ ಶಕ್ತಿತಃ ।
ಕರ್ತವ್ಯಂ ಶ್ರದ್ಧಯಾ ಯುಕ್ತೈಃ ಸರ್ವದಾ ಫಲಕಾಂಕ್ಷಿಭಿಃ ॥ ೩೦ ॥
ಸ್ನಾತವ್ಯಂ ಚ ಸುವರ್ಣಂ ಚ ದೇಯಂ ವಸ್ತ್ರಾದಿ ಶಕ್ತಿತಃ ॥ ೩೧ ॥
ಅಗಸ್ತ್ಯ ಉವಾಚ :—
ಇತ್ಯುಕ್ತ್ವಾ ತೀರ್ಥಮಾಹಾತ್ಮ್ಯಂ ಲೋಮಶೋ ಮುನಿಸತ್ತಮಃ ।
ಅಂತರ್ದಧೇ ಮುನಿಶ್ರೇಷ್ಠಸ್ತುವಂಸ್ತೀರ್ಥಗುಣಾನ್ಮುದಾ ॥ ೩೨ ॥
ಇತ್ಯೇತತ್ಕಥಿತಂ ವಿಪ್ರ ಋಣಮೋಚನಸಂಜ್ಞಕಂ ।
ಯತ್ರ ಸ್ನಾನೇನ ಜಂತೂನಾಮೃಣಂ ನಶ್ಯತಿ ತತ್ಕ್ಷಣಾತ್ ।
ಋಣಮೋಚನತೀರ್ಥಂ ತು ಪೂರ್ವತಃ ಸರಯೂಜಲೇ ॥ ೩೩ ॥
ಧನುರ್ದ್ವಿಶತ್ಯಾ ತೀರ್ಥಂ ಚ ಪಾಪಮೋಚನಸಂಜ್ಞಕಂ ।
ಸರ್ವಪಾಪವಿಶುದ್ಧಾತ್ಮಾ ತತ್ರ ಸ್ನಾನೇನ ಮಾನವಃ ।
ಜಾಯತೇ ತತ್ಕ್ಷಣಾದೇವ ನಾತ್ರ ಕಾರ್ಯಾ ವಿಚಾರಣಾ ॥ ೩೪ ॥
ಮಯಾ ತತ್ರ ಮುನಿಶ್ರೇಷ್ಠ ದೃಷ್ಟಂ ಮಾಹಾತ್ಮ್ಯಮುತ್ತಮಂ ॥ ೩೫ ॥

---

೩೦. ಆದುದರಿಂದ ಫಲವನ್ನು ಬಯಸುವಂಥವರು ಶ್ರದ್ಧೆಯಿಂದ ಕೂಡಿದವರಾಗಿ ವಿಧಿಯನ್ನನುಸರಿಸಿ ತಮ್ಮ ತಮ್ಮ ಶಕ್ತಿಗೆ ತಕ್ಕಂತೆ ಇಲ್ಲಿ ಸ್ನಾನವನ್ನೂ ದಾನವನ್ನೂ ಮಾಡತಕ್ಕದ್ದು.

೩೧. ಈ ತೀರ್ಥದಲ್ಲಿ ಸ್ನಾನಮಾಡಬೇಕು. ಸುವರ್ಣವನ್ನೂ ವಸ್ತ್ರಾದಿಗಳನ್ನೂ ಶಕ್ತ್ಯನುಸಾರವಾಗಿ ದಾನಮಾಡಬೇಕು.''

೩೨. ಅಗಸ್ತ್ಯನು ಹೇಳುತ್ತಾನೆ:—''ಮುನಿಶ್ರೇಷ್ಠನಾದ ಲೋಮಶನು ಈ ರೀತಿ ಆ ತೀರ್ಥಮಾಹಾತ್ಮ್ಯವನ್ನು ವಿವರಿಸಿ ಹೇಳಿದ ಬಳಿಕ ಆ ತೀರ್ಥದ ಗುಣಗಳನ್ನು ಸಂತೋಷದಿಂದ ಸ್ತುತಿಸುತ್ತ ಅಂತರ್ಧಾನವನ್ನು ಹೊಂದಿದನು.

೩೩–೩೪. ಎಲೈ ಬ್ರಾಹ್ಮಣನೇ! ಋಣಮೋಚನವೆಂಬ ಆ ತೀರ್ಥವು ಈ ರೀತಿ ಹೇಳಲ್ಪಟ್ಟಿದೆ. ಅಲ್ಲಿ ಸ್ನಾನಮಾಡುವುದರಿಂದ ಪ್ರಾಣಿಗಳ ಋಣವು ಆ ಕ್ಷಣವೇ ನಾಶವಾಗುತ್ತದೆ. ಋಣಮೋಚನತೀರ್ಥದ ಪೂರ್ವಕ್ಕೆ ಇನ್ನೂರು ಧನುಸ್ಸುಗಳ ದೂರದಲ್ಲಿ ಸರಯೂಜಲದಲ್ಲಿ ಪಾಪಮೋಚನವೆಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡುವುದರಿಂದ ಮಾನವನು ತಕ್ಷಣವೇ ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಶುದ್ಧಾತ್ಮನಾಗುತ್ತಾನೆ. ಈ ವಿಷಯವಾಗಿ ವಿಚಾರಮಾಡಬೇಕಾದುದೇ ಇಲ್ಲ.

೩೫. ಎಲೈ ಮುನಿಶ್ರೇಷ್ಠನೇ! ಅಲ್ಲಿ ನಾನು ಅದ್ಭುತವಾದ ಮಾಹಾತ್ಮ್ಯವನ್ನು ಕಂಡೆನು.

**ಪಾಂಚಾಲದೇಶಸಂಭೂತೋ ನಾಮ್ನಾ ನರಹರಿರ್ದ್ವಿಜಃ ।**
**ಅಸತ್ಸಂಗಪ್ರಭಾವೇನ ಪಾಪಾತ್ಮಾ ಸಮಜಾಯತ ॥ ೩೬ ॥**
**ನಾನಾವಿಧಾನಿ ಪಾಪಾನಿ ಬ್ರಹ್ಮಹತ್ಯಾಧಿಕಾನಿ ಚ ।**
**ಕೃತವಾನ್ ಪಾಪಿಸಂಗೇನ ತ್ರಯೀಮಾರ್ಗವಿನಿಂದಕಃ ॥ ೩೭ ॥**
**ಸ ಕದಾಚಿತ್ ಸಾಧುಸಂಗಾತ್ತೀರ್ಥಯಾತ್ರಾಪ್ರಸಂಗತಃ ।**
**ಅಯೋಧ್ಯಾಮಾಗತೋ ವಿಪ್ರ ಮಹಾಪಾತಕಕೃದ್ದ್ವಿಜಃ ॥ ೩೮ ॥**
**ಪಾಪಮೋಚನತೀರ್ಥೇ ತು ಸ್ನಾತಃ ಸತ್ಸಂಗತೋ ದ್ವಿಜಃ ।**
**ಪಾಪರಾಶಿರ್ವಿನಷ್ಟೋಽಸ್ಯ ನಿಷ್ಪಾಪಃ ಸಮಭೂತ್‍ಕ್ಷಣಾತ್ ॥ ೩೯ ॥**
**ದಿವಃ ಪಪಾತ ತನ್ಮೂರ್ಧ್ನಿ ಪುಷ್ಪವೃಷ್ಟಿರ್ಮುನೀಶ್ವರ ।**
**ದಿವ್ಯಂ ವಿಮಾನಮಾರುಹ್ಯ ವಿಷ್ಣುಲೋಕೇ ಗತೋ ದ್ವಿಜಃ ॥ ೪೦ ॥**
**ತದ್ದೃಷ್ಟ್ವಾ ಮಹದಾಶ್ಚರ್ಯಂ ಮಯಾ ಚ ದ್ವಿಜಪುಂಗವ ।**
**ಶ್ರದ್ಧಯಾ ಪರಯಾ ತತ್ರ ಕೃತಂ ಸ್ನಾನಂ ವಿಶೇಷತಃ ॥ ೪೧ ॥**
**ಮಾಘಕೃಷ್ಣಚತುರ್ದಶ್ಯಾಂ ತತ್ರ ಸ್ನಾನಂ ವಿಶೇಷತಃ ।**
**ದಾನಂ ಚ ಮನುಜೈಃ ಕಾರ್ಯಂ ಸರ್ವಪಾಪವಿಶುದ್ಧಯೇ ॥ ೪೨ ॥**

---

೩೬. ಪಾಂಚಾಲದೇಶದಲ್ಲಿ ಹುಟ್ಟಿದವನಾದ ನರಹರಿಯೆಂಬ ಹೆಸರಿನ ಬ್ರಾಹ್ಮಣನು ದುಷ್ಟಸಂಗಪ್ರಭಾವದಿಂದ ಪಾಪಾತ್ಮನಾದನು.

೩೭. ಆ ಪಾಪಿಗಳ ಸಹವಾಸದಿಂದ ಬ್ರಹ್ಮಹತ್ಯವೇ ಮೊದಲಾದ ನಾನಾವಿಧವಾದ ಪಾಪಗಳನ್ನೂ ಮಾಡಿದನು. ವೇದಮಾರ್ಗವನ್ನು ನಿಂದಿಸುವವನಾದನು.

೩೮–೩೯. ಮಹಾಪಾತಕಗಳನ್ನು ಮಾಡಿದ ಆ ಬ್ರಾಹ್ಮಣನು ಸಾಧುಗಳ ಸಂಗದಿಂದ ಒಂದಾನೊಂದು ಸಲ ತೀರ್ಥಯಾತ್ರೆಮಾಡಹೊರಟು ಅಯೋಧ್ಯೆಗೆ ಬಂದನು. ಸತ್ಸಂಗದ ಪರಿಣಾಮವಾಗಿ ಆ ದ್ವಿಜನು ಪಾಪಮೋಚನತೀರ್ಥದಲ್ಲಿ ಸ್ನಾನಮಾಡಿದನು. ಅವನ ಪಾಪರಾಶಿಯು ಆಗಲೇ ಸಂಪೂರ್ಣವಾಗಿ ನಾಶವಾಗಿ ಅವನು ಕ್ಷಣಮಾತ್ರದಲ್ಲಿಯೆ ನಿಷ್ಪಾಪನಾದನು.

೪೦. ಮುನೀಶ್ವರಾ! ಅವನ ತಲೆಯಮೇಲೆ ಸ್ವರ್ಗದಿಂದ ಪುಷ್ಪವೃಷ್ಟಿಯು ಸುರಿಯಿತು. ದಿವ್ಯವಿಮಾನವನ್ನೇರಿ ಆ ದ್ವಿಜನು ಕೂಡಲೆ ವಿಷ್ಣುಲೋಕಕ್ಕೆ ಹೋದನು.

೪೧. ಅಯ್ಯಾ ದ್ವಿಜಶ್ರೇಷ್ಠನೇ! ಮಹತ್ತರವಾದ ಆ ಆಶ್ಚರ್ಯವನ್ನು ಕಂಡು ನಾನೂ ಉತ್ತಮ ಶ್ರದ್ಧೆಯಿಂದ ಕೂಡಿದವನಾಗಿ ಅಲ್ಲಿ ಸ್ನಾನಮಾಡಿದೆನು.

೪೨. ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನ ಅಲ್ಲಿ ಸ್ನಾನವನ್ನೂ ದಾನವನ್ನೂ ಮಾಡುವುದು ಬಹು ವಿಶೇಷ. ಮನುಷ್ಯರು ಸರ್ವಪಾಪಪರಿಶುದ್ಧಿಗಾಗಿ ಅಂದು ಸ್ನಾನವನ್ನೂ, ದಾನವನ್ನೂ ಮಾಡಬೇಕು.

ಅನ್ಯದಾ ತು ಕೃತೇ ಸ್ನಾನೇ ಸರ್ವಪಾಪಕ್ಷಯೋ ಭವೇತ್ ॥ ೪೩ ॥
ಪಾಪಮೋಚನತೀರ್ಥೇ ತು ಪೂರ್ವಂ ತು ಸರಯೂಜಲೇ ।
ಧನುಃಶತಪ್ರಮಾಣೇನ ವರ್ತತೇ ತೀರ್ಥಮುತ್ತಮಂ ॥ ೪೪ ॥
ಸಹಸ್ರಧಾರಾಸಂಜ್ಞಂ ತು ಸರ್ವಕಿಲ್ಬಿಷನಾಶನಂ ।
ಯಸ್ಮಿನ್ರಾಮಾಜ್ಞಯಾ ವೀರೋ ಲಕ್ಷ್ಮಣಃ ಪರವೀರಹಾ ।
ಪ್ರಾಣಾನುತ್ಸೃಜ್ಯ ಯೋಗೇನ ಯಯೌ ಶೇಷಾತ್ಮತಾಂ ಪುರಾ ॥ ೪೫ ॥
ಸಾರ್ಧಂ ಹಸ್ತತ್ರಯೇಣೈವ ಪ್ರಮಾಣಂ ಧನುಷೋ ವಿದುಃ ।
ಚತುರ್ಭಿರ್ಹಸ್ತಕೈಃ ಸಂಖ್ಯಾ ದಂಡ ಇತ್ಯಭಿಧೀಯತೇ ॥ ೪೬ ॥

ಸೂತ ಉವಾಚ :—

ಇತ್ಥಂ ತದಾ ಸಮಾಕರ್ಣ್ಯ ಕುಂಭಯೋನಿಮುನೇಸ್ತದಾ ।
ಕೃಷ್ಣದ್ವೈಪಾಯನೋ ವ್ಯಾಸಃ ಪುನಃ ಪಪ್ರಚ್ಛ ಕೌತುಕಾತ್ ॥ ೪೭ ॥

ವ್ಯಾಸ ಉವಾಚ :—

ಸಹಸ್ರಧಾರಾಮಾಹಾತ್ಮ್ಯಂ ವಿಸ್ತರಾದ್ವದ ಸುವ್ರತ ।
ಶೃಣ್ವಂಸ್ತೀರ್ಥಸ್ಯ ಮಾಹಾತ್ಮ್ಯಂ ನ ತೃಪ್ಯತಿ ಮನೋ ಮಮ ॥ ೪೮ ॥

---

೪೩. ಬೇರೆ ದಿನಗಳಲ್ಲಾದರೂ ಅಲ್ಲಿ ಸ್ನಾನಮಾಡಿದರೆ ಸರ್ವಪಾಪಗಳಿಗೂ ಕ್ಷಯವುಂಟಾಗುತ್ತದೆ.

೪೪–೪೫. ಪಾಪಮೋಚನತೀರ್ಥದಿಂದ ಪೂರ್ವಕ್ಕೆ ಸರಯೂಜಲದಲ್ಲಿ ನೂರು ಧನುಸ್ಸುಗಳಷ್ಟು ಪ್ರಮಾಣವುಳ್ಳದಾಗಿರುವ ಸಹಸ್ರಧಾರವೆಂಬ ಒಂದು ಉತ್ತಮ ತೀರ್ಥವಿರುವುದು. ಅದು ಸರ್ವಪಾಪಗಳನ್ನೂ ಹೋಗಲಾಡಿಸ ತಕ್ಕುದು. ಪೂರ್ವದಲ್ಲಿ ಶ್ರೀರಾಮನ ಆಜ್ಞೆಯಿಂದ ಶತ್ರುವೀರರನ್ನು ಧ್ವಂಸ ಮಾಡುವವನಾದ ವೀರಲಕ್ಷ್ಮಣನು ಆ ತೀರ್ಥದಲ್ಲಿಯೇ ಯೋಗದಿಂದ ಪ್ರಾಣ ಗಳನ್ನು ತೊರೆದು ಶೇಷತ್ವವನ್ನೈದಿದನು.

೪೬. ಒಂದು ಧನುಸ್ಸಿನ ಪ್ರಮಾಣವು ಮೂರೂವರೆ ಹಸ್ತವೆಂದು ತಿಳಿಯು ತ್ತಾರೆ. ನಾಲ್ಕು ಹಸ್ತಗಳಿಗೆ ಒಂದು ದಂಡವೆಂದು ಹೆಸರಾಗುತ್ತದೆ.''

೪೭. ಸೂತಪುರಾಣಿಕನು ಹೇಳುತ್ತಾನೆ:— ಈ ರೀತಿಯಾಗಿ ನುಡಿದ ಕುಂಭಸಂಭವ (ಅಗಸ್ತ್ಯ) ಮುನಿಯ ಮಾತುಗಳನ್ನು ಕೇಳಿ ಕೃಷ್ಣದ್ವೈಪಾಯನ ನಾದ ವ್ಯಾಸನು ಕೌತುಕದಿಂದ ಮತ್ತೆ ಪ್ರಶ್ನೆಮಾಡಿದನು.

೪೮. ವ್ಯಾಸನು ಕೇಳುತ್ತಾನೆ:—'' ಎಲೈ ಸುವ್ರತನೇ! ಸಹಸ್ರಧಾರದ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳು. ತೀರ್ಥಮಾಹಾತ್ಮ್ಯವನ್ನು ಕೇಳು ತ್ತಿದ್ದರೆ ನನ್ನ ಮನಸ್ಸು ತೃಪ್ತಿಹೊಂದುವುದೇ ಇಲ್ಲವು. ಇನ್ನೂ ಕೇಳಬೇಕೆನ್ನಿ ಸುತ್ತದೆ.''

**ಅಗಸ್ತ್ಯ ಉವಾಚ :—**

**ಸಾವಧಾನಃ ಶೃಣು ಮುನೇ ಕಥಾಂ ಕಥಯತೋ ಮಮ ।**
**ಸಹಸ್ರಧಾರಾತೀರ್ಥಸ್ಯ ಸಮುತ್ಪತ್ತಿಂ ಮಹೋದಯಾತ್ ॥ ೪೯ ॥**
**ಪುರಾ ರಾಮೋ ರಘುಪತಿರ್ದೇವಕಾರ್ಯಂ ವಿಧಾಯ ವೈ ।**
**ಕಾಲೇನ ಸಹ ಸಂಗಮ್ಯ ಮಂತ್ರಂ ಚಕ್ರೇ ನರೇಶ್ವರಃ ॥ ೫೦ ॥**
**ಆವಾಂ ಮಂತ್ರಯಮಾಣೌ ಹಿ ಯಃ ಪಶ್ಯೇದಂತಿಕಾಗತಃ ।**
**ಮಯಾ ತ್ಯಾಜ್ಯೋ ಭವೇತ್ಕ್ಷಿಪ್ರಮಿತ್ಥಂ ಚಕ್ರೇ ಸ ಸಂವಿದಂ ॥ ೫೧ ॥**
**ತಸ್ಮಿನ್ ಮಂತ್ರಯಮಾಣೇ ಹಿ ದ್ವಾರೇ ತಿಷ್ಠತಿ ಲಕ್ಷ್ಮಣೇ ।**
**ಆಗತಃ ಸ ತಪೋರಾಶಿರ್ದುರ್ವಾಸಾಸ್ತೇಜಸಾಂ ನಿಧಿಃ ॥ ೫೨ ॥**
**ಆಗತ್ಯ ಲಕ್ಷ್ಮಣಂ ಶೀಘ್ರಂ ಪ್ರೀತ್ಯೋವಾಚ ಕ್ಷುಧಾಽಽಕುಲಃ ॥ ೫೩ ॥**

**ದುರ್ವಾಸ ಉವಾಚ :—**

**ಸೌಮಿತ್ರೇ ಗಚ್ಛ ಶೀಘ್ರಂ ತ್ವಂ ರಾಮಾಗ್ರೇ ಮಾಂ ನಿವೇದಯ ।**
**ಕಾರ್ಯಾರ್ಥಿನಮಿದಂ ವಾಕ್ಯಂ ನಾನ್ಯಥಾ ಕರ್ತುಮರ್ಹಸಿ ॥ ೫೪ ॥**

---

೪೯. ಅಗಸ್ತ್ಯನು ಹೇಳುತ್ತಾನೆ:—"ಎಲೈ ಮುನಿಯೇ! ನಾನು ಹೇಳುವ ಕಥೆಯನ್ನು ಸಾವಧಾನವಾಗಿ ಲಾಲಿಸು. ಮಹೋದಯದಿಂದ ಆ ಸಹಸ್ರಧಾರಾ ತೀರ್ಥವು ಉತ್ಪತ್ತಿಯಾಯಿತು.

೫೦. ಪೂರ್ವದಲ್ಲಿ ರಘುಪತಿಯಾದ ಶ್ರೀರಾಮನು ದೇವಕಾರ್ಯವನ್ನು ನೆರವೇರಿಸಿಯಾದ ತರುವಾಯ ಕಾಲ(ಯಮ)ನೊಡನೆ ಸೇರಿ ಮಂತ್ರಾಲೋಚನೆಯನ್ನು ನಡಸುತ್ತಿದ್ದನು.

೫೧. 'ನಾವು ಆಲೋಚನೆ ಮಾಡುತ್ತಿರುವಾಗ ಯಾವನು ಸಮೀಪಕ್ಕೆ ಬಂದು ನಮ್ಮನ್ನು ನೋಡುತ್ತಾನೆಯೋ ಅವನು ಕ್ಷಿಪ್ರದಲ್ಲಿಯೇ ನನ್ನಿಂದ ತ್ಯಾಜ್ಯನಾಗುತ್ತಾನೆ.' ಹೀಗೆಂದು ಅವನು ನಿಯಮಮಾಡಿಕೊಂಡಿದ್ದನು.

೫೨. ಅವನು ಹಾಗೆ ಆಲೋಚಿಸುತ್ತಿರುವಂತೆಯೆ, ಬಾಗಿಲಲ್ಲಿ ಲಕ್ಷ್ಮಣನು ನಿಂತಿರಲಾಗಿ ತಪೋರಾಶಿಯೂ ತೇಜೋನಿಧಿಯೂ ಆದ ದುರ್ವಾಸಮಹರ್ಷಿಯು ಅಲ್ಲಿಗೆ ಬಂದನು.

೫೩. ಆತನು ಹಸಿವಿನಿಂದ ಕಳವಳಹೊಂದಿದವನಾಗಿ ಲಕ್ಷ್ಮಣನನ್ನು ಕುರಿತು ಪ್ರೀತಿಯಿಂದ ಬೇಗನೆ ಹೀಗೆ ಹೇಳಿದನು:—

೫೪. ದುರ್ವಾಸನು ಹೇಳುತ್ತಾನೆ:—"ಸೌಮಿತ್ರೇ! ನೀನು ಬೇಗನೆ ಹೋಗು. ಶ್ರೀರಾಮನಲ್ಲಿಗೆ ಹೋಗಿ, ನಾನು ಬಂದಿರುವುದಾಗಿ ನಿವೇದಿಸು. ಕಾರ್ಯಾರ್ಥಿಯಾಗಿ ಬಂದಿರುವ ನನ್ನ ಈ ವಾಕ್ಯವನ್ನು ನೀನು ನಡಸಲೇಬೇಕು."

ಅಗಸ್ತ್ಯ ಉವಾಚ :—

ಶಾಪಾದ್ಭೀತಃ ಸ ಸೌಮಿತ್ರಿರ್ದ್ರುತಂ ಗತ್ವಾ ತಯೋಃಪುರಃ ।
ಮುನಿಂ ನಿವೇದಯಾಮಾಸ ರಾಮಾಗ್ರೇ ದರ್ಶನಾರ್ಥಿನಂ ।
ದುರ್ವಾಸಸಂ ತಪೋರಾಶಿಮತ್ರಿನಂದನಮಾಗತಂ ॥ ೫೫ ॥
ರಾಮೋಽಪಿ ಕಾಲಮಾಮಂತ್ರ್ಯ ಪ್ರಸ್ಥಾಪ್ಯ ಚ ಬಹಿರ್ಯಯೌ ।
ದೃಷ್ಟ್ವಾ ಮುನಿಂ ತಂ ಪ್ರಣತಃ ಸಂಭೋಜ್ಯ ಪ್ರಭುರಾದರಾತ್ ॥ ೫೬ ॥
ದುರ್ವಾಸಸಂ ಮುನಿವರಂ ಪ್ರಸ್ಥಾಪ್ಯ ಸ್ವಯಮಾದರಾತ್ ।
ಸತ್ಯಭಂಗಭಯಾದ್ವೀರೋ ಲಕ್ಷ್ಮಣಂ ತ್ಯಕ್ತವಾಂಸ್ತದಾ ॥ ೫೭ ॥
ಲಕ್ಷ್ಮಣೋಽಪಿ ತದಾ ವೀರಃ ಕುರ್ವನ್ನವಿತಥಂ ವಚಃ ।
ಭ್ರಾತುರ್ಜ್ಯೇಷ್ಠಸ್ಯ ಸುಮತಿಃ ಸರಯೂತೀರಮಾಯಯೌ ॥ ೫೮ ॥
ತತ್ರ ಗತ್ವಾಥ ಚ ಸ್ನಾತ್ವಾ ಧ್ಯಾನಮಾಸ್ಥಾಯ ಸತ್ವರಂ ।
ಚಿದಾತ್ಮನಿ ಮನಃ ಶಾಂತಂ ಸಂಗಮ್ಯಾವಸ್ಥಿತಸ್ತದಾ ॥ ೫೯ ॥
ತತಃ ಪ್ರಾದುರಭೂತ್ತತ್ರ ಸಹಸ್ರಫಣಮಂಡಿತಃ ।
ಶೇಷಶ್ಚಕ್ಷುಃಶ್ರವಾಃ ಶ್ರೇಷ್ಠಃ ಕ್ಷಿತಿಂ ಭಿತ್ವಾ ಸಹಸ್ರಧಾ ।
ಸುರಲೋಕಾತ್ ಸುರೇಂದ್ರೋಽಪಿ ಸಮಾಗಾದಮರೈಃ ಸಹ ॥ ೬೦ ॥

---

೫೫. ಅಗಸ್ತ್ಯನು ಹೇಳುತ್ತಾನೆ:—ಸೌಮಿತ್ರಿಯು ಆ ಮುನಿಯ ಶಾಪಕ್ಕೆ ಹೆದರಿ ಅವರಿಬ್ಬರೆದುರಿಗೆ ಬೇಗನೆ ಹೋಗಿ, ತಪೋರಾಶಿಯೂ ಅತ್ರಿನಂದನನೂ ಆದ ದುರ್ವಾಸಮುನಿಯು ದರ್ಶನಾರ್ಥಿಯಾಗಿ ಬಂದಿರುವನೆಂದು ಶ್ರೀರಾಮನಿಗೆ ನಿವೇದಿಸಿದನು.

೫೬. ರಾಮನುಕೂಡ ಕಾಲನಿಗೆ (ಸಂಗತಿಯನ್ನು) ತಿಳಿಸಿಕಳುಹಿಸಿ, ಹೊರಗೆ ಬಂದನು. ಆ ಮುನಿಯನ್ನು ಕಂಡು ಪ್ರಣಾಮಮಾಡಿದನು. ಆ ಪ್ರಭುವು ಆದರದಿಂದ ಆತನಿಗೆ ತೃಪ್ತಿಯಾಗುವಂತೆ ಭೋಜನವನ್ನೂ ಮಾಡಿಸಿದನು.

೫೭. ಮುನಿಶ್ರೇಷ್ಠನಾದ ದುರ್ವಾಸನನ್ನು ತಾನೇ ಸ್ವಂತವಾಗಿ ಆದರಿಸಿ ಕಳುಹಿಸಿಕೊಟ್ಟನು. 'ಸತ್ಯಭಂಗವಾಗುವುದಲ್ಲಾ' ಎಂಬ ಭಯದಿಂದ ಭೀತನಾದ ಆ ವೀರನು ಆಗಲೇ ಲಕ್ಷ್ಮಣನನ್ನೂ ತ್ಯಜಿಸಿಬಿಟ್ಟನು.

೫೮. ಆ ಸಮಯದಲ್ಲಿ ವೀರನೂ, ಸುಮತಿಯೂ ಆದ ಲಕ್ಷ್ಮಣನು ಕೂಡ ಹಿರಿಯಣ್ಣನ ಮಾತನ್ನು ಸಾರ್ಥಕಮಾಡಬಯಸಿ ಸರಯೂತೀರಕ್ಕೆ ಬಂದನು.

೫೯. ಅಲ್ಲಿಗೆ ಬಂದು ಸ್ನಾನಮಾಡಿ ತ್ವರೆಯಿಂದ ಧ್ಯಾನಕ್ಕೆ ಕುಳಿತು ಶಾಂತವಾದ ಮನಸ್ಸನ್ನು ಚಿದಾತ್ಮನಲ್ಲಿ ನೆಲೆಗೊಳಿಸಿದನು.

೬೦. ಬಳಿಕ ಅಲ್ಲಿ ಸಾವಿರಹೆಡೆಗಳಿಂದ ಅಲಂಕೃತನೂ, ಕಣ್ಣುಗಳಿಂದ ಸಮಸ್ತ ವಿಷಯಗಳನ್ನೂ ಕೇಳುವವನೂ, ಶ್ರೇಷ್ಠನೂ ಆದ ಆದಿಶೇಷನು ಭೂಮಿ

**ತತಃ ಶೇಷಾತ್ಮತಾಂ ಯಾತಂ ಲಕ್ಷ್ಮಣಂ ಸತ್ಯಸಂಗರಂ ।**
**ಉವಾಚ ಮಧುರಂ ಶಕ್ರಃ ಸುರಾಣಾಂ ತತ್ರ ಪಶ್ಯತಾಂ ॥ ೬೧ ॥**

ಇಂದ್ರ ಉವಾಚ :—

**ಲಕ್ಷ್ಮಣೋತ್ತಿಷ್ಠ ಶೀಘ್ರಂ ತ್ವಮಾರೋಹ ಸ್ವಪದಂ ಸ್ವಕಂ ।**
**ದೇವಕಾರ್ಯಂ ಕೃತಂ ವೀರ ತ್ವಯಾ ರಿಪುನಿಷೂದನ ॥ ೬೨ ॥**
**ವೈಷ್ಣವಂ ಪರಮಂ ಸ್ಥಾನಂ ಪ್ರಾಪ್ನುಹಿ ತ್ವಂ ಸನಾತನಂ ।**
**ಭವನ್ಮೂರ್ತಿಃ ಸಮಾಯಾತಃ ಶೇಷೋಽಪಿ ವಿಲಸತ್ಫಣಃ ॥ ೬೩ ॥**
**ಸಹಸ್ರಧಾ ಕ್ಷಿತಿಂ ಭಿತ್ವಾ ಸಹಸ್ರಫಣಮಂಡಲೈಃ ।**
**ಕ್ಷಿತೇಃ ಸಹಸ್ರಚ್ಛಿದ್ರೇಷು ಯಸ್ಮಾದ್ಭಿತ್ವಾ ಸಮುದ್ಗತಾಃ ॥ ೬೪ ॥**
**ಫಣಾಸಹಸ್ರಮಣಿಭಿರ್ದಗ್ಧಾಃ ಶೇಷಸ್ಯ ಸುವ್ರತ ।**
**ತಸ್ಮಾದೇತನ್ಮಹಾತೀರ್ಥಂ ಸರಯೂತೀರಗಂ ಶುಭಂ ।**
**ಖ್ಯಾತಂ ಸಹಸ್ರಧಾರೇತಿ ಭವಿಷ್ಯತಿ ನ ಸಂಶಯಃ ॥ ೬೫ ॥**
**ಏತತ್ಕ್ಷೇತ್ರಪ್ರಮಾಣಂ ತು ಧನುಷಾಂ ಪಂಚವಿಂಶತಿಃ ।**
**ಅತ್ರ ಸ್ನಾನೇನ ದಾನೇನ ಶ್ರಾದ್ಧೇನ ಶ್ರದ್ಧಯಾನ್ವಿತಃ ।**
**ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಂ ವ್ರಜೇನ್ನರಃ ॥ ೬೬ ॥**

---

ಯನ್ನು ಸಹಸ್ರಭಾಗವಾಗಿ ಸೀಳಿಕೊಂಡು ಆವಿರ್ಭವಿಸಿದನು. ಸುರಲೋಕದಿಂದ ಸುರೇಂದ್ರನೂ ಕೂಡ ಅಮರರೊಡಗೂಡಿ ಅಲ್ಲಿಗೆ ಬಂದನು.

೬೧. ಬಳಿಕ ಸತ್ಯಸಂಕಲ್ಪನಾದ ಲಕ್ಷ್ಮಣನು ಶೇಷಾತ್ಮತ್ವವನ್ನು ಹೊಂದಿದುದನ್ನು ಕಂಡು, ಅಲ್ಲಿ ನೆರೆದು ನೋಡುತ್ತಿದ್ದ ಸುರರೆದುರಿಗೆಯೆ ಇಂದ್ರನು ಅವನನ್ನು ಕುರಿತು, ಮಧುರವಾಗಿ ನುಡಿಯತೊಡಗಿದನು.

೬೨. ಇಂದ್ರನು ಹೇಳುತ್ತಾನೆ:—"ಲಕ್ಷ್ಮಣಾ! ನೀನು ಬೇಗನೆ ಇಲ್ಲಿಂದ ಎದ್ದು ನಿನ್ನದೇ ಆದ ಸ್ವಂತಪದವಿಯನ್ನಾರೋಹಿಸು. ಶತ್ರುಗಳನ್ನು ಕಡಿದುರುಳಿಸಿದ ಎಲೈ ವೀರನೇ! ದೇವಕಾರ್ಯವು ನಿನ್ನಿಂದ ನೆರವೇರಿದೆ.

೬೩–೬೫. ಸನಾತನವೂ, ವೈಷ್ಣವವೂ ಆದ ಪರಮಪದವಿಯನ್ನು ನೀನು ಪಡೆಯುವವನಾಗು. ನಿನ್ನ ಮೂರ್ತಿಯಾದ ಆದಿಶೇಷನೂ ಕೂಡ ಹೊಳೆಹೊಳೆಯುವ ಹೆಡೆಗಳುಳ್ಳವನಾಗಿ ತನ್ನ ಸಾವಿರ ಹೆಡೆಗಳಿಂದಲೂ ಭೂಮಿಯನ್ನು ಸಾವಿರಾರು ಸೀಳುಗಳಾಗಿ ಸೀಳಿಕೊಂಡು ಇಲ್ಲಿಗೆ ಬಂದಿದ್ದಾನೆ. ಶೇಷನ ಸಾವಿರ ಹೆಡೆಗಳೂ ಭೂಮಿಯ ಸಾವಿರ ಛಿದ್ರಗಳಿಂದ ಹೊರಬಂದವು, ಆ ಸಾವಿರ ಸೀಳುಗಳೂ ಸಾವಿರ ಹೆಡೆಗಳ ಮಣಿಗಳಿಂದ ದಗ್ಧವಾದವು. ಆದುದರಿಂದ ಸರಯೂತೀರದಲ್ಲಿರುವ ಶುಭಕರವಾದ ಈ ಮಹಾತೀರ್ಥವು 'ಸಹಸ್ರಧಾರ'ವೆಂದು ಖ್ಯಾತಿಹೊಂದುವುದೆಂಬುದರಲ್ಲಿ ಸಂಶಯವಿಲ್ಲವು.

೬೬. ಈ ಸಹಸ್ರಧಾರಾಕ್ಷೇತ್ರದ ಪ್ರಮಾಣವು ಇಪ್ಪತ್ತೈದು ಧನುಸ್ಸುಗಳು.

ಅತ್ರ ಸ್ನಾತೋ ನರೋ ಧೀಮಾನ್ ಶೇಷಂ ಸಂಪೂಜ್ಯ ಚಾವ್ಯಯಂ ।
ತೀರ್ಥಂ ಸಂಪೂಜ್ಯ ವಿಧಿವದ್ವಿಷ್ಣುಲೋಕಮವಾಪ್ನುಯಾತ್ ॥ ೬೭ ॥
ತಸ್ಮಾದತ್ರ ಪ್ರಕರ್ತವ್ಯಂ ಸ್ನಾನಂ ವಿಧಿಪುರಃಸರಂ ।
ಶೇಷರೂಪಾಹಿ ವಧ್ಯೇಯಾಃ ಪೂಜ್ಯಾ ವಿಪ್ರಾ ವಿಶೇಷತಃ ॥ ೬೮ ॥
ಸ್ವರ್ಣಂ ಚಾನ್ನಂ ಚ ವಾಸಾಂಸಿ ದೇಯಾನಿ ಶ್ರದ್ಧಯಾನ್ವಿತೈಃ ।
ಸ್ನಾನಂ ದಾನಂ ಹರೇಃ ಪೂಜಾ ಸರ್ವಮಕ್ಷಯತಾಂ ವ್ರಜೇತ್ ॥ ೬೯ ॥
ತಸ್ಮಾದೇತನ್ಮಹಾತೀರ್ಥಂ ಸರ್ವಕಾಮಫಲಪ್ರದಂ ।
ಕ್ಷಿತೌ ಭವಿಷ್ಯತಿ ಸದಾ ನಾತ್ರ ಕಾರ್ಯಾ ವಿಚಾರಣಾ ॥ ೭೦ ॥
ಶ್ರಾವಣೇ ಶುಕ್ಲಪಕ್ಷಸ್ಯ ಯಾ ತಿಥಿಃ ಪಂಚಮೀ ಭವೇತ್ ।
ತಸ್ಯಾಮತ್ರ ಪ್ರಕರ್ತವ್ಯೋ ನಾಗಾನುದ್ದಿಶ್ಯ ಯತ್ನತಃ ॥ ೭೧ ॥
ಉತ್ಸವೋ ವಿಪುಲಃ ಸದ್ಭಿಃ ಶೇಷಪೂಜಾಪುರಃಸರಂ ।
ಉತ್ಸವೇ ತು ಕೃತೇ ತತ್ರ ತೀರ್ಥೇ ಮಹತಿ ಮಾನವೈಃ ॥ ೭೨ ॥
ಸಂತೋಷ್ಯ ಚ ದ್ವಿಜಾನ್ ಭಕ್ತ್ಯಾ ನಾಗಪೂಜಾಪುರಃಸರಂ ।
ಸಂತುಷ್ಟಾಃ ಫಣಿನಃ ಸರ್ವೇ ಪೀಡಯಂತಿ ನ ಮಾನುಷಾನ್ ॥ ೭೩ ॥

---

ಶ್ರದ್ಧೆಯಿಂದ ಇಲ್ಲಿ ಸ್ನಾನ, ದಾನ, ಶ್ರಾದ್ಧಗಳನ್ನು ಮಾಡುವ ನರನು ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಶುದ್ಧಾತ್ಮನಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

೬೭. ಧೀಮಂತನಾದ ಯಾವ ಮಾನವನು ಇಲ್ಲಿ ಸ್ನಾನಮಾಡಿ ಅವ್ಯಯನಾದ ಶೇಷನನ್ನು ಪೂಜಿಸಿ ವಿಧಿವತ್ತಾಗಿ ತೀರ್ಥವನ್ನು ಪೂಜೆಮಾಡುವನೊ ಅವನು ವಿಷ್ಣುಲೋಕವನ್ನು ಪಡೆಯುತ್ತಾನೆ.

೬೮. ಆದುದರಿಂದ ಇಲ್ಲಿ ವಿಧಿಪುರಸ್ಸರವಾಗಿ ಸ್ನಾನಮಾಡಬೇಕು. ವಿಶೇಷವಾಗಿ ಶೇಷನನ್ನು ಸರ್ಪರೂಪದಿಂದಲೇ ಧ್ಯಾನಿಸಬೇಕು; ಶೇಷರೂಪರೆಂದೇ ಭಾವಿಸಿ ಬ್ರಾಹ್ಮಣರನ್ನು ಪೂಜಿಸಬೇಕು.

೬೯. ಚಿನ್ನವನ್ನೂ, ಅನ್ನವನ್ನೂ, ಬಟ್ಟೆಗಳನ್ನೂ ಶ್ರದ್ಧೆಯಿಂದ ಅವರಿಗೆ ದಾನಮಾಡಬೇಕು. ಸ್ನಾನ, ದಾನ, ಹರಿಪೂಜೆ—ಇವೆಲ್ಲವೂ ಈ ತೀರ್ಥದಲ್ಲಿ ಅಕ್ಷಯವಾಗುತ್ತವೆ.

೭೦. ಆದುದರಿಂದ ಈ ಮಹಾತೀರ್ಥವು ಭೂಮಿಯಲ್ಲಿ ಸರ್ವಕಾಲದಲ್ಲಿಯೂ ಬಯಸಿದ ಸರ್ವಫಲಗಳನ್ನೂ ಕೊಡುವಂಥದಾಗುತ್ತದೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲವು.

೭೧–೭೩. ಶ್ರಾವಣಮಾಸದ ಶುಕ್ಲಪಕ್ಷದ ಪಂಚಮೀ ತಿಥಿಯಂದು ಸತ್ಪುರುಷರಾದವರು ಇಲ್ಲಿ ನಾಗರನ್ನುದ್ದೇಶಿಸಿ ಪ್ರಯತ್ನಪೂರ್ವಕವಾಗಿ ಮೊದಲು ಶೇಷನಿಗೆ ಪೂಜೆಮಾಡಿ ಬಹುವಾಗಿ ಉತ್ಸವವನ್ನು ನಡಸಬೇಕು. ಎಲ್ಲ

**ವೈಶಾಖಮಾಸೇ ಯೇ ಸ್ನಾನಂ ಕುರ್ವಂತ್ಯತ್ರ ಸಮಾಹಿತಾಃ ।**
**ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೭೪ ॥**
**ತಸ್ಮಾದತ್ರ ಪ್ರಕರ್ತವ್ಯಂ ಮಾಧವೇ ಯತ್ನತೋ ನರೈಃ ।**
**ಸ್ನಾನಂ ದಾನಂ ಹರಿಃ ಪೂಜ್ಯೋ ಬ್ರಾಹ್ಮಣಾಶ್ಚ ವಿಶೇಷತಃ ।**
**ತೀರ್ಥೇ ಕೃತೇಽತ್ರ ಮನುಜೈಃ ಸರ್ವಕಾಮಫಲಪ್ರದಃ ॥ ೭೫ ॥**
**ವಿಷ್ಣುಮುದ್ದಿಶ್ಯ ಯೋ ದದ್ಯಾತ್ ಸಾಲಂಕಾರಂ ಪಯಸ್ವಿನೀಂ ।**
**ಸವತ್ಸಾಮತ್ರ ಸತ್ತೀರ್ಥೇ ಸತ್ಪಾತ್ರಾಯ ದ್ವಿಜನ್ಮನೇ ॥ ೭೬ ॥**
**ತಸ್ಯ ವಾಸೋ ಭವೇನ್ನಿತ್ಯಂ ವಿಷ್ಣುಲೋಕೇ ಸನಾತನೇ ।**
**ಅಕ್ಷಯಂ ಸ್ವರ್ಗಮಾಪ್ನೋತಿ ತೀರ್ಥಸ್ನಾನೇನ ಮಾನವಃ ॥ ೭೭ ॥**
**ಅತ್ರ ಪೂಜ್ಯೌ ವಿಶೇಷೇಣ ನರೈಃ ಶ್ರದ್ಧಾಸಮನ್ವಿತೈಃ ।**
**ವೈಶಾಖೇ ಮಾಸ್ಯಲಂಕಾರೈರ್ವಸ್ತ್ರೈಶ್ಚ ದ್ವಿಜದಂಪತೀ ॥ ೭೮ ॥**
**ಲಕ್ಷ್ಮೀನಾರಾಯಣಪ್ರೀತ್ಯೈ ಲಕ್ಷ್ಮೀಪ್ರಾಪ್ತ್ಯೈ ವಿಶೇಷತಃ ।**
**ವೈಶಾಖೇ ಮಾಸಿ ತೀರ್ಥಾನಿ ಪೃಥಿವೀಸಂಸ್ಥಿತಾನಿ ವೈ ॥ ೭೯ ॥**

---

ಮಾನವರೂ ಮಹತ್ತಾದ ಈ ತೀರ್ಥದಲ್ಲಿ ನಾಗಪೂಜಾಪೂರ್ವಕವಾಗಿ ಬ್ರಾಹ್ಮಣರನ್ನು ಭಕ್ತಿಯಿಂದ ಸಂತೋಷಪಡಿಸಿ ಉತ್ಸವವನ್ನು ಮಾಡಿದರೆ, ಸಮಸ್ತ ಸರ್ಪಗಳೂ ಸಂತುಷ್ಟಿಹೊಂದಿದುವಾಗಿ ಮನುಷ್ಯರನ್ನು ಪೀಡಿಸುವುದಿಲ್ಲವು.

೭೪. ವೈಶಾಖಮಾಸದಲ್ಲಿ ಯಾರು ಮನಸ್ಸಮಾಧಾನಹೊಂದಿದವರಾಗಿ ಇಲ್ಲಿ ಸ್ನಾನಮಾಡುವರೋ ಅವರಿಗೆ ನೂರಾರು ಕಲ್ಪಕೋಟಿಗಳಾದರೂ ಪುನರಾವೃತ್ತಿಯಿರುವುದಿಲ್ಲ.

೭೫. ಆದುದರಿಂದ ವೈಶಾಖಮಾಸದಲ್ಲಿ ಮಾನವರು ಪ್ರಯತ್ನಪೂರ್ವಕವಾಗಿ ಇಲ್ಲಿ ಸ್ನಾನವನ್ನೂ, ದಾನವನ್ನೂ ಮಾಡಬೇಕು. ವಿಶೇಷವಾಗಿ ಶ್ರೀಹರಿಯನ್ನೂ, ಬ್ರಾಹ್ಮಣರನ್ನೂ ಪೂಜಿಸಬೇಕು. ಈ ತೀರ್ಥಸೇವೆಯನ್ನು ಮಾಡಿದ ಮನುಷ್ಯರಿಗೆ ಸಮಸ್ತ ಇಷ್ಟಾರ್ಥಗಳೂ ಲಭಿಸುತ್ತವೆ.

೭೬–೭೭. ಈ ತೀರ್ಥಶ್ರೇಷ್ಠದಲ್ಲಿ ಕರುವಿನಿಂದೊಡಗೂಡಿದ ಕರೆಯುವ ಹಸುವನ್ನು ಸರ್ವಾಲಂಕಾರಗಳಿಂದಲೂ ಅಲಂಕರಿಸಿ ಸತ್ಪಾತ್ರನಾದ ಬ್ರಾಹ್ಮಣನಿಗೆ ವಿಷ್ಣುವನ್ನುದ್ದೇಶಿಸಿ ಯಾವನು ದಾನಮಾಡುತ್ತಾನೆಯೋ ಅವನಿಗೆ ಸನಾತನವಾದ ವಿಷ್ಣುಲೋಕದಲ್ಲಿ ಸದಾಕಾಲದಲ್ಲಿಯೂ ವಾಸವುಂಟಾಗುತ್ತದೆ. ಈ ತೀರ್ಥಸ್ನಾನದಿಂದ ಮಾನವನು ಅಕ್ಷಯವಾದ ಸ್ವರ್ಗಲೋಕವನ್ನು ಪಡೆಯುತ್ತಾನೆ.

೭೮–೮೦. ವಿಶೇಷವಾಗಿ ಈ ತೀರ್ಥದಲ್ಲಿ ವೈಶಾಖಮಾಸದಲ್ಲಿ ಮಾನವರು ಶ್ರದ್ಧೆಯಿಂದೊಡಗೂಡಿ ಶ್ರೀಲಕ್ಷ್ಮೀನಾರಾಯಣರ ಪ್ರೀತಿಗಾಗಿಯೂ, ಲಕ್ಷ್ಮೀಪ್ರಾಪ್ತಿಗಾಗಿಯೂ, ಅಲಂಕಾರಗಳಿಂದಲೂ ವಸ್ತ್ರಗಳಿಂದಲೂ ಬ್ರಾಹ್ಮಣದಂಪತಿ

ಸರ್ವಾಣ್ಯಪಿ ಚ ಸಂಗತ್ಯ ಸ್ಥಾಸ್ಯಂತ್ಯತ್ರ ನ ಸಂಶಯಃ ।
ತಸ್ಮಾದತ್ರ ವಿಶೇಷೇಣ ವೈಶಾಖೇ ಸ್ನಾನತೋ ನೃಣಾಂ ।
ಸರ್ವತೀರ್ಥಾವಗಾಹಸ್ಯ ಭವಿಷ್ಯತಿ ಫಲಂ ಮಹತ್ ॥ ೮೦ ॥

ಅಗಸ್ತ್ಯ ಉವಾಚ :—

ಇತ್ಯುಕ್ತ್ವಾ ಮುನಿರಾಜೇಂದ್ರೋ ಲಕ್ಷ್ಮಣಂ ಸುರಸಂಗತಂ ।
ಶೇಷಂ ಸಂಸ್ಥಾಪ್ಯ ತತ್ತೀರ್ಥೇ ಭೂಭಾರಹರಣಕ್ಷಮಂ ।
ಲಕ್ಷ್ಮಣಂ ಯಾನಮಾರೋಪ್ಯ ಪ್ರತಸ್ಥೇ ದಿವಮಾದರಾತ್ ॥ ೮೧ ॥
ತದಾಪ್ರಭೃತಿ ತತ್ತೀರ್ಥಂ ವಿಖ್ಯಾತಿಂ ಪರಮಾಂ ಯಯೌ ।
ವೈಶಾಖೇ ಮಾಸಿ ತೀರ್ಥಸ್ಯ ಮಾಹಾತ್ಮ್ಯಂ ಪರಮಂ ಸ್ಮೃತಂ ॥ ೮೨ ॥
ಪಂಚಮ್ಯಾಮಪಿ ಶುಕ್ಲಾಯಾಂ ಶ್ರಾವಣಸ್ಯ ವಿಶೇಷತಃ ।
ಅನ್ಯದಾ ಪರ್ವಣಿ ಶ್ರೇಷ್ಠಂ ವಿಶೇಷಂ ಸ್ನಾನಮಾಚರೇತ್ ।
ಸಹಸ್ರಧಾರಾತೀರ್ಥೇ ಚ ನರಃ ಸ್ವರ್ಗಮವಾಪ್ನುಯಾತ್ ॥ ೮೩ ॥
ವಿಧಿವದಿಹ ಹಿ ಧೀಮಾನ್ ಸ್ನಾನದಾನಾನಿ ತೀರ್ಥೇ
ನರವರ ಇಹಶಕ್ತ್ಯಾ ಯಃ ಕರೋತ್ಯಾದರೇಣ ।

---

ಗಳನ್ನು ಪೂಜಿಸಬೇಕು. ಪೃಥ್ವಿಯಲ್ಲಿರುವ ಸಮಸ್ತ ತೀರ್ಥಗಳೂ ವೈಶಾಖಮಾಸದಲ್ಲಿ ಇಲ್ಲಿಗೆ ಬಂದು ನೆಲಸಿರುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲವು. ಆದುದರಿಂದ ವಿಶೇಷವಾಗಿ ವೈಶಾಖಮಾಸದಲ್ಲಿ ಇಲ್ಲಿ ಸ್ನಾನಮಾಡುವುದರಿಂದ ನರರಿಗೆ ಸಮಸ್ತ ತೀರ್ಥಗಳಲ್ಲಿಯೂ ಸ್ನಾನಮಾಡಿದ ಮಹತ್ಫಲವುಂಟಾಗುತ್ತದೆ.''

೮೧. ಅಗಸ್ತ್ಯನು ಹೇಳುತ್ತಾನೆ:—'' ಎಲೈ ಮುನಿರಾಜನೇ! ಇಂದ್ರನು ಲಕ್ಷ್ಮಣನನ್ನು ಕುರಿತು ಈ ರೀತಿ ನುಡಿದು, ಭೂಭಾರವನ್ನು ಪರಿಹರಿಸುವ ಸಾಮರ್ಥ್ಯವುಳ್ಳ ಆದಿಶೇಷನನ್ನು ಆ ತೀರ್ಥದಲ್ಲಿ ಸ್ಥಾಪನೆಮಾಡಿ, ಲಕ್ಷ್ಮಣನನ್ನು ಯಾನವನ್ನೇರಿಸಿಕೊಂಡು ಆದರದಿಂದ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದನು.

೮೨. ಅಂದಿನಿಂದಲೂ ಆ ತೀರ್ಥವು ಪರಮವಿಖ್ಯಾತಿಯನ್ನು ಪಡೆಯಿತು. ವೈಶಾಖಮಾಸದಲ್ಲಿ ಈ ತೀರ್ಥದ ಮಾಹಾತ್ಮ್ಯವು ಅತ್ಯಂತ ಮಹತ್ತರವಾಗಿರುವುದೆಂದು ಹೇಳಿದೆ.

೮೩. ಶ್ರಾವಣಮಾಸದ ಶುಕ್ಲಪಕ್ಷದ ಪಂಚಮಿಯಲ್ಲಿಯೂ ಅದರ ಮಹಿಮೆಯು ವಿಶೇಷವಾಗಿರುವುದೆಂದು ಹೇಳಲ್ಪಟ್ಟಿದೆ. ಬೇರೆ ಕಾಲಗಳಲ್ಲಿ ಪರ್ವಸಂದರ್ಭಗಳಲ್ಲಿ ವಿಶೇಷ ಶ್ರೇಷ್ಠವೆನಿಸುವುದು. ಆಗ ಸಹಸ್ರಧಾರಾ ತೀರ್ಥದಲ್ಲಿ ಸ್ನಾನಮಾಡುವುದರಿಂದ ನರನು ಸ್ವರ್ಗವನ್ನು ಪಡೆಯುತ್ತಾನೆ.

೮೪. ಧೀಮಂತನಾದ ಯಾವ ನರಶ್ರೇಷ್ಠನು ಈ ತೀರ್ಥದಲ್ಲಿ ತನ್ನ ಶಕ್ತ್ಯನುಸಾರವಾಗಿ ಆದರದಿಂದ ವಿಧಿವತ್ತಾಗಿ ಸ್ನಾನದಾನಗಳನ್ನು ಮಾಡು

ಸ ಇಹ ವಿಪುಲಭೋಗಾನ್ನಿರ್ಮಲಾತ್ಮಾ ಚ ಭಕ್ತ್ಯಾ
ಭಜತಿ ಭುಜಗಶಾಯಿ ಶ್ರೀಪತೇರಾತ್ಮನೈಕ್ಯಂ ॥ ೮೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಬ್ರಹ್ಮಕುಂಡ, ಸಹಸ್ರಧಾರಾ ತೀರ್ಥಮಾಹಾತ್ಮ್ಯವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

ತ್ತಾನೆಯೋ ಅವನು ನಿರ್ಮಲಾತ್ಮನಾಗಿ ಇಲ್ಲಿ ವಿಪುಲವಾದ ಭೋಗಗಳನ್ನು ಅನುಭವಿಸುತ್ತಾನೆ; ಮುಂದೆಯೂ ತನ್ನ ಭಕ್ತಿಯಿಂದ ಭುಜಗಶಾಯಿಯಾದ ಶ್ರೀಪತಿಯ ಆತ್ಮದೊಡನೆ ಐಕ್ಯವನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಬ್ರಹ್ಮಕುಂಡ, ಸಹಸ್ರಧಾರಾತೀರ್ಥಮಾಹಾತ್ಮ್ಯವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಸಹಸ್ರಚಂದ್ರವ್ರತೋದ್ಯಾಪನವಿಧಿವರ್ಣನಂ

ಸೂತ ಉವಾಚ :—

ಇತಿ ಶ್ರುತ್ವಾ ವಚೋ ಧೀಮಾನಾದರಾತ್ ಕುಂಭಜನ್ಮನಃ ।
ಪ್ರೋವಾಚ ಮಧುರಂ ವಾಕ್ಯಂ ಕೃಷ್ಣದ್ವೈಪಾಯನೋ ಮುನಿಃ ॥ ೧ ॥

ವ್ಯಾಸ ಉವಾಚ :—

ಭಗವನ್ನದ್ಭುತಮಿದಂ ತೀರ್ಥಮಾಹಾತ್ಮ್ಯಮುತ್ತಮಂ ।
ಶ್ರುತ್ವಾ ತ್ವತ್ತೋ ಮಮ ಮನಃ ಪರಮಾನಂದಮಾಯಯೌ ॥ ೨ ॥
ಅನ್ಯತೀರ್ಥವರಂ ಬ್ರೂಹಿ ತತ್ವೇನ ಮಮ ಶೃಣ್ವತಃ ।
ನ ತೃಪ್ತಿರಸ್ತಿ ಮನಸಃಶೃಣ್ವತೋ ಮಮ ಸುವ್ರತ ॥ ೩ ॥

ಅಗಸ್ತ್ಯ ಉವಾಚ :—

ಶೃಣು ವಿಪ್ರ ಪ್ರವಕ್ಷ್ಯಾಮಿ ತೀರ್ಥಮನ್ಯದನುತ್ತಮಂ ।
ಸ್ವರ್ಗದ್ವಾರಮಿತಿ ಖ್ಯಾತಂ ಸರ್ವಪಾಪಹರಂ ಸದಾ ॥ ೪ ॥

---

### ಕನ್ನಡದ ಅನುವಾದ

### ಸಹಸ್ರಚಂದ್ರವ್ರತೋದ್ಯಾಪನವಿಧಿವರ್ಣನ

೧. ಸೂತಪುರಾಣಿಕನು ಹೇಳುತ್ತಾನೆ:—ಕುಂಭಸಂಭವನಾದ ಅಗಸ್ತ್ಯ ಋಷಿಯ ಈ ಮಾತನ್ನು ಆದರದಿಂದಾಲಿಸಿ ಕೃಷ್ಣದ್ವೈಪಾಯನಮುನಿಯು ಮಧುರವಾದ ಈ ವಾಕ್ಯವನ್ನಾಡಿದನು.

೨. ವ್ಯಾಸನು ಹೇಳುತ್ತಾನೆ:—"ಭಗವನ್! ಅದ್ಭುತವೂ, ಉತ್ತಮವೂ ಆದ ಈ ತೀರ್ಥಮಾಹಾತ್ಮ್ಯವನ್ನು ನಿನ್ನಿಂದ ಕೇಳಿ ನನ್ನ ಮನಸ್ಸು ಪರಮಾನಂದವನ್ನು ಪಡೆಯಿತು.

೩. ಇದನ್ನು ಕೇಳುತ್ತಿರುವ ನನಗೆ ಬೇರೊಂದು ತೀರ್ಥಶ್ರೇಷ್ಠದ ವಿಚಾರವನ್ನು ತಿಳಿಸು. ಎಲೈ ಸುವ್ರತನೇ! ಈ ವಿಷಯವನ್ನು ಕೇಳಿದಂತೆಲ್ಲ ನನ್ನ ಮನಸ್ಸಿಗೆ ತೃಪ್ತಿಯೇ ಆಗುವಹಾಗಿಲ್ಲ."

೪. ಅಗಸ್ತ್ಯನು ಹೇಳುತ್ತಾನೆ:—"ಎಲೈ ವಿಪ್ರನೇ! ಮತ್ತೊಂದು ಶ್ರೇಷ್ಠವಾದ ತೀರ್ಥವನ್ನು ಹೇಳುತ್ತೇನೆ, ಕೇಳು. ಅದು 'ಸ್ವರ್ಗದ್ವಾರ'ವೆಂದು ಪ್ರಸಿದ್ಧವಾಗಿದೆ. ಅದು ಸದಾಕಾಲದಲ್ಲಿಯೂ ಸರ್ವಪಾಪಗಳನ್ನೂ ಪರಿಹರಿಸುವಂಥದು.

ಸ್ವರ್ಗದ್ವಾರಸ್ಯ ಮಾಹಾತ್ಮ್ಯಂ ವಿಸ್ತರಾದ್ವಕ್ತುಮೀಶ್ವರಃ ।
ನ ಹಿ ಕಶ್ಚಿದತೋ ವತ್ಸ ಸಂಕ್ಷೇಪಾಚ್ಛೃಣು ಸುವ್ರತ ॥ ೫ ॥
ಸಹಸ್ರಧಾರಾಮಾರಭ್ಯ ಪೂರ್ವತಃ ಸರಯೂಜಲೇ ।
ಷಟ್‌ತ್ರಿಂಶದಧಿಕಾ ಪ್ರೋಕ್ತಾ ಧನುಷಾಂ ಷಟ್‌ಶತೀ ಮತಿಃ ॥ ೬ ॥
ಸ್ವರ್ಗದ್ವಾರಸ್ಯ ವಿಸ್ತಾರಃ ಪುರಾಣಜ್ಞೈರ್ವಿಶಾರದೈಃ ।
ಸ್ವರ್ಗದ್ವಾರಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೭ ॥
ಸತ್ಯಂ ಸತ್ಯಂ ಪುನಃ ಸತ್ಯಂ ನಾಽಸತ್ಯಂ ಮಮ ಭಾಷಿತಂ ।
ಸ್ವರ್ಗದ್ವಾರಸಮಂ ತೀರ್ಥಂ ನಾಸ್ತಿ ಬ್ರಹ್ಮಾಂಡಗೋಲಕೇ ॥ ೮ ॥
ಹಿತ್ವಾ ದಿವ್ಯಾನಿ ಭೌಮಾನಿ ತೀರ್ಥಾನಿ ಸಕಲಾನ್ಯಪಿ ।
ಪ್ರಾತರಾಗತ್ಯ ತಿಷ್ಠಂತಿ ತತ್ರ ಸಂಶ್ರಿತ್ಯ ಸುವ್ರತ ॥ ೯ ॥
ತಸ್ಮಾದತ್ರ ಪ್ರಕರ್ತವ್ಯಂ ಪ್ರಾತಃ ಸ್ನಾನಂ ವಿಶೇಷತಃ ।
ಸರ್ವತೀರ್ಥಾವಗಾಹಸ್ಯ ಫಲಮಾತ್ಮನ ಈಪ್ಸತೌ ॥ ೧೦ ॥
ತ್ಯಜಂತಿ ಪ್ರಾಣಿನಃ ಪ್ರಾಣಾನ್ ಸ್ವರ್ಗದ್ವಾರಾಂತರೇ ದ್ವಿಜಾಃ ।
ಪ್ರಯಾಂತಿ ಪರಮಂ ಸ್ಥಾನಂ ವಿಷ್ಣೋಸ್ತೇ ನಾತ್ರಸಂಶಯಃ ॥ ೧೧ ॥

---

೫. ಸ್ವರ್ಗದ್ವಾರತೀರ್ಥದ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳುವುದಕ್ಕೆ ಯಾವನೊಬ್ಬನೂ ಸಮರ್ಥನಲ್ಲವು. ಆದುದರಿಂದ ಎಲೈ ಸುವ್ರತನೇ! ಅದನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು.

೬. ಸಹಸ್ರಧಾರಾತೀರ್ಥವನ್ನಾರಂಭಿಸಿ ಪೂರ್ವದಿಕ್ಕಿನಲ್ಲಿ ಸರಯೂಜಲದಲ್ಲಿ ಆರುನೂರು ಮೂವತ್ತಾರು ಧನುಸ್ಸುಗಳವರೆಗೂ ಅದರ ಹರವಿರುತ್ತದೆ.

೭–೮. ಈ ಸ್ವರ್ಗದ್ವಾರದ ವಿಸ್ತಾರವಾದ ಪುರಾಣವನ್ನು ಬಲ್ಲ ವಿಶಾರದರು 'ಸ್ವರ್ಗದ್ವಾರಕ್ಕೆ ಸಮನಾದ ತೀರ್ಥವು ಹಿಂದಿರಲಿಲ್ಲ; ಮುಂದಾಗುವುದಿಲ್ಲ' ಎಂದು ಹೇಳುತ್ತಾರೆ. ಇದು ಮೂರು ಮೂರು ಬಾರಿಗೂ ಸತ್ಯವಾದುದು. ನನ್ನ ಮಾತು ಅಸತ್ಯವಾಗುವುದಿಲ್ಲ. ಸ್ವರ್ಗದ್ವಾರಕ್ಕೆ ಸಮವಾದ ತೀರ್ಥವು ಬ್ರಹ್ಮಾಂಡ ಗೋಲಕದಲ್ಲಿಯೇ ಇರುವುದಿಲ್ಲವು.

೯. ಎಲೈ ಸುವ್ರತನೇ! ದೇವಲೋಕ ಭೂಲೋಕಗಳ ಸಕಲ ತೀರ್ಥಗಳೂ ಪ್ರಾತಃಕಾಲದಲ್ಲಿ ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಅಲ್ಲಿಗೆ ಬಂದು ಆ ತೀರ್ಥವನ್ನಾಶ್ರಯಿಸಿ ನಿಲ್ಲುತ್ತವೆ.

೧೦. ಆದುದರಿಂದ ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವು ದೊರೆಯಬೇಕೆಂದು ಅಪೇಕ್ಷಿಸುವವನು ಇಲ್ಲಿ ವಿಶೇಷವಾಗಿ ಪ್ರಾತಃಸ್ನಾನವನ್ನು ಮಾಡಬೇಕು.

೧೧. ಯಾವ ಪ್ರಾಣಿಗಳು ಸ್ವರ್ಗದ್ವಾರತೀರ್ಥದ ಎಲ್ಲೆಯೊಳಗೆ ಪ್ರಾಣ

ಮುಕ್ತಿದ್ವಾರಮಿದಂ ಪಶ್ಯ ಸ್ವರ್ಗಪ್ರಾಪ್ತಿಕರಂ ನೃಣಾಂ ।
ಸ್ವರ್ಗದ್ವಾರಮಿತಿ ಖ್ಯಾತಂ ತಸ್ಮಾತ್ತೀರ್ಥಮನುತ್ತಮಂ ॥ ೧೨ ॥
ಸ್ವರ್ಗದ್ವಾರಂ ಸುದುಷ್ಪ್ರಾಪ್ಯಂ ದೇವೈರಪಿ ನ ಸಂಶಯಃ ।
ಯದ್ಯತ್ಕಾಮಯತೇ ತತ್ರ ತತ್ತದಾಪ್ನೋತಿ ಮಾನವಃ ॥ ೧೩ ॥
ಸ್ವರ್ಗದ್ವಾರೇ ಪರಾಸಿದ್ಧಿಃ ಸ್ವರ್ಗದ್ವಾರೇ ಪರಾಗತಿಃ ।
ಜಪ್ತಂ ದತ್ತಂ ಹುತಂ ದೃಷ್ಟಂ ತಪಸ್ತಪ್ತಂ ಕೃತಂ ಚ ಯತ್ ।
ಧ್ಯಾನಮಧ್ಯಯನಂ ಸರ್ವಂ ದಾನಂ ಭವತಿ ಚಾಕ್ಷಯಂ ॥ ೧೪ ॥
ಜನ್ಮಾಂತರಸಹಸ್ರೇಣ ಯತ್ಪಾಪಂ ಪೂರ್ವಸಂಚಿತಂ ।
ಸ್ವರ್ಗದ್ವಾರಪ್ರವಿಷ್ಟಸ್ಯ ತತ್ಸರ್ವಂ ವ್ರಜತಿ ಕ್ಷಯಂ ॥ ೧೫ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವೈ ವರ್ಣಸಂಕರಾಃ ।
ಕೃಮಿ ಮ್ಲೇಚ್ಛಾಶ್ಚ ಯೇ ಚಾನ್ಯೇ ಸಂಕೀರ್ಣಾಃ ಪಾಪಯೋನಯಃ॥೧೬॥
ಕೀಟಾಃ ಪಿಪೀಲಿಕಾಶ್ಚೈವ ಯೇ ಚಾನ್ಯೇ ಮೃಗಪಕ್ಷಿಣಃ ।
ಕಾಲೇನ ನಿಧನಂ ಪ್ರಾಪ್ತಾಃ ಸ್ವರ್ಗದ್ವಾರೇ ಶೃಣು ದ್ವಿಜ ॥ ೧೭ ॥

---

ಬಿಡುವುವೋ ಅವು ವಿಷ್ಣುವಿನ ಪರಮಸ್ಥಾನವನ್ನು ಹೋಗಿ ಸೇರುತ್ತವೆ. ಎಲೈ ದ್ವಿಜನೇ! ಇದರಲ್ಲಿ ಸಂಶಯವಿಲ್ಲವು.

೧೨. ಇದೊ ನೋಡು, ನರರಿಗೆ ಸ್ವರ್ಗಪ್ರಾಪ್ತಿಯನ್ನುಂಟುಮಾಡುವ ಮುಕ್ತಿಗೆ ಬಾಗಿಲು. ಆದುದರಿಂದ ಇದು ಸ್ವರ್ಗದ್ವಾರವೆಂದು ಪ್ರಖ್ಯಾತವಾಗಿರುವುದು. ಇದಕ್ಕಿಂತಲೂ ಉತ್ತಮವಾದ ತೀರ್ಥವು ಮತ್ತೊಂದಿಲ್ಲವು.

೧೩. ಸ್ವರ್ಗದ್ವಾರವು ದೇವತೆಗಳಿಂದಲೂ ಪಡೆಯಲು ಬಹು ಕಷ್ಟವಾಗಿರುವಂಥದೆಂಬುದರಲ್ಲಿ ಸಂಶಯವಿಲ್ಲವು. ಅಲ್ಲಿ ಮಾನವನು ಏನೇನನ್ನು ಬಯಸುತ್ತಾನೆಯೋ ಅದನ್ನೆಲ್ಲವನ್ನೂ ಪಡೆಯುತ್ತಾನೆ.

೧೪. ಸ್ವರ್ಗದ್ವಾರದಲ್ಲಿ ಉತ್ತಮೋತ್ತಮವಾದ ಸಿದ್ಧಿಯುಂಟಾಗುತ್ತದೆ; ಸ್ವರ್ಗದ್ವಾರದಲ್ಲಿ ಉತ್ತಮೋತ್ತಮವಾದ ಗತಿಯುಂಟಾಗುತ್ತದೆ. ಈ ತೀರ್ಥದಲ್ಲಿ ಜಪಮಾಡಿದ್ದು, ದಾನಮಾಡಿದ್ದು, ಹೋಮಮಾಡಿದ್ದು, ದರ್ಶನಮಾಡಿದ್ದು, ತಪಸ್ಸುಮಾಡಿದ್ದು, (ಬೇರೆ ಕರ್ಮ) ಮಾಡಿದ್ದೂ, ಧ್ಯಾನ, ಅಧ್ಯಯನ, ದಾನ— ಎಲ್ಲವೂ ಅಕ್ಷಯವಾಗುತ್ತದೆ.

೧೫. ಸ್ವರ್ಗದ್ವಾರವನ್ನು ಪ್ರವೇಶಮಾಡಿದವನಿಗೆ ಸಾವಿರ ಜನ್ಮಾಂತರಗಳಲ್ಲಿ ಮಾಡಲ್ಪಟ್ಟು ಹಿಂದಿನಿಂದಲೂ ಕೂಡಿಬಂದಿರುವ ಪಾಪವೆಷ್ಟಿದೆಯೋ ಅಷ್ಟೂ ನಾಶವಾಗಿಹೋಗುತ್ತದೆ.

೧೬–೧೮. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ವರ್ಣಸಂಕರಹೊಂದಿದವರು, ಅಲ್ಲದೆ ಮ್ಲೇಚ್ಛರು, ಪಾಪಸಂಭೂತರಾದ ಇನ್ನುಳಿದ

**ಕೌಮೋದಕೀಕರಾಃ ಸರ್ವೇ ಪಕ್ಷಿಣೋ ಗರುಡಧ್ವಜಾಃ ।**
**ಶುಭೇ ವಿಷ್ಣುಪುರೇ ವಿಷ್ಣುರ್ಜಾಯಂತೇ ತತ್ರ ಮಾನವಾಃ ॥ ೧೮ ॥**
**ಅಕಾಮೋ ವಾ ಸಕಾಮೋ ವಾ ಅಪಿ ತೀರ್ಥಗತೋಽಪಿ ವಾ ।**
**ಸ್ವರ್ಗದ್ವಾರೇ ತ್ಯಜನ್ ಪ್ರಾಣಾನ್ ವಿಷ್ಣುಲೋಕೇ ಮಹೀಯತೇ ॥ ೧೯ ॥**
**ಮುನಯೋ ದೇವತಾಃ ಸಿದ್ಧಾಃ ಸಾಧ್ಯಾ ಯಕ್ಷಾ ಮರುದ್ಗಣಾಃ ।**
**ಯಜ್ಞೋಪವೀತಮಾತ್ರೇಣ ವಿಭಾಗಂ ಚಕ್ರಿರೇ ತು ಯೇ ॥ ೨೦ ॥**
**ಮಧ್ಯಾಹ್ನೇಽತ್ರ ಪ್ರಕುರ್ವಂತಿ ಸಾನ್ನಿಧ್ಯಂ ದೇವತಾಗಣಾಃ ।**
**ತಸ್ಮಾತ್ತತ್ರ ಪ್ರಕುರ್ವಂತಿ ಮಧ್ಯಾಹ್ನೇ ಸ್ನಾನಮಾದರಾತ್ ॥ ೨೧ ॥**
**ಕುರ್ವಂತ್ಯನಶನಂ ಯೇ ತು ಸ್ವರ್ಗದ್ವಾರೇ ಜಿತೇಂದ್ರಿಯಾಃ ।**
**ಪ್ರಯಾಂತಿ ಪರಮಂ ಸ್ಥಾನಂ ಯೇ ಚ ಮಾಸೋಪವಾಸಿನಃ ॥ ೨೨ ॥**
**ಅನ್ನದಾನರತಾ ಯೇ ಚ ರತ್ನದಾ ಭೂಮಿದಾ ನರಾಃ ।**
**ಗೋವಸ್ತ್ರದಾಶ್ಚ ವಿಪ್ರೇಭ್ಯೋ ಯಾಂತಿ ತೇ ಭವನಂ ಹರೇಃ ॥ ೨೩ ॥**

---

ಬೇರೆಬೇರೆ ಸಂಕರ ಜಾತಿಗಳವರು, ಕೀಟಗಳು, ಪಿಪೀಲಿಕೆ (ಇರುವೆ)ಗಳು, ಇನ್ನುಳಿದ ಎಲ್ಲ ಮೃಗಪಕ್ಷಿಗಳು — ಎಲ್ಲವೂ ಸ್ವರ್ಗದ್ವಾರದಲ್ಲಿ ಕಾಲ ತುಂಬಿ ಬಂದು ಮರಣಹೊಂದಿದಬಳಿಕ, ಕೌಮೋದಕಿಯನ್ನು ಕೈಯಲ್ಲಿ ಧರಿಸಿ ಗರುಡನನ್ನೇರಿ ಶುಭಕರವಾದ ವಿಷ್ಣುಪುರದಲ್ಲಿ ವಿಷ್ಣುಸ್ವರೂಪಿಗಳಾಗಿ ಬೆಳಗುತ್ತಾರೆ.

೧೯. ಅಪೇಕ್ಷೆಯುಳ್ಳವನಾದರೂ, ಈ ತೀರ್ಥಕ್ಕೇ ಹೋಗಿರುವವನೇ ಆದರೂ ಸ್ವರ್ಗದ್ವಾರದಲ್ಲಿ ಪ್ರಾಣಗಳನ್ನು ತ್ಯಾಗಮಾಡಿದವನು ವಿಷ್ಣುಲೋಕದಲ್ಲಿ ದೊಡ್ಡವನೆನಿಸುತ್ತಾನೆ.

೨೦. ಮುನಿಗಳು, ದೇವತೆಗಳು, ಸಿದ್ಧರು, ಸಾಧ್ಯರು, ಯಕ್ಷರು, ಮರುದ್ಗಣಗಳಾದಿಯಾಗಿ ಎಲ್ಲರೂ ಯಜ್ಞೋಪವೀತಮಾತ್ರದಿಂದಲೇ ಇದು ನನಗೆ ಇದು ನನಗೆ ಎಂದು ಗುರುತಿಸಿ ವಿಭಾಗಮಾಡಿಕೊಂಡರು.

೨೧. ಮಧ್ಯಾಹ್ನದಲ್ಲಿ ಇಲ್ಲಿ ದೇವತಾಗಣಗಳು ಸಾನ್ನಿಧ್ಯವನ್ನು ಹೊಂದಿರುತ್ತಾರೆ. ಆದುದರಿಂದ ಇಲ್ಲಿ ಮಧ್ಯಾಹ್ನದಲ್ಲಿಯೂ ಆದರದಿಂದ ಸ್ನಾನ ಮಾಡುತ್ತಾರೆ.

೨೨. ಯಾರು ಸ್ವರ್ಗದ್ವಾರದಲ್ಲಿ ಜಿತೇಂದ್ರಿಯರಾಗಿ ಅನಶನವ್ರತವನ್ನಾಚರಿಸುತ್ತಾರೆಯೋ ಯಾರು ಮಾಸೋಪವಾಸಮಾಡುತ್ತಾರೆಯೋ ಅವರೆಲ್ಲರೂ ಪರಮಸ್ಥಾನವನ್ನು ಹೋಗಿ ಸೇರುತ್ತಾರೆ.

೨೩. ಯಾವ ಮಾನವರು ಬ್ರಾಹ್ಮಣರಿಗೆ ಅನ್ನದಾನಮಾಡುವುದರಲ್ಲಿ ನಿರತರಾಗಿರುವರೋ, ಯಾರು ರತ್ನದಾನಮಾಡುವರೋ, ಭೂದಾನ, ಗೋದಾನ,

ಯತ್ರ ಸಿದ್ಧಾ ಮಹಾತ್ಮಾನೋ ಮುನಯಃ ಪಿತರಸ್ತಥಾ ।
ಸ್ವರ್ಗಂ ಪ್ರಯಾಂತಿ ತೇ ಸರ್ವೇ ಸ್ವರ್ಗದ್ವಾರಂ ತತಃ ಸ್ಮೃತಂ ॥ ೨೪ ॥
ಚತುರ್ಧಾ ಚ ತನುಂ ಕೃತ್ವಾ ದೇವದೇವೋ ಹರಿಃ ಸ್ವಯಂ ।
ಅತ್ರ ವೈ ರಮತೇ ನಿತ್ಯಂ ಭ್ರಾತೃಭಿಃ ಸಹ ರಾಘವಃ ॥ ೨೫ ॥
ಬ್ರಹ್ಮಲೋಕಂ ಪರಿತ್ಯಜ್ಯ ಚತುರ್ವಕ್ತ್ರಃ ಸನಾತನಃ ।
ಅತ್ರೈವ ರಮತೇ ನಿತ್ಯಂ ದೇವೈಃ ಸಹ ಪಿತಾಮಹಃ ॥ ೨೬ ॥
ಕೈಲಾಸನಿಲಯಾವಾಸೀ ಶಿವಸ್ತತ್ರೈವ ಸಂಸ್ಥಿತಃ ॥ ೨೭ ॥
ಮೇರುಮಂದರಮಾತ್ರೋಽಪಿ ರಾಶಿಃ ಪಾಪಸ್ಯ ಕರ್ಮಣಃ ।
ಸ್ವರ್ಗದ್ವಾರಂ ಸಮಾಸಾದ್ಯ ಸ ಸರ್ವೋ ವ್ರಜತಿ ಕ್ಷಯಂ ॥ ೨೮ ॥
ಯಾ ಗತಿರ್ಜ್ಞಾನತಪಸಾಂ ಯಾ ಗತಿರ್ಯಜ್ಞಯಾಜಿನಾಂ ।
ಸ್ವರ್ಗದ್ವಾರೇ ಮೃತಾನಾಂ ತು ಸಾ ಗತಿರ್ವಿಹಿತಾ ಶುಭಾ ॥ ೨೯ ॥
ಋಷಿದೇವಾಸುರಗಣೈರ್ಜಪಹೋಮಪರಾಯಣೈಃ ।
ಯತಿಭಿರ್ಮೋಕ್ಷಕಾಮೈಶ್ಚ ಸ್ವರ್ಗದ್ವಾರೇ ನಿಷೇವ್ಯತೇ ॥ ೩೦ ॥

---

ವಸ್ತ್ರದಾನಗಳನ್ನು ಯಾರು ಮಾಡುವರೋ ಅವರೆಲ್ಲರೂ ಶ್ರೀಹರಿಯ ಭವನಕ್ಕೆ ಹೋಗುತ್ತಾರೆ.

೨೪. ಸಿದ್ಧರೂ, ಮಹಾತ್ಮರಾದ ಮುನಿಗಳೂ, ಪಿತೃಗಳೂ ಎಲ್ಲರೂ ಇಲ್ಲಿಂದಲೇ ಸ್ವರ್ಗವನ್ನು ಕುರಿತು ಪ್ರಯಾಣಮಾಡುತ್ತಾರೆ. ಆದುದರಿಂದ ಇದು ಸ್ವರ್ಗದ್ವಾರವೆಂದು ಹೆಸರುಪಡೆದಿರುವುದು.

೨೫. ದೇವದೇವನಾದ ಶ್ರೀಹರಿಯು ತನ್ನ ದೇಹವನ್ನು ನಾಲ್ಕು ಭಾಗವಾಗಿ ವಿಭಾಗಿಸಿಕೊಂಡು ತಾನೇ ರಾಘವನಾಗಿ ಸೋದರರೊಡಗೂಡಿ ಇಲ್ಲಿ ಸದಾ ಕಾಲವೂ ರಮಿಸುತ್ತಿರುತ್ತಾನೆ.

೨೬–೨೭. ನಾಲ್ಕು ಮುಖಗಳುಳ್ಳ ಸನಾತನನಾದ ಪಿತಾಮಹನು ಬ್ರಹ್ಮಲೋಕವನ್ನು ಪರಿತ್ಯಾಗಮಾಡಿ ದೇವತೆಗಳಿಂದೊಡಗೂಡಿ ಇಲ್ಲಿಯೇ ಯಾವಾಗಲೂ ರಮಿಸುತ್ತಾನೆ. ಕೈಲಾಸನಿಲಯನಾದ ಶಿವನೂ ಇಲ್ಲಿಯೇ ನೆಲಸಿರುವನು.

೨೮. ಪಾಪಕರ್ಮದ ರಾಶಿಯು ಮೇರುಮಂದರಪರ್ವತಗಳಷ್ಟು ಮಹತ್ತಾಗಿದ್ದರೂ ಸ್ವರ್ಗದ್ವಾರಕ್ಕೆ ಹೋಗಿ ಸೇರಿದರೆ ಅದೆಲ್ಲವೂ ಕ್ಷಯಿಸಿಹೋಗುವುದು.

೨೯. ಜ್ಞಾನತಪಸ್ಸುಗಳಿಗೆ ಯಾವ ಗತಿಯೋ, ಯಜ್ಞಮಾಡುವವರಿಗೆ ಯಾವ ಗತಿಯೋ, ಸ್ವರ್ಗದ್ವಾರದಲ್ಲಿ ಮೃತರಾದವರಿಗೆ ಆ ಶುಭಗತಿಯು ದೊರೆಯುತ್ತದೆ.

೩೦. ಋಷಿಸಮೂಹಗಳಿಂದಲೂ, ದೇವಾಸುರಗಣಗಳಿಂದಲೂ, ಜಪ

ಷಷ್ಟಿರ್ವರ್ಷಸಹಸ್ರಾಣಿ ಕಾಶೀವಾಸೇಷು ಯತ್ಫಲಂ ।
ತತ್ಫಲಂ ನಿಮಿಷಾರ್ಧೇನ ಕಲೌ ದಾಶರಥೀಪುರೀಂ ॥ ೩೧ ॥
ಯಾ ಗತಿರ್ಯೋಗಯುಕ್ತಾನಾಂ ವಾರಾಣಸ್ಯಾಂ ತನುತ್ಯಜಾಂ ।
ಸಾ ಗತಿಃ ಸ್ನಾನಮಾತ್ರೇಣ ಸರಯ್ವಾಂ ಹರಿವಾಸರೇ ॥ ೩೨ ॥
ಸ್ವರ್ಗದ್ವಾರೇ ಮೃತಃ ಕಶ್ಚಿನ್ನರಕಂ ನೈವ ಪಶ್ಯತಿ ।
ಕೇಶವಾನುಗೃಹೀತಾಹಿ ಸರ್ವೇ ಯಾಂತಿ ಪರಾಂ ಗತಿಂ ॥ ೩೩ ॥
ಭೂಲೋಕೇ ಚಾಂತರಿಕ್ಷೇ ಚ ದಿವಿ ತೀರ್ಥಾನಿ ಯಾನಿ ವೈ ।
ಅತೀತ್ಯ ವರ್ತತೇ ತಾನಿ ತೀರ್ಥಾನ್ಯೇತದ್ದ್ವಿಜೋತ್ತಮ ॥ ೩೪ ॥
ವಿಷ್ಣುಭಕ್ತಿಂ ಸಮಾಸಾದ್ಯ ರಮಂತೇತು ಸುನಿಶ್ಚಿತಾಃ ।
ಸಂಹೃತ್ಯ ಶಕ್ತಿತಃ ಕಾಮಂ ವಿಷಯೇಷು ಹಿ ಸಂಸ್ಥಿತಂ ॥ ೩೫ ॥
ಶಕ್ತಿತಃ ಸರ್ವತೋ ಯುಕ್ತಾ ಶಕ್ತಿಸ್ತಪಸಿ ಸಂಸ್ಥಿತಾ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೩೬ ॥

---

ಹೋಮನಿರತರಾಗಿರುವವರಿಂದಲೂ, ಮೋಕ್ಷಾಭಿಲಾಷಿಗಳಾದ ಯತಿಗಳಿಂದಲೂ ಸ್ವರ್ಗದ್ವಾರವು ಸರ್ವಕಾಲದಲ್ಲಿಯೂ ಸೇವಿಸಲ್ಪಡುತ್ತದೆ.

೩೧. ಅರುವತ್ತುಸಾವಿರ ವರ್ಷದವರೆಗೆ ಮಾಡಿದ ಕಾಶೀವಾಸದಿಂದ ಯಾವ ಫಲವುಂಟಾಗುವುದೋ ಆ ಫಲವು ಕಲಿಯುಗದಲ್ಲಿ ದಾಶರಥಿಯ ಅಯೋಧ್ಯಾಪುರಿಯಲ್ಲಿ ನಿಮಿಷಾರ್ಧಕಾಲ ಮಾತ್ರ ವಾಸಮಾಡುವುದರಿಂದಲೇ ದೊರಕುತ್ತದೆ.

೩೨–೩೩. ವಾರಣಾಸಿಯಲ್ಲಿ ಯೋಗಯುಕ್ತರಾಗಿ ದೇಹತ್ಯಾಗಮಾಡಿದವರಿಗೆ ಯಾವ ಗತಿಯುಂಟಾಗುವುದೋ ಆ ಸದ್ಗತಿಯು ಸರಯೂನದಿಯಲ್ಲಿ ಹರಿವಾಸರದಲ್ಲಿ ಸ್ನಾನಮಾಡಿದಮಾತ್ರದಿಂದಲೇ ಉಂಟಾಗುತ್ತದೆ. ಸ್ವರ್ಗದ್ವಾರದಲ್ಲಿ ಮೃತನಾದ ಯಾವನೂ ನರಕವನ್ನು ನೋಡುವುದೇ ಇಲ್ಲವು. ಕೇಶವನಿಂದ ಅನುಗ್ರಹಿತರಾಗಿ ಎಲ್ಲರೂ ಪರಮಪದವನ್ನೈದುತ್ತಾರೆ.

೩೪. ಎಲೈ ದ್ವಿಜೋತ್ತಮನೆ! ಭೂಲೋಕದಲ್ಲಿಯೂ ಅಂತರಿಕ್ಷದಲ್ಲಿಯೂ ದೇವಲೋಕದಲ್ಲಿಯೂ ಯಾವ ಯಾವ ತೀರ್ಥಗಳಿವೆಯೋ ಆ ತೀರ್ಥಗಳೆಲ್ಲವನ್ನೂ ಮೀರಿ ಇದು ಮೆರೆಯುತ್ತಿರುವುದು.

೩೫–೩೬. ಯಾರು ವಿಷ್ಣುಭಕ್ತಿಯನ್ನು ಪಡೆದು ಒಳ್ಳೆಯ ನಿಶ್ಚಯವುಳ್ಳವರಾಗಿ ಅದರಲ್ಲಿ ರಮಿಸುತ್ತಿರುವರೋ, ವಿಷಯಗಳಲ್ಲಿ ನೆಲಸಿದ ಕಾಮವನ್ನು ತಮ್ಮ ಶಕ್ತಿಯಿದ್ದಷ್ಟೂ ಅಡಗಿಸಿ ಸ್ವಾಧೀನಪಡಿಸಿಕೊಂಡು ವರ್ತಿಸುತ್ತಿರುವರೋ, ಯಾವಾಗಲೂ ಎಲ್ಲೆಡೆಯೂ ಶಕ್ತ್ಯನುಸಾರ ತಪಸ್ಸಿನಲ್ಲಿಯೆ ತೊಡಗಿರುವರೋ ಅವರಿಗೆ ನೂರಾರು ಕಲ್ಪಕೋಟಿಗಳು ಕಳೆದರೂ ಪುನರಾವೃತ್ತಿಯಿರುವುದಿಲ್ಲ.

ಹನ್ಯಮಾನೋಽಪಿ ಯೋ ವಿದ್ವಾನ್ ವಸೇಚ್ಛಸ್ತ್ರಶತೈರಪಿ ।
ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೩೭ ॥
ಸ್ವರ್ಗದ್ವಾರೇ ವಿಯುಜ್ಯೇತ ಸ ಯಾತಿ ಪರಮಾಂ ಗತಿಂ ।
ಉತ್ತರಂ ದಕ್ಷಿಣಂ ವಾಪ್ಯಯನಂ ನ ವಿಕಲ್ಪಯೇತ್ ॥ ೩೮ ॥
ಸರ್ವಸ್ತೇಷಾಂ ಶುಭಃ ಕಾಲಃ ಸ್ವರ್ಗದ್ವಾರಂ ಶ್ರಯಂತಿ ಯೇ ।
ಸ್ನಾನಮಾತ್ರೇಣ ಪಾಪಾನಿ ವಿಲಯಂ ಯಾಂತಿ ದೇಹಿನಾಂ ॥ ೩೯ ॥
ಯಾವತ್ಪಾಪಾನಿ ದೇಹೇನ ಯೇ ಕುರ್ವಂತಿ ಜನಾಃ ಕ್ಷಿತೌ ।
ಅಯೋಧ್ಯಾ ಪರಮಂ ಸ್ಥಾನಂ ತೇಷಾಮೀರಿತಮಾದರಾತ್ ॥ ೪೦ ॥
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪಂಚದಶ್ಯಾಂ ವಿಶೇಷತಃ ।
ತಸ್ಯ ಸಾಂವತ್ಸರೀ ಯಾತ್ರಾ ದೇವೈಶ್ಚಂದ್ರಹರೇಃ ಸ್ಮೃತಃ ॥ ೪೧ ॥
ತಸ್ಮಿನ್ನುದ್ಯಾಪನಂ ಚಂದ್ರಸಹಸ್ರಂ ವ್ರತಯೋಗಿಭಿಃ ।
ಕಾರ್ಯಂ ಪ್ರಯತ್ನತೋ ವಿಪ್ರ ಸರ್ವಯಜ್ಞಫಲಾಧಿಕಂ ॥ ೪೨ ॥
ತಸ್ಮಿನ್‌ಕೃತೇ ಮಹಾಪಾಪಕ್ಷಯಾತ್‌ಸ್ವರ್ಗೋ ಭವೇನ್ನೃಣಾಂ ॥ ೪೩ ॥

---

೩೭. ನೂರಾರು ಶಸ್ತ್ರಗಳಿಂದ ಹೊಡೆಯಲ್ಪಡುತ್ತಿರುವವನಾದರೂ ಯಾವ ವಿದ್ವಾಂಸನು ಅಲ್ಲಿಯೇ ವಾಸಮಾಡುವನೋ ಅವನು ಯಾವೆಡೆಗೆ ಹೋದರೆ ಶೋಕಕ್ಕೀಡಾಗುವುದಿಲ್ಲವೋ ಅಂಥ ಪರಮಸ್ಥಾನಕ್ಕೆ ಹೋಗಿ ಸೇರುವನು.

೩೮. ಸ್ವರ್ಗದ್ವಾರದಲ್ಲಿ ಯಾವನು ಪ್ರಾಣಬಿಡುವನೋ ಅವನು ಪರಮ ಗತಿಯನ್ನು ಪಡೆಯುತ್ತಾನೆ. ಉತ್ತರಾಯನವೇ ಆಗಲಿ, ದಕ್ಷಿಣಾಯನವೇ ಆಗಲಿ ಆ ಗತಿಯಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ.

೩೯–೪೦. ಯಾರು ಸ್ವರ್ಗದ್ವಾರವನ್ನಾಶ್ರಯಿಸಿರುವರೋ ಅವರಿಗೆ ಎಲ್ಲ ಕಾಲಗಳೂ ಶುಭಕಾಲಗಳೇ. ಅಲ್ಲಿ ಸ್ನಾನಮಾತ್ರದಿಂದಲೇ ದೇಹಿಗಳಿಗೆ ಪಾಪಗಳು ನಾಶವನ್ನೈದುತ್ತವೆ. ಯಾವ ಜನರು ಭೂಮಿಯಲ್ಲಿ ದೇಹದಿಂದ ಎಲ್ಲಿಯವರೆಗೆ ಪಾಪಗಳನ್ನು ಮಾಡುತ್ತಿರುವರೋ ಅಲ್ಲಿಯವರೆಗೂ ಅವರಿಗೆ ಅಯೋಧ್ಯೆಯು ಪರಮಸ್ಥಾನವೆಂದು ಹೇಳಲ್ಪಟ್ಟಿದೆ.

೪೧. ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ ಪೂರ್ಣಿಮೆಯ ದಿನ ಆ ಚಂದ್ರ ಹರಿಗೆ ವಾರ್ಷಿಕಯಾತ್ರೆಯು ನಡೆಯತಕ್ಕುದೆಂದು ದೇವತೆಗಳಿಂದ ಹೇಳಲ್ಪಟ್ಟಿದೆ.

೪೨. ಎಲೈ ವಿಪ್ರನೆ! ಅಲ್ಲಿ ವ್ರತಯೋಗಿಗಳು ಸಹಸ್ರಚಂದ್ರದರ್ಶನವ್ರತದ ಉದ್ಯಾಪನೆಯನ್ನು ಪ್ರಯತ್ನಪೂರ್ವಕವಾಗಿ ಮಾಡತಕ್ಕುದು. ಅದರಿಂದ ಸರ್ವ ಯಜ್ಞಗಳಿಗಿಂತಲೂ ಹೆಚ್ಚಾದ ಫಲವುಂಟಾಗುತ್ತದೆ.

೪೩. ಆ ಸಹಸ್ರಚಂದ್ರವ್ರತದ ಉದ್ಯಾಪನೆಯನ್ನು ಮಾಡಿದಲ್ಲಿ ಮಹಾ ಪಾಪಕ್ಷಯವಾಗಿ ನರರಿಗೆ ಸ್ವರ್ಗವು ದೊರೆಯುತ್ತದೆ.''

ಶ್ರೀ ವ್ಯಾಸ ಉವಾಚ :—
ಭಗವನ್ ಬ್ರೂಹಿ ತತ್ತ್ವೇನ ತಸ್ಯ ಚಂದ್ರಹರೇಃ ಶುಭಾಂ ।
ಉತ್ಪತ್ತಿಂಚ ತಥಾ ಚಂದ್ರವ್ರತಸ್ಯೋದ್ಯಾಪನೇ ವಿಧಿಂ ॥ ೪೪ ॥
ಅಗಸ್ತ್ಯ ಉವಾಚ :—
ಅಯೋಧ್ಯಾನಿಲಯಂ ವಿಷ್ಣುಂ ನತ್ವಾ ಶೀತಾಂಶುರುತ್ಸುಕಃ ।
ಆಗಚ್ಛತ್ತೀರ್ಥಮಾಹಾತ್ಮ್ಯಂ ಸಾಕ್ಷಾತ್ಕರ್ತುಂ ಸುಧಾನಿಧಿಃ ।
ಅತ್ರಾಗತ್ಯ ಚ ಚಂದ್ರೋಥ ತೀರ್ಥಯಾತ್ರಾಂ ಚಕಾರ ಸಃ ॥ ೪೫ ॥
ಕ್ರಮೇಣ ವಿಧಿಪೂರ್ವಂ ಚ ನಾನಾಶ್ಚರ್ಯಸಮನ್ವಿತಃ ।
ಸಮಾರಾಧ್ಯ ತತೋ ವಿಷ್ಣುಂ ತಪಸಾ ದುಶ್ಚರೇಣ ವೈ ॥ ೪೬ ॥
ತತ್ಪ್ರಸಾದಂ ಸಮಾಸಾದ್ಯ ಸ್ವಾಭಿಧಾನಪುರಸ್ಸರಂ ।
ಹರಿಂ ಸಂಸ್ಥಾಪಯಾಮಾಸ ತೇನ ಚಂದ್ರಹರಿಃ ಸ್ಮೃತಃ ॥ ೪೭ ॥
ವಾಸುದೇವಪ್ರಸಾದೇನ ತತ್ಸ್ಥಾನಂ ಜಾತಮದ್ಭುತಂ ।
ತದ್ಧಿ ಗುಹ್ಯತಮಂ ಸ್ಥಾನಂ ವಾಸುದೇವಸ್ಯ ಸುವ್ರತ ॥ ೪೮ ॥
ಸರ್ವೇಷಾಮೇವ ಭೂತಾನಾಂ ಭರ್ತುರ್ಮೋಕ್ಷಸ್ಯ ಸರ್ವದಾ ।
ಅಸ್ಮಿನ್ ಸಿದ್ಧಾಃ ಸದಾ ವಿಪ್ರ ಗೋವಿಂದವ್ರತಮಾಸ್ಥಿತಾಃ ॥ ೪೯ ॥

---

೪೪. ಶ್ರೀವ್ಯಾಸನು ಕೇಳುತ್ತಾನೆ:— "ಭಗವನ್! ಆ ಚಂದ್ರಹರಿಯ ಶುಭಕರವಾದ ಉತ್ಪತ್ತಿಯನ್ನೂ, ಸಹಸ್ರಚಂದ್ರವ್ರತದ ಉದ್ಯಾಪನೆಯ ವಿಧಿಯನ್ನೂ ಇದ್ದುದನ್ನಿದ್ದಂತೆ ತಿಳಿಸು."

೪೫. ಅಗಸ್ತ್ಯನು ಹೇಳುತ್ತಾನೆ:—"ಅಯ್ಯಾ ಮುನಿಯೆ! ಶೀತಕಿರಣನೂ, ಸುಧಾನಿಧಿಯೂ ಆದ ಚಂದ್ರನು ಅಯೋಧ್ಯಾನಿಲಯನಾದ ಮಹಾವಿಷ್ಣುವನ್ನು ವಂದಿಸಿ ತೀರ್ಥಮಾಹಾತ್ಮ್ಯವನ್ನು ಸಾಕ್ಷಾತ್ಕರಿಸಿಕೊಳ್ಳಲು ಉತ್ಸುಕನಾಗಿ ಇಲ್ಲಿಗೆ ಬಂದು ತೀರ್ಥಯಾತ್ರೆಯನ್ನು ಮಾಡಿದನು.

೪೬–೪೭. ಪೂಜಾದ್ರವ್ಯಗಳಿಂದ ಆಶ್ಚರ್ಯಕರಗಳಾದ ಬಗೆಬಗೆಯ ಕ್ರಮವಾಗಿಯೂ ವಿಧಿಪೂರ್ವಕವಾಗಿಯೂ ವಿಷ್ಣುವನ್ನಾರಾಧಿಸಿ, ನಡಸಲು ಬಹು ಕಷ್ಟವಾದ ತಪಸ್ಸಿನಿಂದ ವಿಷ್ಣುವಿನ ಪ್ರಸಾದವನ್ನು ಪಡೆದುಕೊಂಡು ತನ್ನ ಹೆಸರಿನಿಂದಲೇ ಆವಿರ್ಭವಿಸಿದ ಆ ಶ್ರೀಹರಿಯ ಮೂರ್ತಿಯನ್ನು ಅಲ್ಲಿ ಸ್ಥಾಪನೆ ಮಾಡಿದನು. ಆದುದರಿಂದ ಆ ಮೂರ್ತಿಯು ಚಂದ್ರಹರಿಯೆಂದು ಹೆಸರಾಯಿತು.

೪೮–೪೯. ಹೀಗೆ ವಾಸುದೇವನ ಪ್ರಸಾದದಿಂದ ಆ ಸ್ಥಾನವು ಅದ್ಭುತವಾಯಿತು. ಎಲೈ ಸುವ್ರತನೇ! ಆ ಸ್ಥಾನವು ಸರ್ವಭೂತಗಳಿಗೂ ಮೋಕ್ಷಕ್ಕೊಡೆಯನಾದ ವಾಸುದೇವನಿಗೆ ಅತ್ಯಂತ ರಹಸ್ಯಸ್ಥಾನವಾಗಿರುವುದು. ಎಲೈ ವಿಪ್ರನೇ! ಈ ಸ್ಥಾನದಲ್ಲಿ ಸಿದ್ಧರು ಸದಾಕಾಲವೂ ವಿಷ್ಣುವ್ರತವನ್ನು ಧರಿಸಿರುವರು.

ನಾನಾಲಿಂಗಧರಾ ನಿತ್ಯಂ ವಿಷ್ಣುಲೋಕಾಭಿಕಾಂಕ್ಷಿಣಃ ।
ಅಭ್ಯಸ್ಯಂತಿ ಪರಂ ಯೋಗಂ ಮುಕ್ತಾತ್ಮಾನೋ ಜಿತೇಂದ್ರಿಯಾಃ ॥ ೫೦ ॥
ಯಥಾ ಧರ್ಮಮವಾಪ್ನೋತಿ ಅನ್ಯಥಾ ನ ತಥಾ ಕ್ವಚಿತ್ ।
ದಾನಂ ವ್ರತಂ ತಥಾ ಹೋಮಃ ಸರ್ವಮಕ್ಷಯತಾಂ ವ್ರಜೇತ್ ॥ ೫೧ ॥
ಸರ್ವಕಾಮಫಲಪ್ರಾಪ್ತಿರ್ಜಾಯತೇ ಪ್ರಾಣಿನಾಂ ಸದಾ ।
ತಸ್ಮಾದತ್ರ ವಿಧಾತವ್ಯಂ ಪ್ರಾಣಿಭಿರ್ಯತ್ನತಃ ಕ್ರಮಾತ್ ।
ದಾನಾದಿಕಂ ವಿಪ್ರಪೂಜಾ ದಂಪತ್ಯೋಶ್ಚ ವಿಶೇಷತಃ ॥ ೫೨ ॥
ಸರ್ವಯಜ್ಞಾಧಿಕಫಲಂ ಸರ್ವತೀರ್ಥಾವಗಾಹನಂ ।
ಸರ್ವದೇವಾವಲೋಕಸ್ಯ ಯತ್ಪುಣ್ಯಂ ಜಾಯತೇ ನೃಣಾಂ ॥ ೫೩ ॥
ತತ್ಸರ್ವಂ ಜಾಯತೇ ಪುಣ್ಯಂ ಪ್ರಾಣಿನಾಮಸ್ಯ ದರ್ಶನಾತ್ ।
ತಸ್ಮಾದೇತನ್ಮಹಾಕ್ಷೇತ್ರಂ ಪುರಾಣಾದಿಷು ಗೀಯತೇ ॥ ೫೪ ॥
ಉದ್ಯಾಪನವಿಧಿಶ್ಚಾತ್ರ ನೃಭಿರ್ದ್ವಿಜಪುರಸ್ಸರಂ ।
ಅಗ್ರೇ ಚಂದ್ರಹರೇಶ್ಚಂದ್ರಸಹಸ್ರವ್ರತಸಂಜ್ಞಕಃ ॥ ೫೫ ॥

---

೫೦. ಜಿತೇಂದ್ರಿಯರಾಗಿರುವ ಮುಕ್ತಾತ್ಮರು ಈ ತೀರ್ಥದಲ್ಲಿ ನಾನಾ ಬಗೆಯ ಚಿಹ್ನೆಗಳನ್ನು ಧರಿಸಿ ವಿಷ್ಣುಲೋಕವನ್ನು ಬಯಸುತ್ತ ನಿತ್ಯವೂ ಪರಮ ಯೋಗವನ್ನು ಅಭ್ಯಾಸ ಮಾಡುತ್ತಿರುತ್ತಾರೆ.

೫೧. ಬೇರೆ ಯಾವ ಕಡೆಯಲ್ಲಿಯೂ ಇಲ್ಲಿನಂತೆ ಧರ್ಮವನ್ನು ಪಡೆಯಲಾಗುವುದಿಲ್ಲ. ಇಲ್ಲಿ ಮಾಡಿದ ದಾನ, ವ್ರತ, ಹೋಮ ಎಲ್ಲವೂ ಅಕ್ಷಯವಾಗುವುದು.

೫೨. ಇಲ್ಲಿ ಪ್ರಾಣಿಗಳಿಗೆ ಸಮಸ್ತ ಇಷ್ಟಾರ್ಥಗಳ ಫಲಪ್ರಾಪ್ತಿಯು ಸದಾ ಕಾಲದಲ್ಲಿಯೂ ಉಂಟಾಗುತ್ತದೆ. ಆದುದರಿಂದ ಇಲ್ಲಿ ಪ್ರಾಣಿಗಳು ಸರ್ವ ಪ್ರಯತ್ನದಿಂದಲೂ ದಾನಾದಿಗಳನ್ನೂ, ಬ್ರಾಹ್ಮಣಪೂಜೆಯನ್ನೂ, ವಿಶೇಷವಾಗಿ ದಂಪತಿಪೂಜೆಯನ್ನೂ ಕ್ರಮವಾಗಿ ಮಾಡಬೇಕು.

೫೩–೫೪. ಸರ್ವಯಜ್ಞಗಳ ಫಲಗಳಿಂದಲೂ, ಸರ್ವತೀರ್ಥಗಳಲ್ಲಿ ಸ್ನಾನ ಮಾಡುವುದರಿಂದಲೂ, ಸರ್ವದೇವತೆಗಳನ್ನು ದರ್ಶನಮಾಡುವುದರಿಂದಲೂ ನರರಿಗೆ ಯಾವ ಪುಣ್ಯವುಂಟಾಗುವುದೋ ಆ ಪುಣ್ಯವೆಲ್ಲವೂ ಈ ಕ್ಷೇತ್ರದರ್ಶನದಿಂದಲೇ ಉಂಟಾಗುತ್ತದೆ. ಆದುದರಿಂದ ಇದು ಮಹಾಕ್ಷೇತ್ರವೆಂದು ಪುರಾಣಾದಿಗಳಲ್ಲಿ ಹಾಡಲ್ಪಟ್ಟಿದೆ.

೫೫. ಮಾನವರು ಇಲ್ಲಿ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಚಂದ್ರಹರಿಯ ಎದುರಿನಲ್ಲಿ ಸಹಸ್ರಚಂದ್ರವ್ರತವೆಂಬ ಹೆಸರಿನ ಉದ್ಯಾಪನವಿಧಿಯನ್ನು ನೆರವೇರಿಸಬೇಕು.

ಗತೇ ವರ್ಷದ್ವಯೇ ಸಾರ್ಧೇ ಪಂಚಪಕ್ಷೇ ದಿನದ್ವಯೇ ।
ದಿವಸಸ್ಯಾಷ್ಟಮೇ ಭಾಗೇ ಪತತ್ಯೇಕೋಽಧಿಮಾಸಕಃ ॥ ೫೬ ॥
ತ್ರ್ಯಧಿಕೇ ವಾ ಅಶೀತ್ಯಬ್ದೇ ಚತುರ್ಮಾಸಯುತೇ ತತಃ ।
ಭವೇಚ್ಚಂದ್ರಸಹಸ್ರಂ ತು ತಾವಜ್ಜೀವತಿ ಯೋ ನರಃ ।
ಉದ್ಯಾಪನಂ ಪ್ರಕರ್ತವ್ಯಂ ತೇನ ಯಾತ್ರಾ ಪ್ರಯತ್ನತಃ ॥ ೫೭ ॥
ಯತ್ಪುಣ್ಯಂ ಪರಮಂ ಪ್ರೋಕ್ತಂ ಸತತಂ ಯಜ್ಞಯಾಜಿನಾಂ ।
ಸತ್ಯವಾದಿಷು ಯತ್ಪುಣ್ಯಂ ಯತ್ಪುಣ್ಯಂ ಹೇಮದಾಯಿನಿ ।
ತತ್ಪುಣ್ಯಂ ಲಭತೇ ವಿಪ್ರ ಸಹಸ್ರಾಬ್ದಸ್ಯ ಜೀವಿಭಿಃ ॥ ೫೮ ॥
ಸರ್ವಸೌಖ್ಯಪ್ರದಂ ತಾದೃಕ್ ಪುಣ್ಯವ್ರತಮಿಹೋಚ್ಯತೇ ॥ ೫೯ ॥
ಚತುರ್ದಶ್ಯಾಂ ಶುಚಿಃ ಸ್ನಾತ್ವಾ ದಂತಧಾವನಪೂರ್ವಕಂ ।
ಚರಿತಬ್ರಹ್ಮಚರ್ಯಶ್ಚ ಜಿತವಾಕ್ಕಾಯಮಾನಸಃ ।
ಪೌರ್ಣಮಾಸ್ಯಾಂ ತಥಾ ಕೃತ್ವಾ ಚಂದ್ರಪೂಜಾಂ ಚ ಕಾರಯೇತ್ ॥೬೦॥
ಪೂರ್ವಂ ಚ ಮಾತರಃ ಪೂಜ್ಯಾ ಗೌರ್ಯಾದಿಕಕ್ರಮೇಣ ಚ ।
ಋತ್ವಿಜಃ ಪೂಜಯೇದ್ಭಕ್ತ್ಯಾ ವೃದ್ಧಿಶ್ರಾದ್ಧಪುರಸ್ಸರಂ ॥ ೬೧ ॥

---

೫೬. ಎರಡೂವರೆ ವರ್ಷ, ಐದು ಪಕ್ಷ, ಎರಡು ದಿನ ಮೇಲೆ ಒಂದು ದಿನದ ಎಂಟನೆಯ ಒಂದು ಭಾಗ ಇಷ್ಟು ಕಳೆದರೆ ಒಂದು ಅಧಿಕಮಾಸವು ಬರುತ್ತದೆ.

೫೭. ಎಂಬತ್ತುಮೂರು ವರ್ಷದ ಮೇಲೆ ನಾಲ್ಕುತಿಂಗಳುಗಳಾದರೆ ಆಗ ಸಹಸ್ರಚಂದ್ರವಾಗುತ್ತದೆ. ಅಷ್ಟುಕಾಲದವರೆಗೆ ಯಾವ ನರನು ಜೀವಿಸುವನೋ ಅವನು ಪ್ರಯತ್ನಪಟ್ಟು ಯಾತ್ರೆಮಾಡಿ ಈ ವ್ರತದ ಉದ್ಯಾಪನೆಯನ್ನು ನಡಸಬೇಕು.

೫೮. ಸದಾಕಾಲವೂ ಯಜ್ಞಮಾಡುವವರಿಗೆ ಯಾವ ಪುಣ್ಯವುಂಟೆಂದು ಹೇಳಿದೆಯೋ, ಸತ್ಯವಾದಿಗಳಿಗೆ ಯಾವ ಪುಣ್ಯವೋ, ಹೇಮ (ಚಿನ್ನ) ದಾನ ಮಾಡಿದವರಿಗೆ ಯಾವ ಪುಣ್ಯವೋ ಆ ಪುಣ್ಯವನ್ನು ಸಹಸ್ರಚಂದ್ರದರ್ಶನವ್ರತವನ್ನು ಮಾಡಿದವರು ಪಡೆಯುತ್ತಾರೆ.

೫೯. ಸರ್ವಸೌಖ್ಯವನ್ನೂ ಕೊಡತಕ್ಕ ಆ ರೀತಿಯ ವ್ರತವು ಇಲ್ಲಿ ಹೇಳಲ್ಪಡುತ್ತದೆ.

೬೦. ಚತುರ್ದಶಿಯ ದಿನ ಹಲ್ಲುಜ್ಜಿಕೊಂಡು ಸ್ನಾನಮಾಡಿ ಶುಚಿಯಾಗಿ, ಬ್ರಹ್ಮಚರ್ಯವನ್ನು ನಡಸಿ ಮಾತು-ಮೈ-ಮನಸ್ಸುಗಳನ್ನು ಅಂಕೆಯಲ್ಲಿರಿಸಿಕೊಂಡು ಪೂರ್ಣಿಮೆಯ ದಿನವೂ ಹಾಗೆಯೇಮಾಡಿ ಚಂದ್ರಪೂಜೆಯನ್ನು ಮಾಡಬೇಕು.

೬೧. ಮೊದಲು ಗೌರಿ, ಮೊದಲಾದ ಕ್ರಮದಿಂದ ಮಾತೃದೇವತೆಗಳನ್ನು

ಪ್ರಯತ್ನೈಃ ಪ್ರತಿಮಾ ಕಾರ್ಯಾ ಚಂದ್ರಮಂಡಲಸನ್ನಿಭಾ ।
ಸಹಸ್ರಸಂಖ್ಯಾ ಹ್ಯಥವಾ ತದರ್ಧಂ ವಾ ತದರ್ಧಕಂ ।
ನಿಜವಿತ್ತಾನುಮಾನೇನ ತದರ್ಧೇನ ತದರ್ಧಕಂ ॥ ೬೨ ॥
ತತಃ ಶ್ರದ್ಧಾನುಮಾನಾದ್ವಾ ಕಾರ್ಯಾ ವಿತ್ತಾನುಮಾನತಃ ।
ಅಥವಾ ಷೋಡಶ ಶುಭಾ ವಿಧಾತವ್ಯಾಃ ಪ್ರಯತ್ನತಃ ॥ ೬೩ ॥
ಚಂದ್ರಪೂಜಾಂ ತತಃ ಕುರ್ಯಾದಾಗಮೋಕ್ತವಿಧಾನತಃ ।
ಮಾಷೈಃ ಷೋಡಶಭಿಃ ಕಾರ್ಯಾ ಪ್ರತ್ಯೇಕಂ ಪ್ರತಿಮಾ ಶುಭಾ ॥ ೬೪ ॥
ಸೋಮಮಂತ್ರೇಣ ಹೋಮಸ್ತು ಕಾರ್ಯೋ ವಿತ್ತಾನುಮಾನತಃ ।
ಪ್ರತಿಮಾಸ್ಥಾಪನಂ ಕುರ್ಯಾತ್ಸೋಮಮಂತ್ರಮುದೀರಯೇತ್ ॥ ೬೫ ॥
ಸೋಮೋತ್ಪತ್ತಿಂ ಸೋಮಸೂಕ್ತಂ ಪಾಠಯೇಚ್ಚ ಪ್ರಯತ್ನತಃ ।
ಚಂದ್ರಪೂಜಾಂ ತತಃ ಕುರ್ಯಾದಾಗಮೋಕ್ತವಿಧಾನತಃ ॥ ೬೬ ॥

---

ಪೂಜಿಸಬೇಕು. ವೃದ್ಧಿಶ್ರಾದ್ಧ (ಎಂದರೆ ನಾಂದಿ) ಪೂರ್ವಕವಾಗಿ ಭಕ್ತಿಯಿಂದ ಋತ್ವಿಜರನ್ನು ಪೂಜಿಸಬೇಕು.

೬೨. ಪರಿಶುದ್ಧಾತ್ಮರಾಗಿ ಚಂದ್ರಮಂಡಲ ಸಮಾನವಾದ ಸಾವಿರ ಪ್ರತಿಮೆಗಳನ್ನು ಮಾಡಿಸಬೇಕು. ಅಥವಾ ಅದರ ಅರ್ಧದಷ್ಟು ಪ್ರತಿಮೆಗಳನ್ನಾದರೂ ಮಾಡಿಸಬೇಕು. ಹಾಗಲ್ಲವಾದರೆ ಅದರ ಅರ್ಧದಷ್ಟನ್ನು ಮಾಡಿಸಬೇಕು. ಆದರರ್ಧದಷ್ಟು ಅಥವಾ ಆದರರ್ಧದಷ್ಟು ಹೀಗೆ ತನ್ನ ಸಂಪತ್ತಿಗನುಸಾರವಾಗಿ ಪ್ರತಿಮೆಗಳನ್ನು ಮಾಡಿಸಬೇಕು.

೬೩. ಬಳಿಕ ಶ್ರದ್ಧೆಗೆ ತಕ್ಕಂತೆಯಾಗಲಿ ಸಂಪತ್ತಿಗೆ ತಕ್ಕಂತೆಯಾಗಲಿ ಪ್ರತಿಮೆಗಳನ್ನು ಮಾಡಿಸತಕ್ಕುದು. ಅಥವಾ ಶುಭಕರವಾದ ಹದಿನಾರು ಪ್ರತಿಮೆಗಳನ್ನು ಪ್ರಯತ್ನಪೂರ್ವಕವಾಗಿ ಮಾಡಿಸತಕ್ಕುದು.

೬೪. ಬಳಿಕ ಆಗಮೋಕ್ತ ವಿಧಾನದಿಂದ ಚಂದ್ರಪೂಜೆಯನ್ನು ಮಾಡಬೇಕು. ಹದಿನಾರು ಮಾಷಗಳ ಚಿನ್ನ ಅಥವಾ ಬೆಳ್ಳಿಯಿಂದ ಪ್ರತ್ಯೇಕವಾಗಿ ಶುಭಕರವಾದ ಚಂದ್ರನ ಮೂರ್ತಿಯನ್ನು ಮಾಡಿಸಬೇಕು.

೬೫. ದ್ರವ್ಯಕ್ಕನುಸಾರವಾಗಿ ಸೋಮಮಂತ್ರದಿಂದ ಹೋಮಮಾಡಬೇಕು. ಪ್ರತಿಮಾಸ್ಥಾಪನೆಯನ್ನು ಮಾಡಿ ಸೋಮಮಂತ್ರವನ್ನು ಪಠಿಸಬೇಕು.

೬೬. ಸೋಮೋತ್ಪತ್ತಿಯನ್ನೂ, ಸೋಮಸೂಕ್ತವನ್ನೂ ಪ್ರಯತ್ನಪೂರ್ವಕವಾಗಿ ಪಠನಮಾಡಿಸಬೇಕು. ಆಮೇಲೆ ಆಗಮೋಕ್ತವಿಧಾನದಿಂದ ಚಂದ್ರಪೂಜೆಯನ್ನು ಮಾಡಬೇಕು.

ಚಂದ್ರನ್ಯಾಸಂ ಕಲಾನ್ಯಾಸಂ ಕಾರಯೇನ್ಮಂಡಲೇ ಜಲಂ ।
ಏಕಾದಶೇಂದ್ರಿಯನ್ಯಾಸಂ ತಥೈವ ವಿಧಿಪೂರ್ವಕಂ ॥ ೬೭ ॥
ಚಂದ್ರಬಿಂಬನಿಭಂ ಕಾರ್ಯಂ ಮಂಡಲಂ ಶುಭತಂಡುಲೈಃ ।
ಮಧ್ಯೇ ಚ ಕಲಶಃ ಸ್ಥಾಪ್ಯೋ ಗವ್ಯೇನ ಪಯಸಾಪ್ಲುತಃ ॥ ೬೮ ॥
ಚತುರಸ್ರೇಷು ಸಂಪೂರ್ಣಾನ್‌ಕಲಶಾನ್ ಸ್ಥಾಪಯೇದ್ಬುಧಃ ।
ಮಂಡಲೇ ಚಂದ್ರಪೂಜಾ ಚ ಕರ್ತವ್ಯಾ ನಾಮಭಿಃ ಕ್ರಮಾತ್ ॥ ೬೯ ॥
ಹಿಮಾಂಶವೇ ನಮಶ್ಚೈವ ಸೋಮಚಂದ್ರಾಯ ವೈ ನಮಃ ।
ಚಂದ್ರಾಯ ವಿಧವೇ ನಿತ್ಯಂ ನಮಃ ಕುಮುದಬಂಧವೇ ॥ ೭೦ ॥
ಸುಧಾಂಶವೇ ಚ ಸೋಮಾಯ ಓಷಧೀಶಾಯ ವೈ ನಮಃ ।
ನಮೋಽಬ್ಜಾಯ ಮೃಗಾಂಕಾಯ ಕಲಾನಾಂ ನಿಧಯೇ ನಮಃ ॥ ೭೧ ॥
ನಮೋ ನಕ್ಷತ್ರನಾಥಾಯ ಶರ್ವರೀಪತಯೇ ನಮಃ ।
ಜೈವಾತೃಕಾಯ ಸತತಂ ದ್ವಿಜರಾಜಾಯ ವೈ ನಮಃ ॥ ೭೨ ॥
ಏವಂ ಷೋಡಶಭಿಶ್ಚಂದ್ರಃ ಸ್ತೋತವ್ಯೋ ನಾಮಭಿಃ ಕ್ರಮಾತ್ ॥ ೭೩ ॥
ತತೋ ವೈ ಪ್ರಯತೇ ದದ್ಯಾದ್ವಿಧಿವನ್ಮಂತ್ರಪುರ್ವಕಂ ।
ಶಂಖತೋಯಂ ಸಮಾದಾಯ ಸ ಪುಷ್ಪಂ ಫಲಚಂದನಂ ॥ ೭೪ ॥

---

೬೭. ಮಂಡಲದಲ್ಲಿ ಚಂದ್ರನ್ಯಾಸವನ್ನೂ, ಕಲಾನ್ಯಾಸವನ್ನೂ, ಜಲನ್ಯಾಸವನ್ನೂ, ಏಕೆಂದಶೇಂದ್ರಿಯನ್ಯಾಸವನ್ನೂ ವಿಧಿಪೂರ್ವಕವಾಗಿ ಮಾಡಬೇಕು.

೬೮. ಶುಭಕರವಾದ ತಂಡುಲದಿಂದ ಚಂದ್ರಬಿಂಬಕ್ಕೆ ಸಮಾನವಾದ ಮಂಡಲವನ್ನು ಮಾಡಬೇಕು. ಆ ಮಂಡಲದ ಮಧ್ಯದಲ್ಲಿ ಹಸುವಿನ ಹಾಲಿನಿಂದ ತುಂಬಿದ ಕಲಶವನ್ನು ಸ್ಥಾಪಿಸಬೇಕು.

೬೯. ಚೌಕದ ನಾಲ್ಕು ಹೊರಮೂಲೆಗಳಿಲ್ಲಿಯೂ ಪೂರ್ಣಕಲಶಗಳನ್ನು ಇಡಬೇಕು. ಮಂಡಲದಲ್ಲಿ ಮುಂದೆ ಹೇಳುವ ಕ್ರಮದಲ್ಲಿ ಹೆಸರುಗಳನ್ನು ಹೇಳುತ್ತಾ ಚಂದ್ರಪೂಜೆಯನ್ನು ಮಾಡಬೇಕು.

೭೦–೭೨. ಹಿಮಾಂಶವೇ ನಮಃ, ಸೋಮಚಂದ್ರಾಯ ನಮಃ, ಚಂದ್ರಾಯ ನಮಃ, ವಿಧವೇ ನಮಃ, ಕುಮುದಬಂಧವೇ ನಮಃ, ಸುಧಾಂಶವೇ ನಮಃ, ಸೋಮಾಯ ನಮಃ, ಔಷಧೀಶಾಯ ನಮಃ, ಅಬ್ಜಾಯ ನಮಃ, ಮೃಗಾಂಕಾಯ ನಮಃ, ನಿಧಯೇ ನಮಃ, ನಕ್ಷತ್ರನಾಥಾಯ ನಮಃ, ಶರ್ವರೀಪತಯೇ ನಮಃ, ಜೈವಾತೃಕಾಯ ನಮಃ, ದ್ವಿಜರಾಜಾಯ ನಮಃ.

೭೩. ಈ ರೀತಿಯಾಗಿ ಹದಿನಾರು ನಾಮಗಳಿಂದ ಚಂದ್ರನನ್ನು ಕ್ರಮವಾಗಿ ಸ್ತೋತ್ರಮಾಡಬೇಕು.

೭೪. ಬಳಿಕ ಜಿತೇಂದ್ರಿಯನಾಗಿಯೂ, ಪ್ರಯತ್ನಪುರಸ್ಸರವಾಗಿ ಫಲ,

ನಮಸ್ತೇ ಮಾಸಮಾಸಾಂತೇ ಜಾಯಮಾನ ಪುನಃ ಪುನಃ ।
ಗೃಹಾಣಾರ್ಘ್ಯಂ ಶಶಾಂಕ ತ್ವಂ ರೋಹಿಣ್ಯಾ ಸಹಿತೋ ಮಮ ॥ ೭೫ ॥
ಏವಂ ಸಂಪೂಜ್ಯ ವಿಧಿವಚ್ಛಶಿನಂ ಪ್ರಣತೋ ಭವೇತ್ ।
ಷೋಡಶಾಽನ್ಯೇ ಚ ಕಲಶಾ ದುಗ್ಧಪೂರ್ಣಾಃ ಸರತ್ನಕಾಃ ॥ ೭೬ ॥
ಸವಸ್ತ್ರಾಚ್ಛಾದನಾಃ ಶಾಂತ್ಯೈ ದಾತವ್ಯಾಸ್ತೇ ದ್ವಿಜನ್ಮನೇ ।
ಅಭಿಷೇಕಂ ತತಃ ಕುರ್ಯಾತ್ ಪಾಯಸೇನ ಜಲೇನತು ॥ ೭೭ ॥
ಋತ್ವಿಜಾಂ ಮನಸಸ್ತುಷ್ಟಿಃ ಕಾರ್ಯಾ ವಿತ್ತಾನುಮಾನತಃ ।
ಬ್ರಾಹ್ಮಣಂ ಭೋಜಯೇತ್ತತ್ರ ಸಕುಟುಂಬಂ ವಿಶೇಷತಃ ॥ ೭೮ ॥
ಪೂಜನೀಯೌ ಪ್ರಯತ್ನೇನ ವಸ್ತ್ರೈಶ್ಚ ದ್ವಿಜದಂಪತೀ ।
ಕರ್ತವ್ಯಂ ಚ ತತೋ ಭೂರಿದಕ್ಷಿಣಾದಾನಮುತ್ತಮಂ ॥ ೭೯ ॥
ಪ್ರತಿಮಾಶ್ಚ ಪ್ರದಾತವ್ಯಾ ದ್ವಿಜೇಭ್ಯೋ ಧೇನುಪೂರ್ವಿಕಾಃ ।
ಸುವರ್ಣಂ ರಜತಂ ವಸ್ತ್ರಂ ತಥಾನ್ನಂ ಚ ವಿಶೇಷತಃ ।
ದಾತವ್ಯಂ ಚಂದ್ರಸಂಪ್ರೀತ್ಯೈ ಹರ್ಷಾದೇವಂ ದ್ವಿಜನ್ಮನೇ ॥ ೮೦ ॥

---

ಪುಷ್ಪ, ಚಂದನ ಸಮೇತವಾದ ಶಂಖದ ನೀರನ್ನು ತೆಗೆದುಕೊಂಡು ವಿಧಿವತ್ತಾಗಿಯೂ ಮಂತ್ರಪೂರ್ವಕವಾಗಿಯೂ ಅರ್ಘ್ಯವನ್ನು ಕೊಡಬೇಕು.

೭೫. ಮಾಸಮಾಸದ ಕೊನೆಯಲ್ಲಿಯೂ ಮತ್ತೆ ಮತ್ತೆ ಹುಟ್ಟುವವನೇ! ನಿನಗೆ ನಮಸ್ಕಾರವು. ಎಲೈ ಶಶಾಂಕನೇ! ರೋಹಿಣಿಯಿಂದೊಡಗೂಡಿದವನಾಗಿ ನಾನು ಕೊಡುವ ಈ ಅರ್ಘ್ಯವನ್ನು ಸ್ವೀಕರಿಸು.

೭೬-೭೭. ಈ ರೀತಿ ಚಂದ್ರನನ್ನು ವಿಧಿವತ್ತಾಗಿ ಪೂಜಿಸಿ ಪ್ರಣಾಮಮಾಡಬೇಕು. ಹಾಲು ತುಂಬಿ ರತ್ನಹಾಕಿ ವಸ್ತ್ರಹೊದಿಸಿರುವ ಹದಿನಾರು ಕಲಶಗಳನ್ನು ಶಾಂತಿಗಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ಆಮೇಲೆ ಹಾಲಿನಿಂದಲೂ ನೀರಿನಿಂದಲೂ ಅಭಿಷೇಕ ಮಾಡಬೇಕು.

೭೮. ಹಣದ ಶಕ್ತಿಗನುಸಾರವಾಗಿ ಋತ್ವಿಜರ ಮನಸ್ಸಿಗೆ ತೃಪ್ತಿಯನ್ನುಂಟುಮಾಡಬೇಕು. ಬ್ರಾಹ್ಮಣನಿಗೆ—ವಿಶೇಷವಾಗಿ ಕುಟುಂಬ ಸಮೇತನಾದವನಿಗೆ ಭೋಜನ ಮಾಡಿಸಬೇಕು.

೭೯. ಬ್ರಾಹ್ಮಣ ದಂಪತಿಗಳಿಗೆ ಪ್ರಯತ್ನದಿಂದ ವಸ್ತ್ರಗಳನ್ನು ಕೊಟ್ಟು ಪೂಜೆ ಮಾಡಬೇಕು. ಬಳಿಕ ಭೂರಿದಕ್ಷಿಣೆಯನ್ನೂ ಉತ್ತಮ ದಾನವನ್ನೂ ಮಾಡಬೇಕು.

೮೦. ಹಸುಗಳೊಡಗೂಡಿದ ಪ್ರತಿಮೆಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಚಿನ್ನ, ಬೆಳ್ಳಿ, ವಸ್ತ್ರ, ಅನ್ನ ಇವನ್ನು ಚಂದ್ರನ ಪ್ರೀತಿಗಾಗಿ ಹರ್ಷದಿಂದ ಬ್ರಾಹ್ಮಣನಿಗೆ ದಾನಮಾಡಬೇಕು.

ಉಪವಾಸವಿಧಾನೇನ ದಿನಶೇಷಂ ನಯೇತ್ಸುಧೀಃ ।
ಅನಂತರೇ ಚ ದಿವಸೇ ಕುರ್ಯಾದ್ಭಗವದರ್ಶನಂ ।
ಬಾಂಧವೈಸ್ಸಹ ಭುಂಜೀತ ನಿಯಮಂ ಚ ವಿಸರ್ಜಯೇತ್ ॥ ೮೧ ॥
ಏವಂ ಚ ಕುರುತೇ ಚಂದ್ರಸಹಸ್ರಂವ್ರತಮುತ್ತಮಂ ।
ಬ್ರಹ್ಮಘ್ನೋಽಪಿ ಸುರಾಪೋಽಪಿ ಸ್ತೇಯೀ ಚ ಗುರುತಲ್ಪಗಃ ।
ವ್ರತೇನಾನೇನ ಶುದ್ಧಾತ್ಮಾ ಚಂದ್ರಲೋಕಂ ವ್ರಜೇನ್ನರಃ ॥ ೮೨ ॥
ಯಾದೃಶಶ್ಚ ಭವೇದ್ವಿಪ್ರ ಪ್ರಿಯೋ ನಾರಾಯಣಸ್ಯ ಚ ।
ಏವಂ ಕರೋತಿ ನಿಯತಂ ಕೃತಕೃತ್ಯೋ ಭವೇನ್ನರಃ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಸಹಸ್ರಚಂದ್ರ ವ್ರತೋದ್ಯಾಪನವಿಧಿವರ್ಣನಂ" ನಾಮ ತೃತೀಯೋಽಧ್ಯಾಯಃ

---

೮೧. ಉಪವಾಸ ವಿಧಾನದಿಂದ ದಿನದ ಉಳಿದ ಭಾಗವನ್ನು ಕಳೆಯಬೇಕು. ಅನಂತರ ಆ ಎರಡನೆಯ ದಿನವೆಲ್ಲ ಭಗವದರ್ಶನೆಯನ್ನು ಮಾಡಬೇಕು. ತರುವಾಯ ಬಾಂಧವರೊಡನೆ ಊಟಮಾಡಬೇಕು. ಬಳಿಕ ನಿಯಮವನ್ನು ವಿಸರ್ಜನೆ ಮಾಡಬೇಕು.

೮೨. ಈ ರೀತಿಯಾಗಿ ಉತ್ತಮವಾದ ಸಹಸ್ರಚಂದ್ರವ್ರತವನ್ನು ಯಾವನು ಮಾಡುತ್ತಾನೆಯೋ ಅವನು ಬ್ರಹ್ಮಹತ್ಯೆ ಮಾಡಿದವನಾಗಲಿ, ಸುರಾಪಾನ ಮಾಡಿದವನಾಗಲಿ, ಕಳ್ಳನೇ ಆಗಲಿ, ಗುರುತಲ್ಪಗಮನ ಮಾಡಿದವನೇ ಆಗಲಿ, ಶುದ್ಧಾತ್ಮನಾಗಿ ಚಂದ್ರಲೋಕಕ್ಕೆ ಹೋಗುತ್ತಾನೆ.

೮೩. ಯಾವನು ನಿಯತವಾಗಿ ಈ ರೀತಿ ಮಾಡುತ್ತಾನೆಯೋ ಅವನು ಶ್ರೀಮನ್ನಾರಾಯಣನಿಗೆ ಪ್ರಿಯನಾಗುತ್ತಾನೆಯಲ್ಲದೆ, ಕೃತಕೃತ್ಯನೂ ಆಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಸಹಸ್ರಚಂದ್ರವ್ರತೋದ್ಯಾಪನವಿಧಿವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಧರ್ಮಹರಿ–ಸ್ವರ್ಣಖನಿಮಾಹಾತ್ಮ್ಯವರ್ಣನಂ

ಅಗಸ್ತ್ಯ ಉವಾಚ :—

ತಸ್ಮಾಚ್ಚಂದ್ರಹರಿಸ್ಥಾನಾದಾಗ್ನೇಯ್ಯಾಂ ದಿಶಿ ಸಂಸ್ಥಿತಃ ।
ದೇವೋ ಧರ್ಮಹರಿರ್ನಾಮ ಕಲಿಕಲ್ಮಷನಾಶಕಃ ॥ ೧ ॥
ವೇದವೇದಾಂಗತತ್ವಜ್ಞಃ ಸ್ವಕರ್ಮಪರಿನಿಷ್ಠಿತಃ ।
ಪುರಾ ಸಮಾಗತೋ ಧರ್ಮಸ್ತೀರ್ಥಯಾತ್ರಾಚಿಕೀರ್ಷಯಾ ॥ ೨ ॥
ಆಗತ್ಯ ಚ ಚಕಾರೋಚ್ಚೈರ್ಯಾತ್ರಾಂ ತತ್ರಾದರೇಣ ಸಃ ।
ದೃಷ್ಟ್ವಾ ಮಾಹಾತ್ಮ್ಯಮತುಲಮಯೋಧ್ಯಾಯಾಃ ಸವಿಸ್ಮಯಃ ॥ ೩ ॥
ವಿಧಾಯ ಸ್ವಭುಜಾವೂರ್ಧ್ವೌ ವಿಪ್ರೋಽವಚನ್ಮುದಾನ್ವಿತಃ ।
ಅಹೋ ರಮ್ಯಮಿದಂ ತೀರ್ಥಮಹೋ ಮಾಹಾತ್ಮ್ಯಮುತ್ತಮಂ ॥ ೪ ॥
ಅಯೋಧ್ಯಾಸದೃಶೀ ಕಾಪಿ ದೃಶ್ಯತೇ ನಾಪರಾ ಪುರೀ ।
ಯಾ ನ ಸ್ಪೃಶತಿ ವಸುಧಾಂ ವಿಷ್ಣುಚಕ್ರಸ್ಥಿತಾಽನಿಶಂ ॥ ೫ ॥

---

### ಕನ್ನಡದ ಅನುವಾದ

#### ಧರ್ಮಹರಿ–ಸ್ವರ್ಣಖನಿಗಳ ಮಾಹಾತ್ಮ್ಯವರ್ಣನ

೧. ಅಗಸ್ತ್ಯನು ಹೇಳುತ್ತಾನೆ:— “ಆ ಚಂದ್ರಹರಿಸ್ಥಾನದ ಆಗ್ನೇಯ ದಿಕ್ಕಿನಲ್ಲಿ ಕಲಿಕಲ್ಮಷವನ್ನು ನಾಶಮಾಡುವ ಧರ್ಮಹರಿಯೆಂಬ ಹೆಸರಿನ ದೇವನು ನೆಲಸಿರುವನು.

೨. ವೇದವೇದಾಂಗಗಳ ತತ್ತ್ವವನ್ನು ಬಲ್ಲವನೂ, ಸ್ವಕರ್ಮಗಳಲ್ಲಿ ತುಂಬ ನಿಷ್ಠನೂ ಆದ ಧರ್ಮನೆಂಬವನು ಪೂರ್ವದಲ್ಲಿ ತೀರ್ಥಯಾತ್ರೆ ಮಾಡಬೇಕೆಂದು ಇಲ್ಲಿಗೆ ಬಂದನು.

೩. ಅವನು ಈ ಕ್ಷೇತ್ರದಲ್ಲಿ ವಿಧ್ಯುಕ್ತವಾಗಿ ಯಾತ್ರೆ ಮಾಡಿ ಎಣೆಯಿಲ್ಲದ ಅಯೋಧ್ಯೆಯ ಮಾಹಾತ್ಮ್ಯವನ್ನು ಕಂಡು ವಿಸ್ಮಯವನ್ನು ಹೊಂದಿದನು.

೪. ಆ ವಿಪ್ರನು ಭುಜಗಳನ್ನು ಮೇಲಕ್ಕೆತ್ತಿ ಸಂತೋಷದಿಂದ ಹೀಗೆ ಹೇಳಿದನು. ‘ಆಹಾ! ಈ ತೀರ್ಥವು ಎಷ್ಟು ರಮ್ಯವಾಗಿರುವುದು! ಆಹಾ, ಇದರ ಮಾಹಾತ್ಮ್ಯವು ಎಷ್ಟು ಅದ್ಭುತವಾಗಿರುವುದು!

೫. ಅಯೋಧ್ಯೆಗೆ ಸಮಾನವಾದ ಬೇರೊಂದು ಪಟ್ಟಣವು ಭೂಮಂಡಲದಲ್ಲಿಯೇ ಕಾಣುವುದಿಲ್ಲ. ಇದು ಭೂಮಿಯನ್ನು ಮುಟ್ಟದೆ ವಿಷ್ಣುಚಕ್ರದ ಮೇಲೆಯೇ ಸದಾ ನೆಲೆಸಿರುವುದು.

ಯಸ್ಯಾಂ ಸ್ಥಿತೋ ಹರಿಃ ಸಾಕ್ಷಾತ್ಸೇಯಂ ಕೇನೋಪಮೀಯತೇ ।
ಅಹೋ ತೀರ್ಥಾನಿ ಸರ್ವಾಣಿ ವಿಷ್ಣುಲೋಕಪ್ರದಾನಿ ವೈ ॥ ೬ ॥
ಅಹೋ ವಿಷ್ಣುರಹೋತೀರ್ಥಮಯೋಧ್ಯಾಽಹೋ ಮಹಾಪುರೀ ।
ಅಹೋ ಮಾಹಾತ್ಮ್ಯಮತುಲಂ ಕಿಂ ನ ಶ್ಲಾಘ್ಯಮಿಹಸ್ಥಿತಂ ॥ ೭ ॥
ಇತ್ಯುಕ್ತ್ವಾ ತತ್ರ ಬಹುಶೋ ನನರ್ತ ಪ್ರಮುದಾಕುಲಃ ।
ಧರ್ಮೋ ಮಾಹಾತ್ಮ್ಯಮಾಲೋಕ್ಯ ಅಯೋಧ್ಯಾಯಾ ವಿಶೇಷತಃ ॥ ೮ ॥
ತಂ ತಥಾ ನರ್ತಮಾನಂ ವೈ ಧರ್ಮಂ ದೃಷ್ಟ್ವಾ ಕೃಪಾನ್ವಿತಃ ।
ಆವಿರ್ಬಭೂವ ಭಗವಾನ್ ಪೀತವಾಸಾ ಹರಿಃ ಸ್ವಯಂ ।
ತಂ ಪ್ರಣಮ್ಯ ಚ ಧರ್ಮೋಽಥ ತುಷ್ಟಾವ ಹರಿಮಾದರಾತ್ ॥ ೯ ॥

ಧರ್ಮ ಉವಾಚ :—

ನಮಃ ಕ್ಷೀರಾಬ್ಧಿವಾಸಾಯ ನಮಃ ಪರ್ಯಂಕಶಾಯಿನೇ ।
ನಮಃ ಶಂಕರಸಂಸ್ಪೃಷ್ಟದಿವ್ಯಪಾದಾಯ ವಿಷ್ಣವೇ ॥ ೧೦ ॥

---

೬. ಇಲ್ಲಿ ಶ್ರೀಹರಿಯು ಸಾಕ್ಷಾತ್ತಾಗಿ ನೆಲಸಿರುವನು. ಈ ಪುರಿಯನ್ನು ಯಾವುದಕ್ಕೆ ಹೋಲಿಸುವುದಕ್ಕಾದೀತು! ಆಹಾ, ಇಲ್ಲಿನ ತೀರ್ಥಗಳೆಲ್ಲವೂ ವಿಷ್ಣುಲೋಕಪ್ರಾಪ್ತಿಯನ್ನು ಉಂಟುಮಾಡುವಂಥವೇ!!

೭. ಆಹಾ, ವಿಷ್ಣುವು ಇಲ್ಲಿಯೆ ನೆಲಸಿರುವನು! ಆಹಾ, ಈ ತೀರ್ಥವೆಷ್ಟು ಆಶ್ಚರ್ಯಕರವಾಗಿರುವುದು! ಆಹಾ, ಅಯೋಧ್ಯೆಯು ಎಂಥ ಮಹಾಪುರಿಯೆನಿಸಿರುವುದು! ಆಹಾ! ಇದರ ಮಾಹಾತ್ಮ್ಯವು ಎಷ್ಟು ಅಸದೃಶವಾಗಿರುವುದು! ಇಲ್ಲಿರುವುದು ಯಾವುದುತಾನೇ ಶ್ಲಾಘ್ಯವಾಗಿಲ್ಲ."

೮. ಈ ರೀತಿ ನುಡಿದು ಆ ಧರ್ಮನು ಬಹಳ ಆನಂದದಿಂದ ಮನಸ್ಸು ಕಲಕಿ ಅಯೋಧ್ಯೆಯ ಮಾಹಾತ್ಮ್ಯವನ್ನು ಕಂಡು ಬಹುಪ್ರಕಾರವಾಗಿ ನರ್ತನ ಮಾಡತೊಡಗಿದನು.

೯. ಆ ರೀತಿ ನರ್ತನಮಾಡುತ್ತಿದ್ದ ಆ ಧರ್ಮನನ್ನು ಕಂಡು ಪೀತಾಂಬರ ಧಾರಿಯಾದ ಶ್ರೀಹರಿಯು ಕೃಪೆಹೊಂದಿದವನಾಗಿ ಅವನಿಗೆ ಪ್ರತ್ಯಕ್ಷವಾಗಿ ಕಾಣಿಸಿಕೊಂಡನು. ಧರ್ಮನು ಆ ಹರಿಯನ್ನು ಕಂಡು ಪ್ರಣಾಮಮಾಡಿ ಸ್ತುತಿಸ ತೊಡಗಿದನು.

೧೦. ಧರ್ಮನು ಸ್ತುತಿಸುತ್ತಾನೆ:— "ಕ್ಷೀರಸಮುದ್ರದಲ್ಲಿ ವಾಸ ವಾಗಿರುವ ಓ ಸ್ವಾಮಿಯೇ! ನಿನಗೆ ನಮಸ್ಕಾರವು! ಶೇಷಪರ್ಯಂಕಶಾಯಿ ಯಾದ ನಿನಗೆ ನಮಸ್ಕಾರವು! ಶಂಕರನಿಂದ ಸ್ಪರ್ಶಮಾಡಲ್ಪಟ್ಟ ದಿವ್ಯಪಾದ ಗಳುಳ್ಳ ಎಲೈ ವಿಷ್ಣುವೇ ನಿನಗೆ ನಮಸ್ಕಾರವು!

ಭಕ್ತ್ಯಾಽರ್ಚಿತಸುಪಾದಾಯ ನಮೋಽಜಾದಿಪ್ರಿಯಾಯ ತೇ ।
ಶುಭಾಂಗಾಯ ಸುನೇತ್ರಾಯ ಮಾಧವಾಯ ನಮೋ ನಮಃ ॥ ೧೧ ॥
ನಮೋಽರವಿಂದಪಾದಾಯ ಪದ್ಮನಾಭಾಯ ವೈ ನಮಃ ।
ನಮಃ ಕ್ಷೀರಾಬ್ಧಿಕಲ್ಲೋಲಸ್ಪೃಷ್ಟಗಾತ್ರಾಯ ಶಾರ್ಙ್ಗಿಣೇ ॥ ೧೨ ॥
ಓಂ ನಮೋ ಯೋಗನಿದ್ರಾಯ ಯೋಗಾರ್ಥೈರ್ಭಾವಿತಾತ್ಮನೇ ।
ತಾರ್ಕ್ಷ್ಯಾಸನಾಯ ದೇವಾಯ ಗೋವಿಂದಾಯ ನಮೋನಮಃ ॥ ೧೩ ॥
ಸುಕೇಶಾಯ ಸುನಾಸಾಯ ಸುಲಲಾಟಾಯ ಚಕ್ರಿಣೇ ।
ಸುವಸ್ತ್ರಾಯ ಸುವರ್ಣಾಯ ಶ್ರೀಧರಾಯ ನಮೋನಮಃ ॥ ೧೪ ॥
ಸುಬಾಹವೇ ನಮಸ್ತುಭ್ಯಂ ಚಾರುಜಂಘಾಯ ತೇ ನಮಃ ।
ಸುವಾಸಾಯ ಸುದಿವ್ಯಾಯ ಸುವಿದ್ಯಾಯ ಗದಾಭೃತೇ ॥ ೧೫ ॥
ಕೇಶವಾಯ ಚ ಶಾಂತಾಯ ವಾಮನಾಯ ನಮೋನಮಃ ।
ಧರ್ಮಪ್ರಿಯಾಯ ದೇವಾಯ ನಮಸ್ತೇ ಪೀತವಾಸಸೇ ॥ ೧೬ ॥

---

೧೧. ಭಕ್ತಿಯಿಂದ ಶಿವನು ಅರ್ಚಿಸಿದ ಶ್ರೇಷ್ಠವಾದ ಪಾದಗಳುಳ್ಳವನೇ! ನಿನಗೆ ನಮಸ್ಕಾರವು. ಬ್ರಹ್ಮಾದಿಗಳಿಗೆ ಪ್ರಿಯನಾದ ನಿನಗಿದೋ ನಮಸ್ಕಾರವು. ಶುಭಾಂಗನೂ, ಸುನೇತ್ರನೂ ಓ ಮಾಧವಾ! ನಿನಗೆ ನಮಸ್ಕಾರವು!!

೧೨. ಅರವಿಂದ (ಪದ್ಮ)ಪಾದನೂ, ಪದ್ಮನಾಭನೂ, ಕ್ಷೀರಸಮುದ್ರದ *ತೆರೆಗಳು ಸೋಕಿದ ಶರೀರವುಳ್ಳವನೂ ಆದ ಎಲೈ ಶಾರ್ಙ್ಗಪಾಣಿಯೇ! ನಿನಗೆ ನಮಸ್ಕಾರವು.*

೧೩. ಯೋಗನಿದ್ರಾಸಕ್ತನೂ, ಯೋಗಾಸಕ್ತರಿಂದ ಭಾವಿಸಲ್ಪಡುವವನೂ, ಗರುಡವಾಹನನೂ, ದೇವದೇವನೂ ಆದ ಗೋವಿಂದ! ನಿನಗೆ ನಮಸ್ಕಾರವು.

೧೪. ಸುಕೇಶನೂ, ಸುನಾಸನೂ, ಸುಫಾಲನೂ ಆದ ಓ ಚಕ್ರಧರ! ನಿನಗೆ ನಮಸ್ಕಾರವು. ಸುವಸ್ತ್ರನೂ, ಸುವರ್ಣನೂ, ಶ್ರೀಧರನೂ ಆದ ಓ ಪ್ರಭುವೇ! ನಿನಗೆ ನಮಸ್ಕಾರವು.

೧೫. ಎಲೈ ಸುಬಾಹುವೇ! ನಿನಗೆ ನಮೋ ನಮೋ! ಮನೋಹರವಾದ ಜಂಘೆ (ಮೊಳಕಾಲು)ಗಳುಳ್ಳವನಾಗಿ ಸುವಾಸನೂ, ಸುದಿವ್ಯನೂ, ಸುವಿದ್ಯನೂ ಆಗಿರುವ ಗದಾಧಾರಿಯೇ! ನಿನಗೆ ನಮಸ್ಕಾರವು.

೧೬. ಕೇಶವನೂ, ಶಾಂತನೂ, ವಾಮನನೂ ಆದ ನಿನಗೆ ನಮಸ್ಕಾರವು. ಧರ್ಮಪ್ರಿಯನಾದ ಓ ದೇವಾ! ಪೀತಾಂಬರಧಾರಿಯಾದ ನಿನಗೆ ನಮೋ ನಮೋ.”

ಅಗಸ್ತ್ಯ ಉವಾಚ :—

ಇತಿ ಸ್ತುತೋ ಜಗನ್ನಾಥೋ ಧರ್ಮೇಣ ಶ್ರೀಪತಿರ್ಮುದಾ ।
ಉವಾಚ ಸ ಹೃಷೀಕೇಶಃ ಪ್ರೀತೋ ಧರ್ಮಮುದಾರಧೀಃ ॥ ೧೭ ॥

ಶ್ರೀ ಭಗವಾನುವಾಚ :—

ತುಷ್ಟೋಽಹಂ ಭವತೋ ಧರ್ಮ ಸ್ತೋತ್ರೇಣಾನೇನ ಸುವ್ರತ ।
ವರಂ ವರಯ ಧರ್ಮಜ್ಞ ಯಸ್ತೇ ಸ್ಯಾನ್ಮನಸಃ ಪ್ರಿಯಂ ॥ ೧೮ ॥
ಸ್ತೋತ್ರೇಣಾನೇನ ಯಃ ಸ್ತೌತಿ ಮಾನವೋ ಮಾಮತಂದ್ರಿತಃ ।
ಸರ್ವಾನ್ ಕಾಮಾನವಾಪ್ನೋತಿ ಪೂಜಿತಃ ಶ್ರೀಯುತಃ ಸದಾ ॥ ೧೯ ॥

ಧರ್ಮ ಉವಾಚ :—

ಯದಿ ತುಷ್ಟೋಽಸಿ ಭಗವನ್ ದೇವದೇವಜಗತ್ಪತೇ ।
ತ್ವಾಮಹಂ ಸ್ಥಾಪಯಾಮ್ಯತ್ರ ನಿಜನಾಮ್ನಾ ಜಗದ್ಗುರೋ ॥ ೨೦ ॥

ಅಗಸ್ತ್ಯ ಉವಾಚ :—

ಏವಮಸ್ತ್ವಿತಿ ಸಂಪ್ರೋಚ್ಯ ಭಗವಾನ್ಧರ್ಮಹರಿರ್ವಿಭುಃ ।
ಸ್ಮರಣಾದೇವ ಮುಚ್ಯೇತ ನರೋ ಧರ್ಮಹರೇರ್ವಿಭೋಃ ॥ ೨೧ ॥

---

೧೭. ಅಗಸ್ತ್ಯನು ಹೇಳುತ್ತಾನೆ:—"ಹೀಗೆ ಧರ್ಮನು ಸಂತೋಷದಿಂದ ಸ್ತುತಿಸಲು, ಜಗನ್ನಾಥನಾದ ಶ್ರೀಪತಿಯು ಸಂತುಷ್ಟನಾದನು. ಉದಾರಬುದ್ಧಿಯಾದ ಆ ಹೃಷೀಕೇಶನು ಸುಪ್ರೀತನಾಗಿ ಧರ್ಮನನ್ನು ಕುರಿತು ಹೀಗೆ ಹೇಳಿದನು :

೧೮. ಶ್ರೀ ಭಗವಂತನು ಹೇಳುತ್ತಾನೆ:—"ಸುವ್ರತನಾದ ಎಲೈ ಧರ್ಮನೇ! ನಿನ್ನ ಈ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ಎಲೈ ಧರ್ಮಜ್ಞನೇ! ನಿನ್ನ ಮನಸ್ಸಿಗೆ ಯಾವುದು ಪ್ರಿಯವಾಗಿರುವುದೋ ಆ ವರವನ್ನು ಬೇಡಿಕೊ.

೧೯. ಯಾವ ಮಾನವನು ಆಲಸ್ಯವನ್ನುಳಿದು ಈ ಸ್ತೋತ್ರದಿಂದ ನನ್ನನ್ನು ಸ್ತೋತ್ರಮಾಡುವನೋ ಅವನು ಸದಾ ಪೂಜಿತನೂ, ಶ್ರೀಯುತನೂ ಆಗಿ ಸರ್ವಾಭೀಷ್ಟಗಳನ್ನೂ ಪಡೆಯುತ್ತಾನೆ."

೨೦. ಧರ್ಮನು ಹೇಳುತ್ತಾನೆ:—ಭಗವನ್, ದೇವದೇವಾ, ಜಗತ್ಪತೀ, ಜಗದ್ಗುರುವೇ! ನೀನು ಸಂತುಷ್ಟನಾಗಿರುವೆಯಾದರೆ ಇಲ್ಲಿ ನಾನು ನಿನ್ನನ್ನು ನನ್ನ ಹೆಸರಿನಿಂದ ಸ್ಥಾಪನೆಮಾಡುತ್ತೇನೆ."

೨೧. ಅಗಸ್ತ್ಯನು ಹೇಳುತ್ತಾನೆ:—"ಹಾಗೆಯೇ ಆಗಲಿ" ಎಂದು ನುಡಿದು ಆ ವಿಭುವು ಆ ಕೂಡಲೆ ಧರ್ಮಹರಿಯಾದನು. ಮಾನವನು ವಿಭುವಾದ ಆ ಧರ್ಮಹರಿಯ ಸ್ಮರಣಮಾತ್ರದಿಂದಲೇ ಮುಕ್ತನಾಗುತ್ತಾನೆ.

ಸರಯೂಸಲಿಲೇ ಸ್ನಾತ್ವಾ ಸುಚಿಂತಾಕುಲಮಾನಸಃ ।
ದೇವಂ ಧರ್ಮಹರಿಂ ಪಶ್ಯೇತ್ ಸರ್ವಪಾಪೈಃ ಪ್ರಮುಚ್ಯತೇ ॥ ೨೨ ॥
ಅತ್ರ ದಾನಂ ತಥಾ ಹೋಮಂ ಜಪೋ ಬ್ರಾಹ್ಮಣಭೋಜನಂ ।
ಸರ್ವಮಕ್ಷಯತಾಂ ಯಾತಿ ವಿಷ್ಣುಲೋಕೇ ನಿವಾಸಕೃತ್ ॥ ೨೩ ॥
ಅಜ್ಞಾನಾಜ್ಜ್ಞಾನತೋ ವಾಪಿ ಯತ್ಕಿಂಚಿದ್ದುಷ್ಕೃತಂ ಭವೇತ್ ।
ಪ್ರಾಯಶ್ಚಿತ್ತಂ ವಿಧಾತವ್ಯಂ ತನ್ನಾಶಾಯ ಪ್ರಯತ್ನತಃ ॥ ೨೪ ॥
ಪ್ರಾಯಶ್ಚಿತ್ತೇನ ವಿಧಿನಾ ಪಾಪಂ ತಸ್ಯ ಪ್ರಣಶ್ಯತಿ ।
ತಸ್ಮಾದತ್ರ ಪ್ರಕರ್ತವ್ಯಂ ಪ್ರಾಯಶ್ಚಿತ್ತಂ ವಿಧಾನತಃ ॥ ೨೫ ॥
ಅಜ್ಞಾನಾಜ್ಜ್ಞಾನತೋವಾಪಿ ರಾಜಾದೇರ್ನಿಗ್ರಹಾತ್ತಥಾ ।
ನಿತ್ಯಕರ್ಮನಿವೃತ್ತಿಃ ಸ್ಯಾದ್ಯಸ್ಯ ಪುಂಸೋಽವಶಾತ್ಮನಃ ।
ತೇನಾಪ್ಯತ್ರ ವಿಧಾತವ್ಯಂ ಪ್ರಾಯಶ್ಚಿತ್ತಂ ಪ್ರಯತ್ನತಃ ॥ ೨೬ ॥
ಅತ್ರ ಸಾಕ್ಷಾತ್ಸ್ವಯಂ ದೇವೋ ವಿಷ್ಣುರ್ವಸತಿ ಸಾದರಃ ।
ತಸ್ಮಾದ್ವರ್ಣಯಿತುಂ ಶಕ್ಯೋ ಮಹಿಮಾ ನಹಿ ಮಾನವೈಃ ॥ ೨೭ ॥

---

೨೨. ಸರಯೂಜಲದಲ್ಲಿ ಸ್ನಾನಮಾಡಿ ಮನಸ್ಸಿನಲ್ಲಿ ಒಳ್ಳೆಯ ಯೋಚನೆಗಳನ್ನು ತುಂಬಿಕೊಂಡು ದೇವನಾದ ಧರ್ಮಹರಿಯನ್ನು ದರ್ಶನಮಾಡುವವನು ಸರ್ವಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ.

೨೩. ಇಲ್ಲಿ ದಾನ, ಹೋಮ, ಜಪ, ಬ್ರಾಹ್ಮಣಭೋಜನ ಎಲ್ಲವೂ ಅಕ್ಷಯತ್ವವನ್ನು ಹೊಂದುತ್ತದೆಯಲ್ಲದೆ ವಿಷ್ಣುಲೋಕದಲ್ಲಿ ನಿವಾಸವನ್ನು ಉಂಟುಮಾಡಿಕೊಡುತ್ತದೆ.

೨೪–೨೫. ಅಜ್ಞಾನದಿಂದಾಗಲಿ, ಜ್ಞಾನದಿಂದಾಗಲಿ ಏನಾದರೂ ಸ್ವಲ್ಪ ಪಾಪವುಂಟಾದರೆ ಅದರ ನಾಶಕ್ಕಾಗಿ ಪ್ರಯತ್ನಪಟ್ಟು ಇಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದರಿಂದ ಪಾಪವು ನಾಶವಾಗಿಹೋಗುತ್ತದೆ. ಆದುದರಿಂದ ವಿಧಿಯನ್ನನುಸರಿಸಿ ಇಲ್ಲಿ ಪ್ರಾಯಶ್ಚಿತ್ತವನ್ನು ನಡೆಸತಕ್ಕದ್ದು.

೨೬. ಅಜ್ಞಾನದಿಂದಲೋ, ಜ್ಞಾನದಿಂದಲೋ, ರಾಜಾದಿಗಳ ನಿಗ್ರಹದಿಂದಲೋ ಆತ್ಮವಶವಿಲ್ಲದವನಾದ ಯಾವನಿಗೆ ನಿತ್ಯಕರ್ಮಗಳ ನಿವೃತ್ತಿಯಾಗುವುದೋ (ಎಂದರೆ ಯಾವನು ನಿತ್ಯಕರ್ಮಗಳನ್ನು ಬಿಡಬೇಕಾಗುವುದೋ) ಅವನು ಕೂಡ ಇಲ್ಲಿ ಪ್ರಯತ್ನಪೂರ್ವಕವಾಗಿ ಪ್ರಾಯಶ್ಚಿತ್ತವನ್ನು ನಡಸಬೇಕು.

೨೭. ಇಲ್ಲಿ ದೇವದೇವನಾದ ವಿಷ್ಣುವು ಆದರದಿಂದ ತಾನೇ ಸಾಕ್ಷಾತ್ತಾಗಿ ವಾಸಮಾಡುತ್ತಾನೆ. ಆದುದರಿಂದ ಇದರ ಮಹಿಮೆಯನ್ನು ವರ್ಣಿಸಲು ಯಾವ ಮಾನವರಿಗೂ ಶಕ್ಯವಲ್ಲವು.

ಆಷಾಢೇ ಶುಕ್ಲಪಕ್ಷಸ್ಯ ಏಕಾದಶ್ಯಾಂ ದ್ವಿಜೋತ್ತಮಾಃ ।
ತಸ್ಯ ಸಾಂವತ್ಸರೀ ಯಾತ್ರಾ ಕರ್ತವ್ಯಾ ತು ವಿಧಾನತಃ ॥ ೨೮ ॥
ಸ್ವರ್ಗದ್ವಾರೇ ನರಃ ಸ್ನಾತ್ವಾ ದೃಷ್ಟ್ವಾ ಧರ್ಮಹರಿಂ ವಿಭುಂ ।
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕೇ ವಸೇತ್ಸದಾ ॥ ೨೯ ॥
ತಸ್ಮಾದ್ದಕ್ಷಿಣದಿಗ್ಭಾಗೇ ಸ್ವರ್ಣಸ್ಯ ಖನಿರುತ್ತಮಾ ।
ಯತ್ರ ಚಕ್ರೇ ಸ್ವರ್ಣವೃಷ್ಟಿಂ ಕುಬೇರೋ ರಘುಜಾದ್ಭಯಾತ್ ॥ ೩೦ ॥

ವ್ಯಾಸ ಉವಾಚ :—

ಭಗವನ್ ಬ್ರೂಹಿ ತತ್ತ್ವಜ್ಞ ಸ್ವರ್ಣವೃಷ್ಟಿರಭೂತ್ಕಥಂ ।
ಕುಬೇರಸ್ಯ ಕಥಂ ಭೀತಿರುತ್ಪನ್ನಾ ರಘುಭೂಪತೇಃ ॥ ೩೧ ॥
ಏತತ್ಸರ್ವಂ ಸಮಾಚಕ್ಷ್ವ ವಿಸ್ತರಾನ್ಮಮ ಸುವ್ರತ ।
ಶ್ರುತ್ವಾ ಕಥಾರಹಸ್ಯಾನಿ ನ ತೃಪ್ಯತಿ ಮನೋ ಮಮ ॥ ೩೨ ॥

ಅಗಸ್ತ್ಯ ಉವಾಚ :—

ಶೃಣು ವಿಪ್ರ ಪ್ರವಕ್ಷ್ಯಾಮಿ ಸ್ವರ್ಣಸ್ಯೋತ್ಪತ್ತಿಮುತ್ತಮಾಂ ।
ಯಸ್ಯ ಶ್ರವಣತೋ ನೄಣಾಂ ಜಾಯತೇ ವಿಸ್ಮಯೋ ಮಹಾನ್ ॥ ೩೩ ॥

---

೨೮. ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ಆ ಧರ್ಮಹರಿಯ ವಾರ್ಷಿಕಯಾತ್ರೆಯನ್ನು ವಿಧಾನವನ್ನನುಸರಿಸಿ ನಡಸತಕ್ಕುದು.

೨೯. ಮಾನವರು ಸ್ವರ್ಗದ್ವಾರದಲ್ಲಿ ಸ್ನಾನಮಾಡಿ ವಿಭುವಾದ ಧರ್ಮಹರಿಯ ದರ್ಶನಮಾಡಿ ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಶುದ್ಧಾತ್ಮನಾಗಿ ಸದಾ ವಿಷ್ಣುಲೋಕದಲ್ಲಿಯೆ ವಾಸಮಾಡುತ್ತಾನೆ.

೩೦. ಅದರ ದಕ್ಷಿಣದಿಕ್ಕಿನಲ್ಲಿ ಉತ್ತಮವಾದ ಸ್ವರ್ಣದ ಖನಿ (ಚಿನ್ನದ ಗಣಿ)ಯಿರುವುದು. ರಘುನಂದನನ ಭಯದಿಂದ ಅಲ್ಲಿ ಕುಬೇರನು ಸ್ವರ್ಣ ವೃಷ್ಟಿಯನ್ನು ಸುರಿಸಿದನು.''

೩೧. ವ್ಯಾಸನು ಕೇಳುತ್ತಾನೆ:—'' ತತ್ತ್ವಜ್ಞನಾದ ಎಲೈ ಭಗವಂತನೇ! ಸ್ವರ್ಣವೃಷ್ಟಿಯು ಹೇಗೆ ಉಂಟಾಯಿತು? ರಘುಭೂಪತಿಯಿಂದ ಕುಬೇರನಿಗೆ ಭೀತಿಯುಂಟಾದುದೆಂತು?

೩೨. ಎಲೈ ಸುವ್ರತನೇ! ಇದೆಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಸ ಬೇಕು. ಈ ಕಥಾರಹಸ್ಯಗಳನ್ನು ಕೇಳುತ್ತಿರುವ ನನ್ನ ಮನಸ್ಸಿಗೆ ತೃಪ್ತಿಯೇ ಆಗುತ್ತಿಲ್ಲ.''

೩೩. ಅಗಸ್ತ್ಯನು ಹೇಳುತ್ತಾನೆ:—'' ಎಲೈ ವಿಪ್ರನೇ! ಕೇಳು. ಉತ್ತಮ ವಾದ ಸ್ವರ್ಣದ ಉತ್ಪತ್ತಿಯನ್ನು ವಿವರಿಸಿ ಹೇಳುತ್ತೇನೆ. ಇದನ್ನು ಕೇಳುವುದ ರಿಂದ ನರರಿಗೆ ಮಹತ್ತರವಾದ ವಿಸ್ಮಯವುಂಟಾಗುತ್ತದೆ.

ಆಸೀತ್ ಪುರಾ ರಘುಪತಿರಿಕ್ಷ್ವಾಕುಕುಲವರ್ಧನಃ ।
ರಘುರ್ನಿಜಭುಜೋದಾರವೀರ್ಯಶಾಸಿತಭೂತಲಃ ॥ ३४ ॥
ಪ್ರತಾಪತಾಪಿತಾರಾತಿವರ್ಗವ್ಯಾಖ್ಯಾತಸದ್ಯಶಃ ।
ಪ್ರಜಾಃ ಪಾಲಯತಾ ಸಮ್ಯಕ್ತೇನ ನೀತಿಮತಾ ಸತಾ ॥ ३५ ॥
ಯಶಃ ಪೂರೇಣ ಸಂಲಿಪ್ತಾ ದಿಶೋ ದಶ ದಿಶತ್ತ್ವಿಷಾ ।
ಸ ಚಕ್ರೇ ಪ್ರೌಢವಿಭವಸಾಧನಂ ವಿಜಯಕ್ರಮಾತ್ ॥ ३६ ॥
ನಾನಾದೇಶಾನ್ ಸಮಾಕ್ರಮ್ಯ ಚತುರಂಗಬಲಾನ್ವಿತಃ ।
ಭೂತಾನಿ ವಶಮಾನೀಯ ವಸು ಜಗ್ರಾಹ ದಂಡತಃ ॥ ३७ ॥
ಉತ್ಕೃಷ್ಟಾನ್ ನೃಪತೀನ್ವೀರೋ ದಂಡಯಿತ್ವಾ ಬಲಾಧಿಕಾನ್ ।
ರತ್ನಾನಿ ವಿವಿಧಾನ್ಯಾಶು ಜಗ್ರಾಹಾತಿಬಲಸ್ತದಾ ॥ ३८ ॥
ಸ ವಿಜಿತ್ಯ ದಿಶಃ ಸರ್ವಾ ಗೃಹೀತ್ವಾ ರತ್ನಸಂಚಯಂ ।
ಅಯೋಧ್ಯಾಮಾಗತೋ ರಾಜಾ ರಾಜಧಾನೀಂ ಚ ತಾಂ ಶುಭಾಂ ॥ ३९ ॥
ತತ್ರಾಗತ್ಯ ಚ ಕಾಕುತ್ಸ್ಥಃ ಯಜ್ಞಾಯೋತ್ಸುಕಮಾನಸಃ ।
ಚಕಾರ ನಿರ್ಮಲಾಂ ಬುದ್ಧಿಂ ನಿಜವಂಶೋಚಿತಕ್ರಿಯಾಂ ॥ ೪೦ ॥

---

३४. ಪೂರ್ವದಲ್ಲಿ ಇಕ್ಷ್ವಾಕುಕುಲವರ್ಧನನೂ, ನಿಜಭುಜಗಳ ಅಪರಿಮಿತವಾದ ಪರಾಕ್ರಮದಿಂದ ಭೂಮಂಡಲವನ್ನೆಲ್ಲ ಆಳುವವನೂ ಆದ ರಘುವೆಂಬ ಮಹಾರಾಜನಿದ್ದನು.

३५–३७. ಅವನ ಪ್ರತಾಪದ ಜ್ವಾಲೆಯಿಂದ ತಪ್ತರಾದ ಶತ್ರುವರ್ಗದವರು ಮೇಲಾದ ಅವನ ಯಶಸ್ಸನ್ನು ಹೊಗಳುತ್ತಿದ್ದರು. ನೀತಿವಂತನಾಗಿ ಪ್ರಜೆಗಳನ್ನು ಚೆನ್ನಾಗಿ ಪಾಲಿಸುತ್ತಿದ್ದ ಆತನು ದಶ ದಿಶೆಗಳನ್ನೂ ಬೆಳ್ಳಗೆ ಬೆಳಗುವ ತನ್ನ ಕೀರ್ತಿಪ್ರವಾಹದಿಂದ ಬಳಿದುಬಿಟ್ಟನು; ದಿಗ್ವಿಜಯಕ್ರಮದಿಂದ ಅಪರಿಮಿತವಾದ ವೈಭವವನ್ನು ಸಾಧಿಸಿದನು; ಚತುರಂಗಬಲಸಮೇತವಾಗಿ ಹೊರಟು ನಾನಾ ದೇಶಗಳನ್ನು ಆಕ್ರಮಿಸಿ ಸಮಸ್ತ ಪ್ರಾಣಿಗಳನ್ನೂ ವಶಕ್ಕೆ ತಂದುಕೊಂಡು ಸ್ವದಂಡದಿಂದಲೇ ಸಂಪತ್ತನ್ನು ಸೆಳೆದುಕೊಂಡನು.

३८. ಮಹಾ ಬಲಶಾಲಿಯಾದ ಆ ವೀರನು ಬಲಾಧಿಕರಾದ ನರಪತಿಗಳನ್ನು ದಂಡಿಸಿ ವಿಧ ವಿಧವಾದ ಉತ್ಕೃಷ್ಟ ರತ್ನಗಳನ್ನು ಬಹುಜಾಗ್ರತೆಯಾಗಿಯೆ ಸೆಳೆದು ಶೇಖರಿಸಿದನು.

३९. ಆ ರಾಜನು ಸರ್ವದಿಕ್ಕುಗಳನ್ನೂ ಜಯಿಸಿ ರನ್ನದೊಟ್ಟಿಲನ್ನು ಕೂಡಿಸಿ ತೆಗೆದುಕೊಂಡು ಸ್ವರಾಜಧಾನಿಯಾದ ಅಯೋಧ್ಯೆಗೆ ಬಂದು ಸೇರಿದನು.

೪೦. ಕಕುತ್ಸ್ಥವಂಶೋತ್ಪನ್ನನಾದ ಆ ರಾಜನು ರಾಜಧಾನಿಗೆ ಬಂದ

ವಸಿಷ್ಠಂ ಮುನಿಮಾಜ್ಞಾಯ ವಾಮದೇವಂ ಚ ಕಶ್ಯಪಂ ॥ ೪೧ ॥
ಅನ್ಯಾನಪಿ ಮುನಿಶ್ರೇಷ್ಠಾನ್ನಾನಾತೀರ್ಥಸಮಾಶ್ರಿತಾನ್ ।
ಸಮಾನಯದ್ವಿನೀತೇನ ದ್ವಿಜವರ್ಣೇನ ಭೂಪತಿಃ ॥ ೪೨ ॥
ದೃಷ್ಟ್ವಾ ಸ್ಥಿತಾನ್ ಸತಾನ್ಸರ್ವಾನ್ಪ್ರದೀಪ್ತಾನಿವ ಪಾವಕಾನ್ ।
ತಾನಾಗತಾನ್ವಿದಿತ್ವಾಥ ರಘುಃ ಪರಪುರಂಜಯಃ ।
ನಿಶ್ಚಕ್ರಾಮ ಯಥಾನ್ಯಾಯಂ ಸ್ವಯಮೇವ ಮಹಾಯಶಾಃ ॥ ೪೩ ॥
ತತೋ ವಿನೀತವತ್ಸರ್ವಾನ್ ಕಾಕುತ್ಸ್ಥೋ ದ್ವಿಜಸತ್ತಮಾನ್ ।
ಉವಾಚ ಧರ್ಮಯುಕ್ತಂ ಚ ವಚನಂ ಯಜ್ಞಸಿದ್ಧಯೇ ॥ ೪೪ ॥

ರಘುರುವಾಚ :—

ಮುನಯಃ ಸರ್ವ ಏವೈತೇ ಯೂಯಂ ಶೃಣುತ ಮದ್ವಚಃ ।
ಯಜ್ಞಂ ವಿಧಾತುಮಿಚ್ಛಾಮಿ ತತ್ರಾಜ್ಞಾಂ ದಾತುಮರ್ಹಥ ॥ ೪೫ ॥
ಸಾಂಪ್ರತಂ ಮಾಮಕೋ ಯಜ್ಞೋ ಯುಕ್ತಃ ಸ್ಯಾನ್ಮುನಿಸತ್ತಮಾಃ ।
ಏತದ್ವಿಚಾರ್ಯ ತತ್ತ್ವೇನ ಬ್ರೂತ ಯೂಯಂ ಮುನೀಶ್ವರಾಃ ॥ ೪೬ ॥

---

ತರುವಾಯ ಯಜ್ಞದಲ್ಲಿ ಕುತೂಹಲಗೊಂಡ ಮನಸ್ಸುಳ್ಳವನಾಗಿ ತನ್ನ ವಂಶಕ್ಕೆ ಉಚಿತವಾದ ನಡೆವಳಿಕೆಯನ್ನು ಸೂಚಿಸುವ ನಿರ್ಮಲವಾದ ಬುದ್ಧಿಯನ್ನು ತಳೆದನು.

೪೧–೪೨. ಆ ಭೂಪತಿಯು ವಸಿಷ್ಠಮುನಿಯನ್ನು ಕೇಳಿ, ವಾಮದೇವನನ್ನೂ, ಕಶ್ಯಪನನ್ನೂ, ನಾನಾ ತೀರ್ಥಗಳಲ್ಲಿ ನೆಲಸಿರುವವರಾದ ಬೇರೆ ಮುನಿಶ್ರೇಷ್ಠರನ್ನೂ, ವಿನೀತನಾದ ಬ್ರಾಹ್ಮಣಶ್ರೇಷ್ಠನ ಮೂಲಕ ಕರೆಯಿಸಿಕೊಂಡನು.

೪೩. ಮುನಿಶ್ರೇಷ್ಠರೆಲ್ಲರೂ ಬಂದರೆಂಬುದನ್ನರಿತು ಜ್ವಲಿಸುತ್ತಿರುವ ಅಗ್ನಿಯಂತೆ ಬೆಳಗುತ್ತ ನಿಂತ ಅವರೆಲ್ಲರನ್ನೂ ಕಂಡು ಪರಪುರಂಜಯನೂ, ಮಹಾಯಶಸ್ವಿಯೂ ಆದ ರಘುಮಹಾರಾಜನು ನ್ಯಾಯಕ್ಕನುಸಾರವಾಗಿ ತಾನೇ ಅವರೆಡೆಗೆ ಹೊರಟನು.

೪೪. ಆ ಕಾಕುತ್ಸ್ಥನು ವಿನೀತನಾಗಿ ಆ ದ್ವಿಜಶ್ರೇಷ್ಠರನ್ನು ಕುರಿತು ಯಜ್ಞಸಿದ್ಧಿಗಾಗಿ ಧರ್ಮಯುಕ್ತವಾದ ಈ ವಚನವನ್ನಾಡಿದನು :—

೪೫. ರಘುವು ಹೇಳುತ್ತಾನೆ:—"ಎಲೈ ಮುನಿಗಳೇ! ನೀವು ನನ್ನ ಮಾತನ್ನು ಲಾಲಿಸಬೇಕು. ಈಗ ನಾನು ಯಜ್ಞವನ್ನು ಮಾಡಲು ಇಚ್ಛಿಸುತ್ತೇನೆ. ಅದಕ್ಕೆ ನೀವು ಅಪ್ಪಣೆ ಕೊಡಬೇಕು.

೪೬. ಮುನಿಶ್ರೇಷ್ಠರೇ! ಈಗ ನಾನೆಸಗುವ ಯಜ್ಞವು ಯೋಗ್ಯವಾಗಿರಬೇಕು. ಮುನೀಶ್ವರರೇ! ನೀವು ಈ ವಿಷಯವನ್ನು ಚೆನ್ನಾಗಿ ವಿಚಾರಮಾಡಿ ಹೇಳಬೇಕು."

ಮುನಯ ಊಚುಃ :—
ರಾಜನ್ವಿಶ್ವಜಿದಾಖ್ಯಾತೋ ಯಜ್ಞಾನಾಂ ಯಜ್ಞ ಉತ್ತಮಃ ।
ಸಾಂಪ್ರತಂ ಕುರು ತಂ ಯತ್ನಾನ್ಮಾ ವಿಲಂಬಂ ವೃಥಾ ಕೃಥಾಃ ॥ ೪೭ ॥
ಅಗಸ್ತ್ಯ ಉವಾಚ :—
ನೃಪಶ್ಚಕ್ರೇ ತತೋ ಯಜ್ಞಂ ವಿಶ್ವದಿಗ್ಜಯಸಂಜ್ಞಿತಂ ।
ನಾನಾಸಂಭಾರಮಧುರಂ ಕೃತಸರ್ವಸ್ವದಕ್ಷಿಣಂ ॥ ೪೮ ॥
ನಾನಾವಿಧೇನ ದಾನೇನ ಮುನಿಸಂತೋಷಹರ್ಷಕೃತ್ ।
ಸರ್ವಸ್ವಮೇವ ಪ್ರದದೌ ದ್ವಿಜೇಭ್ಯೋ ಬಹುಮಾನತಃ ॥ ೪೯ ॥
ತೇಷು ವಿಶ್ವೇಷು ಯಾತೇಷು ಪೂಜಿತೇಷು ಗೃಹಾನ್ಸ್ವಕಾನ್ ।
ಬಂಧುಷ್ವಪಿ ಚ ತುಷ್ಟೇಷು ಮುನಿಷು ಪ್ರಣತೇಷು ಚ ॥ ೫೦ ॥
ತೇನ ಯಜ್ಞೇನ ವಿಧಿವದ್ವಿಹಿತೇನ ನರೇಶ್ವರಃ ।
ಶುಶುಭೇ ಶೋಭನಾಚಾರಃ ಸ್ವರ್ಗೇ ದೇವೇಂದ್ರವತ್ ಕ್ಷಣಾತ್ ॥ ೫೧ ॥
ತತ್ರಾಂತರೇ ಸಮಭ್ಯಾಯಾನ್ ಮುನಿರ್ಯಮವತಾಂ ವರಃ ।
ವಿಶ್ವಾಮಿತ್ರಮುನೇರಂತೇವಾಸೀ ಕೌತ್ಸ ಇತಿ ಸ್ಮೃತಃ ॥ ೫೨ ॥

---

೪೭. ಮುನಿಗಳು ಹೇಳುತ್ತಾರೆ:—"ಎಲೈ ರಾಜನೇ! ವಿಶ್ವಜಿತ್ ಎಂಬ ಯಜ್ಞವು ಯಜ್ಞಗಳಲ್ಲೆಲ್ಲ ಉತ್ತಮವಾದುದು. ಈಗ ನೀನು ಪ್ರಯತ್ನಪೂರ್ವಕವಾಗಿ ಆ ಯಜ್ಞವನ್ನುಮಾಡು. ವ್ಯರ್ಥವಾಗಿ ವಿಲಂಬಮಾಡಬೇಡ."

೪೮. ಅಗಸ್ತ್ಯನು ಹೇಳುತ್ತಾನೆ:—"ಬಳಿಕ ಆ ರಾಜನು ನಾನಾ ಬಗೆಯ ಸಾಮಗ್ರಿಗಳನ್ನು ಒದಗಿಸಿಕೊಂಡು ವಿಶ್ವದಿಗ್ಜಯವೆಂಬ ಹೆಸರಿನ ಆ ಯಜ್ಞವನ್ನು ಮಾಡಿ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟನು.

೪೯. ನಾನಾ ಬಗೆಯ ದಾನಗಳಿಂದ ಮುನಿಗಳಿಗೆ ಸಂತೋಷಹರ್ಷಗಳನ್ನುಂಟುಮಾಡಿದನು. ಬ್ರಾಹ್ಮಣರಿಗೆ ಬಹುವಾಗಿ ಮರ್ಯಾದೆ ಮಾಡಿ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟನು.

೫೦. ಹೀಗೆ ಅವರೆಲ್ಲರೂ ಪೂಜಿತರಾಗಿ ತಮ್ಮತಮ್ಮ ಮನೆಗಳಿಗೆ ಹೊರಟು ಹೋದರು. ಬಂಧುಗಳೆಲ್ಲ ಸಂತೋಷಪಟ್ಟರು. ಮುನಿಗಳೆಲ್ಲರೂ ಆ ಮಹಾರಾಜನಿಂದ ನಮಸ್ಕೃತರಾದರು.

೫೧. ವಿಧಿವತ್ತಾಗಿ ಆ ವಿಶ್ವಜಿತ್ ಯಜ್ಞವನ್ನು ಮಾಡಿ ಆ ನರೇಶ್ವರನು ಶೋಭನಾಚಾರವುಳ್ಳವನಾಗಿ ಸ್ವರ್ಗದಲ್ಲಿರುವ ದೇವೇಂದ್ರನಂತೆ ಶೋಭಿಸಿದನು.

೫೨. ಅಷ್ಟರಲ್ಲಿ ಸಂಯಮ (ಇಂದ್ರಿಯನಿಗ್ರಹ)ವುಳ್ಳವರಲ್ಲಿ ಉತ್ತಮನೆನಿಸಿದವನೂ, ವಿಶ್ವಾಮಿತ್ರಮುನಿಯ ಶಿಷ್ಯನೂ ಆದ ಕೌತ್ಸನೆಂದು ಹೆಸರುಗೊಂಡ ಮುನಿಯು ಅವನೆಡೆಗೆ ಬಂದನು.

ದಕ್ಷಿಣಾರ್ಥಂ ಗುರೋರ್ಧೀಮಾನ್ ಪಾವಿತುಂ ತಂ ನರೇಶ್ವರಂ ।
ಚತುರ್ದಶ ಸುವರ್ಣಾನಾಂ ಕೋಟೀರಾಹರ ಸತ್ವರಂ ॥ ೫೩ ॥
ಮದ್ದಕ್ಷಿಣೇತಿ ಗುರುಣಾ ನಿರ್ಬಂಧಾದ್ಯಾಚಿತೋ ರುಷಾ ।
ಆಗತಃ ಸ ಮುನಿಃ ಕೌತ್ಸಸ್ತತೋ ಯಾಚಿತುಮಾದರಾತ್ ।
ರಘುಂ ಭೂಪಾಲತಿಲಕಂ ದತ್ತಸರ್ವಸ್ವದಕ್ಷಿಣಂ ॥ ೫೪ ॥
ತಮಾಗತಮಭಿಪ್ರೇತ್ಯ ರಘುರಾದರತಸ್ತದಾ ।
ಉತ್ಥಾಯ ಪೂಜಯಾಮಾಸ ವಿಧಿವತ್ಸಪರಂತಪಃ ।
ಸಪರ್ಯಾಸೀತ್ತಸ್ಯ ಸರ್ವಾ ಮೃತ್ಪಾತ್ರವಿಹಿತಕ್ರಿಯಾ ॥ ೫೫ ॥
ಪೂಜಾಸಂಭಾರಮಾಲೋಕ್ಯ ತಾದೃಶಂ ತಂ ಮುನೀಶ್ವರಃ ।
ವಿಸ್ಮಿತೋಽಭೂನ್ನಿರಾನಂದಃ ದಕ್ಷಿಣಾಶಾಂ ಪರಿತ್ಯಜನ್ ।
ಉವಾಚ ಮಧುರಂ ವಾಕ್ಯಂ ವಾಕ್ಯಜ್ಞಾನವಿಶಾರದಃ ॥ ೫೬ ॥

ಕೌತ್ಸ ಉವಾಚ :—

ರಾಜನ್ನಭ್ಯುದಯಸ್ತೇಽಸ್ತು ಗಚ್ಛಾಮ್ಯನ್ಯತ್ರ ಸಾಂಪ್ರತಂ ॥ ೫೭ ॥
ಗುರ್ವರ್ಥಾಹರಣಾಯೈವ ದತ್ತಸರ್ವಸ್ವದಕ್ಷಿಣಂ ।
ತ್ವಾಂ ನಯಾಚೇ ಧನಾಭಾವಾದತೋಽನ್ಯತ್ರ ವ್ರಜಾಮ್ಯಹಂ ॥ ೫೮ ॥

---

೫೩–೫೪. ವಿದ್ಯಾಭ್ಯಾಸವಾದ ಬಳಿಕ ಗುರುವಿಗೆ ಕೊಡಬೇಕಾದ ದಕ್ಷಿಣೆಗೋಸ್ಕರ ಆ ಧೀಮಂತನು ಆ ರಾಜನನ್ನು ಕೇಳಿ ಪಾವನಗೊಳಿಸಲು ಅಲ್ಲಿಗೈತಂದನು. ನಿರ್ಬಂಧದಿಂದ ರೋಷಗೊಂಡ ಆತನ ಗುರುವು "ಹದಿನಾಲ್ಕು ಕೋಟಿ ಸುವರ್ಣಗಳನ್ನು ತಂದುಕೊಡು; ಅದೇ ನನಗೆ ದಕ್ಷಿಣೆ" ಎಂದು ಕೇಳಲಾಗಿ ಆ ಕೌತ್ಸಮುನಿಯು ರಘುಮಹಾರಾಜನಿಂದ ಅದನ್ನು ಬೇಡಿ ಅವನನ್ನು ಪಾವನಗೊಳಿಸಲು ತೆಗೆದುಕೊಳ್ಳುವುದಕ್ಕಾಗಿ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟಿದ್ದ ಆ ಭೂಪಾಲತಿಲಕನ ಬಳಿಗೈದಿದನು.

೫೫. ತನ್ನೆಡೆಗೆ ಬಂದ ಆ ಮುನಿಯನ್ನು ಕಂಡು ಪರಂತಪನಾದ ರಘುವು ಆದರದಿಂದ ಎದ್ದುಹೋಗಿ ಎದುರುಗೊಂಡು ವಿಧಿವತ್ತಾಗಿ ಅವನನ್ನು ಪೂಜಿಸಿದನು. ಆ ದೊರೆಯು ಮಣ್ಣಿನ ಪಾತ್ರೆಗಳಿಂದಲೇ ಸಮಸ್ತ ಸತ್ಕಾರ ಕಾರ್ಯಗಳನ್ನೂ ನಿರ್ವಹಿಸುತ್ತ ಅವನಿಗೆ ಪೂಜೆಮಾಡಿದನು.

೫೬. ಆ ಬಗೆಯ ಪೂಜೋಪಕರಣಗಳನ್ನು ನೋಡಿ ಆ ಮುನೀಶ್ವರನು ವಿಸ್ಮಿತನಾದನು; ದಕ್ಷಿಣೆಯ ಆಸೆಯನ್ನು ತೊರೆದು ನಿರಾನಂದನಾದನು. ತರುವಾಯ ವಾಕ್ಯಜ್ಞಾನವಿಶಾರದನಾದ ಅವನು ಮಧುರವಾಗಿ ನುಡಿಯತೊಡಗಿದನು :—

೫೭. ಕೌತ್ಸನು ಹೇಳುತ್ತಾನೆ:—"ಎಲೈ ರಾಜನೇ! ನಿನಗೆ ಅಭ್ಯುದಯವಾಗಲಿ. ಈಗ ನಾನು ಬೇರೆ ಕಡೆಗೆ ಹೋಗಿಬರುತ್ತೇನೆ.

೫೮. ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟು ನಿನಗೆ ಧನಾಭಾವವಾಗಿರು

ಅಗಸ್ತ್ಯ ಉವಾಚ :—

ಇತ್ಯುಕ್ತಸ್ತೇನ ಮುನಿನಾ ರಘುಃ ಪರಪುರಂಜಯಃ ।
ಕ್ಷಣಂ ಧ್ಯಾತ್ವಾಽಬ್ರವಿದೇನಂ ವಿನಯಾದ್ವಿಹಿತಾಂಜಲಿಃ ॥ ೫೯ ॥

ರಘುರುವಾಚ :—

ಭಗವಂಸ್ತಿಷ್ಠ ಮೇ ಹರ್ಮ್ಯೇ ದಿನಮೇಕಂ ಮುನಿವ್ರತ ।
ಯಾವದ್ಯತಿಷ್ಯೇ ಭಗವನ್ ಭವದರ್ಥಾರ್ಥಮುಚ್ಚಕೈಃ ॥ ೬೦ ॥

ಅಗಸ್ತ್ಯ ಉವಾಚ :—

ಇತ್ಯುಕ್ತ್ವಾ ಪರಮೋದಾರವಚೋ ಮುನಿಮುದಾರಧೀಃ ।
ಪ್ರತಸ್ಥೇ ಚ ರಘುಸ್ತತ್ರ ಕುಬೇರವಿಜಿಗೀಷಯಾ ॥ ೬೧ ॥
ತಮಾಯಾಂತಂ ಕುಬೇರೋಽಥ ವಿಜ್ಞಾಪ್ಯ ವಚನೋದಿತೈಃ ।
ಪ್ರಸನ್ನಮನಸಂ ಚಕ್ರೇ ವೃಷ್ಟಿಂ ಸ್ವರ್ಣಸ್ಯ ಚಾಕ್ಷಯಾಂ ॥ ೬೨ ॥
ಸ್ವರ್ಣವೃಷ್ಟಿರಭೂದ್ಯತ್ರ ಸಾ ಸ್ವರ್ಣಖನಿರುತ್ತಮಾ ।
ಸ ಮುನಿಂ ದರ್ಶಯಾಮಾಸ ಖನಿಂ ತೇನ ನಿವೇದಿತಾಂ ॥ ೬೩ ॥

---

ವುದರಿಂದ ನಾನು ಗುರುವಿಗೆ ಕೊಡಬೇಕಾದ ದಕ್ಷಿಣೆಯನ್ನು ಪಡೆಯುವುದಕ್ಕಾಗಿ ನಿನ್ನನ್ನು ಯಾಚಿಸುವುದಿಲ್ಲ. ಆದುದರಿಂದಲೇ ನಾನು ಬೇರೆ ಕಡೆಗೆ ಹೋಗಬೇಕಾಗಿದೆ" ಎಂದನು.

೫೯. ಅಗಸ್ತ್ಯನು ಹೇಳುತ್ತಾನೆ:—ಆ ಮುನಿಯು ಈ ರೀತಿ ಹೇಳಲಾಗಿ, ಪರಪುರಂಜಯನಾದ ರಘುರಾಜನು ಕ್ಷಣಕಾಲ ಧ್ಯಾನಮಾಡಿ ವಿನಯದಿಂದ ಕೈಮುಗಿದುಕೊಂಡು ಬಿನ್ನವಿಸಿದನು.

೬೦. ರಘುವು ಹೇಳುತ್ತಾನೆ:—"ಭಗವನ್! ಮುನಿವ್ರತನಾದ ನೀನು ನನ್ನ ಮಂದಿರದಲ್ಲಿ ಒಂದು ದಿನ ಮಾತ್ರ ನಿಲ್ಲು. ಅಷ್ಟರಲ್ಲಿಯೇ ನಿನಗೆ ಬೇಕಾಗಿರುವ ಗುರುದಕ್ಷಿಣಾದ್ರವ್ಯಕ್ಕಾಗಿ ಆದಷ್ಟುಮಟ್ಟಿಗೂ ಪ್ರಯತ್ನಮಾಡುತ್ತೇನೆ."

೬೧. ಅಗಸ್ತ್ಯನು ಹೇಳುತ್ತಾನೆ:—ಮಹಾಬುದ್ಧಿಶಾಲಿಯಾದ ರಘುಮಹಾರಾಜನು ಆ ಮುನಿಯನ್ನು ಕುರಿತು ಈ ರೀತಿಯಾಗಿ ಉದಾರವಚನವನ್ನಾಡಿ ಕುಬೇರನನ್ನು ಜಯಿಸಬಯಸಿ ಪ್ರಯಾಣಮಾಡಿದನು.

೬೨. ಕುಬೇರನಾದರೊ, ಹೀಗೆ ತನ್ನನ್ನು ಜಯಿಸಲು ಬರುತ್ತಿರುವ ಆತನನ್ನು ಕಂಡು, ಸಾಂತ್ವವಚನಗಳನ್ನಾಡಿ ಅವನನ್ನು ಪ್ರಸನ್ನವಾದ ಮನಸ್ಸುಳ್ಳವನನ್ನಾಗಿ ಮಾಡಿ ಅವನ ರಾಜ್ಯದಲ್ಲಿ ಅಕ್ಷಯವಾದ ಸ್ವರ್ಣವೃಷ್ಟಿಯನ್ನು ಕರೆದನು.

೬೩. ಎಲ್ಲಿ ಸ್ವರ್ಣವೃಷ್ಟಿಯಾಯಿತೋ ಅದೇ ಉತ್ತಮವಾದ ಸ್ವರ್ಣಖನಿಯು. ಬಳಿಕ ರಘುಮಹಾರಾಜನು ಕುಬೇರನೊಪ್ಪಿಸಿದ ಆ ಸ್ವರ್ಣಖನಿಯನ್ನು ಕೌತ್ಸಮುನಿಗೆ ತೋರಿದನು.

ತಸ್ಮೈ ಸಮರ್ಪಯಾಮಾಸ ತಾಂ ರಘುಃ ಖನಿಮುತ್ತಮಾಂ ।
ಮುನೀಂದ್ರೋಽಪಿ ಗೃಹೀತ್ವಾ ತತೋ ಗುರ್ವರ್ಥಮಾದರಾತ್ ॥ ೬೪ ॥
ರಾಜ್ಞೇ ನಿವೇದಯಾಮಾಸ ಸರ್ವಮನ್ಯದ್ಗುಣಾಧಿಕಃ ।
ವರಾನಥ ದದೌ ತುಷ್ಟಃ ಕೌತ್ಸೋ ಮತಿಮತಾಂ ವರಃ ॥ ೬೫ ॥

ಕೌತ್ಸ ಉವಾಚ :—

ರಾಜಂಲ್ಲಭಸ್ವ ಸತ್ಪುತ್ರಂ ನಿಜವಂಶಗುಣಾನ್ವಿತಂ ।
ಇಯಂ ಸ್ವರ್ಣಖನಿಸ್ತೂರ್ಣಂ ಮನೋಭೀಷ್ಟಫಲಪ್ರದಾ ॥ ೬೬ ॥
ಭೂಯಾದತ್ರ ಪರಂ ತೀರ್ಥಂ ಸರ್ವಪಾಪಹರಂ ಸದಾ ।
ಅತ್ರ ಸ್ನಾನೇನ ದಾನೇನ ನೃಣಾಂ ಲಕ್ಷ್ಮೀಃ ಪ್ರಜಾಯತೇ ॥ ೬೭ ॥
ವೈಶಾಖೇ ಶುಕ್ಲದ್ವಾದಶ್ಯಾಂ ಯಾತ್ರಾ ಸಾಂವತ್ಸರೀ ಸ್ಮೃತಾ ।
ನಾನಾಭೀಷ್ಟಫಲಪ್ರಾಪ್ತಿರ್ಭೂಯಾನ್ಮದ್ವಚಸಾ ನೃಣಾಂ ॥ ೬೮ ॥

ಅಗಸ್ತ್ಯ ಉವಾಚ :—

ಇತಿ ದತ್ವಾ ವರಾನ್ರಾಜ್ಞೇ ಕೌತ್ಸಃ ಸಂತುಷ್ಟಮಾನಸಃ ।
ಪ್ರತಸ್ಥೇ ನಿಜಕಾರ್ಯಾರ್ಥೇ ಗುರೋರಾಶ್ರಮಮುತ್ಸುಕಃ ॥ ೬೯ ॥

---

೬೪–೬೫. ಹೀಗೆ ರಘುವು ಉತ್ತಮವಾದ ಆ ಸ್ವರ್ಣಖನಿಯನ್ನು ಆ ಮುನಿಗೆ ಸಮರ್ಪಿಸಲು ಆತನೂ ತನ್ನ ಗುರುವಿಗೆ ಕೊಡಬೇಕಾಗಿದ್ದಷ್ಟು ಹಣವನ್ನು ಮಾತ್ರ ತೆಗೆದುಕೊಂಡನು. ಗುಣಾಧಿಕನಾದ ಆತನು ಉಳಿದುದೆಲ್ಲವನ್ನೂ ರಾಜನಿಗೇ ಒಪ್ಪಿಸಿಬಿಟ್ಟನು. ತರುವಾಯ ಮತಿವಂತರಲ್ಲಿ ಶ್ರೇಷ್ಠನಾದ ಆ ಕೌತ್ಸಮುನಿಯು ಸಂತುಷ್ಟನಾಗಿ ರಘುವಿಗೆ ವರಗಳನ್ನು ಕೊಟ್ಟನು.

೬೬–೬೭. ಕೌತ್ಸನು ಹೇಳುತ್ತಾನೆ:—"ಅಯ್ಯಾ ರಾಜನೇ! ನೀನು ನಿನ್ನ ವಂಶಗುಣಗಳಿಂದ ಕೂಡಿದವನಾದ ಸತ್ಪುತ್ರನನ್ನು ಪಡೆಯುವಂತಾಗಲಿ. ಈ ಸ್ವರ್ಣಖನಿಯು ಬಹುಬೇಗನೆಯೆ ಸಮಸ್ತರಿಗೂ ಅಭೀಷ್ಟಫಲವನ್ನು ಕೊಡುವಂಥದಾಗಲಿ. ಇಲ್ಲಿ ಸದಾಕಾಲದಲ್ಲಿಯೂ ಸರ್ವಪಾಪಗಳನ್ನೂ ಪರಿಹರಿಸುವ ತೀರ್ಥವುಂಟಾಗಲಿ. ಆ ತೀರ್ಥದ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ ಮನುಷ್ಯರಿಗೆ ಸಂಪತ್ತು ಲಭಿಸಲಿ.

೬೮. ವೈಶಾಖಶುಕ್ಲದ್ವಾದಶಿಯಲ್ಲಿ ಇಲ್ಲಿ ವಾರ್ಷಿಕಯಾತ್ರೆಯು ನಡೆಯಲಿ. ಆಗ ನನ್ನ ಮಾತಿನಿಂದ ಮಾನವರಿಗೆ ಇಲ್ಲಿ ನಾನಾ ಬಗೆಯ ಇಷ್ಟಾರ್ಥಫಲಗಳ ಪ್ರಾಪ್ತಿಯಾಗಲಿ."

೬೯. ಅಗಸ್ತ್ಯನು ಹೇಳುತ್ತಾನೆ:—ಎಲೈ ಮುನಿಯೆ! ಕೌತ್ಸನು ಸಂತುಷ್ಟನಾಗಿ ರಘುರಾಜನಿಗೆ ಈ ರೀತಿ ವರಗಳನ್ನು ಕೊಟ್ಟು ಸ್ವಕಾರ್ಯಾರ್ಥವಾಗಿ ತ್ವರೆಗೊಂಡು ಗುರುವಿನ ಆಶ್ರಮಕ್ಕೆ ಪ್ರಯಾಣಮಾಡಿದನು.

**ರಾಜಾ ಸ ಕೃತಕೃತ್ಯೋಽಥ ಶೇಷಂ ಸಂಗೃಹ್ಯ ತದ್ಧನಂ ।**
**ದ್ವಿಜೇಭ್ಯೋ ವಿಧಿವದ್ದತ್ವಾ ಪಾಲಯಾಮಾಸ ವೈ ಪ್ರಜಾಃ ॥ ೨೦ ॥**
**ಏವಂ ಸ್ವರ್ಣಖನೀರ್ಜಾತಃ ಮಾಹಾತ್ಮ್ಯಂ ಚ ಮುನೀಶ್ವರಾತ್ ॥ ೨೧ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಧರ್ಮಹರಿ–ಸ್ವರ್ಣಖನಿ ಮಾಹಾತ್ಮ್ಯವರ್ಣನಂ"ನಾಮ ಚತುರ್ಥೋಽಧ್ಯಾಯಃ

---

೨೦. ಅನಂತರದಲ್ಲಿ ಕೃತಕೃತ್ಯನಾದ ಆ ರಾಜನು ಅಲ್ಲಿ ಉಳಿದಿದ್ದ ಧನವನ್ನು ತೆಗೆದುಕೊಂಡು ಬ್ರಾಹ್ಮಣರಿಗೆ ವಿಧಿವತ್ತಾಗಿ ದಾನಮಾಡಿ ಪ್ರಜೆಗಳನ್ನು ಪಾಲಿಸಿದನು.

೨೧. ಹೀಗೆ ಕೌತ್ಸಮುನೀಶ್ವರನಿಂದ ಸ್ವರ್ಣಖನಿಯ ಮಾಹಾತ್ಮ್ಯ ವುಂಟಾಯಿತು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಧರ್ಮಹರಿ–ಸ್ವರ್ಣಖನಿಗಳ ಮಾಹಾತ್ಮ್ಯವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ತಿಲೋದಕಃಪ್ರಭಾವವರ್ಣನಂ

**ವ್ಯಾಸ ಉವಾಚ :—**

**ಭಗವನ್ ಬ್ರೂಹಿ ತತ್ಕೇನ ಕಥಂ ನಿರ್ಬಂಧತೋ ಮುನಿಃ ।**
**ವಿಶ್ವಾಮಿತ್ರೋ ನಿಜಂ ಶಿಷ್ಯಂ ಕೌತ್ಸಂ ಕ್ರೋಧೇನ ತಾದೃಶಂ ॥ ೧ ॥**
**ದುಷ್ಪ್ರಾಪ್ಯಮರ್ಥಂ ಯತ್ನೇನ ಬಹು ಪ್ರಾರ್ಥಿತವಾಂಸ್ತದಾ**
**ಏತತ್ಸರ್ವಂ ಚ ಕಥಯ ಮಯಿ ಯದ್ಯಸ್ತಿ ತೇ ಕೃಪಾ ॥ ೨ ॥**

**ಅಗಸ್ತ್ಯ ಉವಾಚ :—**

**ಶೃಣು ದ್ವಿಜ ಕಥಾಮೇತಾಂ ಸಾವಧಾನೇಂದ್ರಿಯಃ ಸ್ವಯಂ ।**
**ವಿಶ್ವಾಮಿತ್ರೋ ಮುನಿಶ್ರೇಷ್ಠಃ ಸ ದಿವ್ಯಜ್ಞಾನಲೋಚನಃ ॥ ೩ ॥**
**ನಿಜಾಶ್ರಮೇ ತಪೋದುರ್ಗಂ ಚಕಾರ ಪ್ರಯತೋ ವ್ರತೀ ।**
**ಏಕದಾ ತಮಥೋ ದ್ರಷ್ಟುಂ ದುರ್ವಾಸಾ ಮುನಿರಾಗತಃ ॥ ೪ ॥**
**ಆಗತ್ಯ ಚ ಕ್ಷುಧಾಕ್ರಾಂತ ಉಚ್ಚೈಃಪ್ರೋವಾಚ ಸದ್ವಿಜಃ ।**
**ಭೋಜನಂ ದೀಯತಾಂ ಮಹ್ಯಂ ಕ್ಷುಧಾಪೀಡಿತಚೇತಸೇ ।**
**ಪಾಯಸಂ ಶುಚಿ ಚೋಷ್ಣಂ ಚ ಶೀಘ್ರಂ ಕ್ಷುಧಾರ್ಥಿನೇ ದ್ವಿಜ ॥ ೫ ॥**

---

### ಕನ್ನಡದ ಅನುವಾದ

#### ತಿಲೋದಕಃಪ್ರಭಾವವರ್ಣನ

೧–೨. ವ್ಯಾಸನು ಕೇಳುತ್ತಾನೆ:—"ಭಗವನ್! ಇದನ್ನು ಯಥಾರ್ಥವಾಗಿ ನನಗೆ ತಿಳಿಸಿರಿ; ವಿಶ್ವಾಮಿತ್ರಮುನಿಯು ಗುರುದಕ್ಷಿಣೆಗಾಗಿ ಶಿಷ್ಯನಾದ ಕೌತ್ಸನನ್ನು ಬಲಾತ್ಕರಿಸಿದುದೇಕೆ? ಆತನು ಪಡೆಯಲು ಬಹುಕಷ್ಟವಾದ ಅಷ್ಟು ಹಣವನ್ನು ಕೊಡಬೇಕೆಂದು ಶಿಷ್ಯನಾದ ಕೌತ್ಸನನ್ನು ಆ ರೀತಿ ಕ್ರೋಧಗೊಂಡು ಅದೇಕೆ ಕೇಳಿದನು? ನನ್ನಲ್ಲಿ ಕೃಪೆಯಿಟ್ಟು ಇದೆಲ್ಲವನ್ನೂ ಹೇಳುವವನಾಗು."

೩. ಅಗಸ್ತ್ಯನು ಹೇಳುತ್ತಾನೆ:—"ಎಲೈ ದ್ವಿಜನೇ! ಈ ಕಥೆಯನ್ನು ಸಾವಧಾನ ಮನಸ್ಕನಾಗಿ ಕೇಳು. ವಿಶ್ವಾಮಿತ್ರನು ಮುನಿಗಳಲ್ಲೆಲ್ಲಾ ಶ್ರೇಷ್ಠನು; ದಿವ್ಯವಾದ ಜ್ಞಾನನೇತ್ರವುಳ್ಳವನು.

೪. ಆ ಮುನಿಯು ತನ್ನ ಆಶ್ರಮದಲ್ಲಿ ವ್ರತತೊಟ್ಟು ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಬಹುಕಷ್ಟವಾದ ತಪಸ್ಸನ್ನು ಮಾಡತೊಡಗಿದನು. ಒಂದಾನೊಂದು ದಿನ ಅವನನ್ನು ನೋಡುವುದಕ್ಕಾಗಿ ದುರ್ವಾಸಮುನಿಯು ಬಂದನು.

೫. ಆ ಬ್ರಾಹ್ಮಣನು ಹಸಿವಿನಿಂದ ಪೀಡಿಸಲ್ಪಟ್ಟವನಾಗಿ, 'ನನಗೆ ಭೋಜನವನ್ನು ಕೊಡಿರಿ; ಕ್ಷುಧಾರ್ತನಾದ ನನಗೆ ಶುಚಿಯಾಗಿಯೂ,

ಇತಿ ಶ್ರುತ್ವಾ ವಚಃ ಕ್ಷಿಪ್ರಂ ವಿಶ್ವಾಮಿತ್ರಃ ಪ್ರಯತ್ನತಃ ।
ಸ್ಥಾಲ್ಯಾಂ ಪಾಯಸಮಾದಾಯ ತಂ ಸಮರ್ಪ್ಯ ತತಃ ಸ್ವಯಂ ॥ ೬ ॥
ತದಾದಾಯೋತ್ಥಿತಂ ದೃಷ್ಟ್ವಾ ದುರ್ವಾಸಾಸ್ತಂ ವಿಲೋಕಯನ್ ।
ಉವಾಚ ಮಧುರಂ ವಾಕ್ಯಂ ಮುನಿಂ ಲಕ್ಷಣತತ್ಪರಃ ॥ ೭ ॥
ಕ್ಷಣಂ ಸಹಸ್ವ ವಿಪ್ರೇಂದ್ರ ಯಾವತ್ಸ್ನಾತ್ವಾ ವ್ರಜಾಮ್ಯಹಂ ।
ತಿಷ್ಠ ತಿಷ್ಠ ಕ್ಷಣಂ ತಿಷ್ಠ ಆಗಚ್ಛಾಮ್ಯೇಷ ಸಾಂಪ್ರತಂ ॥ ೮ ॥
ಇತ್ಯುಕ್ತ್ವಾ ಸ ಜಗಾಮೈವ ದುರ್ವಾಸಾಃ ಸ್ವಾಶ್ರಮಂ ತದಾ ॥ ೯ ॥
ವಿಶ್ವಾಮಿತ್ರಸ್ತಪೋನಿಷ್ಠಸ್ತದಾ ಸಾನುರಿವಾऽಚಲಃ ।
ದಿವ್ಯಂ ವರ್ಷಸಹಸ್ರಂ ಸ ತಸ್ಥೌ ಸ್ಥಿರಮತಿಸ್ತದಾ ॥ ೧೦ ॥
ತಸ್ಯ ಶುಶ್ರೂಷಣಪರೋ ಮುನಿಃ ಕೌತ್ಸೋ ಯತವ್ರತಃ ।
ಬಭೂವ ಪರಮೋದಾರಮತಿರ್ವಿಗತಮತ್ಸರಃ ॥ ೧೧ ॥
ಪುನರಾಗತ್ಯ ಸ ಮುನಿರ್ದುರ್ವಾಸಾ ಗತಕಲ್ಮಷಃ ।
ಭುಕ್ತ್ವಾ ಚ ಪಾಯಸಂ ಸದ್ಯಃ ಸ ಜಗಾಮ ನಿಜಾಶ್ರಮಂ ॥ ೧೨ ॥

---

ಬಿಸಿಯಾಗಿಯೂ ಇರುವ ಪಾಯಸವನ್ನು ಕೊಡಿರಿ' ಎಂದು ಗಟ್ಟಿಯಾಗಿ ಕೂಗಿ ಹೇಳಿದನು.

೬–೭. ಈ ಮಾತನ್ನಾಲಿಸಿ, ವಿಶ್ವಾಮಿತ್ರನು ಪ್ರಯತ್ನಪೂರ್ವಕವಾಗಿ ಸ್ಥಾಲಿಯಲ್ಲಿ ಪಾಯಸವನ್ನು ತೆಗದುಕೊಂಡು ತಾನೇ ಆ ಮುನಿಗೆ ಸಮರ್ಪಿಸ ಬಂದನು. ಆ ಮಹರ್ಷಿಯು ಪಾಯಸವನ್ನು ತೆಗೆದುಕೊಂಡುಬಂದುದನ್ನು ಕಂಡು ಲಕ್ಷಣತತ್ಪರನಾದ ಆ ದುರ್ವಾಸಮುನಿಯಾದರೂ ವಿಶ್ವಾಮಿತ್ರಮುನಿಯನ್ನು ನೋಡುತ್ತ ಮಧುರವಾಕ್ಯವನ್ನು ಇಂತೆಂದು ನುಡಿದನು :—

೮–೯. 'ವಿಪ್ರೇಂದ್ರಾ ! ಒಂದು ಕ್ಷಣಕಾಲ ತಾಳು. ನಾನು ಸ್ನಾನಮಾಡಿ ಬರುತ್ತೇನೆ. ಇಲ್ಲಿಯೇ ಒಂದು ಕ್ಷಣಕಾಲ ನಿಲ್ಲು. ಇಗೋ ಈಗಲೇ ಬಂದು ಬಿಡುತ್ತೇನೆ' ಹೀಗೆಂದು ನುಡಿದು, ತನ್ನ ಆಶ್ರಮಕ್ಕೇ ಹೊರಟುಹೋದನು.

೧೦. ಆಗ ತಪೋನಿಷ್ಠನಾದ ವಿಶ್ವಾಮಿತ್ರನು ಬೆಟ್ಟದ ತಪ್ಪಲಿನಂತೆ ಅಲ್ಲಿಂದ ಕದಲದೆ ಸ್ಥಿರಮತಿಯಾಗಿ ಒಂದುಸಾವಿರ ದಿವ್ಯವರ್ಷಗಳವರೆಗೆ ಅಲ್ಲಿಯೇ ನಿಂತು ಬಿಟ್ಟನು.

೧೧. ಅತ್ಯುತ್ತಮನೂ, ಉದಾರನೂ, ಮಾತ್ಸರ್ಯರಹಿತನೂ ಆದ ಕೌತ್ಸನು ವ್ರತವನ್ನು ಧರಿಸಿ ಆ ವಿಶ್ವಾಮಿತ್ರನ ಶುಶ್ರೂಷೆಯನ್ನು ಮಾಡುವುದರಲ್ಲಿ ನಿರತನಾಗಿದ್ದನು.

೧೨. ಬಳಿಕ ಕಲ್ಮಷರಹಿತನಾದ ಆ ದುರ್ವಾಸಮುನಿಯು ಮತ್ತೆ ಅಲ್ಲಿಗೈತಂದು ಪಾಯಸವನ್ನು ಕುಡಿದು ತಕ್ಷಣವೆ ತನ್ನ ಆಶ್ರಮಕ್ಕೆ ಹೊರಟುಹೋದನು.

ತಸ್ಮಿನ್ ಗತೇ ಮುನಿವರೇ ವಿಶ್ವಾಮಿತ್ರಸ್ತಪೋನಿಧಿಃ ।
ಕೌತ್ಸಂ ವಿದ್ಯಾವ್ರತಂ ಶ್ರೇಷ್ಠಂ ವಿಸಸರ್ಜ ಗೃಹಾನ್ಪ್ರತಿ ॥ ೧೩ ॥
ಸ ವಿಸೃಷ್ಟೋ ಗುರುಂ ಪ್ರಾಹ ದಕ್ಷಿಣಾಂ ಪ್ರಾರ್ಥ್ಯತಾಮಿತಿ ।
ವಿಶ್ವಾಮಿತ್ರಸ್ತು ತಂ ಪ್ರಾಹ ತ್ವಂ ಕಿಂ ದಾಸ್ಯಸಿ ದಕ್ಷಿಣಾಂ ।
ದಕ್ಷಿಣಾ ತವ ಶುಶ್ರೂಷಾ ಗೃಹಂ ವ್ರಜ ಯತವ್ರತ ॥ ೧೪ ॥
ಪುನಃ ಪುನರ್ಗುರುಂ ಪ್ರಾಹ ಶಿಷ್ಯೋ ನಿರ್ಬಂಧವಾನ್ಯದಾ ।
ತದಾ ಗುರುರ್ಗುರುಕ್ರುದ್ಧಃ ಶಿಷ್ಯಂ ಪ್ರಾಹ ಚ ನಿಷ್ಠುರಂ ॥ ೧೫ ॥
ಸುವರ್ಣಸ್ಯ ಸುವರ್ಣಸ್ಯ ಚತುರ್ದಶ ಸಮಾಹರ ।
ಕೋಟೀರ್ಮೇ ದಕ್ಷಿಣಾ ವಿಪ್ರ ಪಶ್ಚಾದ್ಗಚ್ಛ ಗೃಹಂಪ್ರತಿ ॥ ೧೬ ॥
ಇತ್ಯುಕ್ತೋ ಗುರುಣಾ ಕೌತ್ಸೋ ವಿಚಾರ್ಯ ಸಮುಪಾಗಮತ್ ।
ಕಾಕುತ್ಸ್ಥಂ ದಿಗ್ವಿಜೇತಾರಂ ಯಯಾಚೇ ಗುರುದಕ್ಷಿಣಾಂ ॥ ೧೭ ॥
ಇತ್ಯುಕ್ತಂ ತೇ ಮುನಿವರ ತ್ವಯಾ ಪೃಷ್ಟಂ ಹಿ ಯತ್ಪುನಃ ।
ಅತೋನ್ಯಚ್ಛೃಣು ತೇ ವಚ್ಮಿ ತೀರ್ಥಕಾರಣಮುತ್ತಮಂ ॥ ೧೮ ॥

---

೧೩. ಆ ಮುನಿವರನು ಹಾಗೆ ಹೊರಟುಹೋಗುತ್ತಲೆ ತಪೋನಿಧಿಯಾದ ವಿಶ್ವಾಮಿತ್ರನು ವಿದ್ಯಾವಂತರಲ್ಲಿ ಶ್ರೇಷ್ಠನಾದ ಕೌತ್ಸನನ್ನು ಮನೆಗೆ ಹೋಗಬಹುದೆಂದು ಕಳುಹಿಸಿಕೊಟ್ಟನು.

೧೪. ಹೀಗೆ ಕಳುಹಿಸಲು ಆತನು 'ಗುರುದಕ್ಷಿಣೆಯನ್ನು ಕೇಳಿರಿ' ಎಂದು ಗುರುವಾದ ಆ ಮುನಿಯನ್ನು ಕೇಳಿದನು. ವಿಶ್ವಾಮಿತ್ರನಾದರೋ, ಅವನನ್ನು ಕುರಿತು, 'ನೀನೇನು ದಕ್ಷಿಣೆ ಕೊಡುತ್ತೀಯೆ? ನಿನ್ನ ಶುಶ್ರೂಷೆಯೇ ದಕ್ಷಿಣೆ. ಎಲೈ ವ್ರತಶೀಲನೇ! ಮನೆಗೆ ಹೋಗು' ಎಂದನು.

೧೫. ಪುನಃ ಪುನಃ ಶಿಷ್ಯನು ಗುರುವನ್ನು ನಿರ್ಬಂಧಪಡಿಸುತ್ತ ದಕ್ಷಿಣೆಯನ್ನು ಕೇಳಬೇಕೆಂದು ಹೇಳತೊಡಗಿದಾಗ ಗುರುವು ಬಹಳ ಕ್ರುದ್ಧನಾಗಿ ಶಿಷ್ಯನನ್ನು ಕುರಿತು ನಿಷ್ಠುರವಾಗಿ ಹೀಗೆಂದು ಹೇಳಿದನು :—

೧೬. 'ಅಯ್ಯಾ ವಿಪ್ರನೇ! ಹದಿನಾಲ್ಕುಕೋಟಿ ಸುವರ್ಣಗಳನ್ನು ನನಗೆ ತಂದುಕೊಡು. ಅದೇ ನನಗೆ ಗುರುದಕ್ಷಿಣೆ. ಆಮೇಲೆ ಮನೆಗೆ ಹೋಗು' ಎಂದನು.

೧೭. ಗುರುವಾದ ಆ ಕೌಶಿಕನು ಹೀಗೆನ್ನಲು, ಕೌತ್ಸನು ವಿಚಾರಮಾಡಿ ದಿಕ್ಕುಗಳನ್ನೆಲ್ಲ ಜಯಿಸಿದವನಾದ ಕಾಕುತ್ಸ್ಥನ ಬಳಿಗೆ ಬಂದು ಗುರುದಕ್ಷಿಣೆಯನ್ನು ಕೇಳಿಕೊಂಡನು.

೧೮. ಎಲೈ ಮುನಿವರನೇ! ನೀನು ಯಾವುದನ್ನು ಪ್ರಶ್ನೆಮಾಡಿದೆಯೋ ಅದರ ವಿಚಾರವಾಗಿ ಹೀಗೆ ಹೇಳಿದ್ದಾಯಿತು. ಮುಂದೆ ಮತ್ತೊಂದು ಉತ್ತಮವಾದ ತೀರ್ಥವುದಿಸಲು ಕಾರಣವನ್ನು ವಿವರಿಸುತ್ತೇನೆ, ಕೇಳು.

ತಸ್ಮಾದ್ದಕ್ಷಿಣದಿಗ್ಭಾಗೇ ಸಂಭೇದಃ ಸಿದ್ಧಸೇವಿತಃ ।
ತಿಲೋದಕೀಸರಯ್ವೋಶ್ಚ ಸಂಗತ್ಯಾ ಭುವಿ ಸಂಶ್ರುತಃ ॥ ೧೯ ॥
ತತ್ರ ಸ್ನಾತ್ವಾ ಮಹಾಭಾಗ ಭವಂತಿ ವಿರಜಾ ನರಾಃ ।
ದಶಾನಾಮಶ್ವಮೇಧಾನಾಂ ಕೃತಾನಾಂ ಯತ್ಫಲಂ ಭವೇತ್ ।
ತದಾಪ್ನೋತಿ ಸ ಧರ್ಮಾತ್ಮಾ ತತ್ರ ಸ್ನಾತ್ವಾ ಯತವ್ರತಃ ॥ ೨೦ ॥
ಸ್ವರ್ಣಾದಿಕಂ ಚ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ।
ಶುಭಾಂ ಗತಿಮವಾಪ್ನೋತಿ ಅಗ್ನಿವಚ್ಚೈವ ದೀಪ್ಯತೇ ॥ ೨೧ ॥
ತಿಲೋದಕೀಸರಯ್ವೋಶ್ಚ ಸಂಗಮೇ ಲೋಕವಿಶ್ರುತೇ ।
ದತ್ವಾನ್ನಂ ಚ ವಿಧಾನೇನ ನ ಸ ಭೂಯೋಽಭಿಜಾಯತೇ ॥ ೨೨ ॥
ಉಪವಾಸಂ ಚ ಯಃ ಕೃತ್ವಾ ವಿಪ್ರಾನ್ ಸಂತರ್ಪಯೇನ್ನರಃ ।
ಸೌತ್ರಾಮಣೇಶ್ಚ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥ ೨೩ ॥
ಏಕಾಹಾರಸ್ತು ಯಸ್ತಿಷ್ಠೇನ್ಮಾಸಂ ತತ್ರ ಯತವ್ರತಃ ।
ಯಾವಜ್ಜೀವಕೃತಂ ಪಾಪಂ ಸಹಸಾ ತಸ್ಯ ನಶ್ಯತಿ ॥ ೨೪ ॥
ನಭಸ್ಯಕೃಷ್ಣಾಮಾವಾಸ್ಯಾಂ ಯಾತ್ರಾ ಸಾಂವತ್ಸರೀ ಭವೇತ್ ।
ರಾಮೇಣ ನಿರ್ಮಿತಾ ಪೂರ್ವಂ ನದೀ ಸಿಂಧುರಿವಾಪರಾ ॥ ೨೫ ॥

---

೧೯. ಅದು ಸ್ವರ್ಣಖನಿಗೆ ದಕ್ಷಿಣದಿಕ್ಕಿನಲ್ಲಿ ಸಿದ್ಧರಿಂದ ಸೇವಿಸಲ್ಪಟ್ಟ ಸಂಗಮ ಪ್ರದೇಶವು. ತಿಲೋದಕೀ ಮತ್ತು ಸರಯೂನದಿಗಳು ಕೂಡುವುದರಿಂದಾದ ಆ ಸಂಗಮವು ಭೂಮಿಯಲ್ಲಿಯೇ ಪ್ರಸಿದ್ಧವಾಗಿದೆ.

೨೦. ಎಲೈ ಮಹಾಭಾಗನೇ! ಅಲ್ಲಿ ಸ್ನಾನಮಾಡಿದ ನರರು ಪಾಪರಹಿತರಾಗುತ್ತಾರೆ. ವ್ರತಶೀಲನಾದ ಯಾವ ಧರ್ಮಾತ್ಮನು ಅಲ್ಲಿ ಸ್ನಾನಮಾಡುತ್ತಾನೆಯೋ ಅವನು ಹತ್ತು ಅಶ್ವಮೇಧಗಳನ್ನು ಮಾಡುವುದರಿಂದ ಯಾವ ಫಲವುಂಟಾಗುವುದೋ ಆ ಫಲವನ್ನು ಪಡೆಯುತ್ತಾನೆ.

೨೧. ಅಲ್ಲಿ ಯಾವನು ವೇದಪಾರಂಗತನಾದ ಬ್ರಾಹ್ಮಣರಿಗೆ ಸ್ವರ್ಣಾದಿಗಳನ್ನು ದಾನಮಾಡುವನೋ ಅವನು ಶುಭಕರವಾದ ಗತಿಯನ್ನೈದುತ್ತಾನೆ. ಅಲ್ಲದೆ ಅಗ್ನಿಯಂತೆ ದಿವ್ಯತೇಜದಿಂದ ಬೆಳಗುತ್ತಾನೆ.''

೨೨–೨೪. ತಿಲೋದಕೀಸರಯೂನದಿಗಳ ಲೋಕಪ್ರಸಿದ್ಧವಾದ ಸಂಗಮಸ್ಥಾನದಲ್ಲಿ ವಿಧಿಪೂರ್ವಕವಾಗಿ ಅನ್ನದಾನ ಮಾಡಿದವನು ಮತ್ತೆ ಎಂದಿಗೂ ಹುಟ್ಟಿ ಬರುವುದಿಲ್ಲವು. ಯಾವ ಮಾನವನು ಆ ಸಂಗಮದಲ್ಲಿ ಉಪವಾಸಮಾಡಿ ಬ್ರಾಹ್ಮಣರಿಗೆ ಸಂತರ್ಪಣೆ ಮಾಡುವನೋ ಅವನು ಸೌತ್ರಾಮಣಿಯಜ್ಞದ ಫಲವನ್ನು ಪಡೆಯುತ್ತಾನೆ. ಯಾವನು ವ್ರತನಿಷ್ಠನಾಗಿ ಒಂದು ತಿಂಗಳವರೆಗೂ ಒಪ್ಪೊತ್ತು ಮಾತ್ರ ಊಟಮಾಡುತ್ತಿರುತ್ತಾನೆಯೋ ಅವನು ಜೀವಾವಧಿ ಮಾಡಿದ ಪಾಪವೆಲ್ಲವೂ ತಕ್ಷಣವೇ ನಾಶವಾಗುತ್ತದೆ.

೨೫–೨೮. ಭಾದ್ರಪದಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿನ ಅಲ್ಲಿ

ಸಿಂಧುಜಾನಾಂ ತುರಂಗಾಣಾಂ ಜಲಪಾನಾಯ ಸುವ್ರತ ।
ತಿಲವಚ್ಛ್ಯಾಮಮುದಕಂ ಯತಸ್ತಸ್ಯಾಂ ಸದಾ ಬಭೌ ॥ ೨೬ ॥
ತಿಲೋದಕೀತಿ ವಿಖ್ಯಾತಾ ಪುಣ್ಯತೋಯಾ ಸದಾ ನದೀ ।
ಸಂಗಮಾದನ್ಯತೋ ಯಸ್ಯಾಂ ತಿಲೋದಕ್ಯಾಂ ಶುಚಿವ್ರತಃ ।
ಸ್ನಾತೋ ವಿಮುಚ್ಯತೇ ಪಾಪೈಃ ಸಪ್ತಜನ್ಮಾರ್ಜಿತೈರಪಿ ॥ ೨೭ ॥
ತಸ್ಮಾತ್ತಿಲೋದಕೀಸ್ನಾನಂ ಸರ್ವಪಾಪಹರಂ ಮುನೇ ।
ಕರ್ತವ್ಯಂ ಸುಪ್ರಯತ್ನೇನ ಪ್ರಾಣಿಭಿರ್ಧರ್ಮಕಾಂಕ್ಷಿಭಿಃ ।
ಸ್ನಾನಂ ದಾನಂ ವ್ರತಂ ಹೋಮಂ ಸರ್ವಮಕ್ಷಯತಾಂ ವ್ರಜೇತ್॥ ೨೮ ॥
ಇತಿ ವಿವಿಧ ವಿಧಾನೈಸ್ತೀರ್ಥಯಾತ್ರಾಂ ಕ್ರಮೇಣ
ಪ್ರಥಿತಗುಣವಿಕಾಸಃ ಪ್ರಾಪ್ತಪುಣ್ಯೋ ವಿಧಾಯ ।
ಹರಿಮುಪಹೃತಭಾವಃ ಪೂಜಯನ್ ಸರ್ವತೀರ್ಥಂ
ವ್ರಜತಿ ಪರಮಧಾಮ ನ್ಯಸ್ತಪಾಪಃ ಕಥಂಚಿತ್ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ " ತಿಲೋದಕೀಪ್ರಭಾವ ವರ್ಣನಂ "ನಾಮ ಪಂಚಮೋಽಧ್ಯಾಯಃ

---

ವಾರ್ಷಿಕವಾದ ಜಾತ್ರೆಯು ನಡೆಯುತ್ತದೆ. ಪೂರ್ವದಲ್ಲಿ ಬೇರೊಂದು ಸಿಂಧುವೋ ಎಂಬಂತೆ ರಾಮನಿಂದ ಈ ನದಿಯು ಸಿಂಧುವಿನಲ್ಲಿ ಹುಟ್ಟಿದ ಕುದುರೆಗಳು ನೀರು ಕುಡಿಯುವುದಕ್ಕಾಗಿ ನಿರ್ಮಿತವಾಯಿತು. ಅದರಲ್ಲಿ ನೀರು ಯಾವಾಗಲೂ ತಿಲದಂತೆ ಕಪ್ಪಾಗಿರುವುದು. ಆ ಕಾರಣದಿಂದ ಪುಣ್ಯಜಲವುಳ್ಳ ಆ ನದಿಯು 'ತಿಲೋದಕೀ' ಎಂದು ವಿಖ್ಯಾತವಾಗಿರುವುದು. ಶುಚಿವ್ರತನಾದವನು ಈ ಸಂಗಮಸ್ಥಳದಲ್ಲಲ್ಲದೆ ಬೇರೆ ಕಡೆಯಲ್ಲಿಯೂ ಸಹ ತಿಲೋದಕಿಯಲ್ಲಿ ಸ್ನಾನ ಮಾಡುವುದರಿಂದ ಏಳು ಜನ್ಮಾಂತರಗಳಲ್ಲಿ ಸಂಪಾದಿಸಿರುವ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಆದುದರಿಂದ, ಎಲೈ ಮುನಿಯೇ! ತಿಲೋದಕೀ ಸ್ನಾನವು ಸರ್ವಪಾಪಪರಿಹಾರಕವೆನಿಸಿರುವುದು. ಧರ್ಮವನ್ನು ಅಪೇಕ್ಷಿಸುವ ಪ್ರಾಣಿಗಳು ಪ್ರಯತ್ನಪಟ್ಟು ಸ್ನಾನ, ದಾನ, ವ್ರತ, ಹೋಮಗಳನ್ನು ಈ ನದಿಯ ತೀರದಲ್ಲಿಯೆ ನಡಸಬೇಕು. ಇವೆಲ್ಲವೂ ಅಲ್ಲಿ ಅಕ್ಷಯವಾಗುವುವು.

೨೯. ಈ ರೀತಿಯಾಗಿ ವಿವಿಧ ವಿಧಾನಗಳಿಂದ ಕ್ರಮವಾಗಿ ತೀರ್ಥಯಾತ್ರೆಯನ್ನು ಮಾಡಿ, ಗುಣವಿಕಾಸವನ್ನೂ ಪಡೆದು ಪುಣ್ಯವನ್ನು ಸಂಪಾದಿಸಿ ಹರಿಯನ್ನು ಪೂಜಿಸುವವನು ಪಾಪಗಳೆಲ್ಲವನ್ನೂ ಪರಿಹಾರಮಾಡಿಕೊಂಡು ಪರಮಪದಕ್ಕೆ ಹೋಗಿ ಸೇರುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ತಿಲೋದಕೀಪ್ರಭಾವವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಠೋಽಧ್ಯಾಯಃ

## ಸ್ವರ್ಗದ್ವಾರ—ಗೋಪ್ರತಾರತೀರ್ಥಮಾಹಾತ್ಮ್ಯವರ್ಣನಂ

ಅಗಸ್ತ್ಯ ಉವಾಚ :—

**ತಸ್ಮಾತ್ಸಂಗಮತೋ ವಿಪ್ರ ಪಶ್ಚಿಮೇ ದಿಕ್ತಟೇ ಸ್ಥಿತಂ ।**
**ಸೀತಾಕುಂಡಮಿತಿ ಖ್ಯಾತಂ ಸರ್ವಕಾಮಫಲಪ್ರದಂ ॥ ೧ ॥**
**ಯತ್ರ ಸ್ನಾತ್ವಾ ನರೋ ವಿಪ್ರ ಸರ್ವಪಾಪೈಃ ಪ್ರಮುಚ್ಯತೇ ।**
**ಸೀತಯಾಃ ಕಿಲ ತತ್ಕುಂಡಂ ಸ್ವಯಮೇವ ವಿನಿರ್ಮಿತಂ ।**
**ರಾಮೇಣ ವರದಾನಾಚ್ಚ ಮಹಾಫಲನಿಧೀಕೃತಂ ॥ ೨ ॥**

ಶ್ರೀರಾಮ ಉವಾಚ :—

**ಶೃಣು ಸೀತೇ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಭುವಿ ಯಾದೃಶಂ ।**
**ತ್ವತ್ಕುಂಡಸ್ಯಾಸ್ಯ ಸುಭಗೇ ತ್ವತ್ಪ್ರೀತ್ಯಾ ಕಥಯಾಮ್ಯಹಂ ॥ ೩ ॥**
**ಅತ್ರ ಸ್ನಾನಂ ಚ ದಾನಂ ಚ ಜಪೋ ಹೋಮಸ್ತಪೋಽಥವಾ ।**
**ಸರ್ವಮಕ್ಷಯತಾಂ ಯಾತಿ ವಿಧಾನೇನ ಶುಚಿಸ್ಮಿತೇ ॥ ೪ ॥**

---

## ಕನ್ನಡದ ಅನುವಾದ

### ಸ್ವರ್ಗದ್ವಾರ—ಗೋಪ್ರತಾರತೀರ್ಥಮಾಹಾತ್ಮ್ಯವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಎಲೈ ವಿಪ್ರನೇ! ಆ ಸಂಗಮಕ್ಕೆ ಪಶ್ಚಿಮದಿಕ್ಕಿನಲ್ಲಿ ಸೀತಾಕುಂಡವೆಂದು ಪ್ರಖ್ಯಾತವಾಗಿರುವ ತೀರ್ಥವೊಂದಿರುವುದು. ಅದು ಸರ್ವಕಾಮಫಲಗಳನ್ನು ನೀಡುವಂಥದು.

೨. ಅಲ್ಲಿ ಸ್ನಾನಮಾಡಿದ ನರನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಆ ಕುಂಡವು ಸೀತಾದೇವಿಯಿಂದಲೇ ಸಾಕ್ಷಾತ್ತಾಗಿ ನಿರ್ಮಿತವಾಯಿತು. ಶ್ರೀರಾಮನು ವರಗಳನ್ನು ಕೊಟ್ಟು ಅದನ್ನು ಮಹಾಫಲಗಳಿಗೆ ನಿಧಿಯನ್ನಾಗಿ ಮಾಡಿದನು.

೩. ಶ್ರೀರಾಮನು ಹೇಳುತ್ತಾನೆ:—"ಎಲೌ ಸೀತೇ! ಕೇಳು; ನಿನ್ನ ಹೆಸರಿನಿಂದ ಶೋಭಿಸುತ್ತಿರುವ ಈ ಕುಂಡದ ಮಾಹಾತ್ಮ್ಯವು ಭೂಮಿಯಲ್ಲಿ ಯಾವ ರೀತಿಯದೆಂಬುದನ್ನು ಹೇಳುತ್ತೇನೆ. ಎಲೆ ಸುಭಗೇ! ನಿನ್ನಲ್ಲಿರುವ ಪ್ರೀತಿಯಿಂದ ಇದನ್ನು ನಾನು ಹೇಳುತ್ತೇನೆ.

೪. ಎಲೆ ಶುಚಿಸ್ಮಿತೆಯೇ! ಇಲ್ಲಿ ಸ್ನಾನ, ದಾನ, ಜಪ, ಹೋಮ ಅಥವಾ ತಪಸ್ಸು ಮುಂತಾದುವನ್ನು ವಿಧಾನವನ್ನನುಸರಿಸಿ ಮಾಡಿದರೆ ಎಲ್ಲವೂ ಅಕ್ಷಯವಾಗುತ್ತದೆ.

ಮಾರ್ಗಕೃಷ್ಣ ಚತುರ್ದಶ್ಯಾಂ ತತ್ರ ಸ್ನಾನಂ ವಿಶೇಷತಃ ।
ಸರ್ವಪಾಪಹರಂ ದೇವಿ ಸರ್ವದಾ ಸ್ನಾಯಿನಾಂ ನೃಣಾಂ ॥ ೫ ॥
ಇತಿ ರಾಮೋ ವರಂ ಪ್ರಾದಾತ್ ಸೀತಾಯೈ ಚ ಪ್ರಜಾಪ್ರಿಯಃ ।
ತದಾ ಪ್ರಭೃತಿ ಸರ್ವತ್ರ ತತ್ತೀರ್ಥಂ ಭುವಿ ವರ್ತತೇ ॥ ೬ ॥
ಸೀತಾಕುಂಡಮಿತಿ ಖ್ಯಾತಂ ಜನಾನಾಂ ಪರಮಾದ್ಭುತಂ ।
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ನೂನಂ ರಾಮಮವಾಪ್ನುಯಾತ್ ॥ ೭ ॥
ತತ್ರ ಸ್ನಾನೇನ ದಾನೇನ ತಪಸಾ ಚ ವಿಶೇಷತಃ ।
ಗಂಧೈರ್ಮಾಲ್ಯೈರ್ಧೂಪದೀಪೈರ್ನಾನಾವಿಭವವಿಸ್ತರೈಃ ।
ರಾಮಂ ಸಂಪೂಜ್ಯ ಸೀತಾಂ ಚ ಮುಕ್ತಃ ಸ್ಯಾನ್ನಾತ್ರ ಸಂಶಯಃ ॥ ೮ ॥
ಮಾರ್ಗೇ ಮಾಸಿ ಚ ಸ್ನಾತವ್ಯಂ ಗರ್ಭವಾಸೋ ನ ಜಾಯತೇ ।
ಅನ್ಯದಾಪಿ ನರಃ ಸ್ನಾತ್ವಾ ವಿಷ್ಣುಲೋಕಂ ಸ ಗಚ್ಛತಿ । ॥ ೯ ॥
ವಿಭೋರ್ವಿಷ್ಣುಹರೇರ್ವಿಪ್ರ ರಮ್ಯೇ ಪಶ್ಚಿಮದಿಕ್ತಟೇ ।
ದೇವಶ್ಚಕ್ರಹರಿರ್ನಾಮ ಸರ್ವಾಭೀಷ್ಟಫಲಪ್ರದಃ ॥ ೧೦ ॥

---

೫. ದೇವೀ! ಇಲ್ಲಿ ಮಾನವರಿಗೆ ಮಾರ್ಗಶಿರಕೃಷ್ಣಚತುರ್ದಶೀ ದಿನದ ಸ್ನಾನವು ವಿಶೇಷರೀತಿಯಿಂದ ಸರ್ವಪಾಪಪರಿಹಾರಕವಾಗುತ್ತದೆ.''

೬–೭. ಪ್ರಜಾಪ್ರಿಯನಾದ ರಾಮನು ಸೀತೆಗೆ ಹೀಗೆ ವರವನ್ನು ಕೊಟ್ಟನು. ಅಂದಿನಿಂದಲೂ ಆ ತೀರ್ಥವು ಭೂಮಿಯಲ್ಲಿ ಎಲ್ಲ ಕಡೆಯೂ ಸೀತಾಕುಂಡವೆಂದು ಪ್ರಖ್ಯಾತವಾಗಿ ಜನರಿಗೆ ಪರಮಾದ್ಭುತವಾಗಿ ಮೆರೆಯುತ್ತಿದೆ. ಆ ತೀರ್ಥದಲ್ಲಿ ಸ್ನಾನಮಾಡಿದ ನರನು ನಿಶ್ಚಯವಾಗಿಯೂ ಶ್ರೀರಾಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ.

೮. ಅಲ್ಲಿಯ ಸ್ನಾನದಿಂದಲೂ, ದಾನದಿಂದಲೂ, ವಿಶೇಷವಾಗಿ ತಪಸ್ಸಿನಿಂದಲೂ, ಗಂಧಮಾಲ್ಯಧೂಪದೀಪಗಳಿಂದಲೂ, ನಾನಾವೈಭವವಿಸ್ತಾರಗಳಿಂದಲೂ ಶ್ರೀರಾಮನನ್ನೂ, ಸೀತೆಯನ್ನೂ ಪೂಜಿಸಿದ ಮಾನವನು ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲವು.

೯. ಮಾರ್ಗಶಿರಮಾಸದಲ್ಲಿ ಅಲ್ಲಿ ಸ್ನಾನಮಾಡಿದವರಿಗೆ ಮತ್ತೆ ಗರ್ಭವಾಸವುಂಟಾಗುವುದಿಲ್ಲ. ಬೇರೆ ಕಾಲಗಳಲ್ಲಿಯೂ ಅಲ್ಲಿ ಸ್ನಾನಮಾಡಿದವನು ವಿಷ್ಣುಲೋಕಕ್ಕೆ ಹೋಗುತ್ತಾನೆ.

೧೦. ಎಲೈ ವಿಪ್ರನೇ! ವಿಭುವಾದ ವಿಷ್ಣುಹರಿಯಿರುವೆಡೆಗೆ ಪಶ್ಚಿಮದಿಕ್ಕಿನ ರಮ್ಯಪ್ರದೇಶದಲ್ಲಿ ಸರ್ವಾಭೀಷ್ಟಫಲಪ್ರದನಾದ ಚಕ್ರಹರಿಯೆಂಬ ದೇವನು ನೆಲಸಿದ್ದಾನೆ.

ತಸ್ಯ ಚಕ್ರಹರೇರ್ವಿಪ್ರ ಮಹಿಮಾ ನ ಹಿ ಮಾನವೈಃ ।
ಶಕ್ಯೋ ವರ್ಣಯಿತುಂ ಧೀರೈರಪಿ ಬುದ್ಧಿಮತಾಂ ವರೈಃ ॥ ೧೧ ॥
ತತಃ ಪಶ್ಚಿಮದಿಗ್ಭಾಗೇ ನಾಮ್ನಾ ಪುಣ್ಯಂ ಹರಿಸ್ಮೃತೀ ।
ವಿಷ್ಣೋರಾಯತನಂ ಖ್ಯಾತಂ ಪರಮಾರ್ಥಫಲಪ್ರದಂ ।
ಯಸ್ಯ ದರ್ಶನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೧೨ ॥
ತಯೋರ್ದರ್ಶನತೋ ಯಾಂತಿ ತೇಷಾಂ ಪಾಪಾನಿ ದೇಹಿನಾಂ ।
ತಾನಿ ಪಾಪಾನಿ ಯಾವಂತಿ ಕುರ್ವಂತೇ ಭುವಿ ಯೇ ನರಾಃ ॥ ೧೩ ॥
ಪುರಾ ದೇವಾಸುರೇ ಜಾತೇ ಸಂಗ್ರಾಮೇ ಭೃಶದಾರುಣೇ ।
ದೈತ್ಯೈರ್ವರಮದೋತ್ಸಿಕ್ತೈರ್ದೇವಾ ಯುಧಿ ಪರಾಜಿತಾಃ ॥ ೧೪ ॥
ತೇಷಾಂ ಪಲಾಯಮಾನಾನಾಂ ದೇವಾನಾಮಗ್ರಣೀರ್ಹರಃ ।
ಸಂಸ್ತಭ್ಯ ಚೈವ ತಾನ್ ಸರ್ವಾನ್ ಪುರಸ್ಕೃತ್ಯಾಂಬುಜಾಸನಂ ॥ ೧೫ ॥
ಕ್ಷೀರೋದಶಾಯಿನಂ ವಿಷ್ಣುಂ ಶೇಷಪರ್ಯಂಕಶಾಯಿನಂ ।
ಲಕ್ಷ್ಮ್ಯೋಪವಿಷ್ಟಂ ಪಾರ್ಶ್ವೇ ಚ ಚರಣಾಂಬುಜಹಸ್ತಯಾ ॥ ೧೬ ॥

---

೧೧. ಆ ಚಕ್ರಹರಿಯ ಮಹಿಮೆಯನ್ನು ವರ್ಣಿಸುವುದಕ್ಕೆ ಯಾವ ಮಾನವರಿಗೂ, ಬುದ್ಧಿವಂತರಲ್ಲಿ ಉತ್ತಮರೆನಿಸಿದ ಧೀರರಿಗೂ ಶಕ್ಯವಲ್ಲವು.

೧೨. ಅಲ್ಲಿಂದ ಪಶ್ಚಿಮದಿಕ್ಕಿನಲ್ಲಿ 'ಹರಿಸ್ಮೃತಿ'ಯೆಂಬ ಹೆಸರಿನಿಂದೊಪ್ಪುವ ಪುಣ್ಯಕರವಾದ ವಿಷ್ಣುದೇವಾಲಯವಿರುವುದು. ಅದು ಪರಮಾರ್ಥ ಫಲವನ್ನು ನೀಡುವುದೆಂದು ಪ್ರಸಿದ್ಧವಾಗಿದೆ. ಆದರ ದರ್ಶನಮಾತ್ರದಿಂದಲೇ ನರನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೩. ಭೂಲೋಕದಲ್ಲಿ ದೇಹಧಾರಿಗಳಾದ ಯಾವ ಮಾನವರೇ ಆದರೂ ಎಷ್ಟೆಷ್ಟು ಪಾಪಗಳನ್ನು ಮಾಡುವರೋ ಆ ಪಾಪಗಳೆಲ್ಲವೂ ಚಕ್ರಹರಿ ಮತ್ತು ಹರಿಸ್ಮೃತಿ ವಿಷ್ಣುಗಳ ದರ್ಶನದಿಂದ ನಾಶವಾಗಿಹೋಗುತ್ತದೆ.

೧೪. ಪೂರ್ವದಲ್ಲಿ ದೇವಾಸುರರಿಗೆ ಬಹು ದಾರುಣವಾದ ಯುದ್ಧವು ನಡೆಯುತ್ತಿರುವಲ್ಲಿ ವರದ ಮದದಿಂದ ಗರ್ವಿತರಾದ ದೈತ್ಯರು ದೇವತೆಗಳನ್ನು ಪರಾಜಯಗೊಳಿಸಿದರು.

೧೫–೧೬. ಆಗ ಪಲಾಯನಮಾಡುತ್ತಿದ್ದ ಆ ದೇವತೆಗಳಿಗೆಲ್ಲ ಮುಂದಾಳಾದ ಹರನು ಅವರೆಲ್ಲರನ್ನೂ ತಡೆದು ನಿಲ್ಲಿಸಿ ಅವರೆಲ್ಲರೊಡನೆ ಅಂಬುಜಾಸನನಾದ ಬ್ರಹ್ಮನನ್ನು ಮುಂದುಮಾಡಿಕೊಂಡು ಕ್ಷೀರಸಮುದ್ರದಲ್ಲಿ ಶೇಷಪರ್ಯಂಕದ ಮೇಲೆ ಮಲಗಿರುವ ಮಹಾವಿಷ್ಣುವನ್ನು ಶರಣುಹೋದನು. ಶ್ರೀಮಹಾವಿಷ್ಣುವಿನ ಪಕ್ಕದಲ್ಲಿ ಲಕ್ಷ್ಮಿಯು ಅವನ ಚರಣಾಂಬುಜವನ್ನು ಕೈಯಲ್ಲಿ ಹಿಡಿದು ಸೇವೆ ಸಲ್ಲಿಸುತ್ತ ಕುಳಿತಿದ್ದಳು.

**ನಾರದಾದ್ಯೈರ್ಮುನಿವರ್ಯೈರುದ್ಗೀತಗುಣಗೌರವಂ ।**
**ಗರುಡೇನ ಪುರಸ್ಥೇನಾನಿಶಮಂಜಲಿನಾ ಸ್ತುತಂ ॥ ೧೭ ॥**
**ಕ್ಷೀರಾಬ್ಧಿಜಲಕಲ್ಲೋಲಮುದಬಿಂದ್ವಂಕಿತಾಂಬರಂ ।**
**ತಾರಕೋತ್ಕರವಿಸ್ಫಾರತಾರಹಾರವಿರಾಜಿತಂ ॥ ೧೮ ॥**
**ಪೀತಾಂಬರಮತಿಸ್ಮೇರವಿಕಸದ್ಭಾವಭಾವಿತಂ ।**
**ಬಿಭ್ರತಂ ಕುಂಡಲಂ ಸ್ಥೂಲಂ ಕರ್ಣಾಭ್ಯಾಂ ಮೌಕ್ತಿಕೋಜ್ಜ್ವಲಂ ॥ ೧೯ ॥**
**ರತ್ನವಲ್ಲೀಮಿವ ಸ್ವಚ್ಛಾಂ ಶ್ವೇತದ್ವೀಪನಿವಾಸಿನೀಂ ।**
**ಕಿರೀಟಂ ಪದ್ಮರಾಗಾಣಾಂ ವಲಯಂ ದಧತಂ ಪರಂ ॥ ೨೦ ॥**
**ಮಿತ್ರಸ್ಯ ರಾಹುವಿತ್ರಾಸ ನಿವರ್ತನಮಿವಾಪರಂ ।**
**ಸ ಕೌಸ್ತುಭಪ್ರಭಾಚಕ್ರಂ ಬಿಭ್ರಾಣಂ ಪ್ರವಲಾರುಣಂ ॥ ೨೧ ॥**
**ಪರಾಂ ಚತುರ್ಮುಖೋತ್ಪತ್ತಿಕಲ್ಪಸಂಕಲ್ಪನಾಮಿವ ।**
**ಶರಣಂ ಸ ಜಗಾಮಾಶು ವಿನೀತಾತ್ಮಾ ಸ್ತುವನ್ನಿತಿ ॥ ೨೨ ॥**

---

೧೭. ನಾರದಾದಿ ಮುನಿಶ್ರೇಷ್ಠರು ಆ ಭಗವಂತನ ಗುಣಗೌರವವನ್ನು ಗಟ್ಟಿಯಾಗಿ ಗಾನಮಾಡುತ್ತಿದ್ದರು. ಗರುಡನು ಎದುರಿಗೆ ನಿಂತು ಸದಾ ಅಂಜಲಿ ಬದ್ಧನಾಗಿ ಆ ಸ್ವಾಮಿಯನ್ನು ಸ್ತುತಿಸುತ್ತಿದ್ದನು.

೧೮–೧೯. ಅವನು ಧರಿಸಿದ್ದ ಪೀತಾಂಬರವು ಕ್ಷೀರಸಮುದ್ರದ ತೆರೆಗಳ ಮುದಜಲಬಿಂದುಗಳಿಂದ ಅಂಕಿತವಾಗಿದ್ದಿತು. ನಕ್ಷತ್ರಸಮೂಹದಂತೆ ಥಳಥಳನೆ ಹೊಳೆಯುವ ದೊಡ್ಡದೊಡ್ಡ ಮುತ್ತುಗಳ ಹಾರದಿಂದ ಆತನು ವಿರಾಜಿಸುತ್ತಿದ್ದನು. ಆತನು ಮುಗಳುನಗೆಯನ್ನು ಚೆಲ್ಲಿ ಬೆಳಗುತ್ತಿರುವುದೋ ಎಂಬಂತೆ ಪ್ರಕಾಶಿಸುವ ಪೀತಾಂಬರವನ್ನುಟ್ಟಿದ್ದನು. ಕಿವಿಗಳಲ್ಲಿ ಮುತ್ತಿನಿಂದ ಉಜ್ಜ್ವಲವಾಗಿ ಹೊಳೆಯುತ್ತಿದ್ದ ದಪ್ಪವಾದ ಕುಂಡಲಗಳನ್ನು ಧರಿಸಿದ್ದನು.

೨೦. ಶ್ವೇತದ್ವೀಪದಲ್ಲಿ ಬೆಳೆದು ಹಬ್ಬಿರುವ ಸ್ವಚ್ಛವಾದ ರತ್ನದ ಬಳ್ಳಿಯನ್ನೋ ಎಂಬಂತೆ ಪದ್ಮರಾಗಗಳ ಬಳೆಯಿಂದ ಕೂಡಿದ ಅತ್ಯಂತ ಶ್ರೇಷ್ಠವಾದ ಕಿರೀಟವನ್ನು ಧರಿಸಿದ್ದನು.

೨೧. ಸೂರ್ಯನಿಗೆ ರಾಹುವಿನಿಂದುಂಟಾದ ಭಯವನ್ನು ನಿವಾರಣೆಮಾಡುವ ಹೊಸದೊಂದು ಸಾಧನವೋ ಎಂಬಂತೆ ಮೆರೆಯುವ ಹವಳದಂತೆ ಅರುಣ ವರ್ಣವನ್ನು ತಳೆದ ಕೌಸ್ತುಭರತ್ನದ ಪ್ರಭೆಯಿಂದೊಡಗೂಡಿದ ಚಕ್ರವನ್ನು ಧರಿಸಿದ್ದನು.

೨೨. ಚತುರ್ಮುಖ(ಬ್ರಹ್ಮ)ನ ಶ್ರೇಷ್ಠವಾದ ಸೃಷ್ಟಿಸಂಕಲ್ಪವೋ ಎಂಬಂತೆ ಬೆಳಗುತ್ತಿದ್ದ ಆ ಮಹಾವಿಷ್ಣುವನ್ನು ಪರಮೇಶ್ವರನು ವಿನಯದಿಂದ ಸ್ತೋತ್ರ ಮಾಡುತ್ತಾ ಬಳಿಸಾರಿ ಶರಣುಹೋದನು.

ತಸ್ಮಿನ್ನವಸರೇ ಶಂಭುಃ ಸರ್ವದೇವಗಣೈಃ ಸಹ ।
ತುಷ್ಟಾವ ಪ್ರಯತೋ ಭೂತ್ವಾ ವಿಷ್ಣುಂ ಜಿಷ್ಣುಂ ಸುರದ್ವಿಷಾಂ ॥ ೨೩ ॥
ಈಶ್ವರ ಉವಾಚ:—
ಸಂಸಾರಾರ್ಣವಸಂತಾರ ಸುಪರ್ಣಸುಖದಾಯಿನೇ ।
ಮೋಹತೀವ್ರತಮೋಹಾರಿ ಚಂದ್ರಾಯ ಹರಯೇ ನಮಃ ॥ ೨೪ ॥
ಸ್ಫುರತ್ಸಂವಿನ್ಮಣಿನಿಭಾಂ ಚಿತ್ತಸಂಗತಿಚಂದ್ರಿಕಾಂ ।
ಪ್ರಪದ್ಯೇ ಭಗವದ್ಭಕ್ತಿಮಾನಸೋದ್ಯಾನವಾಹಿನೀಂ ॥ ೨೫ ॥
ಹೇಲೋಲ್ಲಸತ್ಸಮುತ್ಸಾಹಶಕ್ತಿಂ ವ್ಯಾಪ್ತಜಗತ್ತ್ರಯಾಂ ।
ಯಾ ಪೂರ್ವಕೋಟಿರ್ಭಾವಾನಾಂ ಸತ್ತ್ವಾನಾಂ ವೈಷ್ಣವೀತಿ ವಾ ॥೨೬॥
ಪವನಾಂದೋಲಿತಾಂಭೋಜದಲಪರ್ವತವರ್ತಿನಾಂ ।
ಪತತಾಮಿವ ಜಂತೂನಾಂ ಸ್ಥೈರ್ಯನೌಕಾ ಹರಿಸ್ಮೃತಿಃ ॥ ೨೭ ॥
ನಮಃ ಸೂರ್ಯಾತ್ಮನೇ ತುಭ್ಯಂ ಸಂವಿತ್ಕಿರಣಮಾಲಿನೇ ।
ಹೃತ್ಕುಶೇಶಯಕೋಶಶ್ರೀಸಮುನ್ಮೇಷವಿಧಾಯಿನೇ ॥ ೨೮ ॥

---

೨೩. ಆ ಸಮಯದಲ್ಲಿ ಶಂಭುವು ಸರ್ವದೇವಗಣಗಳೊಡಗೂಡಿ ಪರಿಶುದ್ಧಾತ್ಮನಾಗಿ ಸುರವೈರಿಗಳನ್ನು ಗೆಲ್ಲುವವನಾದ ಆ ವಿಷ್ಣುವನ್ನು ಸ್ತೋತ್ರಮಾಡಿದನು.

೨೪. ಈಶ್ವರನು ಸ್ತುತಿಸುತ್ತಾನೆ:—"ಸಂಸಾರಸಮುದ್ರವನ್ನು ದಾಟಿಸುವವನೂ, ಗರುಡನಿಗೆ ಸುಖವನ್ನುಂಟುಮಾಡಿದವನೂ, ಮೋಹವೆಂಬ ತೀವ್ರವಾದ ಕತ್ತಲೆಯನ್ನು ಪರಿಹರಿಸುವ ಚಂದ್ರನಂತಿರುವವನೂ ಆದ ಶ್ರೀಹರಿಗೆ ನಮಸ್ಕಾರವು!

೨೫. ಥಳಥಳಿಸಿ ಹೊಳೆಯುತ್ತಿರುವ ಜ್ಞಾನರತ್ನದ ಬೆಳಕಿನ ಕುಡಿಯೂ, ಚಿತ್ತದಲ್ಲಿ ಅಡಗಿರುವ ಬೆಳದಿಂಗಳೂ, ಭಗವದ್ಭಕ್ತಿಯೆಂಬ ಮಾನಸೋದ್ಯಾನದಲ್ಲಿ ಹರಿಯುವ ಪ್ರವಾಹವೂ ಆದ ಓ ಶ್ರೀಹರಿಯೇ! ನಿನ್ನನ್ನು ಮರೆಹೋಗುತ್ತೇನೆ.

೨೬–೨೭. ಯಾವುದು ಸಮಸ್ತಸತ್ತ್ವಗಳ ಭಾವಗಳಿಗೂ ಮೂಲವೋ, ಯಾವುದು ಮೂರು ಲೋಕಗಳನ್ನೂ ವ್ಯಾಪಿಸಿಕೊಂಡಿರುವುದೋ, ಯಾವುದು ಲೀಲೆಯಿಂದ ಉಲ್ಲಾಸಹೊಂದುತ್ತಿರುವ ಉತ್ಸಾಹಶಕ್ತಿಯೋ ಆ ವೈಷ್ಣವೀ ಶಕ್ತಿಗೆ ನಾನು ಶರಣುಹೋಗುತ್ತೇನೆ! ಗಾಳಿಯಿಂದ ಅಲುಗಾಡುತ್ತಿರುವ ತಾವರೆಯ ದಳದ ಪರ್ವದ ಒಳಗಿದ್ದು ಆ ಅಲುಗಾಟದಿಂದ ಕೆಳಗೆ ಬೀಳುತ್ತಿರುವಂತಿರುವುವಾದ ಜಂತುಗಳಿಗೆ ಸ್ಥೈರ್ಯಕೊಡುವುದು ಶ್ರೀಹರಿಸ್ಮೃತಿಯೊಂದೇ.

೨೮. ಜ್ಞಾನಸ್ವರೂಪವಾದ ಕಿರಣಮಾಲೆಯನ್ನು ತಳೆದು ಹೃದಯಸ್ವರೂಪವಾದ ಕಮಲದ ಮೊಗ್ಗಿನ ಸೌಂದರ್ಯವನ್ನು ಹಿಗ್ಗಿಸಿ ಅರಳಿಸುವ ಸೂರ್ಯಸ್ವರೂಪನಾದ ಓ ಸ್ವಾಮಿಯೇ! ನಿನಗೆ ನಮಸ್ಕಾರವು.

**ನಮಸ್ತಸ್ಮೈ ಯಮವತೇ ಯೋಗಿನಾಂ ಗತಯೇ ಸದಾ ।**
**ಪರಮೇಶಾಯ ವೈ ಪಾರೇ ಮಹಸಾಂ ತಮಸಾಂ ತಥಾ ॥ ೨೯ ॥**
**ಯಜ್ಞಾಯ ಭುಕ್ತಹವಿಷಾ ಋಗ್ಯಜುಃಸಾಮರೂಪಿಣೇ ।**
**ನಮಃ ಸರಸ್ವತೀಗೀತದಿವ್ಯಸದ್ಗುಣಶಾಲಿನೇ ॥ ೩೦ ॥**
**ಶಾಂತಾಯ ಧರ್ಮನಿಲಯೇ ಕ್ಷೇತ್ರಜ್ಞಾಯಾಮೃತಾತ್ಮನೇ ।**
**ಶಿಷ್ಯಯೋಗ ಪ್ರತಿಷ್ಠಾಯ ನಮೋ ಜೀವೈಕಹೇತವೇ ।**
**ಘೋರಾಯ ಮಾಯಾವಿಧಯೇ ಸಹಸ್ರಶಿರಸೇ ನಮಃ ॥ ೩೧ ॥**
**ಯೋಗನಿದ್ರಾತ್ಮನೇ ನಾಭಿಪದ್ಮೋದ್ಭೂತಜಗತ್ಸೃಜೇ ।**
**ನಮಃ ಸಲಿಲರೂಪಾಯ ಕಾರಣಾಯ ಜಗತ್ಸ್ಥಿತೇಃ ॥ ೩೨ ॥**
**ಕಾರ್ಯಮೇಯಾಯ ಬಲಿನೇ ಜೀವಾಯ ಪರಮಾತ್ಮನೇ ।**
**ಗೋಪ್ತ್ರೇ ಪ್ರಾಣಾಯ ಭೂತಾನಾಂ ನಮೋ ವಿಶ್ವಾಯ ವೇಧಸೇ ॥೩೩॥**

---

೨೯. ಸಂಯಮಶೀಲನಾದ ಓ ಪ್ರಭುವೆ! ನಿನಗೆ ನಮಸ್ಕಾರವು! ಸದಾ ಕಾಲವೂ ಯೋಗಿಗಳಿಗೆ ಗತಿಸ್ವರೂಪನಾದ ನಿನಗೆ ನಮೋ ನಮಃ. ಮಹಸ್ಸನ್ನೂ ತಮಸ್ಸನ್ನೂ ಮೀರಿ ಅದಕ್ಕೂ ಆಚೆಗಿರುವವನಾದ ಪರಮೇಶ್ವರಾ! ನಿನಗೆ ನಮಸ್ಕಾರವು.

೩೦. ಯಜ್ಞಸ್ವರೂಪಿಯೂ, ಹವಿಸ್ಸನ್ನು ಸ್ವೀಕರಿಸಿ ಭುಜಿಸುವವನೂ ಆದ ಓ ಪ್ರಭುವೇ! ನಿನಗೆ ನಮಸ್ಕಾರವು. ಋಕ್, ಯಜುಸ್, ಸಾಮಗಳ ಸ್ವರೂಪಿಯಾದ ನಿನಗೆ ನಮಸ್ಕಾರವು. ಸರಸ್ವತಿಯಿಂದ ಗಾನಮಾಡಲ್ಪಟ್ಟ ದಿವ್ಯವಾದ ಸದ್ಗುಣಗಳಿಂದ ಕೂಡಿದ ನಿನಗೆ ನಮಸ್ಕಾರವು.

೩೧. ಶಾಂತನೂ, ಧರ್ಮನಿಧಿಯೂ, ಕ್ಷೇತ್ರಜ್ಞನೂ, ಅಮೃತಾತ್ಮನೂ, ಶಿಷ್ಯರ ಯೋಗವನ್ನು ನೆಲೆಗೊಳಿಸುವವನೂ, ಜೀವನಿಗೆ ಏಕೈಕಕಾರಣಸ್ವರೂಪನೂ, ಘೋರರೂಪನೂ, ಮಾಯಾವಿಧಾನಕರ್ತನೂ, ಸಹಸ್ರಶಿರಸ್ಸುಗಳುಳ್ಳವನೂ ಆದ ಪರಮಾತ್ಮ! ನಿನಗೆ ನಮಸ್ಕಾರವು!

೩೨. ಯೋಗನಿದ್ರೆಯಲ್ಲಿ ಲೋಲನಾಗಿರುವವನೂ, ನಾಭಿಪದ್ಮದಿಂದ ಉದ್ಭವಿಸಿದ ಬ್ರಹ್ಮನ ಮೂಲಕ ಜಗತ್ತನ್ನು ಸೃಷ್ಟಿಮಾಡುವವನೂ, ಜಲರೂಪನಾದವನೂ, ಜಗತ್ತಿನ ಸ್ಥಿತಿಗೆ ಕಾರಣನೂ ಆದ ನಿನಗೆ ನಮೋ ನಮೋ.

೩೩. ವಿಹಿತವಾದ ಶಾಸ್ತ್ರೋಕ್ತಕರ್ಮಗಳಿಂದ ಮಾತ್ರವೇ ಇಂಥವನೆಂದು ತಿಳಿಯಲು ಸಾಧ್ಯನಾಗುವ ನಿನಗೆ ನಮಸ್ಕಾರವು! ಬಲಿಷ್ಠನೂ, ಜೀವಸ್ವರೂಪನೂ, ಪರಮಾತ್ಮನೂ, ಸರ್ವಲೋಕರಕ್ಷಕನೂ ಸಮಸ್ತಭೂತಗಳ ಪ್ರಾಣಸ್ವರೂಪನೂ ಆದ ನಿನಗೆ ನಮಸ್ಕಾರ. ಓ ವಿಶ್ವಸ್ವರೂಪಾ! ನಿನಗೆ ನಮೋ ನಮೋ! ಸೃಷ್ಟಿಕರ್ತನಾದ ನಿನಗೆ ನಮಸ್ಕಾರವು.

ದೃಪ್ತಾಯ ಸಿಂಹವಪುಷೇ ದೈತ್ಯಸಂಹಾರಕಾರಿಣೇ ।
ವೀರ್ಯಾಯಾನಂತ ಮನಸೇ ಜಗದ್ಭಾವಭೃತೇ ನಮಃ ॥ ೩೪ ॥
ಸಂಸಾರಕಾರಣಾಜ್ಞಾನಮಹಾಸಂತಮಸಚ್ಛಿದೇ ।
ಅಚಿಂತ್ಯಧಾಮ್ನೇ ಗುಹ್ಯಾಯ ರುದ್ರಾಯಾತ್ಯದ್ವಿಜೇ ನಮಃ ॥ ೩೫ ॥
ಶಾಂತಾಯ ಶಾಂತಕಲ್ಲೋಲಕೈವಲ್ಯಪದದಾಯಿನೇ ।
ಸರ್ವಭಾವಾತಿರಿಕ್ತಾಯ ನಮಃ ಸರ್ವಮಯಾತ್ಮನೇ ॥ ೩೬ ॥
ಇಂದೀವರದಲಶ್ಯಾಮಂ ಸ್ಫೂರ್ಜತ್ಕಿಂಜಲ್ಕವಿಭ್ರಮಂ ।
ಬಿಭ್ರಾಣಂ ಕೌಸ್ತುಭಂ ವಿಷ್ಣುಂ ನೌಮಿ ನೇತ್ರರಸಾಯನಂ ॥ ೩೭ ॥

ಅಗಸ್ತ್ಯ ಉವಾಚ :—

ಇತಿ ಸ್ತುತಃ ಪ್ರಸನ್ನಾತ್ಮಾ ವರದೋ ಗರುಡಧ್ವಜಃ ।
ವವರ್ಷ ದೃಷ್ಟಿಸುಧಯಾ ಸರ್ವಾನ್ ದೇವಾನ್ ಕೃಪಾನ್ವಿತಃ ।
ಉವಾಚ ಮಧುರಂ ವಾಕ್ಯಂ ಪ್ರಶ್ರಯಾವನತಾನ್ಸುರಾನ್ ॥ ೩೮ ॥

---

೩೪. ಮಹತ್ತಿಗೂ ಮಹತ್ತಾಗಿಸಿರುವ ಪರಬ್ರಹ್ಮನೂ, ಸಿಂಹಶರೀರವುಳ್ಳವನಾಗಿ ದೈತ್ಯರನ್ನು ಸಂಹಾರಮಾಡುವವನೂ, ವೀರ್ಯಸ್ವರೂಪಿಯೂ, ಅನಂತ ಚಿತ್ತನೂ, ಜಗತ್ತಿನ ಸಮಸ್ತಭಾವಗಳನ್ನೂ ಭರಿಸುವವನೂ ಆದ ನಿನಗೆ ನಮಸ್ಕಾರವು!

೩೫. ಸಂಸಾರಕ್ಕೆ ಕಾರಣವಾದ ಅಜ್ಞಾನವೆಂಬ ಗಾಢವಾದ ಕತ್ತಲೆಯನ್ನು ಕತ್ತರಿಸಿಹಾಕುವವನೂ, ಚಿಂತಿಸಲಸದಳವಾದ ನೆಲೆಯುಳ್ಳವನೂ, ಗೂಢನೂ, ರುದ್ರನೂ, ಪ್ರಳಯಕಾಲದಲ್ಲಿ ಲೋಕವನ್ನು ಲಯಗೊಳಿಸುವವನೂ ಆದ ನಿನಗೆ ನಮಸ್ಕಾರವು!

೩೬. ಶಾಂತನೂ, ಭಕ್ತರಿಗೆ ಶಾಂತರಸದ ಅಲೆಗಳು ತುಂಬಿದ ಕೈವಲ್ಯ ಪದವಿಯನ್ನು ನೀಡುವವನೂ, ಸರ್ವಭಾವಗಳನ್ನು ಮೀರಿ ಅವಕ್ಕೂ ನಿಲುಕದಿರುವವನೂ, ಸರ್ವಮಯನೂ ಆದ ಓ ಸ್ವಾಮಿಯೆ! ನಿನಗೆ ನಮಸ್ಕಾರವು.

೩೭. ಕನ್ನೈದಿಲೆಯ ದಳದಂತೆ ಶ್ಯಾಮಲವರ್ಣನೂ, ಥಳಥಳಿಸುವ ತಾವರೆಯ ಹೂವಿನ ಶಲಾಕೆಗಳಂತೆ ಸೊಬಗಿನಿಂದ ಮೆರೆಯುವ ಕೌಸ್ತುಭವನ್ನು ಧರಿಸಿದವನೂ ಆಗಿ ನೇತ್ರರಸಾಯನನೂ, ಸರ್ವವ್ಯಾಪಕನೂ ಆಗಿರುವ ನಿನ್ನನ್ನು ನಮಸ್ಕರಿಸುತ್ತೇನೆ."

೩೮. ಅಗಸ್ತ್ಯನು ಹೇಳುತ್ತಾನೆ:—"ಪರಮೇಶ್ವರನು ಹೀಗೆ ಸ್ತುತಿಸಿದ ಬಳಿಕ ಆ ಗರುಡಧ್ವಜನು ಪ್ರಸನ್ನಾತ್ಮನಾಗಿ ದೇವತೆಗಳಿಗೆ ವರದನೂ, ಕೃಪಾನ್ವಿತನೂ ಆಗಿ ದೇವತೆಗಳಮೇಲೆಲ್ಲ ತನ್ನ ಕೃಪಾದೃಷ್ಟಿಯೆಂಬ ಅಮೃತದ ಮಳೆಯನ್ನು ಸುರಿಸಿ ಶರಣುಹೊಕ್ಕು ತಲೆಬಾಗಿ ನಮಸ್ಕರಿಸಿದ ಅವರೆಲ್ಲರನ್ನೂ ಕುರಿತು ಮಧುರವಾಗಿ ಇಂತೆಂದು ನುಡಿದನು:—

ಶ್ರೀ ಭಗವಾನುವಾಚ :—
ಜಾನಾಮಿ ವಿಬುಧಾಃ ಸರ್ವಮಭಿಪ್ರಾಯಂ ಸಮಾಧಿತಃ ।
ದೈತೇಯೈರ್ವಿಕ್ರಮಾಕ್ರಾಂತಂ ಪದಂ ಸಮರದರ್ಪಿತೈಃ ॥ ೩೯ ॥
ಸಬಲೈರ್ಬಲಹೀನಾನಾಂ ಪ್ರತಾಪೋ ವಿಜಿತಃ ಪರೈಃ ।
ಸಾಂಪ್ರತಂ ತು ವಿಧಾಸ್ಯಾಮಿ ತಪೋ ಯುಷ್ಮದ್ಬಲಾಯ ವೈ ॥ ೪೦ ॥
ಅಯೋಧ್ಯಾನಗರೇ ಗತ್ವಾ ಕರಿಷ್ಯೇ ತಪ ಉತ್ತಮಂ ।
ಗುಪ್ತೋ ಭೂತ್ವಾ ಭವೇತ್ತೇಜೋವಿವೃದ್ಧ್ಯೈ ದೈತ್ಯಶಾಂತಯೇ ॥ ೪೧ ॥
ಭವಂತೋಽಪಿ ತಪಸ್ತೀವ್ರಂ ಕುರ್ವಂತ್ವಮಲಮಾನಸಾಃ ।
ಅಯೋಧ್ಯಾಂ ಪ್ರಾಪ್ಯ ತಾಂ ದೇವಾ ದೈತ್ಯನಾಶಾಯ ಸತ್ವರಂ ॥ ೪೨ ॥
ಅಗಸ್ತ್ಯ ಉವಾಚ :—
ಇತ್ಯುಕ್ತ್ವಾಽಂತರ್ದಧೇ ದೇವಾನ್ ದೇವೋ ಗರುಡವಾಹನಃ ।
ಅಯೋಧ್ಯಾಮಾಗತಃ ಕ್ಷಿಪ್ರಂ ಚಕಾರ ತಪ ಉತ್ತಮಂ ॥ ೪೩ ॥
ಗುಪ್ತೋ ಭೂತ್ವಾ ಯದಾ ವಿದ್ವನ್ ಸುರತೇಜೋಭಿವೃದ್ಧಯೇ ।
ತೇನ ಗುಪ್ತಹರಿರ್ನಾಮ ದೇವೋ ವಿಖ್ಯಾತಿಮಾಗತಃ ॥ ೪೪ ॥

---

೩೯. ಶ್ರೀಭಗವಂತನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ನಿಮ್ಮ ಅಭಿಪ್ರಾಯವೆಲ್ಲವನ್ನೂ ನಾನು ಸಮಾಧಿಯ ಮೂಲಕವೇ ತಿಳಿದುಕೊಂಡಿದ್ದೇನೆ. ಬಹಳವಾಗಿ ಗರ್ವಿಸಿರುವ ದೈತ್ಯರು ಸಮರದಲ್ಲಿ ನಿಮ್ಮ ಪದವಿಯನ್ನು ತಮ್ಮ ಪರಾಕ್ರಮದಿಂದ ಆಕ್ರಮಿಸಿಕೊಂಡಿರುವರಷ್ಟೆ.

೪೦. ಬಲಿಷ್ಠರಾದ ಆ ನಿಮ್ಮ ಶತ್ರುಗಳು ಬಲಹೀನರಾದ ನಿಮ್ಮ ಪ್ರತಾಪವನ್ನು ಜಯಿಸಿದರು. ಈಗಲಾದರೋ ನಿಮ್ಮ ಬಲವೃದ್ಧಿಗಾಗಿಯೆ ನಾನು ತಪಸ್ಸು ಮಾಡುತ್ತೇನೆ.

೪೧. ಅಯೋಧ್ಯಾನಗರಕ್ಕೆ ಹೋಗಿ ಅಲ್ಲಿ ಗುಪ್ತವಾಗಿ ನೆಲಸಿ ನಿಮ್ಮ ತೇಜೋಭಿವೃದ್ಧಿಗಾಗಿಯೂ, ದೈತ್ಯರ ವಿನಾಶಕ್ಕಾಗಿಯೂ ಉತ್ತಮವಾದ ತಪಸ್ಸನ್ನು ಮಾಡುತ್ತೇನೆ.

೪೨. ಎಲೈ ದೇವತೆಗಳಿರಾ! ನೀವು ಕೂಡ ತ್ವರೆಯಿಂದ ಅಯೋಧ್ಯೆಗೆ ಹೋಗಿ ದೈತ್ಯನಾಶಕ್ಕಾಗಿ ನಿರ್ಮಲಮನಸ್ಸಿನಿಂದ ತೀವ್ರವಾದ ತಪಸ್ಸನ್ನು ಮಾಡಿರಿ."

೪೩. ಅಗಸ್ತ್ಯನು ಹೇಳುತ್ತಾನೆ:— ದೇವತೆಗಳನ್ನು ಕುರಿತು ಇಂತೆಂದು ನುಡಿದ ಬಳಿಕ ಗರುಡವಾಹನನಾದ ಆ ದೇವನು ಅಂತರ್ಧಾನವನ್ನು ಹೊಂದಿ ಬಹುಬೇಗನೆಯೆ ಅಯೋಧ್ಯೆಗೆ ಬಂದು ಉತ್ತಮವಾದ ತಪಸ್ಸನ್ನು ಮಾಡಿದನು.

೪೪. ಎಲೈ ವಿದ್ವಾಂಸನೇ! ಶ್ರೀಹರಿಯು ಆ ಕ್ಷೇತ್ರದಲ್ಲಿ ಸುರರ

ಆಗತಸ್ಯ ಹರೇಃ ಪೂರ್ವಂ ಯತ್ರ ಹಸ್ತತಲಾಚ್ಚ್ಯುತಂ ।
ಸುದರ್ಶನಾಖ್ಯಂ ತಚ್ಚಕ್ರಂ ತೇನ ಚಕ್ರಹರಿಃ ಸ್ಮೃತಃ ॥ ೪೫ ॥
ತಯೋರ್ದರ್ಶನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ।
ಹರೇಸ್ತೇನ ಪ್ರಭಾವೇಣ ದೇವಾಃ ಪ್ರಬಲತೇಜಸಃ ॥ ೪೬ ॥
ಜಿತ್ವಾ ದೈತ್ಯಾನ್ರಣೇ ಸರ್ವಾನ್ ಸಂಪ್ರಾಪ್ಯ ಸ್ವಪದಾನ್ಯಥ ।
ರೇಜಿರೇ ವಿಪುಲಾನಂದೈರಸುರಾನರ್ದಯಂಸ್ತತಃ ॥ ೪೭ ॥
ತತಃ ಸರ್ವೇ ಸಮೇತ್ಯಾಶು ಬೃಹಸ್ಪತಿಪುರಸ್ಸರಾಃ ।
ದೇವಾಃ ಸರ್ವೇಽನಮನ್ಮೌಲಿಮಾಲಾರ್ಚಿತಪದಾಂಬುಜಂ ।
ಹರಿಂ ದ್ರಷ್ಟುಮಥಾಗಚ್ಛನ್ನಯೋಧ್ಯಾಯಾಂ ಸಮುತ್ಸುಕಾಃ ॥ ೪೮ ॥
ಆಗತ್ಯ ಚ ತತಃ ಶ್ರುತ್ವಾ ನಾನಾವಿಧಗುಣಾಕರಂ ।
ಭಾವೈಃ ಪುಣ್ಯೈಃ ಸಮಭ್ಯರ್ಚ್ಯ ನತ್ವಾ ಪ್ರಾಂಜಲಯಸ್ತದಾ ।
ಹರಿಮೇಕಾಗ್ರಮನಸಾ ಧ್ಯಾಯಂತೋ ಧ್ಯಾನನಿಷ್ಠಿತಾಃ ॥ ೪೯ ॥
ತಾನಾಗತಾನ್ಸಮಾಲೋಕ್ಯ ಪದಭಕ್ತ್ಯಾ ಕೃತಾನತೀನ್ ।
ಪ್ರಸನ್ನಃ ಪ್ರಾಹ ವಿಶ್ವಾತ್ಮಾ ಪೀತವಾಸಾ ಜನಾರ್ದನಃ ॥ ೫೦ ॥

---

ತೇಜೋಭಿವೃದ್ಧಿಗಾಗಿ ಗುಪ್ತವಾಗಿ ತಪಸ್ಸನ್ನು ಮಾಡಿದನು. ಆದುದರಿಂದ ಆ ದೇವನು ಗುಪ್ತಹರಿಯೆಂಬ ಹೆಸರಿನಿಂದ ವಿಖ್ಯಾತಿಯನ್ನು ಪಡೆದನು.

೪೫. ಪೂರ್ವದಲ್ಲಿ ಅಲ್ಲಿಗೆ ಬಂದ ಶ್ರೀಹರಿಯ ಕೈಯಿಂದ ಸುದರ್ಶನಚಕ್ರವು ಯಾವೆಡೆಯಲ್ಲಿ ಜಾರಿಬಿದ್ದಿತೊ ಆ ಎಡೆಯಲ್ಲಿಯೆ ಆ ಸ್ವಾಮಿಯು ಚಕ್ರಹರಿಯೆಂದು ಹೆಸರುಗೊಂಡನು.

೪೬. ಈ ರೀತಿ ಪ್ರಖ್ಯಾತಿಗೊಂಡ ಗುಪ್ತಹರಿ ಮತ್ತು ಚಕ್ರಹರಿಗಳ ದರ್ಶನಮಾತ್ರದಿಂದಲೇ ಸರ್ವಪಾಪಗಳೂ ಬಿಡುಗಡೆಯಾಗುತ್ತದೆ. ಶ್ರೀಹರಿಯ ಆ ಬಗೆಯ ಪ್ರಭಾವದಿಂದ ದೇವತೆಗಳು ಪ್ರಜ್ವಲತೇಜಾಶಾಲಿಗಳಾದರು.

೪೭–೪೮. ಅವರು ಸಮಸ್ತದೈತ್ಯರನ್ನೂ ರಣದಲ್ಲಿ ಗೆದ್ದು ತಮ್ಮತಮ್ಮ ಪದವಿಗಳನ್ನು ಪಡೆದು, ಆ ಬಳಿಕ ಅಸುರಮರ್ದನರಾಗಿ ಸಂತೋಷದಿಂದ ಮೆರೆದು ರಂಜಿಸುತ್ತಿದ್ದರು. ಆಮೇಲೆ ಅವರೆಲ್ಲರೂ ಒಟ್ಟುಗೂಡಿ ಬೃಹಸ್ಪತಿಯನ್ನು ಮುಂದಿಟ್ಟುಕೊಂಡು, ತಮ್ಮ ಶಿರೋಮಾಲೆಗಳಿಂದ ಅರ್ಚಿಸಲ್ಪಟ್ಟ ಪಾದಾಂಬುಜಗಳುಳ್ಳ ಆ ಶ್ರೀಹರಿಯನ್ನು ನೋಡಲು ಬಹಳ ಉತ್ಸುಕರಾಗಿ ಅಯೋಧ್ಯೆಗೈತಂದರು.

೪೯. ಬಳಿಕ ನಾನಾ ವಿಧಗಳಾದ ವೈಭವಗಳಲ್ಲಿ ಆದರವುಳ್ಳ ಆ ಶ್ರೀಹರಿಯನ್ನು ಕಂಡು ಪುಣ್ಯಭಾವಗಳಿಂದ ಆತನನ್ನು ಚೆನ್ನಾಗಿ ಪೂಜಿಸಿ, ನಮಸ್ಕರಿಸಿ, ಕೈಜೋಡಿಸಿಕೊಂಡು ಏಕಾಗ್ರಮನಸ್ಸಿನಿಂದ ಧ್ಯಾನಾಸಕ್ತರಾದರು.

೫೦. ಈ ರೀತಿ ಅಲ್ಲಿಗೆ ಬಂದು ತನ್ನ ಪಾದಭಕ್ತಿಯಿಂದ ಪ್ರಣಾಮಮಾಡಿದ

ಶ್ರೀ ಭಗವಾನುವಾಚ :—

ಭೋ ಭೋ ದೇವಾ ಭವಂತಶ್ಚ ಚಿರಾದ್ದಿಷ್ಟ್ಯಾದ್ಯಸಂಗತಾಃ ।
ಅಧುನಾ ಭವತಾಮಿಚ್ಛಾಂ ಕಾಂ ಕರೋಮಿ ಸುರಾ ಅಹಂ ।
ತದ್ಬ್ರೂತ ತ್ವರಿತಾ ಮಹ್ಯಂ ಕಿಂ ವಿಲಂಬೇನ ನಿರ್ಭಯಾಃ ॥ ೫೧ ॥

ದೇವಾ ಊಚುಃ :—

ಭಗವನ್ ದೇವದೇವೇಶ ತ್ವಯಾ ಸಂಪ್ರತಿ ಸರ್ವಶಃ ।
ಸರ್ವಂ ಸಮಭವತ್ಕಾರ್ಯಂ ನಿಷ್ಪನ್ನಂ ವೈ ಜಗತ್ಪತೇ ॥ ೫೨ ॥
ತಥಾಪಿ ಸರ್ವದಾ ಭಾವ್ಯಂ ನಿತ್ಯಂ ದೇವ ತ್ವಯಾ ವಿಭೋ ।
ಅಸ್ಮದ್ರಕ್ಷಾರ್ಥಮತ್ರೈವ ವಿಜಿತೇಂದ್ರಿಯವರ್ತ್ಮನಾ ॥ ೫೩ ॥
ಏವಮೇವ ಸದಾ ಕಾರ್ಯಂ ಶತ್ರುಪಕ್ಷವಿನಾಶನಂ ॥ ೫೪ ॥

ಶ್ರೀ ಭಗವಾನುವಾಚ :—

ಏವಮೇತತ್ಕರಿಷ್ಯಾಮಿ ಭವತಾಮರಿಸಂಜಯಂ ।
ಶ್ರೀಮತಾಂ ತೇಜಸೋ ವೃದ್ಧಿಂ ಕರಿಷ್ಯಾಮಿ ಸದಾಸುರಾಃ ।
ಕಥೇಯಂ ಚ ಸದಾಖ್ಯಾತಿಂ ಲೋಕೇ ಯಾಸ್ಯತಿ ಚೋತ್ತಮಾಂ ॥ ೫೫ ॥

---

ಅವರನ್ನು ಕಂಡು ವಿಶ್ವಾತ್ಮನೂ, ಪೀತಾಂಬರನೂ ಆದ ಜನಾರ್ದನನು ಪ್ರಸನ್ನನಾಗಿ ಅವರನ್ನು ಕುರಿತು ಹೀಗೆ ಹೇಳಿದನು :—

೫೧. ಶ್ರೀಭಗವಂತನು ಹೇಳುತ್ತಾನೆ :—"ಎಲೈ ದೇವತೆಗಳಿರಾ! ಅದೃಷ್ಟವಶದಿಂದ ಬಹುಕಾಲಕ್ಕೆ ನೀವೆಲ್ಲರೂ ಒಗ್ಗೂಡಿ ಇಲ್ಲಿಗೆ ಬಂದು ಸೇರಿದ್ದೀರಿ. ಎಲೈ ಸುರರೇ! ಪ್ರಕೃತದಲ್ಲಿ ನಾನು ಯಾವ ಇಚ್ಛೆಯನ್ನು ನೆರವೇರಿಸಿಕೊಡಬೇಕು? ಅದನ್ನು ನಿರ್ಭಯವಾಗಿ ಬೇಗನೆ ಹೇಳಿರಿ. ತಡಮಾಡಿ ಪ್ರಯೋಜನವೇನು?" ಎಂದನು.

೫೨. ದೇವತೆಗಳು ಹೇಳುತ್ತಾರೆ :—"ಭಗವಂತಾ, ದೇವದೇವೇಶಾ, ಜಗತ್ಪತೀ! ಈಗ ನಿನ್ನಿಂದ ಸರ್ವವಿಧಗಳಲ್ಲಿಯೂ ನಮ್ಮ ಸರ್ವಕಾರ್ಯವೂ ನೆರವೇರಿರುವುದು.

೫೩. ಎಲೈ ದೇವಾ, ವಿಭುವೇ! ಹಾಗಾದರೂ ನಮ್ಮ ರಕ್ಷಣೆಗೋಸ್ಕರ ಇಂದ್ರಿಯಗಳನ್ನು ಜಯಿಸಿ ನೀನು ಯಾವಾಗಲೂ ಇಲ್ಲಿಯೇ ನೆಲಸಿರಬೇಕು.

೫೪. ಹೀಗೆಯೇ ಸದಾಕಾಲವೂ ನಮ್ಮ ಶತ್ರುಪಕ್ಷದವರನ್ನು ನಾಶಗೊಳಿಸುತ್ತಿರಬೇಕು" ಎಂದು ಬೇಡಿದರು.

೫೫. ಶ್ರೀಭಗವಂತನು ಹೇಳುತ್ತಾನೆ :—"ಎಲೈ ಸುರರೇ! ಹಾಗೆಯೇ ಆಗಲಿ. ನಾನು ನಿಮ್ಮ ಪ್ರಾರ್ಥನೆಯಂತೆ ಇಲ್ಲಿಯೆ ನೆಲಸಿ ನಿಮ್ಮ ಶತ್ರುಗಳನ್ನು ಜಯಿಸುತ್ತಿರುತ್ತೇನೆ. ಶ್ರೀಮಂತರಾದ ನಿಮಗೆ ಯಾವಾಗಲೂ ತೇಜೋಭಿ

ಅಯಂ ನಾಮ್ನಾ ಗುಪ್ತಹರಿರ್ದೇವೋ ಭುವನವಿಶ್ರುತಃ ।
ಮದೀಯಂ ಪರಮಂ ಗುಹ್ಯಂ ಸ್ಥಾನಂ ಖ್ಯಾತಿಂ ಸಮೇಷ್ಯತಿ ॥ ೫೬ ॥
ಅತ್ರ ಯಃ ಪ್ರಾಣಿನಾಂ ಶ್ರೇಷ್ಠಃ ಪೂಜಾ ಯಜ್ಞಜಪಾದಿಕಂ ।
ಕರೋತಿ ಪರಯಾ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೫೭ ॥
ಅತ್ರ ಯಃ ಕುರುತೇ ದಾನಂ ಯಥಾಶಕ್ತ್ಯಾ ಜಿತೇಂದ್ರಿಯಃ ।
ಸ ಸ್ವರ್ಗಮತುಲಂ ಪ್ರಾಪ್ಯ ನ ಶೋಚತಿ ಕದಾಚನ ॥ ೫೮ ॥
ಅತ್ರ ಮತ್ಪ್ರೀತಯೇ ದೇವಾಃ ಪ್ರಾಣಿಭಿರ್ಧರ್ಮಕಾಂಕ್ಷಿಭಿಃ ।
ದಾತವ್ಯಾ ಗೌಃ ಪ್ರಯತ್ನೇನ ಸವತ್ಸಾ ವಿಧಿಪೂರ್ವಕಂ ॥ ೫೯ ॥
ಸ್ವರ್ಣಶೃಂಗೀ ತಾಪ್ಯಖುರೀ ವಸ್ತ್ರದ್ವಯಸಮಾವೃತಾ ।
ಕಾಂಸ್ಯೋಪದೋಹನಾ ತಾಮ್ರಪೃಷ್ಠೀ ಬಹುಗುಣಾನ್ವಿತಾ ॥ ೬೦ ॥
ರತ್ನಪುಚ್ಛಾ ದುಗ್ಧವತೀ ಘಂಟಾಭರಣಭೂಷಿತಾ ।
ಅರ್ಚಿತಾ ಗಂಧಪುಷ್ಪಾದ್ಯೈಃ ಸುಪ್ರಸನ್ನಾಽಮೃತಪ್ರಜಾ ॥ ೬೧ ॥

---

ವೃದ್ಧಿಯನ್ನುಂಟುಮಾಡುತ್ತೇನೆ. ಈ ಕಥೆಯೂ ಲೋಕದಲ್ಲಿ ಉತ್ತಮವಾದ ಖ್ಯಾತಿಯನ್ನೈದುತ್ತದೆ.

೫೬. ಗುಪ್ತಹರಿಯೆಂಬ ಹೆಸರಿನಿಂದ ನಾನು ಇಲ್ಲಿ ಲೋಕವಿಖ್ಯಾತನಾಗಿರುತ್ತೇನೆ. ಈ ನನ್ನ ಸ್ಥಾನವು ಉತ್ತಮವೂ, ರಹಸ್ಯವೂ ಆದ ಕ್ಷೇತ್ರವೆಂದು ಪ್ರಸಿದ್ಧಿಯನ್ನು ಪಡೆಯುತ್ತದೆ.

೫೭. ಈ ಕ್ಷೇತ್ರದಲ್ಲಿ ಪ್ರಾಣಿಗಳಲ್ಲೆಲ್ಲ ಶ್ರೇಷ್ಠನಾದ ಯಾವ ಮಾನವನು ಪೂಜೆ, ಯಜ್ಞ, ಜಪ ಮೊದಲಾದವನ್ನು ಪರಮಭಕ್ತಿಯಿಂದ ಮಾಡುವನೋ ಅವನು ಪರಮಗತಿಯನ್ನೈದುತ್ತಾನೆ.

೫೮. ಯಾವನು ಜಿತೇಂದ್ರಿಯನಾಗಿ ಯಥಾಶಕ್ತಿಯಾಗಿ ದಾನಮಾಡುತ್ತಾನೆಯೋ ಅವನು ಎಣೆಯಿಲ್ಲದ ಸ್ವರ್ಗವನ್ನು ಪಡೆಯುತ್ತಾನೆ. ಎಂದೆಂದಿಗೂ ಅವನು ಶೋಕಕ್ಕೀಡಾಗುವುದಿಲ್ಲವು.

೫೯. ಅಯ್ಯಾ ದೇವತೆಗಳಿರಾ! ಇಲ್ಲಿ ನನ್ನ ಪ್ರೀತಿಸಂಪಾದನೆಗಾಗಿ ಧರ್ಮಕಾಂಕ್ಷಿಗಳಾದ ಮಾನವರು ಪ್ರಯತ್ನಪೂರ್ವಕವಾಗಿ ಕರುವಿನಿಂದೊಡಗೂಡಿದ ಗೋವನ್ನು ವಿಧಿಯನ್ನನುಸರಿಸಿ ದಾನಮಾಡಬೇಕು.

೬೦–೬೩. ಗೋವಿನ ಕೋಡಿಗೆ ಚಿನ್ನದ ಕಳಸಗಳನ್ನೂ, ಮುಖಕ್ಕೆ ಬೆಳ್ಳಿಯ ಮೊಗವಾಡವನ್ನೂ ತೊಡಿಸಿ ಅಲಂಕರಿಸಬೇಕು. ಎರಡು ವಸ್ತ್ರಗಳನ್ನು ಹೊದಿಸಿರಬೇಕು. ಹಾಲು ಕರೆಯಲು ಕಂಚಿನ ಪಾತ್ರೆಯನ್ನೂ ಜೊತೆಗೆ ಕೊಡಬೇಕು. ಬೆನ್ನಿಗೆ ತಾಮ್ರವನ್ನು ಹೊದಿಸಬೇಕು. ಬಾಲಕ್ಕೆ ರತ್ನಾಲಂಕಾರ

ದ್ವಿಜಾಯ ವೇದವಿಜ್ಞಾಯ ಗುಣಿನೇ ನಿರ್ಮಲಾತ್ಮನೇ ।
ವಿಷ್ಣುಭಕ್ತಾಯ ವಿದುಷೇ ಆನೃಶಂಸ್ಯರತಾಯ ಚ ॥ ೬೨ ॥
ಬ್ರಾಹ್ಮಣಾಯ ಚ ಗೌರ್ದೇಯಾ ಸರ್ವತ್ರ ಸುಖಮಶ್ನುತೇ ।
ನ ದೇಯಾ ದ್ವಿಜಮಾತ್ರಾಯ ದಾತಾರಂ ಸೋಽವಪಾತಯೇತ್ ॥ ೬೩ ॥
ಮತ್ಪ್ರೀತಯೇಽತ್ರ ದಾತವ್ಯಾ ನಿರ್ಮಲೇನಾಂತರಾತ್ಮನಾ ॥ ೬೪ ॥
ಸ್ನಾತಂ ಯೈಶ್ಚ ವಿಶುಧ್ಯರ್ಥಮತ್ರ ಮದ್ಭಕ್ತಿತತ್ಪರೈಃ ।
ತೇಷಾಂ ಸ್ವರ್ಗತಯೋ ನಿತ್ಯಂ ಮುಕ್ತಿಃ ಕರತಲೇ ಸ್ಥಿತಾ ॥ ೬೫ ॥
ತಥಾ ಚಕ್ರಹರೇಃ ಪೀಠೇ ಮತ್ಪ್ರೀತ್ಯೈ ದಾನಮುತ್ತಮಂ ।
ಜಪಹೋಮಾದಿಕಂ ಚಾಪಿ ಕರ್ತವ್ಯಂ ಯತ್ನತೋ ನರೈಃ ॥ ೬೬ ॥
ಭವಂತೋಽಪಿ ವಿಧಾನೇನ ಯಾತ್ರಾಂ ಕುರ್ವಂತು ಸತ್ತಮಾಃ ।
ಅಸ್ಮಾದ್ಗುಪ್ತಹರೇಃ ಸ್ಥಾನಾನ್ನಿಕಟೇ ಸಂಗಮೇ ಶುಭೇ ॥ ೬೭ ॥

---

ವನ್ನು ಮಾಡಿ, ಘಂಟೆ ಮೊದಲಾದ ಆಭರಣಗಳಿಂದ ಭೂಷಿಸಿರಬೇಕು. ಹೀಗೆ ಅಲಂಕೃತವಾಗಿರುವ ಬಹುಗುಣಗಳಿಂದ ಕೂಡಿದ ಹಾಲು ಕರೆಯುವ ಸಾಧುವಾದ ಹಸುವನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ, ವೇದಗಳನ್ನು ಚೆನ್ನಾಗಿ ಬಲ್ಲವನೂ, ಗುಣವಂತನೂ, ನಿರ್ಮಲಾತ್ಮನೂ, ವಿಷ್ಣುಭಕ್ತನೂ, ವಿದ್ವಾಂಸನೂ, ದಯಾವಂತನೂ ಆದ ಬ್ರಾಹ್ಮಣನಿಗೆ ದಾನ ಕೊಡತಕ್ಕದ್ದು. ಹಾಗೆ ಕೊಟ್ಟವನು ಎಲ್ಲಿಡೆಯೂ ಸುಖವನ್ನನುಭವಿಸುತ್ತಾನೆ. ಕೇವಲ ಬ್ರಾಹ್ಮಣಮಾತ್ರನಾಗಿ ಹೆಸರಿಗೆ ಮಾತ್ರ ಬ್ರಾಹ್ಮಣನೆನಿಸಿದವನಿಗೆ ದಾನಮಾಡತಕ್ಕದ್ದಲ್ಲ. ಅವನಿಗೆ ದಾನ ಕೊಟ್ಟಲ್ಲಿ ದಾನಮಾಡಿದಾತನಿಗೆ ಅಧಃಪಾತವುಂಟಾಗುತ್ತದೆ.

೬೪. ನನ್ನ ಪ್ರೀತಿಸಾಧನೆಗಾಗಿ ಅಂತರಾತ್ಮನನ್ನು ನಿರ್ಮಲವಾಗಿಟ್ಟು ಕೊಂಡು ಈ ಕ್ಷೇತ್ರದಲ್ಲಿ ದಾನಮಾಡಬೇಕು.

೬೫. ಯಾರು ನನ್ನಲ್ಲಿ ಭಕ್ತಿತತ್ಪರರಾಗಿ ದೇಹಶುದ್ಧಿಗೋಸ್ಕರ ಇಲ್ಲಿ ಸ್ನಾನಮಾಡುವರೋ ಅವರಿಗೆ ಸ್ವರ್ಗತಿಯು ಸಿದ್ಧವಾಗಿರುವುದು; ಮುಕ್ತಿಯು ಅವರ ಅಂಗೈಯಲ್ಲಿಯೇ ನೆಲಸಿರುತ್ತದೆ.

೬೬. ಅದೇ ರೀತಿಯಲ್ಲಿ ಚಕ್ರಹರಿಯ ಪೀಠದಲ್ಲಿ ಕೂಡ ನನ್ನ ಪ್ರೀತ್ಯರ್ಥವಾಗಿ ನರರು ಉತ್ತಮದಾನವನ್ನೂ, ಜಪ ಹೋಮಾದಿಗಳನ್ನೂ ಪ್ರಯತ್ನಪೂರ್ವಕವಾಗಿ ನಡಸಬೇಕು.

೬೭. ಎಲೈ ದೇವೋತ್ತಮರೇ! ಗುಪ್ತಹರಿಸ್ಥಾನದ ಸಮೀಪದ ಶುಭ ಸಂಗಮದಲ್ಲಿ ನೀವು ಕೂಡ ವಿಧಾನವನ್ನನುಸರಿಸಿ ತೀರ್ಥಯಾತ್ರೆಯನ್ನು ಮಾಡಿರಿ.

ಪ್ರತ್ಯಗ್ಭಾಗೇ ಗೋಪ್ರತಾರಾದ್ಯೋಜನತ್ರಯಸಮ್ಮಿತೇ ।
ಘರ್ಘರಾಂಬುತರಂಗಿಣ್ಯಾ ಸರಯ್ವಾಃ ಸಂಗತೌ ಯುತಃ ॥ ೬೮ ॥
ಅತ್ರ ಸ್ನಾತ್ವಾ ವಿಧಾನೇನ ದ್ರಷ್ಟವ್ಯೋತ್ರ ಪ್ರಯತ್ನತಃ ।
ದೇವೋ ಗುಪ್ತಹರಿರ್ನಾಮ ಸರ್ವಕಾಮಾರ್ಥಸಿದ್ಧಿದಃ ॥ ೬೯ ॥

ಅಗಸ್ತ್ಯ ಉವಾಚ :—

ಇತ್ಯುಕ್ತ್ವಾಂತರ್ದಧೇ ದೇವಃ ಪೀತಾಂಬರಧರೋಽಚ್ಯುತಃ ।
ದೇವಾ ಅಪಿ ವಿಧಾನೇನ ಕೃತ್ವಾ ಯಾತ್ರಾಂ ಪ್ರಯತ್ನತಃ ।
ಅಯೋಧ್ಯಾಯಾಂ ಸ್ಥಿತಾ ನಿತ್ಯಂ ಹರೇರ್ಗುಣವಿಮೋಹಿತಾಃ ॥ ೭೦ ॥
ತದಾ ಪ್ರಭೃತಿ ವಿಪ್ರೇಂದ್ರ ತತ್‌ಸ್ಥಾನಂ ಭುವಿ ಪಪ್ರಥೇ ।
ಕಾರ್ತಿಕ್ಯಾಂ ತು ವಿಶೇಷೇಣ ಯಾತ್ರಾ ಸಾಂವತ್ಸರೀ ಭವೇತ್ ॥ ೭೧ ॥
ವಿಭೋರ್ಗುಪ್ತಹರೇಸ್ತತ್ರ ಸಂಗಮಸ್ನಾನಪೂರ್ವಿಕಾ ।
ಗೋಪ್ರತಾರೇ ಚ ತೀರ್ಥೇಽಸ್ಮಿನ್ ಸರಯೂಘರ್ಘರಾಶ್ರಿತೇ ।
ಸ್ನಾತ್ವಾ ದೇವೋಽರ್ಚನೀಯೋಽಯಂ ಸರ್ವಕಾಮಫಲಪ್ರದಃ ॥ ೭೨ ॥
ತಥಾ ಚಕ್ರಹರೇರ್ಯಾತ್ರಾ ಕರ್ತವ್ಯಾ ಸುಪ್ರಯತ್ನತಃ ।
ಮಾರ್ಗಶೀರ್ಷಸ್ಯ ವಿಶದೇ ಪಕ್ಷೇ ಹರಿತಿಥೌ ನರೈಃ ॥ ೭೩ ॥

---

೬೮–೬೯. ಗೋಪ್ರತಾರತೀರ್ಥಕ್ಕೆ ಪಶ್ಚಿಮಭಾಗದಲ್ಲಿ ಮೂರುಯೋಜನ ದಳತೆಯ ಪ್ರದೇಶದಲ್ಲಿ ಘರ್ಘರಾನದಿಯೊಡನೆ ಸರಯೂನದಿಯು ಸಂಗಮವಾಗುವುದು. ಆ ಸಂಗಮದಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಸಮಸ್ತ ಇಷ್ಟಾರ್ಥ ಸಿದ್ಧಿಗಳನ್ನೂ ಉಂಟುಮಾಡುವ ಗುಪ್ತಹರಿಯೆಂಬ ದೇವನನ್ನು ಪ್ರಯತ್ನ ಪೂರ್ವಕವಾಗಿ ದರ್ಶನಮಾಡಬೇಕು.''

೭೦. ಅಗಸ್ತ್ಯನು ಹೇಳುತ್ತಾನೆ:— ಇಂತು ನುಡಿದ ಬಳಿಕ ಪೀತಾಂಬರ ಧಾರಿಯಾದ ಆ ಅಚ್ಯುತದೇವನು ಅಂತರ್ಧಾನವನ್ನು ಹೊಂದಿದನು. ದೇವತೆಗಳು ಕೂಡ ಪ್ರಯತ್ನಪೂರ್ವಕವಾಗಿ ವಿಧಾನವನ್ನನುಸರಿಸಿ ಯಾತ್ರೆಯನ್ನು ಮಾಡಿ ಶ್ರೀಹರಿಯ ಗುಣಗಳಿಂದ ಮೋಹಿತರಾಗಿ ಅಯೋಧ್ಯೆಯಲ್ಲಿಯೇ ನೆಲಸಿದರು.

೭೧–೭೨. ವಿಪ್ರೇಂದ್ರಾ! ಆಗಿನಿಂದಲೂ ಆ ಸ್ಥಾನವು ಭೂಮಿಯಲ್ಲಿ ಪ್ರಸಿದ್ಧ ವಾಯಿತು. ಕಾರ್ತಿಕಮಾಸದಲ್ಲಿ ಅಲ್ಲಿ ವಿಶೇಷವಾದ ಮಹಿಮೆಯುಂಟು. ಆಗ ವಿಭುವಾದ ಗುಪ್ತಹರಿಗೆ ವಾರ್ಷಿಕಯಾತ್ರೆಯು ನಡೆಯುತ್ತದೆ. ಆಗ ಸಂಗಮ ದಲ್ಲಿ ಮೊದಲು ಸ್ನಾನಮಾಡಿದಬಳಿಕ, ಸರಯೂ ಮತ್ತು ಘರ್ಘರಗಳ ಆಶ್ರಯ ದಲ್ಲಿರುವ ಈ ಗೋಪ್ರತಾರತೀರ್ಥದಲ್ಲಿ ಸ್ನಾನಮಾಡಿ ಸರ್ವಕಾಮಫಲಗಳನ್ನೂ ಕೊಡುವವನಾದ ಈ ದೇವನನ್ನು ಅರ್ಚಿಸಬೇಕು.

೭೩. ಹಾಗೆಯೇ ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಹರಿದಿನದಲ್ಲಿ ಮಾನವರು ಚಕ್ರಹರಿಯ ಯಾತ್ರೆಯನ್ನು ಪ್ರಯತ್ನಪೂರ್ವಕವಾಗಿ ನಡಸಬೇಕು.

ಏವಂ ಯಃ ಕುರುತೇ ಯಾತ್ರಾಂ ವಿಷ್ಣುಲೋಕೇ ಸ ಮೋದತೇ ॥ ೭೪ ॥

ಶ್ರೀ ಸೂತ ಉವಾಚ :—

ಏವಮುಕ್ತ್ವಾ ತು ವಿರತೇ ಮುನೌ ಕಲಶಜನ್ಮನಿ ।
ಕೃಷ್ಣದ್ವೈಪಾಯನೋ ವ್ಯಾಸಃ ಪುನರಾಹ ಸವಿಸ್ಮಯಃ ॥ ೭೫ ॥

ವ್ಯಾಸ ಉವಾಚ :—

ಅತ್ಯಾಶ್ಚರ್ಯಮಯೀಂ ಬ್ರಹ್ಮನ್ ಕಥಾಮೇತಾಂ ತಪೋಧನ ।
ಉಕ್ತವಾನಸಿ ಯೇನೈತತ್ಸಾಶ್ಚರ್ಯಂ ಮಮ ಮಾನಸಂ ॥ ೭೬ ॥
ವಿಸ್ತರೇಣ ಮಮ ಬ್ರೂಹಿ ಮಾಹಾತ್ಮ್ಯಂ ಪರಮಾದ್ಭುತಂ ॥ ೭೭ ॥
ಶೃಣು ಸಂಗಮಮಾಹಾತ್ಮ್ಯಂ ವಿಪ್ರೇಂದ್ರ ಪರಮಾದ್ಭುತಂ ।
ಸ್ಕಂದದೇವಾಚ್ಛ್ರುತಂ ಸಮ್ಯಕ್ಕಥಯಾಮಿ ತಥಾ ತವ ॥ ೭೮ ॥
ದಶಕೋಟಿಸಹಸ್ರಾಣಿ ದಶಕೋಟಿಶತಾನಿ ಚ ।
ತೀರ್ಥಾನಿ ಸರಯೂನದ್ಯಾ ಘರ್ಘರೋದಕಸಂಗಮೇ ।
ನಿವಸಂತಿ ಸದಾ ವಿಪ್ರ ಸ್ಕಂದಾದವಗತಂ ಮಯಾ ॥ ೭೯ ॥

---

೭೪. ಹೀಗೆ ಯಾವನು ಯಾತ್ರೆಯನ್ನು ಮಾಡುತ್ತಾನೆಯೋ ಅವನು ವಿಷ್ಣುಲೋಕದಲ್ಲಿ ಆನಂದಿಸುತ್ತಿರುತ್ತಾನೆ.''

೭೫. ಶ್ರೀಸೂತಪುರಾಣಿಕನು ಹೇಳುತ್ತಾನೆ:— ಕುಂಭಸಂಭವನಾದ ಅಗಸ್ತ್ಯಮುನಿಯು ಹೀಗೆ ನುಡಿದು ಸುಮ್ಮನಾಗಲು ಕೃಷ್ಣದ್ವೈಪಾಯನನಾದ ವ್ಯಾಸಮುನಿಯು ವಿಸ್ಮಯಗೊಂಡವನಾಗಿ ಮತ್ತೆ ಕೇಳಿದನು.

೭೬. ವ್ಯಾಸನು ಕೇಳುತ್ತಾನೆ:—'' ತಪೋಧನನಾದ ಎಲೈ ಬ್ರಾಹ್ಮಣನೇ! ಅತ್ಯಾಶ್ಚರ್ಯಕರವಾದ ಈ ಕಥೆಯನ್ನು ನೀನು ಹೇಳಿದೆಯಾದ್ದರಿಂದ ನನ್ನ ಮನಸ್ಸು ಆಶ್ಚರ್ಯಗೊಂಡಿದೆ.

೭೭. ಪರಮಾದ್ಭುತವಾದ ಈ ಮಾಹಾತ್ಮ್ಯವನ್ನು ವಿಸ್ತಾರವಾಗಿ ನನಗೆ ತಿಳಿಸು.

೭೮. ಅಗಸ್ತ್ಯನು ಹೇಳುತ್ತಾನೆ:—ಅಯ್ಯಾ ವಿಪ್ರೇಂದ್ರನೆ! ಪರಮಾದ್ಭುತವಾದ ಸಂಗಮಮಾಹಾತ್ಮ್ಯವನ್ನಾಲಿಸು. ಸ್ಕಂದದೇವನಿಂದ ಇದನ್ನು ನಾನು ಕೇಳಿದ್ದೇನೆ; ಹೇಗೆ ಕೇಳಿದೆನೋ ಹಾಗೆಯೇ ಅದನ್ನು ಚೆನ್ನಾಗಿ ನಿನಗೆ ತಿಳಿಸುತ್ತೇನೆ.

೭೯. ದಶಕೋಟಿಸಹಸ್ರ ಮತ್ತು ದಶಕೋಟಿಶತಸಂಖ್ಯೆಯ ತೀರ್ಥಗಳೂ, ಸರಯೂನದಿಯು ಘರ್ಘರೋದಕದೊಡನೆ ಸಂಗಮವಾಗುವ ಸ್ಥಳದಲ್ಲಿ ಸದಾ ನೆಲಸಿರುತ್ತವೆ. ಎಲೈ ವಿಪ್ರನೇ! ಇದನ್ನು ನಾನು ಸ್ಕಂದನಿಂದ ತಿಳಿದುಕೊಂಡಿದ್ದೇನೆ.

ದೇವತಾನಾಂ ಸುರಾಣಾಂ ಚ ಸಿದ್ಧಾನಾಂ ಯೋಗಿನಾಂ ತಥಾ ।
ಬ್ರಹ್ಮವಿಷ್ಣುಶಿವಾನಾಂ ಚ ಸಾನ್ನಿಧ್ಯಂ ಸರ್ವದಾ ಸ್ಥಿತಂ ॥ ೮೦ ॥
ತಸ್ಮಿನ್‌ಸಂಗಮಸಲಿಲೇ ನರಃ ಸ್ನಾತ್ವಾ ಸಮಾಹಿತಃ ।
ಸಂತರ್ಪ್ಯ ಪಿತೃದೇವಾಂಶ್ಚ ದತ್ವಾ ದಾನಂ ಸ್ವಶಕ್ತಿತಃ ॥ ೮೧ ॥
ಹುತ್ವಾ ವೈಷ್ಣವಮಂತ್ರೇಣ ಶುಚಿರ್ಯತ್ಫಲಮಾಪ್ನುಯಾತ್ ।
ತದಿಹೈಕಮನಾ ವಿಪ್ರ ಶೃಣು ಯತ್ಕಥಯಾಮಿ ತೇ ॥ ೮೨ ॥
ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಕುರುಕ್ಷೇತ್ರೇ ಮಹಾಕ್ಷೇತ್ರೇ ರಾಹುಗ್ರಸ್ತೇ ದಿವಾಕರೇ ॥ ೮೩ ॥
ಸುವರ್ಣದಾನೇ ಯತ್ಪುಣ್ಯಮಹನ್ಯಹನಿ ತದ್ಭವೇತ್ ॥ ೮೪ ॥
ಅಮಾವಾಸ್ಯಾಂ ಪೌರ್ಣಮಸ್ಯಾಂ ದ್ವಾದಶ್ಯೋರುಭಯೋರಪಿ ।
ಅಯನೇ ಚ ವ್ಯತೀಪಾತೇ ಸ್ನಾನಂ ವೈಷ್ಣವಲೋಕದಂ ॥ ೮೫ ॥
ತಿಷ್ಠೇದ್ಯುಗಸಹಸ್ರಂ ತು ಪಾದೇನೈಕೇನ ಯಃ ಪುಮಾನ್ ।
ವಿಧಿವತ್‌ಸಂಗಮೇ ಸ್ನಾಯಾತ್‌ಪೌಷ್ಯಾಂ ತದವಿಶೇಷತಃ ॥ ೮೬ ॥

---

೮೦. ದೇವತೆಗಳು, ಸುರರು, ಸಿದ್ಧರು, ಯೋಗಿಗಳು, ಬ್ರಹ್ಮ, ವಿಷ್ಣು, ಶಿವ—ಮುಂತಾದ ಎಲ್ಲರ ಸಾನ್ನಿಧ್ಯವೂ ಅಲ್ಲಿ ಸರ್ವದಾ ಸ್ಥಿರವಾಗಿರುವುದು.

೮೧–೮೨. ಆ ಸಂಗಮ ಜಲದಲ್ಲಿ ನರನು ಸ್ನಾನಮಾಡಿ ಮನಸ್ಸಮಾಧಾನವನ್ನು ಹೊಂದಿ ಪಿತೃದೇವತೆಗಳಿಗೆ ತರ್ಪಣಾದಿಗಳಿಂದ ತೃಪ್ತಿಯನ್ನುಂಟುಮಾಡಿ ಶಕ್ತ್ಯನುಸಾರವಾಗಿ ದಾನಕೊಟ್ಟಲ್ಲಿ, ವೈಷ್ಣವಮಂತ್ರಗಳಿಂದ ಶುಚಿಯಾಗಿ ಹೋಮ ಮಾಡಿದವನು ಯಾವ ಫಲವನ್ನು ಪಡೆಯುವನೋ ಆ ಫಲವನ್ನೇ ಪಡೆಯುತ್ತಾನೆ. ಎಲೈ ವಿಪ್ರನೇ! ನಾನು ಹೇಳುವುದನ್ನು ಒಮ್ಮನಸ್ಸಿನಿಂದ ಕಿವಿಗೊಟ್ಟು ಕೇಳು.

೮೩–೮೪. ಸಾವಿರ ಅಶ್ವಮೇಧಯಜ್ಞಗಳಿಗೂ, ನೂರು ವಾಜಪೇಯಗಳಿಗೂ, ಮಹಾಕ್ಷೇತ್ರವಾದ ಕುರುಕ್ಷೇತ್ರದಲ್ಲಿ ರಾಹುಗ್ರಸ್ತವಾಗಿ ಸೂರ್ಯಗ್ರಹಣವಾದಂದು ಸುವರ್ಣದಾನಮಾಡಿದ್ದಕ್ಕೂ ಯಾವ ಪುಣ್ಯವುಂಟೋ ಆ ಪುಣ್ಯವು ಇಲ್ಲಿ ದಿನದಿನವೂ ಸ್ನಾನಮಾಡುವುದರಿಂದ ಲಭಿಸುತ್ತದೆ.

೮೫–೮೬. ಅಮಾವಾಸ್ಯೆಯಲ್ಲಿ, ಪೂರ್ಣಿಮೆಯಲ್ಲಿ, ಎರಡೂ (ಪಕ್ಷಗಳ) ದ್ವಾದಶಿಗಳಲ್ಲಿ, ಅಯನಕಾಲಗಳಲ್ಲಿ, ವ್ಯತೀಪಾತದಲ್ಲಿ ಇಲ್ಲಿ ಸ್ನಾನಮಾಡುವುದು ವೈಷ್ಣವಲೋಕವನ್ನು ದೊರಕಿಸಿಕೊಡುತ್ತದೆ. ಯಾವ ಪುರುಷನು ಒಂದು ಕಾಲಿನಿಂದಲೇ ಸಹಸ್ರಯುಗದಷ್ಟುಕಾಲ ತಪಸ್ಸುಮಾಡುತ್ತ ನಿಲ್ಲುವನೋ, ಯಾವನು ಪುಷ್ಯಮಾಸದಲ್ಲಿ ಈ ಸಂಗಮಸ್ಥಳದಲ್ಲಿ ವಿಧಿವತ್ತಾಗಿ ಸ್ನಾನಮಾಡುವನೋ ಅವರಿಬ್ಬರಿಗೂ ದೊರೆಯುವ ಪುಣ್ಯವು ಒಂದೇ ಸಮವೆಂದು ತಿಳಿ.

ಲಂಬತೇಽವಾಕ್ಛಿರಾ ಯಸ್ತು ಯುಗಾನಾಮಾಯುತಂ ಪುಮಾನ್ ।
ಸ್ನಾತಾನಾಂ ಶುಚಿಭಿಸ್ತೋಯೈಃ ಸಂಗಮೇ ಪ್ರಯತಾತ್ಮನಾಂ ॥ ೮೭ ॥
ವ್ಯುಷ್ಟಿರ್ಭವತಿ ಯಾ ಪುಂಸಾಂ ನ ಸಾ ಕ್ರತುಶತೈರಪಿ ॥ ೮೮ ॥
ಪೌಷೇ ಮಾಸಿ ವಿಶೇಷೇಣ ಸ್ನಾನಂ ಬಹುಫಲಪ್ರದಂ ॥ ೮೯ ॥
ಪೌಷೇ ಮಾಸಿ ವಿಶೇಷೇಣ ಯಃ ಕುರ್ಯಾತ್ ಸ್ನಾನಮಾದೃತಃ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ವರ್ಣಸಂಕರಃ ।
ಸ ಯಾತಿ ಬ್ರಹ್ಮಣಃ ಸ್ಥಾನಂ ಪುನರಾವೃತ್ತಿವರ್ಜಿತಂ ॥ ೯೦ ॥
ಪೌಷೇ ಮಾಸೇ ತು ಯೋ ದದ್ಯಾತ್ ಘೃತಾಢ್ಯಂ ದೀಪಮುತ್ತಮಂ ।
ವಿಧಿವತ್ ಶ್ರದ್ಧಯಾ ವಿಪ್ರ ಶೃಣು ತಸ್ಯಾಪಿ ಯತ್ಫಲಂ ॥ ೯೧ ॥
ನಾನಾಜನ್ಮಾರ್ಜಿತಂ ಪಾಪಂ ಸ್ವಲ್ಪಂ ಬಹ್ವಪಿ ವಾ ಭವೇತ್ ।
ತತ್ಸರ್ವಂ ನಶ್ಯತಿ ಕ್ಷಿಪ್ರಂ ತೋಯಸ್ಥಂ ಲವಣಂ ಯಥಾ ॥ ೯೨ ॥
ಆಯುರಾರೋಗ್ಯಮೈಶ್ವರ್ಯಂ ಸಂತತಿಃ ಸೌಖ್ಯಮುತ್ತಮಂ ।
ಪ್ರಾಪ್ನೋತಿ ಫಲದಂ ನಿತ್ಯಂ ದೀಪದಃ ಪುಣ್ಯಭಾಙ್ನರಃ ॥ ೯೩ ॥

---

೮೭–೮೮. ಯಾವನು ತಲೆ ಕೆಳಗೆಮಾಡಿಕೊಂಡು ಹತ್ತುಸಾವಿರ ಯುಗಗಳ ವರೆಗೆ ತೂಗಾಡುತ್ತ ತಪಸ್ಸುಮಾಡುವನೋ ಅವನಿಗೆ ದೊರೆಯುವ ಫಲವು ಸಂಗಮಸ್ನಾನಫಲಕ್ಕೆ ಸಮವಾಗಿರುವುದು. ಸಂಗಮದಲ್ಲಿ ಶುಚಿಯಾದ ನೀರಿನಲ್ಲಿ ಸ್ನಾನಮಾಡಿ ಇಂದ್ರಿಯನಿಗ್ರಹಶಾಲಿಗಳಾದ ಪುರುಷರಿಗೆ ಯಾವ ಫಲವು ದೊರೆಯುವುದೋ ಆ ಫಲವು ನೂರಾರು ಯಜ್ಞಗಳಿಂದಲೂ ದೊರೆಯುವುದಿಲ್ಲವು.

೮೯. ವಿಶೇಷವಾಗಿ ಪುಷ್ಯಮಾಸದಲ್ಲಿ ಸಂಗಮಸ್ನಾನವು ಬಹು ಫಲಪ್ರದ ವಾಗುವುದು.

೯೦. ಪುಷ್ಯಮಾಸದಲ್ಲಿ ವಿಶೇಷವಾಗಿ ಯಾವನು ಆದರದಿಂದ ಸ್ನಾನ ಮಾಡುವನೋ ಅವನು ಬ್ರಾಹ್ಮಣನಾಗಿರಲಿ, ಕ್ಷತ್ರಿಯನಾಗಿರಲಿ, ವೈಶ್ಯ ನಾಗಿರಲಿ, ಶೂದ್ರನಾಗಲಿ ಅಥವಾ ಸಂಕರವರ್ಣದವನೇ ಆಗಿರಲಿ ಪುನರಾವೃತ್ತಿ ಯಿಲ್ಲದ ಬ್ರಹ್ಮನ ಸ್ಥಾನವನ್ನು ಹೋಗಿ ಸೇರುತ್ತಾನೆ.

೯೧. ಪುಷ್ಯಮಾಸದಲ್ಲಿ ಉತ್ತಮವಾದ ತುಪ್ಪದ ದೀಪವನ್ನು ಯಾವನು ವಿಧಿವತ್ತಾಗಿ ಶ್ರದ್ಧೆಯಿಂದ ನೀಡುತ್ತಾನೋ ಅವನಿಗೆ ಯಾವ ಫಲ ದೊರೆಯುವು ದೆಂಬುದನ್ನು ಕೇಳು.

೯೨. ಅವನು ನಾನಾ ಜನ್ಮಗಳಲ್ಲಿ ಸಂಪಾದಿಸಿದ ಪಾಪವು ಸ್ವಲ್ಪವೇ ಆಗಿರಲಿ ಬಹಳವೇ ಆಗಿರಲಿ ಅದೆಲ್ಲವೂ ನೀರಿನಲ್ಲಿ ಬಿದ್ದ ಉಪ್ಪು ಹೇಗೋ ಹಾಗೆ ಬಹುಬೇಗನೆಯೆ ನಾಶವಾಗಿಹೋಗುವುದು.

೯೩. ದೀಪದಾನವನ್ನು ಮಾಡಿದ ನರನು ಪುಣ್ಯಭಾಗಿಯಾಗುವನು. ಅವನು

ಯಸ್ತು ಶುಕ್ಲತ್ರಯೋದಶ್ಯಾಂ ಪೌಷೇಽತ್ರ ಪ್ರಯತೋ ವ್ರತೀ ।
ಜಾಗರಂ ಕುರುತೇ ಧೀರಃ ಸ ಗಚ್ಛೇದ್ಭವನಂ ಹರೇಃ ॥ ೯೪ ॥
ಜಾಗರಂ ವಿದಧದ್ರಾತ್ರೌ ದೀಪಂ ದತ್ವಾ ತು ಸರ್ವಶಃ ।
ಹೋಮಂ ಚ ಕಾರಯೇದ್ವಿಪ್ರೋ ನಿಯತಾತ್ಮಾ ಶುಚಿವ್ರತಃ ॥ ೯೫ ॥
ವೈಷ್ಣವೋ ವಿಷ್ಣುಪೂಜಾಂ ಚ ಕುರ್ವನ್ ಶೃಣ್ವನ್ ಹರೇಃ ಕಥಾಂ ।
ಗೀತವಾದಿತ್ರನೃತ್ಯೈಶ್ಚ ವಿಷ್ಣುತೋಷಣಕಾರಕೈಃ ।
ಕಥಾಭಿಃ ಪುಣ್ಯಯುಕ್ತಾಭಿರ್ಜಾಗೃಯಾಚ್ಛರ್ವರೀಂ ನರಃ ॥ ೯೬ ॥
ತತಃ ಪ್ರಭಾತೇ ವಿಮಲೇ ಸ್ನಾತ್ವಾ ವಿಧಿವದಾದರಾತ್ ।
ವಿಷ್ಣುಂ ಸಂಪೂಜ್ಯ ವಿಪ್ರಾಂಶ್ಚ ದೇಯಂ ಸ್ವರ್ಣಾದಿ ಶಕ್ತಿತಃ ॥ ೯೭ ॥
ಸ್ವರ್ಣಂ ಚಾನ್ನಂ ಚ ವಾಸಾಂಸಿ ಯೋ ದದ್ಯಾಚ್ಛ್ರದ್ಧಯಾಽನ್ವಿತಃ ।
ಸಂಗಮೇ ವಿಧಿವದ್ವಿದ್ವಾನ್ ಸಯಾತಿ ಪರಮಾಂ ಗತಿಂ ॥ ೯೮ ॥
ವರ್ಷೇ ವರ್ಷೇ ತು ಕರ್ತವ್ಯೋ ಜಾಗರಃ ಪುಣ್ಯತತ್ಪರೈಃ ॥ ೯೯ ॥

---

ಯಾವಾಗಲೂ ಆಯುಸ್ಸು, ಆರೋಗ್ಯ, ಐಶ್ವರ್ಯ, ಸಂತತಿ, ಉತ್ತಮವಾದ ಸೌಖ್ಯ—ಇವುಗಳನ್ನೆಲ್ಲವನ್ನೂ ಪಡೆಯುತ್ತಾನೆ.

೯೪. ಯಾವ ಧೀರನು ಪುಷ್ಯಮಾಸದ ಶುಕ್ಲತ್ರಯೋದಶಿಯ ದಿನ ಇಂದ್ರಿಯನಿಗ್ರಹವನ್ನು ಮಾಡಿಕೊಂಡು ವ್ರತವನ್ನು ಧರಿಸಿ ಈ ಸಂಗಮದಲ್ಲಿ ಜಾಗರಣೆ ಮಾಡುತ್ತಾನೆಯೋ ಅವನು ಶ್ರೀಹರಿಯ ಭವನವನ್ನೈದುತ್ತಾನೆ.

೯೫. ರಾತ್ರಿಯಲ್ಲಿ ಸಂಗಮದ ಎಲ್ಲಕಡೆಯೂ ದೀಪಗಳನ್ನು ಹಚ್ಚಿ ಜಾಗರಣೆ ಮಾಡಬೇಕು. ವಿಪ್ರನಾದವನು ಅಲ್ಲಿ ಆತ್ಮನಿಗ್ರಹಮಾಡಿಕೊಂಡು ಶುಚಿವ್ರತನಾಗಿ ಹೋಮವನ್ನೂ ಮಾಡಬೇಕು.

೯೬. ವೈಷ್ಣವನು ವಿಷ್ಣುಪೂಜೆಯನ್ನು ಮಾಡಬೇಕು. ಹರಿಕಥೆಯನ್ನು ಕೇಳುತ್ತ, ಗೀತವಾದ್ಯನೃತ್ಯಗಳಿಂದಲೂ, ವಿಷ್ಣುವಿಗೆ ಸಂತೋಷವುಂಟುಮಾಡುವಂಥ ಪುಣ್ಯಕರವಾದ ಕಥೆಗಳಿಂದಲೂ, ಜಾಗರಣೆಯಿಂದಲೂ ರಾತ್ರಿಯನ್ನು ಕಳೆಯಬೇಕು.

೯೭. ಬಳಿಕ ನಿರ್ಮಲವಾಗಿ ಬೆಳಗಾಗಲು ವಿಧಿವತ್ತಾಗಿ ಆದರದಿಂದ ಸ್ನಾನಮಾಡಿ ವಿಷ್ಣುವನ್ನೂ, ಬ್ರಾಹ್ಮಣರನ್ನೂ ಚೆನ್ನಾಗಿ ಪೂಜಿಸಿ ತನ್ನ ಶಕ್ತ್ಯನುಸಾರವಾಗಿ ಸ್ವರ್ಣಾದಿಗಳನ್ನು ದಾನಮಾಡಬೇಕು.

೯೮–೯೯. ಯಾವನು ಸಂಗಮದಲ್ಲಿ ಶ್ರದ್ಧೆಯಿಂದ ಚಿನ್ನವನ್ನೂ, ಅನ್ನವನ್ನೂ, ವಸ್ತ್ರಗಳನ್ನೂ ದಾನಮಾಡುವನೋ ಆ ವಿದ್ವಾಂಸನು ಪರಮಗತಿಯನ್ನೈದುತ್ತಾನೆ. ಪುಣ್ಯತತ್ಪರರಾದವರು ವರ್ಷವರ್ಷವೂ ಈ ರೀತಿಯಾಗಿಯೆ ಆ ಸಂಗಮದೆಡೆಯಲ್ಲಿ ಜಾಗರಣೆಯನ್ನು ಮಾಡಬೇಕು.

ಹರಿಃ ಪ್ರೂಜ್ಯೋ ದ್ವಿಜಾಃ ಸಮ್ಯಕ್ಸಂತೋಷ್ಯಾಃ ಶಕ್ತಿತೋ ನರೈಃ ।
ತೇನ ವಿಷ್ಣೋಃ ಪರಾ ತುಷ್ಟಿಃ ಪಾಪಾನಿ ವಿಫಲಾನಿ ಚ ।
ಭವಂತಿ ನಿರ್ವಿಷಾಃ ಸರ್ಪಾ ಯಥಾ ತಾರ್ಕ್ಷ್ಯಸ್ಯ ದರ್ಶನಾತ್ ॥ ೧೦೦ ॥
ತತ್ರ ಸ್ನಾತೋ ದಿವಂ ಯಾತಿ ಅತ್ರ ಸ್ನಾತಃ ಸುಖೀಭವೇತ್ ॥ ೧೦೧ ॥
ತ್ರಿಷು ಲೋಕೇಷು ಯೇ ಕೇಚಿತ್ಪ್ರಾಣಿನಃ ಸರ್ವ ಏವ ತೇ ।
ತರ್ಪ್ಯಮಾಣಾಃ ಪರಾಂ ತೃಪ್ತಿಂ ಯಾಂತಿ ಸಂಗಮಜೈರ್ಜಲೈಃ ॥ ೧೦೨ ॥
ಭೂತಾನಾಮಿಹ ಸರ್ವೇಷಾಂ ದುಃಖೋಪಹತಚೇತಸಾಂ ।
ಗತಿಮನ್ವೇಷಮಾಣಾನಾಂ ನ ಸಂಗಮಸಮಾ ಗತಿಃ ॥ ೧೦೩ ॥
ಸಪ್ತಾವರಾನ್ ಸಪ್ತಪರಾನ್ ಪುರುಷಶ್ಚಾತ್ಮನಾ ಸಹಾ ।
ಪುಂಸಸ್ತಾರಯತೇ ಸರ್ವಾನ್ಸಂಗಮೇ ಸ್ನಾನಮಾಚರನ್ ॥ ೧೦೪ ॥
ಜಾತ್ಯಂಧೈರಿಹ ತೇ ತುಲ್ಯಾಸ್ತಥಾ ಪಂಗುಭಿರೇವ ಚ ।
ಸಮೇತ್ಯಾತ್ರ ನ ಸ್ನಾಂತಿ ಸರಯೂಘರ್ಘರಸಂಗಮೇ ॥ ೧೦೫ ॥

---

೧೦೦. ಅಯ್ಯಾ ವಿಪ್ರನೇ! ಮಾನವರು ಈ ಸಂಗಮದೆಡೆಯಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ಶಕ್ತ್ಯನುಸಾರವಾಗಿ ಬ್ರಾಹ್ಮಣರನ್ನು ಸಂತೋಷಪಡಿಸಬೇಕು. ಅದರಿಂದ ಮಹಾವಿಷ್ಣುವಿಗೆ ಪರಮಸಂತುಷ್ಟಿಯುಂಟಾಗುತ್ತದೆ. ಅಲ್ಲದೆ, ಸರ್ಪಗಳು ಗರುಡನ ದರ್ಶನದಿಂದ ಹೇಗೋ ಹಾಗೆ, ಪಾಪಗಳೆಲ್ಲವೂ ವಿಫಲವಾಗುತ್ತವೆ.

೧೦೧. ಅಲ್ಲಿ ಸ್ನಾನಮಾಡಿದವನು ಸ್ವರ್ಗಕ್ಕೆ ಹೋಗುತ್ತಾನೆ. ಇಲ್ಲಿ ಸ್ನಾನಮಾಡಿದವನು ಸುಖಿಯಾಗುತ್ತಾನೆ.

೧೦೨. ಮೂರು ಲೋಕದಲ್ಲಿಯೂ ಯಾವಯಾವ ಪ್ರಾಣಿಗಳಿರುವುವೋ ಅವೆಲ್ಲವೂ ಸಂಗಮಜಲದಿಂದ ತೃಪ್ತಿಪಡಿಸಲ್ಪಟ್ಟುವಾದರೆ ಪರಮತೃಪ್ತಿಯನ್ನು ಪಡೆಯುತ್ತವೆ.

೧೦೩. ಈ ಲೋಕದಲ್ಲಿ ದುಃಖದಿಂದ ಚೈತನ್ಯವನ್ನು ಕಳೆದುಕೊಂಡು ಬಳಲುತ್ತ ಮೇಲಾದ ಗತಿಯನ್ನು ಹುಡುಕುತ್ತಿರುವ ಸಮಸ್ತ ಭೂತಗಳಿಗೂ ಸಂಗಮಕ್ಕೆ ಸಮಾನವೂ, ಗತಿದಾಯಕವೂ ಆದ ತೀರ್ಥವು ಬೇರೊಂದಿಲ್ಲ.

೧೦೪. ಸಂಗಮದಲ್ಲಿ ಸ್ನಾನಮಾಡುವ ಪುರುಷನು ತನ್ನ ಹಿಂದಿನ ಏಳು ತಲೆಮೊರೆಯ ಪಿತೃಗಳನ್ನೂ, ಮುಂದಿನ ಏಳು ತಲೆಮೊರೆಯವರನ್ನೂ ಅಲ್ಲದೆ, ತನ್ನನ್ನೂ, ಎಲ್ಲರನ್ನೂ—ಭವಸಾಗರದಿಂದ ದಾಟಿಸುತ್ತಾನೆ.

೧೦೫. ಯಾರು ಇಲ್ಲಿಗೆ ಬಂದು ಸರಯೂ ಮತ್ತು ಘರ್ಘರಗಳ ಸಂಗಮದಲ್ಲಿ ಸ್ನಾನಮಾಡುವುದಿಲ್ಲವೋ ಅವರು ಹುಟ್ಟುಕುರುಡರಿಗೂ, ಕುಂಟರಿಗೂ ಸಮಾನರು.

ವರ್ಣಾನಾಂ ಬ್ರಾಹ್ಮಣೋ ಯದ್ವತ್ತಥಾ ತೀರ್ಥೇಷು ಸಂಗಮಃ ।
ಸರಯೂಘರ್ಘರಾಯೋಗೇ ವೈಷ್ಣವಸ್ಥೋ ನರಃ ಸದಾ ॥ ೧೦೬ ॥
ಅತ್ರ ಸ್ನಾನೇನ ದಾನೇನ ಯಥಾ ಶಕ್ತ್ಯಾ ಜಿತೇಂದ್ರಿಯಃ ।
ಹೋಮೇನ ವಿಧಿಯುಕ್ತೇನ ನರಃ ಸ್ವರ್ಗಮವಾಪ್ನುಯಾತ್ ॥ ೧೦೭ ॥
ನರೋ ವಾ ಯದಿ ವಾ ನಾರೀ ವಿಧಿವತ್ಸ್ನಾನಮಾಚರೇತ್ ।
ಸ್ವರ್ಗಲೋಕನಿವಾಸೋ ಹಿ ಭವೇತ್ತಸ್ಯ ನ ಸಂಶಯಃ ॥ ೧೦೮ ॥
ಯಥಾ ವಹ್ನಿರ್ದಹೇತ್ಸರ್ವಂ ಶುಷ್ಕಮಾರ್ದ್ರಮಥಾಪಿ ವಾ ।
ಭಸ್ಮೀಭವಂತಿ ಪಾಪಾನಿ ತತ್ಸಮಾಗಮಮಜ್ಜನಾತ್ ॥ ೧೦೯ ॥
ಏಕತಃ ಸರ್ವತೀರ್ಥಾನಿ ನಾನಾವಿಧಫಲಾನಿ ವೈ ।
ಸರಯೂಘರ್ಘರೋತ್ಪನ್ನ ಸಂಗಮಸ್ತ್ವಧಿಕೋ ಭವೇತ್ ॥ ೧೧೦ ॥
ಸರ್ವತೀರ್ಥಾವಗಾಹಸ್ಯ ಫಲಂ ಯಾದೃಕ್ ಸ್ಮೃತಂ ಶ್ರುತೌ ।
ತಾದೃಕ್ಫಲಂ ನೃಣಾಂ ಸಮ್ಯಗ್ಭವೇತ್ಸಂಗಮಮಜ್ಜನಾತ್ ॥ ೧೧೧ ॥

---

೧೦೬. ವರ್ಣಗಳಲ್ಲಿ ಬ್ರಾಹ್ಮಣನು ಹೇಗೊ, ತೀರ್ಥಗಳಲ್ಲಿ ಸಂಗಮವು ಹಾಗೆ ಶ್ರೇಷ್ಠವಾದುದು. ಸರಯೂಘರ್ಘರಗಳ ಕೂಡಲಿಯಲ್ಲಿ ವಾಸವಾಗಿರುವ ನರನು ಸದಾ ವೈಕುಂಠದಲ್ಲಿ ನೆಲಸಿದವನಂತೆಯೆ ಸರಿ.

೧೦೭. ಮಾನವನು ಜಿತೇಂದ್ರಿಯನಾಗಿ ಇಲ್ಲಿ ಯಥಾಶಕ್ತಿಯಾಗಿ ಸ್ನಾನ ಮಾಡುವುದರಿಂದಲೂ, ದಾನಮಾಡುವುದರಿಂದಲೂ, ವಿಧಿವತ್ತಾಗಿ ಹೋಮ ಮಾಡುವುದರಿಂದಲೂ ಸ್ವರ್ಗವನ್ನು ಪಡೆಯುತ್ತಾನೆ.

೧೦೮. ನರನೇ ಆಗಲಿ, ನಾರಿಯೇ ಆಗಲಿ ವಿಧಿವತ್ತಾಗಿ ಇಲ್ಲಿ ಸ್ನಾನಮಾಡಿದರೆ, ಸ್ವರ್ಗಲೋಕವಾಸವು ದೊರತೇ ದೊರೆಯುವುದು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲವು.

೧೦೯. ಬೆಂಕಿಯು ಒಣಗಿದ, ಹಸಿಯ ಎಲ್ಲ ವಸ್ತುಗಳನ್ನೂ ಹೇಗೆ ಸುಟ್ಟು ಹಾಕುವುದೋ, ಹಾಗೆಯೇ ಸಂಗಮಕ್ಷೇತ್ರಕ್ಕೆ ಬರುವುದರಿಂದಲೂ, ಅಲ್ಲಿ ಮುಳುಗಿ ಸ್ನಾನಮಾಡುವುದರಿಂದಲೂ ಪಾಪಗಳೆಲ್ಲವೂ ಸುಟ್ಟು ಬೂದಿಯಾಗಿ ಹೋಗುತ್ತವೆ.

೧೧೦. ಬಗೆಬಗೆಯ ವಿಧಿಗಳು ಮತ್ತು ಫಲಗಳಿಂದ ಕೂಡಿದ ಸಮಸ್ತ ತೀರ್ಥಗಳೂ ಒಂದು ಕಡೆ, ಸರಯೂ ಘರ್ಘರಗಳ ಸಂಗಮವೇ ಒಂದು ಕಡೆ, ಹಾಗೆ ನೋಡಿದಲ್ಲಿ ಸಂಗಮವೇ ಅಧಿಕವಾಗುತ್ತದೆ.

೧೧೧. ಸರ್ವತೀರ್ಥಗಳಲ್ಲಿಯೂ ಮುಳುಗಿ ಸ್ನಾನಮಾಡಿದ್ದರ ಫಲವು ಯಾವ ರೀತಿಯೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದೋ, ಸಂಗಮದಲ್ಲಿ ಮಜ್ಜನ ಮಾಡುವುದರಿಂದ ನರರಿಗೆ ಆ ರೀತಿಯ ಫಲವು ಸಂಪೂರ್ಣವಾಗಿ ದೊರಕುತ್ತದೆ.

ಗೋಪ್ರತಾರಾಭಿಧಂ ತೀರ್ಥಮಪರಂ ವರ್ತತೇಽನಘ ।
ಸನ್ನಿಧೌ ಸಂಗಮಸ್ಯೈವ ಮಹಾಪಾತಕನಾಶನಂ ॥ ೧೧೨ ॥
ಯತ್ರ ಸ್ನಾನೇನ ದಾನೇನ ನ ಶೋಚತಿ ನರಃ ಕ್ವಚಿತ್ ।
ಗೋಪ್ರತಾರಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೧೧೩ ॥
ವಾರಾಣಸ್ಯಾಂ ಯಥಾ ವಿದ್ವನ್ ವರ್ತತೇ ಮಣಿಕರ್ಣಿಕಾ ।
ಉಜ್ಜಯಿನ್ಯಾಂ ಯಥಾ ವಿಪ್ರ ಮಹಾಕಾಲನಿಕೇತನಂ ॥ ೧೧೪ ॥
ನೈಮಿಷೇ ಚಕ್ರವಾಪೀ ತು ಯಥಾತೀರ್ಥತಮಾ ಸ್ಮೃತಾ ।
ಅಯೋಧ್ಯಾಯಾಂ ತಥಾ ವಿಪ್ರ ಗೋಪ್ರತಾರಾಭಿಧಂ ಮಹತ್ ॥ ೧೧೫ ॥
ಯತ್ರ ರಾಮಾಜ್ಞಯಾ ವಿದ್ವನ್ ಸಾಕೇತನಗರೀಜನಾಃ ।
ಅವಾಪುಃ ಸ್ವರ್ಗಮತುಲಂ ನಿಮಜ್ಜ್ಯ ಪರಮಾಂಭಸಿ ॥ ೧೧೬ ॥

ವ್ಯಾಸ ಉವಾಚ:—

ಅವಾಪುಸ್ತೇ ಕಥಂ ಸ್ವರ್ಗಂ ಸಾಕೇತನಗರೀಜನಾಃ ।
ಕಥಂ ಚ ರಾಘವೋ ವಿದ್ವನ್ನೇತತ್ಕಥಯ ಸುವ್ರತ ॥ ೧೧೭ ॥

---

೧೧೨. ಎಲೈ ಪಾಪರಹಿತನೇ! ಸಂಗಮದ ಸನ್ನಿಧಿಯಲ್ಲಿಯೇ ಮಹಾಪಾತಕಗಳನ್ನು ನಾಶಗೊಳಿಸುವುದಾದ ಗೋಪ್ರತಾರವೆಂಬ ಮತ್ತೊಂದು ತೀರ್ಥವಿರುವುದು.

೧೧೩. ಅಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ ಮಾನವನು ತನ್ನ ಜೀವಿತಕಾಲದಲ್ಲಿ ಒಮ್ಮೆಯಾದರೂ ಶೋಕಪಡುವಂತಾಗುವುದಿಲ್ಲವು. ಗೋಪ್ರತಾರಕ್ಕೆ ಸಮಾನವಾದ ತೀರ್ಥವು ಹಿಂದಿರಲಿಲ್ಲ ; ಮುಂದಾಗುವುದಿಲ್ಲ.

೧೧೪–೧೧೫. ಎಲೈ ವಿದ್ವಾಂಸನೇ! ವಾರಣಾಸಿಯಲ್ಲಿ ಮಣಿಕರ್ಣಿಕೆಯು ಯಾವ ರೀತಿ ಶ್ರೇಷ್ಠವಾಗಿರುವುದೋ, ಉಜ್ಜಯಿನಿಯಲ್ಲಿ ಮಹಾಕಾಲಮಂದಿರವು ಯಾವ ರೀತಿ ಮೆರೆಯುತ್ತಿರುವುದೋ, ನೈಮಿಷದಲ್ಲಿ ಚಕ್ರವಾಪಿಯು ಯಾವ ರೀತಿ ತೀರ್ಥತಮವೆಂದು ಭಾವಿಸಲ್ಪಟ್ಟಿದೆಯೋ ಅದೇ ರೀತಿ ಅಯೋಧ್ಯೆಯಲ್ಲಿರುವ ಈ ಗೋಪ್ರತಾರತೀರ್ಥವು ಮಹತ್ತಾದುದೆಂದು ಎಣಿಸಲ್ಪಟ್ಟಿದೆ.

೧೧೬. ಎಲೈ ವಿದ್ವಾಂಸನೇ! ಶ್ರೀರಾಮಮೂರ್ತಿಯ ಆಜ್ಞೆಯಿಂದ ಸಾಕೇತನಗರಿಯ ಜನರೆಲ್ಲರೂ ಅಲ್ಲಿನ ಪರಮಜಲದಲ್ಲಿ ಮಜ್ಜನಮಾಡಿ ಎಣೆಯಿಲ್ಲದ ಸ್ವರ್ಗವನ್ನು ಪಡೆದರು.

೧೧೭. ವ್ಯಾಸನು ಹೇಳುತ್ತಾನೆ:—"ಸಾಕೇತನಗರಿಯ ಜನರು ಸ್ವರ್ಗವನ್ನು ಪಡೆದುದೆಂತು? ರಾಘವನು ಸ್ವರ್ಗವನ್ನೈದಿದುದು ಹೇಗೆ? ಎಲೈ ಸುವ್ರತನೇ! ಇದನ್ನು ಹೇಳು" ಎಂದನು.

ಅಗಸ್ತ್ಯ ಉವಾಚ :—

ಸಾವಧಾನಃ ಶೃಣು ಮುನೇ ಕಥಾಮೇತಾಂ ಸುವಿಸ್ತರಾತ್ ।
ಯಥಾ ಜಗಾಮ ರಾಮೋಽಸೌ ಸ್ವರ್ಗಂ ಸ ಚ ಪುರೀಜನಃ ॥ ೧೧೮ ॥
ಪುರಾ ರಾಮೋ ವಿಧಾಯೈವ ದೇವಕಾರ್ಯಮತಂದ್ರಿತಃ ।
ಸ್ವರ್ಗಂ ಗಂತುಂ ಮನಶ್ಚಕ್ರೇ ಭ್ರಾತೃಭ್ಯಾಂ ಸಹ ವೀರಧೀಃ ॥ ೧೧೯ ॥
ತತೋ ನಿಶಮ್ಯ ಚಾರೇಣ ವಾನರಾಃ ಕಾಮರೂಪಿಣಃ ।
ಋಕ್ಷಗೋಪುಚ್ಛರಕ್ಷಾಂಸಿ ಸಮುತ್ಪೇತುರನೇಕಶಃ ॥ ೧೨೦ ॥
ದೇವಗಂಧರ್ವಪುತ್ರಾಶ್ಚ ಋಷಿಪುತ್ರಾಶ್ಚ ವಾನರಾಃ ।
ರಾಮಕ್ಷಯಂ ವಿದಿತ್ವಾ ತು ಸರ್ವ ಏವ ಸಮಾಗತಾಃ ॥ ೧೨೧ ॥
ತೇ ರಾಮಮನುಗತ್ಯೋಚುಃ ಸರ್ವೇ ವಾನರಯೂಥಪಾಃ ।
ತವಾನುಗಮನೇ ರಾಜನ್ ಸಂಪ್ರಾಪ್ತಾಃಸ್ಮ ಇಹಾನಘ ॥ ೧೨೨ ॥
ಯದಿ ರಾಮಂ ವಿನಾಸ್ಮಾಭಿರ್ಗಚ್ಛೇಸ್ತ್ವಂ ಪುರಷರ್ಷಭ ।
ಸರ್ವೇ ಖಲುಃ ಹತಾಃ ಸ್ಯಾಮ ದಂಡೇನ ಮಹತಾ ನೃಪ ॥ ೧೨೩ ॥

---

೧೧೮. ಅಗಸ್ತ್ಯನು ಹೇಳುತ್ತಾನೆ:—" ಎಲೈ ಮುನಿಯೇ ! ಶ್ರೀರಾಮನು ಸ್ವರ್ಗಕ್ಕೆ ಹೋದುದು ಹೇಗೆ? ಆ ಪಟ್ಟಣದ ಜನರು ಹೇಗೆ ಸ್ವರ್ಗವನ್ನೈದಿದರು ? ಎಂಬುದು ಬಹು ವಿಸ್ತಾರವಾದ ಕಥೆ. ಇದನ್ನು ಹೇಳುತ್ತೇನೆ; ಸಾವಧಾನವಾಗಿ ಆಲಿಸು.

೧೧೯. ಪೂರ್ವದಲ್ಲಿ ಧೀರನಾದ ಶ್ರೀರಾಮನು ಆಲಸ್ಯವಿಲ್ಲದವನಾಗಿ ದೇವಕಾರ್ಯವನ್ನು ನಿರ್ವಹಿಸಿ ಸೋದರರೊಡನೆ ಸ್ವರ್ಗಕ್ಕೆ ಹೋಗಲು ಮನಸ್ಸು ಮಾಡಿದನು.

೧೨೦. ಬಳಿಕ ಗೂಢಚಾರನಿಂದ ಆ ಸುದ್ದಿಯನ್ನು ಕೇಳಿ ಕಾಮರೂಪಿಗಳಾದ ವಾನರರೂ, ಋಕ್ಷರೂ, ಗೋಪುಚ್ಛರೂ, ರಾಕ್ಷಸರೂ ಅನೇಕಪ್ರಕಾರವಾಗಿ ಅಯೋಧ್ಯೆಗೆ ಹಾರಿಬಂದರು.

೧೨೧. ದೇವಗಂಧರ್ವಪುತ್ರರೂ, ಋಷಿಪುತ್ರರೂ ಆದ ಆ ವಾನರರು ಶ್ರೀರಾಮನು ಅಂತರ್ಧಾನವಾಗುವುದನ್ನರಿತು ಎಲ್ಲರೂ ಅಲ್ಲಿಗೆ ಬಂದು ಸೇರಿದರು.

೧೨೨. ಆ ವಾನರರ ಗುಂಪುಗಳ ನಾಯಕರೆಲ್ಲರೂ ಶ್ರೀರಾಮನ ಬಳಿಸಾರಿ ಆತನಲ್ಲಿ ಹೀಗೆ ಬಿನ್ನವಿಸಿದರು :—' ಮಹಾರಾಜಾ ! ಪಾಪರಹಿತನಾದ ನಿನ್ನನ್ನು ಅನುಸರಿಸುವುದಕ್ಕಾಗಿಯೇ ನಾವು ಪ್ರಕೃತದಲ್ಲಿ ಇಲ್ಲಿಗೆ ಬಂದಿದ್ದೇವೆ.

೧೨೩. ಪುರುಷರ್ಷಭನಾದ ಎಲೈ ಶ್ರೀರಾಮನೇ ! ನಮ್ಮೆಲ್ಲರನ್ನೂ ಬಿಟ್ಟು

ಶ್ರುತ್ವಾ ತು ವಚನಂ ತೇಷಾಂ ಋಕ್ಷವಾನರರಕ್ಷಸಾಂ ।
ವಿಭೀಷಣಮುವಾಚಾಥ ರಾಘವಸ್ತತ್ಕ್ಷಣಂ ಗಿರಾ ॥ ೧೨೪ ॥
ಯಾವತ್ಪ್ರಜಾ ಧರಿಷ್ಯಂತಿ ತಾವದೇವ ವಿಭೀಷಣ ।
ಕಾರಯಸ್ವ ಮಹದ್ರಾಜ್ಯಂ ಲಂಕಾಂ ತ್ವಂ ಪಾಲಯಿಷ್ಯಸಿ ॥ ೧೨೫ ॥
ಶಾಧಿ ರಾಜ್ಯಂ ಚ ಖಲ್ವೇತನ್ನಾನ್ಯಥಾ ಮೇ ವಚಃ ಕುರು ।
ಪ್ರಜಾಸ್ತ್ವಂ ರಕ್ಷ ಧರ್ಮೇಣ ನೋತ್ತರಂ ವಕ್ತುಮರ್ಹಸಿ ॥ ೧೨೬ ॥
ಏವಮುಕ್ತ್ವಾ ತು ಕಾಕುತ್ಸ್ಥೋ ಹನುಮಂತಮಥಾಬ್ರವೀತ್ ।
ವಾಯುಪುತ್ರ ಚಿರಂಜೀವ ಮಾ ಪ್ರತಿಜ್ಞಾಂ ವೃಥಾ ಕೃಥಾಃ ॥ ೧೨೭ ॥
ಯಾವಲ್ಲೋಕಾ ವದಿಷ್ಯಂತಿ ಮತ್ಕಥಾಂ ವಾನರರ್ಷಭ ।
ತಾವತ್ತ್ವಂ ಧಾರಯ ಪ್ರಾಣಾನ್ಪ್ರತಿಜ್ಞಾಂ ಪ್ರತಿಪಾಲಯನ್ ॥ ೧೨೮ ॥
ಮೈಂದಶ್ಚ ದ್ವಿವಿದಶ್ಚೈವ ಅಮೃತಪ್ರಾಶನಾವುಭೌ ।
ಯಾವಲ್ಲೋಕಾ ಧರಿಷ್ಯಂತಿ ತಾವದೇತೌ ಧರಿಷ್ಯತಃ ॥ ೧೨೯ ॥

---

ನೀನು ಸ್ವರ್ಗಕ್ಕೆ ಹೊರಟುಹೋಗುವೆಯಾದರೆ, ನಾವೆಲ್ಲರೂ ಮಹತ್ತಾದ ದಂಡ ದಿಂದ ಹೊಡೆಯಲ್ಪಟ್ಟವರಂತಾಗುತ್ತೇವೆ.'

೧೨೪. ಋಷಿಗಳ, ವಾನರರ ಮತ್ತು ರಾಕ್ಷಸರ ಆ ನುಡಿಯನ್ನಾಲಿಸಿ ರಾಘವನು ಆ ಕ್ಷಣವೆ ವಿಭೀಷಣನನ್ನು ಕುರಿತು ಇಂತು ನುಡಿದನು :—

೧೨೫. 'ವಿಭೀಷಣಾ! ನಿನ್ನ ರಾಜ್ಯದಲ್ಲಿ ಪ್ರಜೆಗಳು ಎಲ್ಲಿಯವರೆಗೂ ಜೀವಿಸಿರುತ್ತಾರೆಯೋ ಅಲ್ಲಿಯವರೆಗೆ ನೀನು ರಾಜ್ಯವನ್ನು ಆಳುತ್ತಿರಬೇಕು, ಲಂಕೆಯನ್ನೂ ನೀನು ಪಾಲಿಸುತ್ತಿರಬೇಕು.

೧೨೬. ಆದುದರಿಂದ ನೀನು ರಾಜ್ಯವನ್ನು ಆಳುತ್ತಿರು. ನನ್ನ ಈ ಮಾತನ್ನು ನಡಸು; ಅನ್ಯಥಾ ಮಾಡಬೇಡ. ನೀನು ಪ್ರಜೆಗಳನ್ನು ಧರ್ಮದಿಂದ ಸಂರಕ್ಷಿಸು ತ್ತಿರು. ನನಗೆ ಪ್ರತಿಯಾಗಿ ಯಾವ ಉತ್ತರವನ್ನೂ ಹೇಳಬೇಡ.'

೧೨೭. ಹೀಗೆಂದು ಹೇಳಿದ ಬಳಿಕ ಆ ಕಾಕುತ್ಸ್ಥನು ಹನುಮಂತನನ್ನು ಕುರಿತು ಇಂತೆಂದನು :—'ವಾಯುಪುತ್ರ! ಈ ಲೋಕದಲ್ಲಿ ನೀನು ಚಿರಕಾಲ ಜೀವಿಸಿರಬೇಕು. ಈ ನನ್ನ ಪ್ರತಿಜ್ಞೆಯನ್ನು ವ್ಯರ್ಥಗೊಳಿಸಬೇಡ.

೧೨೮. ಎಲೈ ವಾನರಶ್ರೇಷ್ಠನೇ! ಎಲ್ಲಿಯವರೆಗೆ ಲೋಕದ ಜನರು ನನ್ನ ಕಥೆಯನ್ನು ಹೇಳುತ್ತಿರುವರೋ, ಅಲ್ಲಿಯವರೆಗೂ ನೀನು ನನ್ನ ಪ್ರತಿಜ್ಞೆಯನ್ನು ಪರಿಪಾಲಿಸುತ್ತ ಪ್ರಾಣಗಳನ್ನು ಧರಿಸಿಕೊಂಡಿರು.

೧೨೯. ಮೈಂದ, ದ್ವಿವಿದರಿಬ್ಬರೂ ಅಮೃತಪ್ರಾಶನಮಾಡಿರುವವರು. ಲೋಕಗಳು ಎಲ್ಲಿಯವರೆಗೆ ಬಾಳಲಿರುವುವೋ ಅಲ್ಲಿಯವರೆಗೂ ಅವರಿಬ್ಬರೂ ಬದುಕಿರುತ್ತಾರೆ.

ಪುತ್ರಪೌತ್ರಾಶ್ಚ ಯೇऽಸ್ಮಾಕಂ ತಾನ್ರಕ್ಷಂತ್ವಿಹ ವಾನರಾಃ ।
ಏವಮುಕ್ತ್ವಾ ತು ಕಾಕುತ್ಸ್ಥಃ ಸರ್ವಾನಥ ಚ ವಾನರಾನ್ ।
ಮಯಾ ಸಾರ್ಧಂ ಪ್ರಯಾತೇತಿ ತದಾ ತಾನ್ ರಾಘವೋऽಬ್ರವೀತ್॥೧೩೦॥
ಪ್ರಭಾತಾಯಾಂ ತು ಶರ್ವರ್ಯಾಂ ಪೃಥುವಕ್ಷಾ ಮಹಾಭುಜಃ ।
ರಾಮಃ ಕಮಲಪತ್ರಾಕ್ಷಃ ಪುರೋಧಸಮಥಾಬ್ರವೀತ್ ॥ ೧೩೧ ॥
ಅಗ್ನಿಹೋತ್ರಾಣಿ ಯಾಂತ್ವಗ್ರೇ ದೀಪ್ಯಮಾನಾನಿ ಸರ್ವಶಃ ।
ವಾಜಪೇಯಾತಿರಾತ್ರಾಣಿ ನಿಯಾಂತು ಚ ಮಮಾಗ್ರತಃ ॥ ೧೩೨ ॥
ತತೋ ವಸಿಷ್ಠಸ್ತೇಜಸ್ವೀ ಸರ್ವಂ ನಿಶ್ಚಿತ್ಯ ಚೇತಸಾ ।
ಚಕಾರ ವಿಧಿವತ್ಕರ್ಮ ಮಹಾಪ್ರಾಸ್ಥಾನಿಕಂ ವಿಧಿಂ ॥ ೧೩೩ ॥
ತತಃ ಕ್ಷೌಮಾಂಬರಧರೋ ಬ್ರಹ್ಮಚರ್ಯಸಮನ್ವಿತಃ ।
ಕುಶಾನಾದಾಯ ಪಾಣಿಭ್ಯಾಂ ಮಹಾಪ್ರಸ್ಥಾನಮುದ್ಯತಃ ॥ ೧೩೪ ॥
ನ ವ್ಯಾಹರಚ್ಛುಭಂ ಕಿಂಚಿದಶುಭಂ ವಾ ನರೇಶ್ವರಃ ।
ನಿಷ್ಕ್ರಮ್ಯ ನಗರಾತ್ತಸ್ಮಾತ್ ಸಾಗರಾದಿವ ಚಂದ್ರಮಾಃ ॥ ೧೩೫ ॥

---

೧೩೦. ನಮಗೆ ಮಕ್ಕಳೂ, ಮೊಮ್ಮಕ್ಕಳೂ ಯಾರಿರುವರೋ ಅವರನ್ನು ಈ ವಾನರರು ರಕ್ಷಿಸಿಕೊಂಡಿರಲಿ.' ಕಾಕುತ್ಸ್ಥನು ಹೀಗೆ ನುಡಿದು ಆಮೇಲೆ ಉಳಿದ ವಾನರರೆಲ್ಲರನ್ನೂ ಕುರಿತು, 'ನೀವು ನನ್ನೊಡನೆ ಬನ್ನಿರಿ' ಎಂದು ಹೇಳಿದನು.

೧೩೧. ರಾತ್ರಿಯು ಕಳೆದು ಬೆಳಗಾಗಲು ಅಗಲವಾದ ಎದೆಯುಳ್ಳವನೂ, ಮಹಾಬಾಹುವೂ, ಕಮಲದಳದಂತೆ ಕಣ್ಣುಳ್ಳವನೂ ಆದ ರಾಮನು ಪುರೋಹಿತನಾದ ವಸಿಷ್ಠನನ್ನು ಕುರಿತು ಇಂತೆಂದನು:—

೧೩೨. 'ಆಹವನೀಯ, ಗಾರ್ಹಪತ್ಯ, ದಾಕ್ಷಿಣೇಯಗಳೆಂಬ ಅಗ್ನಿತ್ರಯವು ಎಲ್ಲೆಡೆಗಳನ್ನೂ ಪ್ರಜ್ವಲಿಸುತ್ತ ಮುಂದೆ ನಡೆಯಲಿ; ವಾಜಪೇಯ ಮತ್ತು ಅತಿರಾತ್ರಗಳ ಅಗ್ನಿಗಳು ನನ್ನ ಮುಂದುಗಡೆ ಹೋಗುತ್ತಿರಲಿ' ಎಂದನು.

೧೩೩. ಆ ಬಳಿಕ ತೇಜಸ್ವಿಯಾದ ವಸಿಷ್ಠನು ತನ್ನ ಮನಸ್ಸಿನಲ್ಲಿಯೇ ಸರ್ವವನ್ನೂ ನಿಶ್ಚಯಮಾಡಿಕೊಂಡು ಮಹಾಪ್ರಸ್ಥಾನಕಾಲದ ಕರ್ಮವನ್ನೆಲ್ಲ ವಿಧಿವತ್ತಾಗಿ ನೆರವೇರಿಸಿದನು.

೧೩೪. ಬಳಿಕ ರೇಷ್ಮೆಯ ಪೀತಾಂಬರವನ್ನು ಧರಿಸಿ, ಬ್ರಹ್ಮಚರ್ಯದಿಂದ ಕೂಡಿದವನಾಗಿ ಕೈಗಳಲ್ಲಿ ದರ್ಭೆಯನ್ನು ಹಿಡಿದುಕೊಂಡು ಮಹಾರಾಜನಾದ ಶ್ರೀರಾಮನು ಮಹಾಪ್ರಸ್ಥಾನಕ್ಕೆ ಸಿದ್ಧನಾದನು.''

೧೩೫. ಆ ಸಮಯದಲ್ಲಿ ಆ ನರೇಶ್ವರನು ಶುಭವನ್ನೇ ಆಗಲಿ ಅಶುಭವನ್ನೇ

**ರಾಮಸ್ಯ ಸವ್ಯಪಾರ್ಶ್ವೇ ತು ಸಪದ್ಮಾ ಶ್ರೀಃ ಸಮಾಶ್ರಿತಾ ।**
**ದಕ್ಷಿಣೇ ಹ್ರೀರ್ವಿಶಾಲಾಕ್ಷೀ ವ್ಯವಸಾಯಸ್ತಥಾಗ್ರತಃ ॥ ೧೩೬ ॥**
**ನಾನಾವಿಧಾಯುಧಾನ್ಯತ್ರ ಧನುರ್ಜ್ಯಾಪ್ರಭೃತೀನಿ ಚ ।**
**ಅನುವ್ರಜಂತಿ ಕಾಕುತ್ಸ್ಥಂ ಸರ್ವೇ ಪುರುಷವಿಗ್ರಹಾಃ ॥ ೧೩೭ ॥**
**ವೇದೋ ಬ್ರಾಹ್ಮಣರೂಪೇಣ ಸಾವಿತ್ರೀ ಸವ್ಯದಕ್ಷಿಣೇ ।**
**ಓಂಕಾರೋಽಥ ವಷಟ್ಕಾರಃ ಸರ್ವೇ ರಾಮಂ ತದಾಽವ್ರಜನ್ ॥ ೧೩೮ ॥**
**ಋಷಯಶ್ಚ ಮಹಾತ್ಮಾನಃ ಸರ್ವೇ ಚೈವ ಮಹೀಧರಾಃ ।**
**ಅನುಗಚ್ಛಂತಿ ಕಾಕುತ್ಸ್ಥಂ ಸ್ವರ್ಗದ್ವಾರಮುಪಸ್ಥಿತಂ ॥ ೧೩೯ ॥**
**ತಥಾನುಯಾಂತಿ ಕಾಕುತ್ಸ್ಥಮಂತಃಪುರಗತಾಃ ಸ್ತ್ರಿಯಃ ।**
**ಸವೃದ್ಧಾ ಬಾಲದಾಸೀಕಾಃ ಸಪಕ್ಷದ್ವಾರರಕ್ಷಕಾಃ ॥ ೧೪೦ ॥**
**ಸಾಂತಃಪುರಶ್ಚ ಭರತಃ ಶತ್ರುಘ್ನಸಹಿತೋ ಯಯೌ ।**
**ರಾಮಂ ವ್ರಜಂತಮಾಗಮ್ಯ ರಘುವಂಶಮನುವ್ರತಾಃ ॥ ೧೪೧ ॥**

---

ಆಗಲಿ ಏನೂ ಹೇಳದೆ ಕ್ಷೀರಸಾಗರದಿಂದ ಚಂದ್ರನು ಉದಿಸಿ ಹೊರಡುವಂತೆ ಆ ನಗರದಿಂದ ಹೊರಹೊರಟನು.

೧೩೬–೧೩೭. ಶ್ರೀರಾಮನ ವಾಮಪಾರ್ಶ್ವದಲ್ಲಿ ಪದ್ಮವನ್ನು ಧರಿಸಿ 'ಶ್ರೀ' ದೇವಿಯು ಆತನ ಜೊತೆಯಲ್ಲಿ ಹೊರಟಳು. ಬಲಭಾಗದಲ್ಲಿ ವಿಶಾಲಾಕ್ಷಿಯಾದ 'ಹ್ರೀ'ಯು ನಡೆದಳು. ಮುಂಭಾಗದಲ್ಲಿ 'ವ್ಯವಸಾಯ'ದಭಿಮಾನ ದೇವತೆಯು ನಡೆದಳು. ಧನುಸ್ಸು, ಬಿಲ್ಲಹೆದೆ ಮೊದಲಾದ ನಾನಾವಿಧವಾದ ಆಯುಧಗಳೆಲ್ಲವೂ ಪುರುಷಶರೀರವನ್ನು ಧರಿಸಿ ಆ ಕಾಕುತ್ಸ್ಥನನ್ನು ಅನುಸರಿಸಿ ಹೊರಟವು.

೧೩೮. ಬ್ರಾಹ್ಮಣರೂಪದಿಂದ ವೇದವೂ, ಸಾವಿತ್ರಿಯೂ, ರಾಮನ ಎಡಬಲಗಳಲ್ಲಿ ನಡೆದರು. 'ಓಂಕಾರವಷಟ್ಕಾರ'ಗಳೂ ಸಮಸ್ತವೂ ಶ್ರೀರಾಮನನ್ನು ಅನುಸರಿಸಿ ಹೊರಟವು.

೧೩೯. ಮಹಾತ್ಮರಾದ ಋಷಿಗಳೂ, ಸಮಸ್ತ ಭೂಪಾಲಕರೂ ಸ್ವರ್ಗದ್ವಾರದ ಬಳಿಗೆ ಬಂದುನಿಂತ ಕಾಕುತ್ಸ್ಥನನ್ನು ಅನುಸರಿಸಿ ನಡೆದರು.

೧೪೦. ಅಂತಃಪುರದಲ್ಲಿದ್ದ ಸ್ತ್ರೀಯರು, ಮುದುಕಿಯರು, ಹುಡುಗಿಯರು, ದಾಸಿಯರು—ಎಲ್ಲರೂ ಕೂಡಿ, ಪರಿವಾರದವರು ಮತ್ತು ದ್ವಾರರಕ್ಷಕರೊಡನೆ ಆ ಕಾಕುತ್ಸ್ಥನನ್ನು ಹಿಂಬಾಲಿಸಿದರು.

೧೪೧–೧೪೨. ಅಂತಃಪುರಸಮೇತನಾದ ಭರತನು ಶತ್ರುಘ್ನನನ್ನು ಜೊತೆಗೊಂಡು ಶ್ರೀರಾಮನೊಡನೆ ಹೊರಟನು. ಬಳಿಕ ರಘುವಂಶನನ್ನು ಅನುಸರಿಸುವ ವ್ರತವುಳ್ಳ ಮಹಾತ್ಮರಾದ ಬ್ರಾಹ್ಮಣರು ಅಗ್ನಿಹೋತ್ರಸಮೇತರಾಗಿ ಹೆಂಡಿರು

ತತೋ ವಿಪ್ರಾ ಮಹಾತ್ಮಾನಃ ಸಾಗ್ನಿಹೋತ್ರಾಃ ಸಮಂತತಃ ।
ಸಪುತ್ರದಾರಾಃ ಕಾಕುತ್ಸ್ಥಮನುಗಚ್ಛಂತಿ ಸರ್ವಶಃ ॥ ೧೪೨ ॥
ಮಂತ್ರಿಣೋ ಭೃತ್ಯಯುಕ್ತಾಶ್ಚ ಸಪುತ್ರಾಃ ಸಹ ಬಾಂಧವಾಃ ।
ಸರ್ವೇ ತೇ ಸಾನುಗಾಶ್ಚೈವ ಹ್ಯನುಗಚ್ಛಂತಿ ರಾಘವಂ ॥ ೧೪೩ ॥
ತತಃ ಸರ್ವಾಃ ಪ್ರಕೃತಯೋ ಹೃಷ್ಟಪುಷ್ಟಜನಾವೃತಾಃ ।
ಗಚ್ಛಂತಮನುಗಚ್ಛಂತಿ ರಾಘವಂ ಗುಣರಂಜಿತಾಃ ॥ ೧೪೪ ॥
ತಥಾ ಪ್ರಜಾಶ್ಚ ಸಕಲಾಃ ಸಪುತ್ರಾ ಸಹಬಾಂಧವಾಃ ।
ರಾಘವಸ್ಯಾನುಗಾಶ್ಚಾಸನ್ ದೃಷ್ಟ್ವಾ ವಿಗತಕಲ್ಮಷಂ ॥ ೧೪೫ ॥
ಸ್ನಾತಾಃ ಶುಕ್ಲಾಂಬರಧರಾಃ ಸರ್ವೇ ಪ್ರಯತಮಾನಸಾಃ ।
ಕೃತ್ವಾ ಕಿಲಕಿಲಾಶಬ್ದಮನುಯಾತಾಶ್ಚ ರಾಘವಂ ॥ ೧೪೬ ॥
ನ ಕಶ್ಚಿತ್ತತ್ರ ದೀನೋಽಭೂನ್ನ ಭೀತೋ ನಾತಿದುಃಖಿತಃ ।
ಪ್ರಹೃಷ್ಟಾ ಮುದಿತಾಃ ಸರ್ವೇ ಬಭೂವುಃ ಪರಮಾದ್ಭುತಾಃ ॥ ೧೪೭ ॥

---

ಮಕ್ಕಳನೊಡಗೊಂಡು ಹೊರಟುಬರುತ್ತಿರುವ ಆ ಶ್ರೀರಾಮನ ಬಳಿ ಬಂದು, ಸುತ್ತಲೂ ನೆರೆದು, ಕಾಕುಸ್ಥನನ್ನು ಅನುಸರಿಸಿ ಹೊರಟರು.

೧೪೩. ಮಂತ್ರಿಗಳು ಪುತ್ರಬಾಂಧವಸಮೇತರಾಗಿ ಭೃತ್ಯರನ್ನೊಡಗೊಂಡು ಎಲ್ಲರೂ ತಮ್ಮ ತಮ್ಮ ಅನುಯಾಯಿಗಳೊಡನೆ ಆ ರಾಘವನನ್ನು ಅನುಸರಿಸಿ ಹೊರಟರು.

೧೪೪. ಬಳಿಕ ಸಮಸ್ತ ಪ್ರಜೆಗಳೂ ಹೃಷ್ಟಪುಷ್ಟರಾದ ಜನರಿಂದ ಸುತ್ತುವರೆಯಲ್ಪಟ್ಟವರಾಗಿ ಆ ರಾಘವನ ಸದ್ಗುಣಗಳಿಂದ ಆಕರ್ಷಿತರಾಗಿ ಸ್ವರ್ಗಕ್ಕೆ ಪ್ರಯಾಣಮಾಡುತ್ತಿರುವ ಆತನನ್ನು ಅನುಸರಿಸಿದರು.

೧೪೫. ಅದೇ ರೀತಿಯಲ್ಲಿಯೇ ಸಕಲ ಪ್ರಜೆಗಳೂ ಕಲ್ಮಷರಹಿತನಾದ ಆ ರಾಘವನು ಹೊರಟುದನ್ನು ಕಂಡು ತಮ್ಮ ತಮ್ಮ ಪುತ್ರಬಾಂಧವರೆಲ್ಲರೊಡನೆಯೂ ಅವನನ್ನು ಹಿಂಬಾಲಿಸಿ ಹೊರಟರು.

೧೪೬. ಎಲ್ಲರೂ ಸ್ನಾನಮಾಡಿ, ಬಿಳಿಯ ಮಡಿಬಟ್ಟೆಯನ್ನುಟ್ಟು ಮನಸ್ಸನ್ನು ಸ್ವಾಧೀನಕ್ಕೆ ತಂದುಕೊಂಡು ಸಮಾಧಾನವಾಗಿ 'ಕಿಲಕಿಲ' ಧ್ವನಿಯನ್ನು ಮಾಡುತ್ತ ರಾಘವನನ್ನು ಅನುಸರಿಸಿ ಹೊರಟರು.

೧೪೭. ಹಾಗೆ ಹೊರಟವರಲ್ಲಿ ಯಾವನೊಬ್ಬನೂ ದೀನನಾಗಲಿಲ್ಲ; ಭೀತನಾಗಲಿಲ್ಲ; ದುಃಖಿತನಾಗಲಿಲ್ಲ. ಎಲ್ಲರೂ ಬಹುಹರ್ಷಿತರಾಗಿದ್ದರು; ಸಂಮೋದಗೊಂಡಿದ್ದರು.

ದೃಷ್ಟುಕಾಮಾಶ್ಚ ನಿರ್ವಾಣಂ ರಾಜ್ಞೋ ಜನಪದಾಸ್ತಥಾ ।
ಸಂಪ್ರಾಪ್ತಾಸ್ತೇಽಪಿ ದೃಷ್ಟ್ವೈವ ನಭೋಮಾರ್ಗೇಣ ಚಕ್ರಿಣಂ ॥ ೧೪೮ ॥
ಋಕ್ಷವಾನರರಕ್ಷಾಂಸಿ ಜನಾಶ್ಚ ಪುರವಾಸಿನಃ ।
ಆಗತ್ಯ ಪರಯಾ ಭಕ್ತ್ಯಾ ಪೃಷ್ಟತಃ ಸಮುಪಾಯಯುಃ ॥ ೧೪೯ ॥
ತಾನಿ ಭೂತಾನಿ ನಗರೇ ಹ್ಯಂತರ್ಧಾನಗತಾನ್ಯಪಿ ।
ರಾಘವಂ ತೇಽಪ್ಯನುಯಯುಃ ಸ್ವರ್ಗದ್ವಾರಮುಪಸ್ಥಿತಂ ॥ ೧೫೦ ॥
ಯಾನಿ ಪಶ್ಯಂತಿ ಕಾಕುತ್ಸ್ಥಂ ಸ್ಥಾವರಾಣಿ ಚರಾಣಿ ಚ ।
ಸತ್ವಾನಿ ಸ್ವರ್ಗಗಮನೇ ಮತಿಂ ಕುರ್ವಂತಿ ತಾನ್ಯಪಿ ॥ ೧೫೧ ॥
ನಾಸೀತ್ಸತ್ವಮಯೋಧ್ಯಾಯಾಂ ಸುಸೂಕ್ಷ್ಮಮಪಿ ಕಿಂಚನ ।
ಯದ್ರಾಘವಂ ನಾನುಯಾತಿ ಸ್ವರ್ಗದ್ವಾರಮುಪಸ್ಥಿತಂ ॥ ೧೫೨ ॥
ಅಥಾರ್ಧಯೋಜನಂ ಗತ್ವಾ ನದೀಂ ಪಶ್ಚಾನ್ಮುಖೋ ಯಯೌ ।
ಸರಯೂಂ ಪುಣ್ಯಸಲಿಲಾಂ ದದರ್ಶ ರಘುನಂದನಃ ॥ ೧೫೩ ॥
ಅಥ ತಸ್ಮಿನ್ ಮುಹೂರ್ತೇ ತು ಬ್ರಹ್ಮಾ ಲೋಕಪಿತಾಮಹಃ ।
ಸರ್ವೈಃ ಪರಿವೃತೋ ದೇವೈರ್ಋಷಿಭಿಶ್ಚ ಮಹಾತ್ಮಭಿಃ ।
ಆಯಯೌ ತತ್ರ ಕಾಕುತ್ಸ್ಥಂ ಸ್ವರ್ಗದ್ವಾರಮುಪಸ್ಥಿತಂ ॥ ೧೫೪ ॥

---

೧೪೮–೧೪೯. ರಾಮರಾಜನ ನಿರ್ವಾಣವನ್ನೂ, ಮೋಕ್ಷಪ್ರಾಪ್ತಿಯನ್ನೂ ನೋಡಬೇಕೆಂದು ದೇಶದ ಜನಗಳೆಲ್ಲ ಅಲ್ಲಿಗೆ ಬಂದು ಸೇರಿದರು. ಅವರು ಕೂಡ ಚಕ್ರಧಾರಿಯಾದ ಶ್ರೀರಾಮನನ್ನು ಅನುಸರಿಸಿ ಆಕಾಶಮಾರ್ಗದಲ್ಲಿ ಹೊರಟ ಋಕ್ಷ, ವಾನರ, ರಾಕ್ಷಸರನ್ನೂ, ಪುರವಾಸಿಗಳಾದ ಜನರನ್ನೂ ಕಂಡು ಪರಮ ಭಕ್ತಿಯಿಂದ ಅನುಸರಿಸಿ ಹೊರಟರು.

೧೫೦. ಆ ಅಯೋಧ್ಯಾನಗರದಲ್ಲಿದ್ದು ಅಂತರ್ಧಾನಹೊಂದಿದ್ದ ಭೂತಗಳೂ ಕೂಡ ಸ್ವರ್ಗದ್ವಾರದ ಬಳಿ ಸಾರಲಿರುವ ಶ್ರೀರಾಘವನನ್ನು ಅನುಸರಿಸಿಹೋದುವು.

೧೫೧. ಸ್ಥಾವರಗಳೇ ಆಗಲಿ, ಚರಗಳೇ ಆಗಲಿ, ಯಾವ ಪ್ರಾಣಿಗಳು ಕಾಕುತ್ಸ್ಥನನ್ನು ನೋಡಿದವೊ ಅವೆಲ್ಲವೂ ಸ್ವರ್ಗಕ್ಕೆ ಹೋಗಲು ತಾವೂ ಮನಸ್ಸು ಮಾಡುತ್ತಿದ್ದುವು.

೧೫೨. ಸ್ವರ್ಗದ್ವಾರವನ್ನು ಸಾರಿಹೋಗುತ್ತಿರುವ ರಾಘವನನ್ನು ಅನುಸರಿಸಿ ಹೋಗದ ಸೂಕ್ಷ್ಮತಮವಾದ ಯಾವ ಸತ್ತ್ವವೂ ಅಯೋಧ್ಯೆಯಲ್ಲಿ ಇರಲಿಲ್ಲ.

೧೫೩. ಆ ಮೇಲೆ ಆ ರಘುನಂದನನು ಅರ್ಧಯೋಜನದ ದೂರ ನಡೆದು ಪಶ್ಚಿಮಾಭಿಮುಖವಾಗಿ ಮುಂದುವರಿದು, ಅಲ್ಲಿ ಪುಣ್ಯಜಲವುಳ್ಳ ಸರಯೂ ನದಿಯನ್ನು ಕಂಡನು.

೧೫೪. ಆ ಮುಹೂರ್ತದಲ್ಲಿಯೆ ಲೋಕಪಿತಾಮಹನಾದ ಬ್ರಹ್ಮದೇವನು

ವಿಮಾನಶತಕೋಟೀಭಿರ್ದಿವ್ಯಾಭಿಃ ಸರ್ವತೋ ವೃತಃ ।
ದೀಪಯನ್ ಸರ್ವತೋ ವ್ಯೋಮ ಜ್ಯೋತಿರ್ಭೂತಮನುತ್ತಮಂ ॥೧೫೫॥
ಸ್ವಯಂಪ್ರಭೈಶ್ಚ ತೇಜೋಭಿರ್ಮಹದ್ಭಿಃ ಪುಣ್ಯಕರ್ಮಭಿಃ ।
ಪುಣ್ಯಾ ವಾತಾ ವವುಸ್ತತ್ರ ಗಂಧವಂತಃ ಸುಖಪ್ರದಾಃ ॥ ೧೫೬ ॥
ಸ ಪುಣ್ಯಪುಷ್ಪವರ್ಷಂ ಚ ವಾಯುಯುಕ್ತಂ ಮಹಾಜವಂ ।
ಗಂಧರ್ವೈರಪ್ಸರೋಭಿಶ್ಚ ತಸ್ಮಿನ್ ಸೂರ್ಯ ಉಪಸ್ಥಿತಃ ॥ ೧೫೭ ॥
ಸರಯೂಸಲಿಲಂ ರಾಮಃ ಪದ್ಭ್ಯಾಂ ಸ ಸಮುಪಾಸ್ಪೃಶತ್ ।
ತತೋ ಬ್ರಹ್ಮಾ ಸುರೈರ್ಯುಕ್ತಃ ಸ್ತೋತುಂ ಸಮುಪಚಕ್ರಮೇ ॥೧೫೮॥
ತ್ವಂ ಹಿ ಲೋಕಪತಿರ್ದೇವ ನ ತ್ವಾಂ ಜಾನಾತಿ ಕಶ್ಚನ ।
ಅಹಂ ತೇ ವೈ ವಿಶಾಲಾಕ್ಷ ಭೂತಪೂರ್ವಪರಿಗ್ರಹಃ ॥ ೧೫೯ ॥
ತ್ವಮಚಿಂತ್ಯಂ ಮಹದ್ಭೂತಮಕ್ಷಯ್ಯಂ ಲೋಕಸಂಗ್ರಹೇ ।
ಯಾಮಿಚ್ಛಸಿ ಮಹಾವೀರ್ಯ ತಾಂ ತನುಂ ಪ್ರವಿಶ ಸ್ವಕಂ ॥ ೧೬೦ ॥

---

ಸಮಸ್ತ ದೇವತೆಗಳಿಂದಲೂ, ಮಹಾತ್ಮರಾದ ಋಷಿಗಳಿಂದಲೂ ಸುತ್ತುವರಿಯಲ್ಪಟ್ಟವನಾಗಿ ಸ್ವರ್ಗದ್ವಾರಕ್ಕೆ ಬಂದುನಿಂತ ಕಾಕುತ್ಸ್ಥನ ಬಳಿಗೆ ಬಂದನು.

೧೫೫–೧೫೬. ಆ ಬ್ರಹ್ಮನನ್ನು ನೂರಾರು ಕೋಟಿ ಸಂಖ್ಯೆಯ ದಿವ್ಯ ವಿಮಾನಗಳು ಎಲ್ಲ ಕಡೆಯೂ ಆವರಿಸಿದ್ದವು. ಆ ವಿಮಾನಗಳು ಎಲ್ಲ ದಿಕ್ಕಿನಲ್ಲಿಯೂ ಆಕಾಶವನ್ನು ಬೆಳಗುತ್ತಿದ್ದವು. ಆ ಸಮಯದಲ್ಲಿ ಪುಣ್ಯಕರ್ಮಗಳನ್ನು ಮಾಡಿದವರ ಸ್ವಯಂಪ್ರಭೆಯುಳ್ಳ ಮಹತ್ತಾದ ತೇಜಸ್ಸುಗಳಿಂದ ಆಕಾಶವೇ ಜ್ಯೋತಿಸ್ಸ್ವರೂಪವೆಂಬಂತಾಯಿತು. ಸುಗಂಧಯುಕ್ತಗಳಾಗಿ ಸುಖವನ್ನು ಕೊಡತಕ್ಕವಾದ ಪುಣ್ಯವಾತಗಳು ಅಲ್ಲಿ ಬೀಸತೊಡಗಿದವು.

೧೫೭. ಪುಣ್ಯಕರವಾದ ಪುಷ್ಪವರ್ಷದಿಂದ ಕೂಡಿ ವಾಯುವು ಬಹು ವೇಗವಾಗಿ ಬೀಸಿತು. ಆ ಸಮಯದಲ್ಲಿ ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಸೂರ್ಯನು ಉಪಾಸಿಸಲ್ಪಟ್ಟನು.

೧೫೮. ಶ್ರೀರಾಮನಾದರೋ ಸರಯೂಜಲವನ್ನು ಕಾಲುಗಳಿಂದ ಸ್ಪರ್ಶಮಾಡಿದನು. ಬಳಿಕ ಬ್ರಹ್ಮನು ದೇವತೆಗಳಿಂದ ಕೂಡಿದವನಾಗಿ ಆತನನ್ನು ಸ್ತೋತ್ರಮಾಡಲು ಪ್ರಾರಂಭಮಾಡಿದನು.

೧೫೯. 'ದೇವಾ! ನೀನು ಲೋಕಕ್ಕೆಲ್ಲ ಒಡೆಯನು. ಯಾವನೊಬ್ಬನೂ ನಿನ್ನನ್ನು ತಿಳಿದಿಲ್ಲವು. ವಿಶಾಲಾಕ್ಷಾ! ನಾನು ನಿನ್ನ ಆಶ್ರಿತನಾಗಿರುವವನು.

೧೬೦. ಲೋಕಸಂಗ್ರಹದಲ್ಲಿ ಚಿಂತಿಸಲಸದಳವೂ, ಅಕ್ಷಯವೂ ಆದ ಮಹದ್ಭೂತವೇ ನೀನು! ಎಲೈ ಮಹಾವೀರ್ಯನೇ! ನೀನು ಯಾವುದನ್ನು ಬಯಸುತ್ತಿರುವೆಯೋ ಆ ನಿನ್ನ ದಿವ್ಯಶರೀರವನ್ನು ಪ್ರವೇಶಮಾಡು' ಎಂದನು.

ಪಿತಾಮಹಸ್ಯ ವಚನಾದಿದಮೇವಾವಿಶತ್ಸ್ವಯಂ ।
ಸುದಿವ್ಯಂ ವೈಷ್ಣವಂ ತೇಜಃ ಸಂಸಾರಂ ಸ ಸಹಾನುಜಃ ।
ತತೋ ವಿಷ್ಣುತನುಂ ದೇವಾಃ ಪೂಜಯಂತ ಸುರೋತ್ತಮಂ ॥ ೧೬೧ ॥
ಸಾಧ್ಯಾ ಮರುದ್ಗಣಾಶ್ಚೈವ ಸೇಂದ್ರಾಃ ಸಾಗ್ನಿಪುರೋಗಮಾಃ ।
ಯೇ ಚ ದಿವ್ಯಾ ಋಷಿಗಣಾ ಗಂಧರ್ವಾಪ್ಸರಸಸ್ತಥಾ ।
ಸುಪರ್ಣಾ ನಾಗಯಕ್ಷಾಶ್ಚ ದೈತ್ಯದಾನವರಾಕ್ಷಸಾಃ ॥ ೧೬೨ ॥
ದೇವಾಃ ಪ್ರಹೃಷ್ಟಾ ಮುದಿತಾಃ ಸರ್ವೇ ಪೂರ್ಣಮನೋರಥಾಃ ।
ಸಾಧುಸಾಧ್ವಿತಿ ತೇ ಸರ್ವೇ ತ್ರಿದಿವಸ್ಥಾ ಬಭಾಷಿರೇ ॥ ೧೬೩ ॥
ಅಥ ವಿಷ್ಣುರ್ಮಹಾತೇಜಾಃ ಪಿತಾಮಹಾಮುವಾಚ ಹ ।
ಏಷಾಂ ಲೋಕಂ ಜನೌಘಾನಾಂ ದಾತುಮರ್ಹಸಿ ಸುವ್ರತ ॥ ೧೬೪ ॥
ಇಮೇ ತು ಸರ್ವೇ ಮತ್ಸ್ನೇಹಾದಾಯಾತಾಃ ಸರ್ವಮಾನವಾಃ ।
ಭಕ್ತಾಶ್ಚ ಭಕ್ತಿಮಂತಶ್ಚ ತ್ಯಕ್ತಾತ್ಮಾನೋಽಪಿ ಸರ್ವಶಃ ॥ ೧೬೫ ॥
ತಚ್ಛ್ರುತ್ವಾ ವಿಷ್ಣುಕಥಿತಂ ಸರ್ವಲೋಕೇಶ್ವರೋಽಬ್ರವೀತ್ ।
ಲೋಕಂ ಸಂತಾನಿಕಂ ನಾಮ ಸಂಸ್ಥಾಸ್ಯಂತಿ ಹಿ ಮಾನವಾಃ ॥ ೧೬೬ ॥

---

೧೬೧. ಪಿತಾಮಹನ ಮಾತಿನಂತೆ, ತಮ್ಮಂದಿರೊಡಗೂಡಿ ಆ ಶ್ರೀರಾಮನು ದಿವ್ಯ ತೇಜಸ್ಸಿನಿಂದ ಬೆಳಗುತ್ತ ಸಂಸಾರಸ್ವರೂಪವಾಗಿ ಮಹಾದಿವ್ಯವಾಗಿದ್ದ ಆ ವೈಷ್ಣವ ಶರೀರವನ್ನೇ ಪ್ರವೇಶಿಸಿದನು. ಬಳಿಕ ವಿಷ್ಣುಶರೀರವನ್ನು ಪ್ರವೇಶಿಸಿದ ಆ ಸುರೋತ್ತಮನನ್ನು ದೇವತೆಗಳೆಲ್ಲರೂ ಪೂಜಿಸಿದರು.

೧೬೨. ಸಾಧ್ಯರೂ, ಮರುದ್ಗಣಗಳೂ ಇಂದ್ರನಿಂದೊಡಗೂಡಿ ಅಗ್ನಿಯನ್ನು ಮುಂದಿಟ್ಟುಕೊಂಡಿರುವ ದಿವ್ಯ ಋಷಿಗಣಗಳೂ, ಗಂಧರ್ವಾಪ್ಸರಸೆಯರೆಲ್ಲರೂ, ಸುಪರ್ಣರು, ನಾಗರು, ಯಕ್ಷರು, ದೈತ್ಯದಾನವ ರಾಕ್ಷಸರು — ಎಲ್ಲರೂ ಆ ಸುರೋತ್ತಮನನ್ನು ಪೂಜಿಸಿದರು.

೧೬೩. ದೇವತೆಗಳು ಬಹು ಹರ್ಷಗೊಂಡರು; ಎಲ್ಲರೂ ಪೂರ್ಣಮನೋರಥರಾಗಿ ಮೋದಗೊಂಡರು. ಅವರೆಲ್ಲರೂ ಆಕಾಶದಲ್ಲಿ ಶ್ರೀರಾಮನಿಗೆದುರು ನಿಂತು 'ಸಾಧು ಸಾಧು' ಎಂದು ನುಡಿಯುತ್ತಿದ್ದರು.

೧೬೪. ಬಳಿಕ ಮಹಾ ತೇಜಶ್ಶಾಲಿಯಾದ ವಿಷ್ಣುವು ಪಿತಾಮಹನನ್ನು ಕುರಿತು ಹೀಗೆ ಹೇಳಿದನು :—'ಎಲೈ ಸುವ್ರತನೇ! ನೀನು ಈ ಜನರ ಗುಂಪುಗಳಿಗೆ ಪುಣ್ಯಲೋಕವನ್ನು ಕೊಡಬೇಕು.

೧೬೫–೧೬೬. ಈ ಮಾನವರೆಲ್ಲರೂ ನನ್ನಲ್ಲಿರುವ ಪ್ರೀತಿಯಿಂದ ನನ್ನೊಡನೆ ಇಲ್ಲಿಗೆ ಬಂದಿದ್ದಾರೆ. ಇವರೆಲ್ಲರೂ ನನ್ನ ಭಕ್ತರು; ಭಕ್ತಿವಂತರು; ತ್ಯಕ್ತಾತ್ಮರು' ಎಂದನು. ವಿಷ್ಣುವು ಹೇಳಿದ ಈ ಮಾತನ್ನು ಕೇಳಿ ಸರ್ವಲೋಕೇಶ್ವರನಾದ

ಸ್ವರ್ಗದ್ವಾರೇಽತ್ರ ವೈ ತೀರ್ಥೇ ರಾಮಮೇವಾನುಚಿಂತಯನ್ ।
ಪ್ರಾಣಾಂಸ್ತ್ಯಜತಿ ಭಕ್ತ್ಯಾ ವೈ ಸ ಸಂತಾನಂ ಪರಂ ಲಭೇತ್ ॥ ೧೬೭ ॥
ಸರ್ವೇ ಸಂತಾನಿಕಂ ನಾಮ ಬ್ರಹ್ಮಲೋಕಾದನಂತರಂ ।
ವಾನರಾಶ್ಚ ಸ್ವಕಾಂ ಯೋನಿಂ ರಾಕ್ಷಸಾಶ್ಚಾಪಿ ರಾಕ್ಷಸೀಂ ॥ ೧೬೮ ॥
ಯಸ್ಯಾ ವಿನಿಃಸೃತಾ ಯೇ ವೈ ಸುರಾಸುರತನೂದ್ಭವಾಃ ।
ಆದಿತ್ಯತನಯಶ್ಚೈವ ಸುಗ್ರೀವಃ ಸೂರ್ಯಮಂಡಲಂ ॥ ೧೬೯ ॥
ಋಷಯೋ ನಾಗಯಕ್ಷಾಶ್ಚ ಪ್ರಯಾಸ್ಯಂತಿ ಸ್ವಕಾರಣಂ ।
ತಥಾ ಬ್ರುವತಿ ದೇವೇಶೇ ಗೋಪ್ರತಾರಮುಪಸ್ಥಿತಂ ॥ ೧೭೦ ॥
ತಜ್ಜಲಂ ಸರಯೂಂ ಭೇಜೇ ಪರಿಪೂರ್ಣಂ ತತೋ ಜಲಂ ।
ಅವಗಾಹ್ಯ ಜಲಂ ಸರ್ವೇ ಪ್ರಾಣಾಂಸ್ತ್ಯಕ್ತ್ವಾ ಪ್ರಹೃಷ್ಟವತ್ ॥ ೧೭೧ ॥
ಮಾನುಷಂ ದೇಹಮುತ್ಸೃಜ್ಯ ತೇ ವಿಮಾನಾನ್ಯಥಾರುಹನ್ ।
ತಿರ್ಯಗ್ಯೋನಿಗತಾ ಯೇ ಚ ಪ್ರವಿಶ್ಯ ಸರಯೂಂ ತದಾ ॥ ೧೭೨ ॥

---

ಬ್ರಹ್ಮನು ಇಂತೆಂದನು :—'ಪರಮಾತ್ಮ! ಈ ಮಾನವರು ಸಂತಾನಿಕವೆಂಬ ಹೆಸರುಳ್ಳ ಪುಣ್ಯಲೋಕದಲ್ಲಿ ನೆಲಸುತ್ತಾರೆ.

೧೬೭. ಈ ಸ್ವರ್ಗದ್ವಾರತೀರ್ಥದಲ್ಲಿ ಶ್ರೀರಾಮಧ್ಯಾನಮಾಡುತ್ತ ಯಾವನು ಪ್ರಾಣಗಳನ್ನು ತ್ಯಜಿಸುತ್ತಾನೆಯೊ ಅವನು ಬಹುಶ್ರೇಷ್ಠವಾದ ಸಂತಾನಿಕವೆಂಬ ಲೋಕವನ್ನು ಪಡೆಯುತ್ತಾನೆ.

೧೬೮. ಬ್ರಹ್ಮಲೋಕಕ್ಕೆ ಎರಡನೆಯದಾಗಿರುವ ಸಂತಾನಿಕ ಲೋಕವನ್ನು ಇವರೆಲ್ಲರೂ ಪಡೆಯುತ್ತಾರೆ. ವಾನರರು ತಮ್ಮ ಸ್ವಂತ ವಾನರಜನ್ಮವನ್ನೂ, ರಾಕ್ಷಸರು ರಾಕ್ಷಸಜನ್ಮವನ್ನೂ ಪಡೆಯುತ್ತಾರೆ.

೧೬೯–೧೭೦. ಸುರ ಮತ್ತು ಅಸುರ ಶರೀರದಿಂದ ಹುಟ್ಟಿದವರಾಗಿ ಯಾರು ಯಾರು ಯಾವ ಯಾವ ಮೂಲದಿಂದ ಜನ್ಮತಾಳಿದ್ದರೋ ಅವರವರು ಆಯಾ ಮೂಲಸ್ಥಾನಕ್ಕೆ ಹೋಗಿ ಸೇರುವರು. ಆದಿತ್ಯತನಯನಾದ ಸುಗ್ರೀವನು ಸೂರ್ಯಮಂಡಲವನ್ನೈದುತ್ತಾನೆ. ಋಷಿಗಳು, ನಾಗರು, ಯಕ್ಷರು,— ಇವರೆಲ್ಲರೂ ತಮ್ಮ ತಮ್ಮ ಮೂಲಸ್ಥಾನಗಳನ್ನು ಹೋಗಿ ಸೇರುತ್ತಾರೆ!' ದೇವೇಶನಾದ ಬ್ರಹ್ಮದೇವನು ಈ ರೀತಿ ಹೇಳುತ್ತಿರಲು ಗೋಪ್ರತಾರತೀರ್ಥವು ಉದಿಸಿತು.

೧೭೧–೧೭೪. ಆ ತೀರ್ಥಜಲವು ಸರಯೂವನ್ನು ಸೇರಿ ಆ ಜಲವು ಪರಿಪೂರ್ಣವಾಯಿತು. ಒಡನೆಯೆ ಸರ್ವರೂ ಆ ಜಲದಲ್ಲಿ ಮುಳುಗಿ ಬಹುಹರ್ಷಗೊಂಡವರಂತೆ ಪ್ರಾಣಗಳನ್ನು ತ್ಯಜಿಸಿ, ಮನುಷ್ಯದೇಹವನ್ನು ತೊರೆದೆಸೆದು, ದಿವ್ಯವಿಮಾನಗಳನ್ನು ಹತ್ತಿದರು. ತಿರ್ಯಕ್‌ಜಾತಿಗೆ ಸೇರಿದಪ್ರಾಣಿಗಳು ಯಾವುವಿದ್ದುವೋ

ದೇಹತ್ಯಾಗಂ ಚ ತೇ ತತ್ರ ಕೃತ್ವಾ ದಿವ್ಯವಪುರ್ಧರಾಃ ।
ತಥಾನ್ಯಾನ್ಯಪಿ ಸತ್ವಾನಿ ಸ್ಥಾವರಾಣಿ ಚರಾಣಿ ಚ ॥ ೧೭೩ ॥
ಪ್ರಾಪ್ಯ ಚೋತ್ತಮದೇಹಂ ವೈ ದೇವಲೋಕಮುಪಾಗಮನ್ ।
ತಸ್ಮಿಂಸ್ತತ್ರ ಸಮಾಪನ್ನೇ ವಾನರಾ ಋಕ್ಷರಾಕ್ಷಸಾಃ ।
ತೇಽಪಿ ಪ್ರವಿವಿಶುಃ ಸರ್ವೇ ದೇಹಾನ್ನಿಕ್ಷಿಪ್ಯ ವೈ ತದಾ ॥ ೧೭೪ ॥
ತದಾ ಸ್ವರ್ಗಂ ಗತಾ ಸರ್ವೇ ಸ್ಮೃತ್ವಾ ಲೋಕಗುರುಂ ವಿಭುಂ ।
ಜಗಾಮ ತ್ರಿದಶೈಃ ಸಾರ್ಧಂ ರಾಮೋ ಹೃಷ್ಟೋ ಮಹಾಮತಿಃ ॥ ೧೭೫ ॥
ಅತಸ್ತದ್ಗೋಪ್ರತಾರಾಖ್ಯಂ ತೀರ್ಥಂ ವಿಖ್ಯಾತಿಮಾಗತಂ ।
ಗೋಪ್ರತಾರೇ ಪರೋ ಮೋಕ್ಷೋ ನಾನ್ಯತೀರ್ಥೇಷು ವಿದ್ಯತೇ॥ ೧೭೬ ॥
ಜನ್ಮಾಂತರಶತೈರ್ವಿಪ್ರ ಯೋಗೋಽಯಂ ಯದಿ ಲಭ್ಯತೇ ।
ಮುಕ್ತಿರ್ಭವತಿ ತತ್ರೈಕಜನ್ಮನಾ ಲಭ್ಯತೇ ನ ವಾ ॥ ೧೭೭ ॥
ಗೋಪ್ರತಾರೇ ನ ಸಂದೇಹೋ ಹರಿರ್ಭಕ್ತ್ಯಾ ಸುನಿಷ್ಠಿತಃ ।
ಏಕೇನ ಜನ್ಮನಾನ್ಯೋಽಪಿ ಯೋಗಮೋಕ್ಷಂ ಚ ವಿಂದತಿ ॥ ೧೭೮ ॥

---

ಅವೂಕೂಡ ಆ ಸರಯೂನದಿಯನ್ನು ಪ್ರವೇಶಿಸಿ ಅಲ್ಲಿ ದೇಹತ್ಯಾಗಮಾಡಿ ದಿವ್ಯ ಶರೀರವನ್ನು ಧರಿಸಿದುವು. ಅದೇ ರೀತಿಯಲ್ಲಿ ಸ್ಥಾವರಜಂಗಮಗಳಾದ ಇತರ ಪ್ರಾಣಿಗಳೂ ಕೂಡ ಉತ್ತಮ ದೇಹವನ್ನು ಪಡೆದು ದೇವಲೋಕಕ್ಕೆ ಬಂದುವು. ವಾನರರೂ, ಋಕ್ಷರೂ, ರಾಕ್ಷಸರೂ—ಎಲ್ಲರೂ ಕೂಡ ಆ ಗೋಪ್ರತಾರತೀರ್ಥ ವನ್ನು ಪ್ರವೇಶಿಸಿ ತಮ್ಮ ದೇಹಗಳನ್ನು ಬಿಸುಟು ಸ್ವರ್ಗವನ್ನು ಪ್ರವೇಶಿಸಿದರು.

೧೭೫. ಸರ್ವರೂ ಲೋಕಗುರುವಾದ ಶ್ರೀಮನ್ಮಹಾವಿಷ್ಣುವನ್ನು ಸ್ಮರಿಸಿ ಸ್ವರ್ಗವನ್ನೈದಿದರು. ತರುವಾಯ ಮಹಾಮತಿಯಾದ ಶ್ರೀರಾಮನು ಹರ್ಷ ಗೊಂಡವನಾಗಿ ದೇವತೆಗಳೊಡಗೂಡಿ ಪರಂಧಾಮಕ್ಕೆ ಹೊರಟುಹೋದನು.

೧೭೬. ಆದುದರಿಂದ ಗೋಪ್ರತಾರವೆಂಬ ಆ ತೀರ್ಥವು ವಿಖ್ಯಾತಿಯನ್ನು ಪಡೆಯಿತು. ಗೋಪ್ರತಾರದಲ್ಲಿ ಪರಮಮೋಕ್ಷವು ದೊರೆಯುತ್ತದೆ. ಅಂತಹ ಮೋಕ್ಷವು ಬೇರೆ ತೀರ್ಥಗಳಲ್ಲಿ ದೊರೆಯಲಾರದು.

೧೭೭. ಎಲೈ ವಿಪ್ರನೇ! ನೂರಾರು ಜನ್ಮಗಳಲ್ಲಿ ಒಮ್ಮೆಯಾದರೂ ಈ ಯೋಗವು ದೊರೆತದ್ದಾದರೆ ಮುಕ್ತಿಯುಂಟಾಗುತ್ತದೆ. ಅದು ಒಂದು ಜನ್ಮದಲ್ಲಿ ಲಭಿಸುತ್ತದೆಯೋ ಇಲ್ಲವೋ ಹೇಳಲಾಗುವುದಿಲ್ಲ.

೧೭೮. ಆದರೆ ಗೋಪ್ರತಾರಕ್ಷೇತ್ರದಲ್ಲಿ ನಿಷ್ಠನಾಗಿ ಹರಿಯನ್ನು ಭಕ್ತಿ ಯಿಂದ ಪೂಜಿಸಿದಲ್ಲಿ ಒಂದೇ ಒಂದು ಜನ್ಮದಲ್ಲಿಯೆ ಯಾವನೇ ಆದರೂ ಯೋಗ ಮೋಕ್ಷವನ್ನು ಪಡೆಯುತ್ತಾನೆ. ಇದರಲ್ಲಿ ಸಂದೇಹವಿಲ್ಲ.

ಗೋಪ್ರತಾರೇ ನರೋ ವಿದ್ವಾನ್ ಯೋಽಪಿ ಸ್ನಾತಿ ಸುನಿಶ್ಚಿತಃ ।
ವಿಶತ್ಯಸೌ ಪರಂ ಸ್ಥಾನಂ ಯೋಗಿನಾಮಪಿ ದುರ್ಲಭಂ ॥ ೧೭೯ ॥
ಕಾರ್ತಿಕ್ಯಾಂ ಚ ವಿಶೇಷೇಣ ಸ್ನಾತವ್ಯಂ ವಿಜಿತೇಂದ್ರಿಯೈಃ ।
ಕಾರ್ತಿಕೇ ಮಾಸಿ ವಿಪ್ರರ್ಷೇ ಸರ್ವೇ ದೇವಾಃ ಸವಾಸವಾಃ ।
ಸ್ನಾತುಮಾಯಾಂತ್ಯಯೋಧ್ಯಾಯಾಂ ಗೋಪ್ರತಾರೇ ವಿಶೇಷತಃ॥ ೧೮೦ ॥
ಗೋಪ್ರತಾರಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಯತ್ರ ಪ್ರಯಾಗರಾಜೋಽಪಿ ಸ್ನಾತುಮಾಯಾತಿ ಕಾರ್ತಿಕೇ ॥ ೧೮೧ ॥
ನಿಷ್ಪಾಪಃ ಕಲುಷಂ ತ್ಯಕ್ತ್ವಾ ಶುಕ್ಲಾಂಗಃ ಸಿತಕಂಚುಕಃ ।
ಶುದ್ಧ್ಯರ್ಥಂ ಸ್ನಾತುಕಾಮೋಽಸೌ ಪ್ರಯಾಗೇ ಮುನಿಸತ್ತಮಃ ॥ ೧೮೨ ॥
ಯಾನಿ ಕಾನಿ ಚ ತೀರ್ಥಾನಿ ಭೂಮೌ ದಿವ್ಯಾನಿ ಸುವ್ರತ ।
ಕಾರ್ತಿಕ್ಯಾಂ ತಾನಿ ಸರ್ವಾಣಿ ಗೋಪ್ರತಾರೇ ವಸಂತಿ ವೈ ॥ ೧೮೩ ॥
ಗೋಪ್ರತಾರೇ ಜಪೋ ಹೋಮಃ ಸ್ನಾನಂ ದಾನಂ ಚ ಶಕ್ತಿತಃ ।
ಸರ್ವಮಕ್ಷಯತಾಂ ಯಾತಿ ಶ್ರದ್ಧಯಾ ನಿಯಮವ್ರತಂ ॥ ೧೮೪ ॥

---

೧೭೯. ವಿದ್ವಾಂಸನಾದ ಯಾವ ಮಾನವನು ಗೋಪ್ರತಾರತೀರ್ಥದಲ್ಲಿ ಸ್ಥಿರವಾದ ಮನಸ್ಸುಳ್ಳವನಾಗಿ ಸ್ನಾನಮಾಡುತ್ತಾನೋ ಅವನು ಯೋಗಿಗಳಿಗೂ ದುರ್ಲಭವಾದ ಪರಮಸ್ಥಾನವನ್ನು ಪ್ರವೇಶಿಸುತ್ತಾನೆ.

೧೮೦–೧೮೧. ವಿಶೇಷವಾಗಿ ಕಾರ್ತಿಕಮಾಸದಲ್ಲಿ ಜಿತೇಂದ್ರಿಯರಾಗಿ ಅಲ್ಲಿ ಸ್ನಾನ ಮಾಡಬೇಕು. ಎಲೈ ಬ್ರಹ್ಮರ್ಷಿಯೇ! ಕಾರ್ತಿಕಮಾಸದಲ್ಲಿ ಇಂದ್ರ ಸಮೇತರಾದ ಸರ್ವದೇವತೆಗಳೂ ಅಯೋಧ್ಯೆಯಲ್ಲಿರುವ ಗೋಪ್ರತಾರತೀರ್ಥ ದಲ್ಲಿ ಸ್ನಾನಮಾಡುವುದಕ್ಕಾಗಿಯೇ ಬರುತ್ತಾರೆ. ಗೋಪ್ರತಾರಕ್ಕೆ ಸಮವಾದ ತೀರ್ಥವು ಹಿಂದಿರಲಿಲ್ಲ; ಮುಂದಾಗುವುದಿಲ್ಲ. ಪ್ರಯಾಗ ತೀರ್ಥರಾಜನು ಕೂಡ ಅಲ್ಲಿಗೆ ಕಾರ್ತಿಕಮಾಸದಲ್ಲಿ ಸ್ನಾನಮಾಡಲು ಬರುತ್ತಾನೆ.

೧೮೨. ಕಲ್ಮಷವನ್ನೆಲ್ಲ ಕಳೆದುಕೊಂಡು ಪಾಪರಹಿತನಾಗಿ ಪರಿಶುದ್ಧವಾದ ಅಂಗವುಳ್ಳವನೂ, ಶುಭ್ರಕಂಚುಕವನ್ನು ತೊಟ್ಟವನೂ ಆಗಿ ಶ್ರೇಯಃಕಾಮನಾದ ಮಾನವನು ಮುನಿಶ್ರೇಷ್ಠನಾಗಿ ಆತ್ಮಶುದ್ಧ್ಯರ್ಥವಾಗಿಯೂ, ಮುಕ್ತಿಗಾಗಿಯೂ ಪ್ರಯಾಗದಲ್ಲಿ ನೆಲಸುತ್ತಾನೆ.

೧೮೩. ಎಲೈ ಸುವ್ರತನೇ! ಭೂಮಿಯಲ್ಲಿ ದಿವ್ಯವಾದ ಯಾವ ಯಾವ ತೀರ್ಥಗಳಿರುವುವೋ ಅವೆಲ್ಲವೂ ಕಾರ್ತಿಕಮಾಸದಲ್ಲಿ ಗೋಪ್ರತಾರದಲ್ಲಿ ವಾಸ ಮಾಡುತ್ತವೆ.

೧೮೪. ಗೋಪ್ರತಾರದಲ್ಲಿ ಶ್ರದ್ಧೆಯಿಂದ ಶಕ್ತ್ಯನುಸಾರವಾಗಿ ಮಾಡುವ ಜಪ, ಹೋಮ, ಸ್ನಾನ, ದಾನ, ನಿಯಮ, ವ್ರತ ಎಲ್ಲವೂ ಅಕ್ಷಯವಾಗುತ್ತವೆ.

ಕಾರ್ತಿಕೇ ಪ್ರಾಪ್ಯ ತದ್ಯಾಂತಿ ತೀರ್ಥಾನಿ ಸಕಲಾನ್ಯಪಿ ।
ಗೋಪ್ರತಾರಂ ಗಮಿಷ್ಯಾಮಃ ಪಾಪಂ ತ್ಯಕ್ತುಮಿತೀಚ್ಛಯಾ ॥ ೧೮೫ ॥
ಗೋಪ್ರತಾರೇ ಕೃತಂ ಸ್ನಾನಂ ಸರ್ವಪಾಪಪ್ರಣಾಶನಂ ।
ಗೋಪ್ರತಾರೇ ನರಃ ಸ್ನಾತ್ವಾ ದೃಷ್ಟ್ವಾ ಗುಪ್ತಹರಿಂ ವಿಭುಂ ।
ಸರ್ವಪಾಪೈಃ ಪ್ರಮುಚ್ಯೇತ ನಾತ್ರ ಕಾರ್ಯಾ ವಿಚಾರಣಾ ॥ ೧೮೬ ॥
ವಿಷ್ಣುಮುದ್ದಿಶ್ಯ ವಿಪ್ರಾಣಾಂ ಪೂಜನಂ ಚ ವಿಶೇಷತಃ ।
ಕರ್ತವ್ಯಂ ಶ್ರದ್ಧಯಾ ಯುಕ್ತೈಃ ಸ್ನಾನಪೂರ್ವಂ ಯತವ್ರತೈಃ ॥ ೧೮೭ ॥
ಪಯಸ್ವಿನೀ ಚ ಗೌರ್ದೇಯಾ ಸಾಲಂಕಾರಾ ಚ ಶಕ್ತಿತಃ ।
ವಿಪ್ರಾಯ ವೇದವಿದುಷೇ ನಿಯಮವ್ರತಶಾಲಿನೇ ।
ಬ್ರಹ್ಮಣಾ ಯಾತಿ ಶುಚಯೇ ವಿಷ್ಣುಪ್ರೀತ್ಯೈ ಯತಾತ್ಮನಾ ॥ ೧೮೮ ॥
ಅನ್ನಂ ಬಹುವಿಧಂ ಹೇಮ ವಾಸಾಂಸಿ ವಿವಿಧಾನಿ ಚ ।
ದಾತವ್ಯಾನಿ ಹರೇಃ ಪ್ರಾಪ್ತ್ಯೈ ಭಕ್ತ್ಯಾ ಪರಮಯಾ ಯುತೈಃ ॥ ೧೮೯ ॥
ಸೂರ್ಯಗ್ರಹೇ ಕುರುಕ್ಷೇತ್ರೇ ನರ್ಮದಾಯಾಂ ಶಶಿಗ್ರಹೇ ।
ತುಲಾದಾನಸ್ಯ ಯತ್ಪುಣ್ಯಂ ತದತ್ರ ದೀಪದಾನತಃ ॥ ೧೯೦ ॥

---

೧೮೫. ಕಾರ್ತಿಕಮಾಸದಲ್ಲಿ, 'ಪಾಪವನ್ನು ಪರಿಹಾರಮಾಡಿಕೊಳ್ಳುವುದಕ್ಕಾಗಿ ಗೋಪ್ರತಾರಕ್ಕೆ ಹೋಗುತ್ತೇನೆ' ಎಂದು ಸಂಕಲ್ಪಿಸಿ ಸಕಲತೀರ್ಥಗಳೂ ಅಲ್ಲಿಗೆ ಹೋಗಿ ನೆಲಸುತ್ತವೆ.

೧೮೬–೧೮೭. ಗೋಪ್ರತಾರದಲ್ಲಿ ಮಾಡಿದ ಸ್ನಾನವು ಸರ್ವಪಾಪವಿನಾಶಕವಾದುದು. ಗೋಪ್ರತಾರದಲ್ಲಿ ನರನು ಸ್ನಾನಮಾಡಿ ವಿಭುವಾದ ಗುಪ್ತಹರಿಯ ದರ್ಶನಮಾಡಿ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ. ಇಂದ್ರಿಯನಿಗ್ರಹವನ್ನು ಮಾಡಿ ವ್ರತಧಾರಿಗಳಾಗಿ ಶ್ರದ್ಧಾಯುಕ್ತರಾದವರು ಮೊದಲು ಸ್ನಾನಮಾಡಿ ವಿಷ್ಣುವನ್ನುದ್ದೇಶಿಸಿ ಬ್ರಾಹ್ಮಣಪೂಜೆಯನ್ನು ವಿಶೇಷವಾಗಿ ನಡೆಸಬೇಕು.

೧೮೮. ಆತ್ಮನಿಗ್ರಹವನ್ನು ಮಾಡಿಕೊಂಡಿರುವಾತನು ತನ್ನ ಶಕ್ತಿಗನುಸಾರವಾಗಿ ಅಲಂಕಾರಮಾಡಿದ ಕರೆಯುವ ಹಸುವನ್ನು ನಿಯಮವ್ರತಶಾಲಿಯೂ, ವೇದವಿದ್ವಾಂಸನೂ, ಅತಿ ಶುಚಿಯೂ ಆದ ಬ್ರಾಹ್ಮಣನಿಗೆ ವಿಷ್ಣುವಿಗೆ ಪ್ರೀತಿಯಾಗಲೆಂದು ದಾನಮಾಡಬೇಕು.

೧೮೯. ಪರಮಭಕ್ತಿಯಿಂದ ಕೂಡಿದವರಾಗಿ ಬಹುವಿಧಗಳಾದ ಮೃಷ್ಟಾನ್ನಗಳನ್ನೂ, ಚಿನ್ನವನ್ನೂ, ವಿಧವಿಧವಾದ ಬಟ್ಟೆಗಳನ್ನೂ, ಶ್ರೀಹರಿಯ ಲೋಕದ ಪ್ರಾಪ್ತಿಗಾಗಿ ದಾನಮಾಡಬೇಕು.

೧೯೦. ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರದಲ್ಲಿಯೂ, ಚಂದ್ರ

ಘೃತೇನ ದೀಪಕೋ ಯಸ್ಯ ತಿಲತೈಲೇನ ವಾ ಪುನಃ ।
ಜ್ವಲತೇ ಮುನಿಶಾರ್ದೂಲ ಹಯಮೇಧೇನ ತಸ್ಯ ಕಿಂ ॥ ೧೯೧ ॥
ತೇನೇಷ್ಟಂ ಕ್ರತುಭಿಃ ಸರ್ವೈಃ ಕೃತಂ ತೀರ್ಥಾವಗಾಹನಂ ।
ದೀಪದಾನಂ ಕೃತಂ ಯೇನ ಕಾರ್ತಿಕೇ ಕೇಶವಾಗ್ರತಃ ॥ ೧೯೨ ॥
ನಾನಾವಿಧಾನಿ ತೀರ್ಥಾನಿ ಭುಕ್ತಿಮುಕ್ತಿಪ್ರದಾನಿ ಚ ।
ಗೋಪ್ರತಾರಸ್ಯ ತಾನ್ಯತ್ರ ಕಲಾಂ ನಾರ್ಹಂತಿ ಷೋಡಶೀಂ ॥ ೧೯೩ ॥
ಸ್ವರ್ಣಮಲ್ಪಂ ಚ ಯೋ ದದ್ಯಾತ್ ಬ್ರಾಹ್ಮಣೇ ವೇದಪಾರಗೇ ।
ಶುಭಾಂ ಗತಿಮವಾಪ್ನೋತಿ ಹ್ಯಗ್ನಿವಚ್ಚೈವ ದೀಪ್ಯತೇ ॥ ೧೯೪ ॥
ಗೋಪ್ರತಾರಾಭಿಧೇ ತೀರ್ಥೇ ತ್ರಿಲೋಕೀವಿಶ್ರುತೇ ದ್ವಿಜ ।
ದತ್ವಾನ್ನಂ ಚ ವಿಧಾನೇನ ನ ಸ ಭೂಯೋಽಭಿಜಾಯತೇ ॥ ೧೯೫ ॥
ತತ್ರ ಸ್ನಾನಂ ತು ಯಃ ಕುರ್ಯಾತ್ ವಿಪ್ರಾನ್ಸಂತರ್ಪಯೇನ್ನರಃ ।
ಸೌತ್ರಾಮಣೇಶ್ಚ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೯೬ ॥

---

ಗ್ರಹಣದಲ್ಲಿ ನರ್ಮದೆಯಲ್ಲಿಯೂ ತುಲಾದಾನಕ್ಕೆ ಯಾವ ಪುಣ್ಯವುಂಟೋ ಅದು ಈ ಗೋಪ್ರತಾರತೀರ್ಥದಲ್ಲಿ ದೀಪದಾನದಿಂದಲೇ ಉಂಟಾಗುತ್ತದೆ.

೧೯೧. ಎಲೈ ಮುನಿಶಾರ್ದೂಲನೇ! ತುಪ್ಪದಿಂದ ಅಥವಾ ಎಳ್ಳೆಣ್ಣೆಯಿಂದ ಹೊತ್ತಿಸಿದ ಯಾವನ ದೀಪವು ಉರಿಯುತ್ತಿರುವುದೋ, ಅವನಿಗೆ ಅಶ್ವಮೇಧ ದಿಂದ ಏನು ಪ್ರಯೋಜನ?

೧೯೨. ಕಾರ್ತಿಕಮಾಸದಲ್ಲಿ ಕೇಶವನ ಸನ್ನಿಧಿಯಲ್ಲಿ ಯಾವನು ದೀಪವಿಡು ವನೋ ಅವನು ಸರ್ವಕ್ರತುಗಳನ್ನೂ ಮಾಡಿದಂತೆಯೆ; ಸರ್ವತೀರ್ಥಗಳಲ್ಲೂ ಮುಳುಗಿ ಸ್ನಾನಮಾಡಿದಂತೆಯೆ.

೧೯೩. ಲೋಕದಲ್ಲಿ ಭುಕ್ತಿಮುಕ್ತಿಗಳನ್ನು ದೊರಕಿಸಬಲ್ಲ ನಾನಾವಿಧ ತೀರ್ಥಗಳಿರುವುವಷ್ಟೆ. ಅವು ಈ ಗೋಪ್ರತಾರತೀರ್ಥದ ಹದಿನಾರನೆಯ ಒಂದು ಕಲೆಯನ್ನು ಹೋಲಲರ್ಹವಲ್ಲ.

೧೯೪. ಇಲ್ಲಿ ಯಾವನು ಬಹು ಸ್ವಲ್ಪವೇ ಆದರೂ ಚಿನ್ನವನ್ನು ವೇದ ಪಾರಂಗತನಾದ ಬ್ರಾಹ್ಮಣನಿಗೆ ದಾನಮಾಡುತ್ತಾನೆಯೋ ಅವನು ಶುಭ ಗತಿಯನ್ನು ಪಡೆದು ಅಗ್ನಿಯಂತೆ ಪ್ರಜ್ವಲಿಸುತ್ತಾನೆ.

೧೯೫. ಮೂರುಲೋಕದಲ್ಲಿಯೂ ಪ್ರಖ್ಯಾತವಾದ ಗೋಪ್ರತಾರತೀರ್ಥದಲ್ಲಿ ವಿಧಿಪ್ರಕಾರವಾಗಿ ಅನ್ನದಾನವನ್ನು ಮಾಡುವವನು ಮತ್ತೆ ಹುಟ್ಟಬರುವುದಿಲ್ಲ.

೧೯೬. ಯಾವ ಮಾನವನು ಅಲ್ಲಿ ಸ್ನಾನಮಾಡುವನೋ, ಬ್ರಾಹ್ಮಣರಿಗೆ ಸಂತರ್ಪಣೆಯನ್ನು ಮಾಡಿ ತೃಪ್ತಿಪಡಿಸುವನೋ ಅವನು ಸೌತ್ರಾಮಣಿಯಜ್ಞದ ಫಲವನ್ನು ಪಡೆಯುತ್ತಾನೆ.

**ಏಕವಾರಸ್ತು ಯಸ್ತಿಷ್ಠೇನ್ಮಾಸಂ ತತ್ರ ಯತವ್ರತಃ ।**
**ಯಾವಜ್ಜೀವಕೃತಂ ಪಾಪಂ ಸಹಸಾ ತಸ್ಯ ನಶ್ಯತಿ ॥ ೧೯೭ ॥**
**ಅಗ್ನಿಪ್ರವೇಶಂ ಯೇ ಕುರ್ಯುರ್ಗೋಪ್ರತಾರೇ ವಿಧಾನತಃ ।**
**ತೇ ವಿಶಂತಿ ಪದಂ ವಿಷ್ಣೋರ್ನಿಸ್ಸಂದಿಗ್ಧಂ ತಪೋಧನ ॥ ೧೯೮ ॥**
**ಕುರ್ವಂತ್ಯನಶನಂ ಯೇಽತ್ರ ವಿಷ್ಣುಭಕ್ತ್ಯಾ ಸುನಿಶ್ಚಿತಾಃ ।**
**ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೧೯೯ ॥**
**ಅರ್ಚಯೇದ್ಯಸ್ತು ಗೋವಿಂದಂ ಗೋಪ್ರತಾರೇ ಹಿ ಮಾನವಃ ।**
**ದಶಸೌವರ್ಣಿಕಂ ಪುಣ್ಯಂ ಗೋಪ್ರತಾರೇ ಪ್ರಕಥ್ಯತೇ ॥ ೨೦೦ ॥**
**ಅಗ್ನಿಹೋತ್ರಫಲೋ ಧೂಪೋ ಗೋವಿಂದಸ್ಯ ಸಮರ್ಪಿತಃ ।**
**ಭೂಮಿದಾನೇನ ಸದೃಶಂ ಗಂಧದಾನಫಲಂ ಸ್ಮೃತಂ ॥ ೨೦೧ ॥**
**ಅತ್ಯದ್ಭುತಮಿದಂ ವಿದ್ವನ್ ಸ್ಥಾನಮೇತತ್ಪ್ರಕೀರ್ತಿತಂ ।**
**ಕಾರ್ತಿಕ್ಯಾಂ ತು ವಿಶೇಷೇಣ ಅತ್ರ ಸ್ನಾತ್ವಾ ಶುಚಿವ್ರತಃ ॥ ೨೦೨ ॥**
**ಸ್ವರ್ಗದ್ವಾರೇ ನರಃ ಸ್ನಾತ್ವಾ ದಶಸ್ವರ್ಣಫಲಂ ಲಭೇತ್ ।**
**ಸ್ವರ್ಣದಃ ಸ್ವರ್ಗವಾಸೀ ಚ ಯೋ ದದ್ಯಾತ್ ಶ್ರದ್ಧಯಾನ್ವಿತಃ ॥ ೨೦೩ ॥**

---

೧೯೭. ಯಾವನು ಅಲ್ಲಿ ಹಗಲು ಮಾತ್ರವೇ ಊಟಮಾಡುತ್ತ ಒಂದು ತಿಂಗಳವರೆವಿಗೆ ವ್ರತನಿಷ್ಠನಾಗಿರುವನೋ ಅವನು ಜೀವಾವಧಿ ಮಾಡಿರುವ ಪಾಪವೆಲ್ಲ ತಟ್ಟನೆ ನಾಶವಾಗುತ್ತದೆ.

೧೯೮. ಎಲೈ ತಪೋಧನನೇ! ಯಾರು ಗೋಪ್ರತಾರಕ್ಷೇತ್ರದಲ್ಲಿ ವಿಧಾನವನ್ನನುಸರಿಸಿ ಅಗ್ನಿಪ್ರವೇಶವನ್ನು ಮಾಡತ್ತಾರೆಯೋ ಅವರು ನಿಸ್ಸಂದೇಹವಾಗಿಯೂ ವಿಷ್ಣುಪದವನ್ನು ಪ್ರವೇಶಿಸುತ್ತಾರೆ.

೧೯೯. ಯಾರು ವಿಷ್ಣುಭಕ್ತಿಯಿಂದ ಮನೋನಿಶ್ಚಯಮಾಡಿಕೊಂಡು ಇಲ್ಲಿ ಅನಶನವ್ರತವನ್ನು ಮಾಡುವರೋ ಅವರಿಗೆ ನೂರಾರು ಕಲ್ಪಕೋಟಿಗಳಾದರೂ ಪುನರಾವೃತ್ತಿಯಿರುವುದಿಲ್ಲ.

೨೦೦. ಯಾವನು ಗೋಪ್ರತಾರದಲ್ಲಿ ಗೋವಿಂದನನ್ನು ಅರ್ಚಿಸುವನೋ ಆ ಮಾನವನು ಹತ್ತು ಸುವರ್ಣಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುವನೆಂದು ಹೇಳಲ್ಪಟ್ಟಿದೆ.

೨೦೧. ಗೋವಿಂದನಿಗೆ ಸಮರ್ಪಿಸಿದ ಧೂಪವು ಅಗ್ನಿಹೋತ್ರದ ಫಲವುಳ್ಳದ್ದಾಗುವುದು. ಗಂಧದಾನದ ಫಲವು ಭೂಮಿದಾನದ ಫಲಕ್ಕೆ ಸಮಾನವೆಂದೆಣಿಸಲ್ಪಡುವುದು.

೨೦೨–೨೦೩. ಎಲೈ ವಿದ್ವಾಂಸನೇ! ಈ ಸ್ಥಾನವು ಅತ್ಯದ್ಭುತವಾದುದೆಂದು ಪ್ರಸಿದ್ಧವಾಗಿರುವುದು. ಕಾರ್ತಿಕಮಾಸದಲ್ಲಿ ಇಲ್ಲಿ ವಿಶೇಷವಿರುವುದು. ಆಗ

ಸುತೀರ್ಥೇ ಪರ್ವಣಿ ಶ್ರೇಷ್ಠೇ ದಶಸ್ವರ್ಣಫಲಪ್ರದೇ ।
ಜ್ಯೇಷ್ಠಶುಕ್ಲಚತುರ್ದಶ್ಯಾಂ ರಾತ್ರೌ ಜಾಗರಣಂ ಚರೇತ್ ॥ ೨೦೪ ॥
ಉಪೋಷಿತಃ ಶುಚಿಃ ಸ್ನಾತೋ ವಿಷ್ಣುಪೂಜನತತ್ಪರಃ ।
ದೀಪಂ ದದ್ಯಾತ್ ಪ್ರಯತ್ನೇನ ನಾನಾಫಲವಿಧಾಯಿನಂ ॥ ೨೦೫ ॥
ತಾವದ್ಗರ್ಜಂತಿ ಪುಣ್ಯಾನಿ ಸ್ವರ್ಗೇ ಮರ್ತ್ಯೇ ರಸಾತಲೇ ।
ಯಾವದ್ದದ್ಯಾಜ್ಜಲೇ ದೀಪಂ ಕಾರ್ತಿಕೇ ಕೇಶವಾಗ್ರತಃ ॥ ೨೦೬ ॥
ಪೌರ್ಣಮಾಸ್ಯಾಂ ಪ್ರಭಾತೇ ತು ಸ್ನಾತ್ವಾ ನಿರ್ಮಲಮಾನಸಃ ।
ಹರಿಂ ಸಂಪೂಜ್ಯ ವಿಧಿವತ್ ವಿಧಾಯ ಶ್ರಾದ್ಧಮಾದರಾತ್ ॥ ೨೦೭ ॥
ದತ್ವಾನ್ನಂ ಚ ಯಥಾಶಕ್ತ್ಯಾ ಸಂತೋಷ್ಯ ಬ್ರಾಹ್ಮಣಾಂಸ್ತತಃ ।
ವಸ್ತ್ರಾದಿಭಿರಲಂಕಾರೈಃ ಸಂಪೂಜ್ಯ ದ್ವಿಜದಂಪತೀ ॥ ೨೦೮ ॥
ವಿಭುಂ ಗುಪ್ತಹರಿಂ ದೃಷ್ಟ್ವಾ ಸಂಪೂಜ್ಯ ತು ವಿಶೇಷತಃ ।
ನಮಸ್ಕೃತ್ಯಾನು ತತ್ತೀರ್ಥಂ ಶುಚಿಸ್ತದ್ಗತಮಾನಸಃ ॥ ೨೦೯ ॥

---

ಇಲ್ಲಿ ಶುಚಿವ್ರತನಾಗಿ ಸ್ವರ್ಗದ್ವಾರದಲ್ಲಿ ಸ್ನಾನಮಾಡಿದವನು ಹತ್ತು ಸುವರ್ಣಗಳನ್ನು ದಾನಮಾಡಿದ ಫಲವನ್ನು ಪಡೆಯುತ್ತಾನೆ. ದಶಸ್ವರ್ಣಫಲವನ್ನು ಕೊಡತಕ್ಕ ಈ ಸುತೀರ್ಥದಲ್ಲಿ ಪರ್ವಕಾಲದಲ್ಲಿ ಯಾವನು ಶ್ರದ್ಧೆಯಿಂದ ಸ್ವರ್ಣವನ್ನೇ ದಾನಮಾಡುತ್ತಾನೆಯೋ ಅವನು ಸ್ವರ್ಗವಾಸಿಯಾಗುತ್ತಾನೆ. ಜ್ಯೇಷ್ಠ ಶುಕ್ಲ ಚತುರ್ದಶಿಯ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು.

೨೦೫. ಉಪವಾಸವನ್ನು ಮಾಡಿ ಶುಚಿಯಾಗಿ ಸ್ನಾನಮಾಡಿ ವಿಷ್ಣುಪೂಜಾ ತತ್ಪರನಾಗಿದ್ದು ನಾನಾ ಫಲಗಳನ್ನುಂಟುಮಾಡುವ ದೀಪವನ್ನು ಪ್ರಯತ್ನ ಪೂರ್ವಕವಾಗಿ ಹೊತ್ತಿಸಬೇಕು.

೨೦೬. ಕಾರ್ತಿಕದಲ್ಲಿ ಕೇಶವನೆದುರಿಗೆ ಜಲದಲ್ಲಿ ದೀಪವನ್ನು ಹೊತ್ತಿಸದಿರುವವರೆವಿಗೂ ಸ್ವರ್ಗ, ಮರ್ತ್ಯ, ರಸಾತಲಗಳೆಂಬ ಮೂರು ಲೋಕಗಳಲ್ಲಿಯೂ ಪುಣ್ಯಗಳು ಗರ್ಜಿಸುತ್ತಿರುತ್ತವೆ.

೨೦೭–೨೦೮. ಪೌರ್ಣಿಮೆಯ ದಿನ ಬೆಳಗಾಗುತ್ತಲೆ ಸ್ನಾನಮಾಡಿ ನಿರ್ಮಲ ಮಾನಸನಾಗಿ ಶ್ರೀಹರಿಯನ್ನು ಪೂಜಿಸಿ ವಿಧಿವತ್ತಾಗಿ ಆದರದಿಂದ ಶ್ರಾದ್ಧವನ್ನು ಮಾಡಬೇಕು. ಯಥಾಶಕ್ತಿಯಾಗಿ ಅನ್ನದಾನವನ್ನು ಮಾಡಿ ಬ್ರಾಹ್ಮಣರನ್ನು ಸಂತೋಷಪಡಿಸಿ, ವಸ್ತ್ರ ಮೊದಲಾದ ಅಲಂಕಾರಗಳಿಂದ ಬ್ರಾಹ್ಮಣದಂಪತಿಗಳನ್ನು ಪೂಜಿಸಬೇಕು.

೨೦೯. ಆ ತೀರ್ಥದ ಬಳಿಯಲ್ಲಿರುವ ವಿಭುವಾದ ಗುಪ್ತಹರಿಯನ್ನು ದರ್ಶನಮಾಡಿ ಶುಚಿಯಾಗಿ ಅವನಲ್ಲೇ ಮನಸ್ಸಿಟ್ಟು ವಿಶೇಷವಾಗಿ ಪೂಜಿಸಿ ನಮಸ್ಕರಿಸಬೇಕು.

**ಸ್ವರ್ಗದ್ವಾರೇ ಚ ವಿಧಿವನ್ಮಧ್ಯಾಹ್ನೇ ಸ್ನಾನಮಾಚರೇತ್ ।**
**ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕೇ ಮಹೀಯತೇ ॥ ೨೧೦ ॥**
**ಇತಿ ಪರಮವಿಧಾನೈರ್ಗೋಪ್ರತಾರೇ ವಿಧಾಯ**
**ಪ್ರಥಿತಸುಕೃತಮೂರ್ತಿಃ ಸ್ನಾನಮುಚ್ಚೈಃ ಪ್ರಯತ್ನಾತ್ ।**
**ಗಳಿತನಿಖಿಲಪಾಪಃ ಪೂಜಯಿತ್ವಾದರೇಣಾ**
**ಚ್ಯುತಮಮಲವಿಕಾಸೋ ವಿಷ್ಣುಸಾಯುಜ್ಯಮೇತಿ ॥ ೨೧೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಸ್ವರ್ಗದ್ವಾರ—ಗೋಪ್ರತಾರ ತೀರ್ಥಮಾಹಾತ್ಮ್ಯವರ್ಣನಂ" ನಾಮ ಷಷ್ಠೋಽಧ್ಯಾಯಃ**

---

೨೧೦. ಸ್ವರ್ಗದ್ವಾರದಲ್ಲಿಯೂ ಮಧ್ಯಾಹ್ನಕಾಲದಲ್ಲಿ ವಿಧಿವತ್ತಾಗಿ ಸ್ನಾನವನ್ನು ಮಾಡಿದುದಾದರೆ ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಶುದ್ಧಾತ್ಮನಾಗಿ ವಿಷ್ಣುಲೋಕದಲ್ಲಿ ಆನಂದಿಸುತ್ತಾನೆ.

೨೧೧. ಈ ರೀತಿ ಗೋಪ್ರತಾರತೀರ್ಥದಲ್ಲಿ ಪರಮವಿಧಾನಗಳಿಂದ ಪ್ರಯತ್ನಪೂರ್ವಕವಾಗಿ ಸ್ನಾನಮಾಡಿ, ಸಕಲಪಾಪಗಳನ್ನೂ ಪರಿಹರಿಸಿಕೊಂಡು, ಪುಣ್ಯಮೂರ್ತಿಯಾಗಿ, ಅಚ್ಯುತನನ್ನು ಆದರದಿಂದ ಪೂಜಿಸಿದವನು ನಿರ್ಮಲಚಿತ್ತವಿಕಾಸವುಳ್ಳವನಾಗಿ ವಿಷ್ಣುವಿನ ಸಾಯುಜ್ಯವನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಸ್ವರ್ಗದ್ವಾರ—ಗೋಪ್ರತಾರತೀರ್ಥ ಮಾಹಾತ್ಮ್ಯವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

**ಬೃಹಸ್ಪತಿಕುಂಡ, ರುಕ್ಮಿಣೀಕುಂಡ, ಧನಯಕ್ಷತೀರ್ಥ, ವಸಿಷ್ಠಕುಂಡ, ಸಾಗರಕುಂಡ, ಯೋಗಿನೀಕುಂಡ, ಉರ್ವಶೀಕುಂಡ, ಘೋಷಾರ್ಕಕುಂಡಮಾಹಾತ್ಮ್ಯವರ್ಣನಂ**

**ಅಗಸ್ತ್ಯ ಉವಾಚ :—**

**ತೀರ್ಥಮನ್ಯತ್ಪ್ರವಕ್ಷ್ಯಾಮಿ ಕ್ಷೀರೋದಕಮಿತಿ ಸ್ಮೃತಂ ।**
**ಸೀತಾಕುಂಡಾಚ್ಚ ವಾಯವ್ಯೇ ವರ್ತತೇ ಗುಣಸುಂದರಂ ।**
**ಪುಣ್ಯೈಕನಿಚಯಸ್ಥಾನಂ ಸರ್ವದುಃಖವಿನಾಶನಂ ॥ ೧ ॥**
**ಪುರಾ ದಶರಥೋ ರಾಜಾ ಪುತ್ರೇಷ್ಟಿಂ ನಾಮ ನಾಮತಃ ।**
**ಚಕಾರ ವಿಧಿವದ್ಯಜ್ಞಂ ಪುತ್ರಾರ್ಥಂ ಯತ್ರ ಚಾದರಾತ್ ॥ ೨ ॥**
**ಕ್ರತುಂ ಸಮಾಪಯಾಮಾಸ ಸಾನಂದೋ ಭೂರಿದಕ್ಷಿಣಂ ।**
**ಯಜ್ಞಾಂತೇ ಕ್ರತುಭುಕ್ತತ್ರ ಮೂರ್ತಿಮಾನ್ ಸಮದೃಶ್ಯತ ॥ ೩ ॥**
**ಹಸ್ತೇ ಕೃತ್ವಾ ಹೇಮಪಾತ್ರಂ ಹವಿಃಪೂರ್ಣಮನುತ್ತಮಂ ।**
**ತಸ್ಮಿನ್ ಹವಿಷಿ ಸಂಕೀರ್ಣಂ ವೈಷ್ಣವಂ ತೇಜ ಉತ್ತಮಂ ।**
**ಚತುರ್ವಿಧಂ ವಿಭಜ್ಯೈವ ಪತ್ನೀಭ್ಯೋ ದತ್ತವಾನ್ನೃಪಃ ॥ ೪ ॥**

---

## ಕನ್ನಡದ ಅನುವಾದ

**ಬೃಹಸ್ಪತಿಕುಂಡ, ರುಕ್ಮಿಣೀಕುಂಡ, ಧನಯಕ್ಷತೀರ್ಥ, ವಸಿಷ್ಠಕುಂಡ, ಸಾಗರಕುಂಡ, ಯೋಗಿನೀಕುಂಡ, ಉರ್ವಶೀಕುಂಡ, ಘೋಷಾರ್ಕಕುಂಡಗಳ ಮಾಹಾತ್ಮ್ಯವರ್ಣನ**

೧. ಅಗಸ್ತ್ಯನು ಹೇಳುತ್ತಾನೆ:–"ಕ್ಷೀರೋದಕವೆಂದು ಹೆಸರುಗೊಂಡಿರುವ ಮತ್ತೊಂದು ತೀರ್ಥದ ವಿಷಯವನ್ನು ಹೇಳುತ್ತೇನೆ; ಕೇಳು. ಅದು ಸೀತಾಕುಂಡಕ್ಕೆ ವಾಯುವ್ಯದಿಕ್ಕಿನಲ್ಲಿ ಸಮಸ್ತಪುಣ್ಯಗುಣಗಳಿಂದಲೂ ತುಂಬಿ ಸುಂದರವಾಗಿ ಕಂಗೊಳಿಸುತ್ತಿರುವುದು. ಪುಣ್ಯಸಂಗ್ರಹಕ್ಕೆ ಅದೊಂದೇ ಸ್ಥಾನವಾಗಿರುವುದು. ಅದು ಸರ್ವದುಃಖಗಳನ್ನು ನಾಶಮಾಡುವಂತಹುದು.

೨. ಪೂರ್ವದಲ್ಲಿ ಅಲ್ಲಿ ದಶರಥರಾಜನು ಪುತ್ರಾರ್ಥವಾಗಿ ಪುತ್ರಕಾಮೇಷ್ಟಿಯೆಂಬ ಯಜ್ಞವನ್ನು ಆದರದಿಂದಲೂ ವಿಧಿವತ್ತಾಗಿಯೂ ನೆರವೇರಿಸಿದನು.

೩. ಆತನು ಆನಂದದಿಂದ ಭೂರಿದಕ್ಷಿಣೆಯನ್ನು ಕೊಟ್ಟು ಆ ಕ್ರತುವನ್ನು ಸಮಾಪ್ತಿಗೊಳಿಸಿದನು. ಯಜ್ಞದ ಕೊನೆಯಲ್ಲಿ ಕ್ರತುಭುಜನಾದ ಯಜ್ಞೇಶ್ವರನು ದೇಹಧಾರಿಯಾಗಿ ಆತನಿಗೆ ಕಾಣಿಸಿಕೊಂಡನು.

೪. ಆ ಯಜ್ಞೇಶ್ವರನು ಹವಿಸ್ಸಿನಿಂದ ತುಂಬಿದ ಅತ್ಯುತ್ತಮವಾದ ಚಿನ್ನದ ಪಾತ್ರೆಯೊಂದನ್ನು ಕೈಯಲ್ಲಿ ಹಿಡಿದಿದ್ದನು. ಆ ಹವಿಸ್ಸಿನಲ್ಲಿ ಉತ್ತಮವಾದ

**ಯತ್ರ ತತ್ಕ್ಷೀರ ಸಂಪ್ರಾಪ್ತಿರ್ಜಾತಾ ಪರಮದುರ್ಲಭಾ ।**
**ಕ್ಷೀರೋದಕಮಿತಿ ಖ್ಯಾತಂ ತತ್ಸ್ಥಾನಂ ಪಾಪನಾಶನಂ ।**
**ಉದಕೇನಾಭಿವ್ಯಕ್ತಂ ಚ ಉತ್ತಮಂ ಚ ಫಲಪ್ರದಂ ॥ ೫ ॥**
**ತತ್ರ ಸ್ನಾತ್ವಾ ನರೋ ಧೀಮಾನ್ ವಿಜಿತೇಂದ್ರಿಯ ಆದರಾತ್ ।**
**ಸರ್ವಾನ್ಕಾಮಾನವಾಪ್ನೋತಿ ಪುತ್ರಾಂಶ್ಚ ಸುಬಹುಶ್ರುತಾನ್ ॥ ೬ ॥**
**ಆಶ್ವಿನೇ ಶುಕ್ಲಪಕ್ಷಸ್ಯ ಏಕಾದಶ್ಯಾಂ ಜಿತವ್ರತಃ ।**
**ತತ್ರ ಸ್ನಾತ್ವಾ ವಿಧಾನೇನ ದತ್ವಾ ಶಕ್ತ್ಯಾ ದ್ವಿಜನ್ಮನೇ ॥ ೭ ॥**
**ವಿಷ್ಣುಂ ಸಂಪೂಜ್ಯ ವಿಧಿವತ್ ಸರ್ವಾನ್ಕಾಮಾನವಾಪ್ನುಯಾತ್ ।**
**ಪುತ್ರಾನವಾಪ್ನುಯಾದ್ವಿದ್ಧಿ ಧರ್ಮಾಂಶ್ಚ ವಿಧಿವನ್ನರಃ ॥ ೮ ॥**
**ತಸ್ಮಾತ್ ಕ್ಷೀರೋದಕಸ್ಥಾನಾನ್ನೈರುತ್ಯೇ ದಿಕ್ತಲೇ ಶ್ರಿತಂ ।**
**ಖ್ಯಾತಂ ಬೃಹಸ್ಪತೇಃ ಕುಂಡಮುದ್ದಂಡಾಚಂಡಮಂಡಿತಂ ॥ ೯ ॥**
**ಸರ್ವಪಾಪಪ್ರಶಮನಂ ಪುಣ್ಯಾಮೃತತರಂಗಿತಂ ।**
**ಯತ್ರ ಸಾಕ್ಷಾತ್ಸುರಗುರುರ್ನಿವಾಸಂ ಕಿಲ ನಿರ್ಮಮೇ ॥ ೧೦ ॥**

---

ವೈಷ್ಣವತೇಜಸ್ಸು ಬೆರೆತಿದ್ದಿತು. ದಶರಥರಾಜನು ಅದನ್ನು ನಾಲ್ಕುಪಾಲಾಗಿ ವಿಭಾಗಿಸಿ ತನ್ನ ಪತ್ನಿಯರಿಗೆ ಕೊಟ್ಟನು.

೫. ಪರಮದುರ್ಲಭವಾದ ಆ ಕ್ಷೀರಪ್ರಾಪ್ತಿಯು ಆ ಸ್ಥಳದಲ್ಲಿ ಉಂಟಾಯಿತಾದುದರಿಂದ ಆ ಸ್ಥಾನವು ಕ್ಷೀರೋದಕವೆಂದು ಪ್ರಖ್ಯಾತವೂ, ಪಾಪನಾಶಕವೂ ಆಗಿ ನೀರಿನಿಂದ ಅದು ಅಭಿವ್ಯಕ್ತವಾಗಿರುವುದಲ್ಲದೆ ಉತ್ತಮವೂ, ಫಲಪ್ರದವೂ ಆಗಿರುವುದು.

೬. ಧೀಮಂತನಾದ ನರನು ಇಂದ್ರಿಯನಿಗ್ರಹಮಾಡಿಕೊಂಡು ಆ ತೀರ್ಥದಲ್ಲಿ ಆದರದಿಂದ ಸ್ನಾನಮಾಡಿ ಇಷ್ಟಾರ್ಥಗಳೆಲ್ಲವನ್ನು ಪಡೆಯುತ್ತಾನೆಯಲ್ಲದೆ, ಬಹು ಖ್ಯಾತಿವಂತರಾದ ಪುತ್ರರನ್ನೂ ಪಡೆಯುತ್ತಾನೆ.

೭-೮. ಆಶ್ವೀಜಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ವ್ರತಧಾರಿಯಾಗಿ ಅಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ತನ್ನ ಶಕ್ತಿಗೆ ತಕ್ಕಂತೆ ಬ್ರಾಹ್ಮಣನಿಗೆ ದಾನಮಾಡಿ, ವಿಧಿವತ್ತಾಗಿ ವಿಷ್ಣುವನ್ನು ಪೂಜಿಸಿದಾತನು ಸರ್ವಕಾಮಗಳನ್ನೂ, ಪುತ್ರರನ್ನೂ, ವಿಧಿವತ್ತಾದ ಧರ್ಮಗಳನ್ನೂ ಪಡೆಯುತ್ತಾನೆ.

೯. ಕ್ಷೀರೋದಕಸ್ಥಾನದಿಂದ ನೈರುತ್ಯದಿಕ್ಕಿನಲ್ಲಿ ಬೃಹಸ್ಪತಿಕುಂಡವೆಂದು ಪ್ರಸಿದ್ಧವಾಗಿರುವ ತೀರ್ಥವೊಂದಿರುವುದು.

೧೦. ಅದು ಸರ್ವಪಾಪಗಳನ್ನೂ ಶಮನಗೊಳಿಸುವಂತಹುದು; ಪುಣ್ಯಾಮೃತದ ತೆರೆಗಳಿಂದ ತುಂಬಿರುವಂತಹುದು. ಪೂರ್ವದಲ್ಲಿ ದೇವತೆಗಳ ಗುರುವಾದ ಸಾಕ್ಷಾತ್ ಬೃಹಸ್ಪತಿಯು ಅಲ್ಲಿಯೆ ನಿವಾಸವನ್ನು ನಿರ್ಮಿಸಿಕೊಂಡಿದ್ದನು.

ಯಜ್ಞಂ ಚ ವಿಧಿವಚ್ಚಕ್ರೇ ಬೃಹಸ್ಪತಿರುದಾರಧೀಃ ।
ನಾನಾಮುನಿಗಣೈರ್ಯುಕ್ತಂ ರಮ್ಯಂ ಬಹುಫಲಪ್ರದಂ ।
ಸುವರ್ಣಚ್ಛಾಯಸಂಪನ್ನಂ ಕುಂಡಂ ತತ್ಪಾಪಿದುರ್ಲಭಂ ॥ ೧೧ ॥
ಇಂದ್ರಾದಯೋಽಪಿ ವಿಬುಧಾ ಯತ್ರ ಸ್ನಾತ್ವಾ ಪ್ರಯತ್ನತಃ ।
ಮನೋಭೀಷ್ಟಫಲಂ ಪ್ರಾಪ್ತಾಃ ಸೌಂದರ್ಯೌದಾರ್ಯತುಂದಿಲಾಃ ॥
ಯತ್ರ ಸ್ನಾನೇನ ದಾನೇನ ನರೋ ಮುಚ್ಯೇತ ಕಿಲ್ಬಿಷಾತ್ ॥ ೧೩ ॥
ಭಾದ್ರೇ ಶುಕ್ಲೇ ತು ಪಂಚಮ್ಯಾಂ ಯಾತ್ರಾ ತತ್ರ ಫಲಪ್ರದಾ ।
ಅನ್ಯದಾಪಿ ಗುರೋರ್ವಾರೇ ಸ್ನಾನಂ ಬಹುಫಲಪ್ರದಂ ॥ ೧೪ ॥
ಬೃಹಸ್ಪತೇಸ್ತಥಾ ವಿಷ್ಣೋಃ ಪೂಜಾಂ ತತ್ರ ಯ ಆಚರೇತ್ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಸ ಮೋದತೇ ॥ ೧೫ ॥
ಭವೇದ್ಬೃಹಸ್ಪತೇಃ ಪೀಡಾ ಯಸ್ಯ ಗೋಚರವೇಧತಃ ।
ತೇನಾತ್ರ ವಿಧಿವತ್ ಸ್ನಾನಂ ಕಾರ್ಯಂ ಸಂಕಲ್ಪಪೂರ್ವಕಂ ॥ ೧೬ ॥

---

೧೧. ಉದಾರಬುದ್ಧಿಯಾದ ಬೃಹಸ್ಪತಿಯು ಆ ತೀರ್ಥದಲ್ಲಿ ವಿಧಿವತ್ತಾಗಿ ಯಜ್ಞವನ್ನೂ ಮಾಡಿದನು. ಆ ಕುಂಡವು ನಾನಾ ಬಗೆಯ ಮುನಿಗಣಗಳಿಂದ ರಮ್ಯವಾಗಿರುವುದು; ಬಹು ಫಲಗಳನ್ನು ಕೊಡುವುದಾಗಿರುವುದು. ಸುವರ್ಣ ಚ್ಛಾಯೆಯಿಂದೊಡಗೂಡಿರುವುದು; ಪಾಪಿಗಳಿಗೆ ದುರ್ಲಭವೂ ಆಗಿರುವುದು.

೧೨. ಇಂದ್ರಾದಿದೇವತೆಗಳೂ ಪ್ರಯತ್ನಪೂರ್ವಕವಾಗಿ ಅಲ್ಲಿ ಸ್ನಾನಮಾಡಿ ಮನೋಭೀಷ್ಟಫಲವನ್ನೂ, ಉದಾರವಾದ ಸೌಂದರ್ಯವನ್ನೂ ಸಹ ಪಡೆದು ಸಂತೋಷಭರಿತರಾದರು.

೧೩. ಅಲ್ಲಿ ಮಾಡುವ ಸ್ನಾನದಿಂದಲೂ, ದಾನದಿಂದಲೂ ನರರು ಪಾಪ ಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ.

೧೪. ಭಾದ್ರಪದಶುಕ್ಲ ಪಂಚಮಿಯಲ್ಲಿ ಅಲ್ಲಿ ಯಾತ್ರೆಯು ಫಲಪ್ರದ ವಾಗುತ್ತದೆ. ಬೇರೆ ಕಾಲದಲ್ಲಿ ಕೂಡ ಗುರುವಾರದಲ್ಲಿ ಸ್ನಾನಮಾಡುವುದರಿಂದ ಬಹು ಫಲಗಳುಂಟಾಗುತ್ತವೆ.

೧೫. ಅಲ್ಲಿ ಬೃಹಸ್ಪತಿಯ ಮತ್ತು ವಿಷ್ಣುವಿನ ಪೂಜೆಯನ್ನು ಯಾವನು ಮಾಡುವನೋ ಅವನು ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ವಿಷ್ಣುಲೋಕ ದಲ್ಲಿ ಆನಂದಿಸುತ್ತಾನೆ.

೧೬. ಯಾವನಿಗೆ (ಗ್ರಹ) ಗೋಚಾರದಂತೆ ಬೃಹಸ್ಪತಿ ಪೀಡೆಯುಂಟಾ ಗುವುದೋ ಅವನು ಇಲ್ಲಿ ಸಂಕಲ್ಪಪೂರ್ವಕವಾಗಿ ವಿಧಿಯನ್ನನುಸರಿಸಿ ಸ್ನಾನ ಮಾಡಬೇಕು.

ಹೋಮಂ ಕೃತ್ವಾ ಗುರೋರ್ಮೂರ್ತಿಃ ಸುವರ್ಣೇನ ವಿನಿರ್ಮಿತಾ ।
ಸ್ಥಿತ್ವಾ ಜಲೇ ಪ್ರದೇಯಾ ವೈ ಪೀತಾಂಬರಸಮನ್ವಿತಾ ॥ ೧೭ ॥
ವೇದಜ್ಞಾಯಾತಿಶುಚಯೇ ಸ್ನಾತ್ವಾ ಪೀಡಾಪನುತ್ತಯೇ ।
ಹೋಮಂ ಚ ಕಾರಯೇತ್ತತ್ರ ಗ್ರಹಜಾಪ್ಯವಿಧಾನತಃ ॥ ೧೮ ॥
ಏವಂ ಕೃತೇ ನ ಸಂದೇಹೋ ಗ್ರಹ ಪೀಡಾ ಪ್ರಣಶ್ಯತಿ ॥ ೧೯ ॥
ತದ್ದಕ್ಷಿಣೇ ಮುನಿಶ್ರೇಷ್ಠ ರುಕ್ಮಿಣೀಕುಂಡಮುತ್ತಮಂ ।
ಚಕಾರ ಯತ್ಸ್ವಯಂ ದೇವೀ ರುಕ್ಮಿಣೀ ಕೃಷ್ಣವಲ್ಲಭಾ ॥ ೨೦ ॥
ತತ್ರ ವಿಷ್ಣುಃ ಸ್ವಯಂ ಚಕ್ರೇ ನಿವಾಸಂ ಸಲಿಲೇ ತದಾ ।
ವರಪ್ರದಾನಾತ್ ಸ್ನೇಹೇನ ಭಾರ್ಯಾಯಾಃ ಪ್ರಗುಣೀಕೃತಂ ॥ ೨೧ ॥
ತತ್ರ ಸ್ನಾನಂ ತಥಾ ದಾನಂ ಹೋಮಂ ವೈಷ್ಣವಮಂತ್ರಕಂ ।
ದ್ವಿಜಪೂಜಾಂ ವಿಷ್ಣುಪೂಜಾಂ ಕುರ್ವೀತ ಪ್ರಯತೋ ನರಃ ॥ ೨೨ ॥
ತತ್ರ ಸಾಂವತ್ಸರೀ ಯಾತ್ರಾ ಕರ್ತವ್ಯಾ ಸುಪ್ರಯತ್ನತಃ ।
ಊರ್ಜಕೃಷ್ಣನವಮ್ಯಾಂ ಚ ಸರ್ವಪಾಪಾಪನುತ್ತಯೇ ॥ ೨೩ ॥

---

೧೭–೧೯. ಅಲ್ಲದೆ ಹೋಮಮಾಡಿ, ಸುವರ್ಣದಿಂದ ನಿರ್ಮಿಸಿದ ಗುರುವಿನ ಪ್ರತಿಮೆಯನ್ನು ಪೀತಾಂಬರಸಮೇತವಾಗಿ, ಅತಿ ಶುಚಿಯೂ, ವೇದಜ್ಞನೂ ಆದ ವಿಪ್ರನಿಗೆ ನೀರಿನಲ್ಲಿ ನಿಂತುಕೊಂಡು ವಿಧ್ಯುಕ್ತವಾಗಿ ದಾನಮಾಡಬೇಕು. ಸ್ನಾನಮಾಡಿ ಪೀಡಾಪರಿಹಾರಕ್ಕಾಗಿ ಗ್ರಹಜಾಪ್ಯವಿಧಾನದಿಂದ ಹೋಮವನ್ನು ಮಾಡಿಸಬೇಕು. ಈ ರೀತಿ ಮಾಡಿದರೆ ಬೃಹಸ್ಪತಿ ಗ್ರಹಪೀಡೆಯು ಪರಿಹಾರ ವಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲವು.

೨೦. ಎಲೈ ಮುನಿಶ್ರೇಷ್ಠನೇ! ಆ ಬೃಹಸ್ಪತಿಕುಂಡಕ್ಕೆ ದಕ್ಷಿಣದಿಕ್ಕಿನಲ್ಲಿ ಉತ್ತಮವಾದ ರುಕ್ಮಿಣೀಕುಂಡವಿರುವುದು. ಕೃಷ್ಣವಲ್ಲಭೆಯಾದ ರುಕ್ಮಿಣೀ ದೇವಿಯು ಅದನ್ನು ಸ್ವಂತವಾಗಿಯೆ ನಿರ್ಮಿಸಿದಳು.

೨೧. ಆಗ ವಿಷ್ಣುವು ಅಲ್ಲಿನ ಜಲದಲ್ಲಿ ತಾನಾಗಿಯೇ ನೆಲಸಿದನು. ಪತ್ನಿಯಮೇಲಿನ ಸ್ನೇಹದಿಂದಲೂ, ಆ ಮಹಾವಿಷ್ಣುವು ವರಪ್ರದಾನಮಾಡಿದುದ ರಿಂದಲೂ ಅದರ ಗುಣವು ಬಹಳ ಹೆಚ್ಚಿತು.

೨೨. ಅಲ್ಲಿ ಆತ್ಮನಿಗ್ರಹಮಾಡಿ ವೈಷ್ಣವಮಂತ್ರಗಳಿಂದ ಸ್ನಾನ, ದಾನ, ಹೋಮಗಳನ್ನೂ, ಬ್ರಾಹ್ಮಣಪೂಜೆಯನ್ನೂ, ವಿಷ್ಣುಪೂಜೆಯನ್ನೂ ಮಾಡ ಬೇಕು.

೨೩. ಕಾರ್ತಿಕಮಾಸದ ಕೃಷ್ಣಪಕ್ಷದ ನವಮಿಯ ದಿನ ಸರ್ವಪಾಪಪರಿ ಹಾರಕ್ಕಾಗಿ ಆ ರುಕ್ಮಿಣೀಕುಂಡದಲ್ಲಿ ವಾರ್ಷಿಕಯಾತ್ರೆಯನ್ನು ಪ್ರಯತ್ನಪೂರ್ವಕ ವಾಗಿ ನಡೆಸಬೇಕು.

ಪುತ್ರವಾನ್ ಜಾಯತೇ ವಂಧ್ಯೋ ಯಾತ್ರಾಂ ಕೃತ್ವಾ ನ ಸಂಶಯಃ ।
ನಾರೀಭಿರ್ವಾ ನರೈರ್ವಾಪಿ ಕರ್ತವ್ಯಂ ಸ್ನಾನಮಾದರಾತ್ ॥ ೨೪ ॥
ಭುಕ್ತ್ವಾ ಭೋಗಾನ್‌ಸಮಗ್ರಾಂಶ್ಚ ವಿಷ್ಣುಲೋಕೇ ಸ ಮೋದತೇ ।
ಲಕ್ಷ್ಮೀಕಾಮನಯಾ ತತಃ ಸ್ನಾತವ್ಯಂ ಚ ವಿಶೇಷತಃ ॥ ೨೫ ॥
ಸರ್ವಕಾಮಮವಾಪ್ನೋತಿ ತತ್ರ ಸ್ನಾನೇನ ಮಾನವಃ ।
ರುಕ್ಮಿಣೀಶ್ರೀಪತಿಪ್ರೀತ್ಯೈ ದಾತವ್ಯಂ ಚ ಸ್ವಶಕ್ತಿತಃ ॥ ೨೬ ॥
ಕರ್ತವ್ಯಾ ವಿಧಿವತ್ ಪೂಜಾ ಬ್ರಾಹ್ಮಣಾನಾಂ ವಿಶೇಷತಃ ।
ಧ್ಯೇಯೋ ಲಕ್ಷ್ಮೀಪತಿಸ್ತತ್ರ ಶಂಖಚಕ್ರಗದಾಧರಃ ॥ ೨೭ ॥
ಪೀತಾಂಬರಧರಃ ಸ್ರಗ್ವೀ ನಾರದಾದಿಭಿರೀಡಿತಃ ।
ತಾರ್ಕ್ಷ್ಯಾಸನೋ ಮುಕುಟವಾನ್‌ಮಹೇಂದ್ರಾದಿವಿಭೂಷಿತಃ ॥ ೨೮ ॥
ಸರ್ವಕಾಮಫಲಾವಾಪ್ತ್ಯೈ ವಕ್ಷೋಲಕ್ಷಿತಕೌಸ್ತುಭಃ ।
ಅತಸೀಕುಸುಮಶ್ಯಾಮಃ ಕಮಲಾಮಲಲೋಚನಃ ॥ ೨೯ ॥
ಏವಂ ಕೃತೇ ನ ಸಂದೇಹಃ ಸರ್ವಾನ್ಕಾಮಾನವಾಪ್ನುಯಾತ್ ।
ಇಹಲೋಕೇ ಸುಖಂ ಭುಕ್ತ್ವಾ ಹರಿಲೋಕೇ ಸ ಮೋದತೇ ॥ ೩೦ ॥

---

೨೪–೨೫. ಅಪುತ್ರವಂತರು ಆ ಯಾತ್ರೆಯನ್ನು ಮಾಡಿದರೆ ಪುತ್ರವಂತರಾಗುತ್ತಾರೆಯೆಂಬುದರಲ್ಲಿ ಸಂಶಯವಿಲ್ಲವು. ನರರಾಗಲಿ, ನಾರಿಯರಾಗಲಿ ಆದರದಿಂದ ಆ ತೀರ್ಥದಲ್ಲಿ ಸ್ನಾನಮಾಡಬೇಕು. ಹಾಗೆ ಮಾಡಿದವರು ಸಮಗ್ರ ಭೋಗಗಳನ್ನೂ ಅನುಭವಿಸಿ ವಿಷ್ಣುಲೋಕದಲ್ಲಿ ಆನಂದಪಡುತ್ತಾರೆ. ಸಂಪತ್ತಿನ ಬಯಕೆಯಿಂದ ಅಲ್ಲಿ ವಿಶೇಷರೀತಿಯಿಂದ ಸ್ನಾನಮಾಡಬೇಕು.

೨೬. ಅಲ್ಲಿ ಸ್ನಾನಮಾಡುವುದರಿಂದ ಮಾನವನು ಸಮಸ್ತ ಇಷ್ಟಾರ್ಥಗಳನ್ನೂ ಪಡೆದುಕೊಳ್ಳುತ್ತಾನೆ. ರುಕ್ಮಿಣೀ ಶ್ರೀಪತಿಗಳ ಪ್ರೀತಿಗಾಗಿ ತಮ್ಮ ಶಕ್ತ್ಯನುಸಾರವಾಗಿ ಆ ತೀರ್ಥದಲ್ಲಿ ದಾನವನ್ನು ಮಾಡಬೇಕು.

೨೭. ಬ್ರಾಹ್ಮಣರಿಗೆ ವಿಶೇಷವಾಗಿ ವಿಧಿವತ್ತಾಗಿ ಪೂಜೆಯನ್ನುಮಾಡಬೇಕು. ಅಲ್ಲಿ ಶಂಖಚಕ್ರಗದಾಧರನಾದ ಲಕ್ಷ್ಮೀಪತಿಯನ್ನು ಧ್ಯಾನಮಾಡಬೇಕು.

೨೮–೨೯. ಪೀತಾಂಬರವನ್ನು ಧರಿಸಿ, ತುಲಸೀಮಾಲೆಯನ್ನು ಧರಿಸಿ, ನಾರದಾದಿಗಳಿಂದ ಸ್ತುತಿಸಲ್ಪಡುತ್ತ, ಆದಿಶೇಷನೆಂಬ ಪೀಠದಲ್ಲಿ ಮಂಡಿಸಿ, ಕಿರೀಟಧಾರಿಯಾಗಿ, ಮಹೇಂದ್ರಾದಿಗಳಿಂದ ಭೂಷಿಸಲ್ಪಟ್ಟವನಾಗಿಯೂ, ಎದೆಯಮೇಲೆ ಕಾಣುವ ಕೌಸ್ತುಭರತ್ನದಿಂದೊಡಗೂಡಿದವನೂ, ಕಮಲದಂತೆ ಸೆಯುವ ನಿರ್ಮಲಲೋಚನಗಳುಳ್ಳವನೂ ಆದ ಆ ಲಕ್ಷ್ಮೀಪತಿಯನ್ನು ಸಕಲಾಭೀಷ್ಟಫಲಪ್ರಾಪ್ತಿಗಾಗಿ ಪೂಜಿಸಬೇಕು.

೩೦. ಹೀಗೆ ಮಾಡಿದರೆ ಇಷ್ಟಾರ್ಥಗಳೆಲ್ಲವನ್ನೂ ಪಡೆಯುತ್ತಾನೆ. ಇದರಲ್ಲಿ

ಅತಃ ಪರಂ ಪ್ರವಕ್ಷ್ಯಾಮಿ ತೀರ್ಥಮನ್ಯದಘಾಪಹಂ ।
ಕಲಿಕಿಲ್ಬಿಷಸಂಹಾರಕಾರಕಂ ಪ್ರತ್ಯಯಾತ್ಮಕಂ ॥ ೩೧ ॥
ಪರಂ ಪವಿತ್ರಮತುಲಂ ಸರ್ವಕಾಮಾರ್ಥಸಿದ್ಧಿದಂ ।
ಧನಯಕ್ಷ ಇತಿ ಖ್ಯಾತಂ ಪರಂ ಪ್ರತ್ಯಯಕಾರಕಂ ॥ ೩೨ ॥
ರುಕ್ಮಿಣೀಕುಂಡವಾಯವ್ಯದಿಗ್ದಲೇ ಸಂಸ್ಕೃತಂ ಶುಭಂ ।
ಹರಿಶ್ಚಂದ್ರಸ್ಯ ರಾಜರ್ಷೇರಾಸೀತ್ತತ್ರ ಧನಂ ಮಹತ್ ॥ ೩೩ ॥
ತಸ್ಯ ರಕ್ಷಾರ್ಥಮತ್ಯರ್ಥಂ ರಕ್ಷಿತೋ ಯಕ್ಷ ಉಚ್ಚಕೈಃ ।
ವಿಶ್ವಾಮಿತ್ರೋ ಮುನಿಃ ಪೂರ್ವಂ ಯದಾ ಚೈವ ಪರಾಜಯತ್ ॥ ೩೪ ॥
ಹರಿಶ್ಚಂದ್ರಂ ನರಪತಿಂ ರಾಜಸೂಯಕರಂ ಪರಂ ।
ರಾಜ್ಯಂ ಜಗ್ರಾಹ ಸಕಲಂ ಚತುರಂಗಬಲಾನ್ವಿತಂ ॥ ೩೫ ॥
ತದ್ವಶೇಽದಾಚ್ಚ ಸ ಮುನಿರ್ಧನಂ ಸಕಲಮುತ್ತಮಂ ।
ತದ್ರಕ್ಷಾಯೈ ಪ್ರಯತ್ನೇನ ಯಕ್ಷಂ ಸ್ಥಾಪಿತವಾನಸೌ ॥ ೩೬ ॥
ಪ್ರಮಂಥುರ ಇತಿಖ್ಯಾತಂ ಪ್ರಮೋದಾನಂದಮಂದಿರಂ ।
ರಕ್ಷಾಂಚ ವಿದಧಾಸ್ತಸ್ಯ ಬಹುಯತ್ನೇನ ಸರ್ವಶಃ ॥ ೩೭ ॥

---

ಸಂದೇಹವಿಲ್ಲವು. ಹಾಗೆ ಮಾಡಿದವನು ಈ ಲೋಕದಲ್ಲಿ ಸುಖವನ್ನು ಭೋಗಿಸಿ ಆಮೇಲೆ ಹರಿಲೋಕದಲ್ಲಿ ಸಂಮೋದಗೊಳ್ಳುತ್ತಾನೆ.

೩೧. ಇನ್ನುಮುಂದೆ ಪಾಪಹಾರಕವೂ, ಕಲಿಕಾಲದ ಪಾಪಗಳನ್ನು ಸಂಹಾರಮಾಡುವಂತಹುದೂ, ನಂಬಿಕೆಹುಟ್ಟಿಸುವಂತಹುದೂ ಆದ ಮತ್ತೊಂದು ತೀರ್ಥವನ್ನು ಕುರಿತು ಹೇಳುತ್ತೇನೆ.

೩೨. ಇದು ಪರಮಪವಿತ್ರವಾದುದು; ಎಣೆಯಿಲ್ಲದುದು; ಬಯಸಿದ ಎಲ್ಲ ಬಗೆಯ ವಸ್ತುಗಳನ್ನೂ ಕೊಡುವಂತಹುದು; 'ಧನಯಕ್ಷ' ಎಂದು ಪ್ರಖ್ಯಾತವಾಗಿ ಬಹುಚೆನ್ನಾಗಿ ಭಕ್ತಿಯನ್ನುಂಟುಮಾಡತಕ್ಕುದೂ ಆಗಿರುವುದು.

೩೩. ರುಕ್ಮಿಣೀಕುಂಡದ ವಾಯುವ್ಯದಿಕ್ಕಿನಲ್ಲಿರುವ ಈ ತೀರ್ಥವು ಶುದ್ಧವಾದುದೆಂದು ಎಣಿಸಲ್ಪಟ್ಟಿರುವುದು. ರಾಜರ್ಷಿಯಾದ ಹರಿಶ್ಚಂದ್ರನ ಮಹತ್ತಾದ ಧನವು ಪೂರ್ವದಲ್ಲಿ ಅಲ್ಲಿಯೆ ಇದ್ದಿತು.

೩೪-೩೮. ಅದರ ಸಂಪೂರ್ಣ ರಕ್ಷಣೆಗಾಗಿ ಯಕ್ಷನೊಬ್ಬನು ನಿಯಮಿಸಲ್ಪಟ್ಟಿದ್ದನು. ಪೂರ್ವದಲ್ಲಿ ವಿಶ್ವಾಮಿತ್ರಮುನಿಯು ರಾಜಸೂಯಯಾಗವನ್ನು ಮಾಡಿದ ಆ ಹರಿಶ್ಚಂದ್ರ ನರಪತಿಯನ್ನು ಪರಾಜಯಗೊಳಿಸಿ ಶ್ರೇಷ್ಠವಾದ ಅವನ ರಾಜ್ಯವನ್ನು ಚತುರಂಗಬಲಸಮೇತವಾಗಿ ತೆಗೆದುಕೊಂಡ ಸಮಯದಲ್ಲಿ ಉತ್ತಮವಾದ ಆ ಧನವೆಲ್ಲವನ್ನೂ ಅವನ ವಶಕ್ಕೆ ಕೊಟ್ಟನು. ಆ ಧನದ ರಕ್ಷಣೆಗಾಗಿ ಆ ಮುನಿಯು ಪ್ರಯತ್ನಪಟ್ಟು ಪ್ರಮೋದ ಆನಂದಗಳಿಗೆ ನೆಲೆಯೆನಿಸಿದ

ತುಷ್ಟೋಷ ಸ ಮುನಿರ್ಧೀಮಾನ್ ಕದಾಚಿದ್ವಿಜಿತೇಂದ್ರಿಯಃ ।
ಉವಾಚ ಮಧುರಂ ವಾಕ್ಯಂ ಪ್ರೀತ್ಯಾ ಪರಮಯಾ ಯುತಃ ॥ ೩೮ ॥

ವಿಶ್ವಾಮಿತ್ರ ಉವಾಚ :—

ವರಂ ವರಯ ಧರ್ಮಜ್ಞ ಕ್ಷಿಪ್ರಮೇವ ವಿಮತ್ಸರಃ ।
ಭಕ್ತ್ಯಾ ಪರಮಯಾ ಧೀರ ಸಂತುಷ್ಟೋಽಸ್ಮಿ ವಿಶೇಷತಃ ॥ ೩೯ ॥

ಯಕ್ಷ ಉವಾಚ :—

ವರಂ ಪ್ರಯಚ್ಛಸಿ ಯದಿ ವಿಪ್ರವರ್ಯ ಮದೀಪ್ಸಿತಂ ।
ಮಮಾಂಗಮತಿದುರ್ಗಂಧಿ ಶಾಪಾಚ್ಚ ನೃಪತೇರಭೂತ್ ।
ಸುಗಂಧಯುಕ್ತಂ ಬ್ರಹ್ಮರ್ಷೇ ತತ್ಪ್ರಸೀದ ಮುನೀಶ್ವರ ॥ ೪೦ ॥

ಅಗಸ್ತ್ಯ ಉವಾಚ :—

ಏವಮುಕ್ತೇ ತು ಯಕ್ಷೇಣ ಮುನಿರ್ಧ್ಯಾನಸ್ಥಲೋಚನಃ ।
ತಂ ವಿವಿಚ್ಯಾನಯಾ ಭಕ್ತ್ಯಾ ಅಭಿಷೇಕಂ ಚಕಾರ ಸಃ ॥ ೪೧ ॥
ತೀರ್ಥೋದಕೇನ ವಿಧಿವತ್ ಕೃತ್ವಾ ಸಂಕಲ್ಪಮಾದರಾತ್ ।
ತತಃ ಸೋಽಭೂತ್ ಕ್ಷಣೇನೈವ ಸುಗಂಧೋತ್ತರವಿಗ್ರಹಃ ॥ ೪೨ ॥

---

ಅಲ್ಲಿ ಪ್ರಮಂಥುರನೆಂಬ ಯಕ್ಷನನ್ನು ಸ್ಥಾಪನೆಮಾಡಿದನು. ಬಹು ಪ್ರಯತ್ನ ಮಾಡಿ ಸರ್ವಪ್ರಕಾರದಿಂದಲೂ ಧನವನ್ನು ರಕ್ಷಣೆಮಾಡುತ್ತಿದ್ದ ಅವನ ವಿಷಯದಲ್ಲಿ ಆ ಮುನಿಯು ಒಮ್ಮೆ ಸಂತುಷ್ಟನಾದನು. ಇಂದ್ರಿಯನಿಗ್ರಹಶಾಲಿಯೂ, ಧೀಮಂತನೂ ಆದ ಆತನು ಒಮ್ಮೆ ಪರಮಪ್ರೀತಿಯಿಂದ ಆ ಯಕ್ಷನನ್ನು ಕುರಿತು ಮಧುರವಾದ ಮಾತುಗಳನ್ನಾಡಿದನು.

೩೯. ವಿಶ್ವಾಮಿತ್ರನು ಹೇಳುತ್ತಾನೆ:— "ಎಲೈ ಧರ್ಮಜ್ಞನೇ! ಮಾತ್ಸರ್ಯವಿಲ್ಲದವನಾಗಿ ಬೇಗನೆ ವರವನ್ನು ಕೇಳಿಕೊ. ಎಲೈ ಧೀರನೇ! ನಿನ್ನ ಭಕ್ತಿಯಿಂದ ಬಹಳ ಸಂತುಷ್ಟನಾಗಿದ್ದೇನೆ" ಎಂದನು.

೪೦. ಯಕ್ಷನು ಕೇಳುತ್ತಾನೆ:— "ಎಲೈ ವಿಪ್ರವರ್ಯನೇ! ನಾನು ಬಯಸಿದ ವರವನ್ನು ಕೊಡುವೆಯಾದರೆ ಈ ವರವನ್ನು ಕೊಡು. ನನ್ನ ಅಂಗವು ಹರಿಶ್ಚಂದ್ರನೃಪತಿಯ ಶಾಪದಿಂದ ಅತಿ ದುರ್ಗಂಧವುಳ್ಳುದಾಯಿತು. ಎಲೈ ಮುನೀಶ್ವರಾ, ಬ್ರಹ್ಮರ್ಷೀ!! ಅದು ಸುಗಂಧವುಳ್ಳುದಾಗುವಂತೆ ಅನುಗ್ರಹಿಸು" ಎಂದು ಬೇಡಿದನು.

೪೧—೪೨. ಅಗಸ್ತ್ಯನು ಹೇಳುತ್ತಾನೆ:— ಆ ಯಕ್ಷನು ಹೀಗೆ ನುಡಿಯಲಾಗಿ ವಿಶ್ವಾಮಿತ್ರಮುನಿಯು ಕಣ್ಣುಮುಚ್ಚಿ ಧ್ಯಾನಸ್ಥನಾಗಿ ಅವನನ್ನು ಅವನ ಭಕ್ತಿಯಿಂದಲೆ ವಿವೇಚಿಸಿ ನೋಡಿ, ಆದರದಿಂದ ವಿಧಿವತ್ತಾಗಿ ಸಂಕಲ್ಪಮಾಡಿ ತೀರ್ಥೋದಕದಿಂದ ಅವನಿಗೆ ಅಭಿಷೇಕ ಮಾಡಿದನು. ಬಳಿಕ ಕ್ಷಣಮಾತ್ರದಲ್ಲಿಯೇ ಆ ಯಕ್ಷನು ಸುಗಂಧವನ್ನು ಬೀರುವ ಶರೀರವುಳ್ಳವನಾದನು.

ತಥಾಭೂತಃ ಸ ಮಧುರಂ ಪ್ರೋವಾಚ ಪ್ರಾಂಜಲಿಸ್ತತಃ ।
ಪುನಃ ಪುರಃಸ್ಥಿತೋ ಧೀಮಾನ್ ವಿನಯಾವನತಸ್ತದಾ ॥ ೪೩ ॥

ಯಕ್ಷ ಉವಾಚ :—

ತ್ವತ್ಕೃಪಾಭಿರಹಂ ಧೀರ ಜಾತಃ ಸುರಭಿವಿಗ್ರಹಃ ।
ಏತತ್ಸ್ಥಾನಂ ಯಥಾ ಖ್ಯಾತಿಂ ಯಾತಿ ಸರ್ವಜ್ಞ ತತ್ಕುರು ॥ ೪೪ ॥
ತ್ವತ್ಪ್ರಸಾದೇನ ವಿಪ್ರರ್ಷೇ ತಥಾ ಯತ್ನಂ ವಿಧೇಹಿ ವೈ ॥ ೪೫ ॥

ಅಗಸ್ತ್ಯ ಉವಾಚ :—

ಏವಮುಕ್ತಃ ಕ್ಷಣಂ ಧ್ಯಾತ್ವಾ ಮುನಿಃ ಸ್ತಿಮಿತಲೋಚನಃ ।
ಯಕ್ಷಂ ಪ್ರತಿ ಪ್ರಸನ್ನಾತ್ಮಾ ಹ್ಯುವಾಚ ಶ್ಲಕ್ಷ್ಣಯಾ ಗಿರಾ ॥ ೪೬ ॥

ವಿಶ್ವಾಮಿತ್ರ ಉವಾಚ :—

ಪ್ರಸಿದ್ಧಿಮತುಲಾಂ ಯಕ್ಷ ಏತತ್ಸ್ಥಾನಂ ಗಮಿಷ್ಯತಿ ।
ಧನಯಕ್ಷ ಇತಿ ಖ್ಯಾತಿಂ ಏತತ್ತೀರ್ಥಂ ಗಮಿಷ್ಯತಿ ॥ ೪೭ ॥
ಸೌಂದರ್ಯದಂ ಶರೀರಸ್ಯ ಪರಂ ಪ್ರತ್ಯಯಕಾರಕಂ ।
ಯತ್ರ ಸ್ನಾತ್ವಾ ವಿಧಾನೇನ ದೌರ್ಗಂಧ್ಯಂ ತ್ಯಜತಿ ಕ್ಷಣಾತ್ ।
ಅತ್ರ ಸ್ನಾನಂ ಪ್ರಯತ್ನೇನ ಕರ್ತವ್ಯಂ ಪುಣ್ಯಕಾಂಕ್ಷಿಭಿಃ ॥ ೪೮ ॥

---

೪೩. ಹಾಗೆ ಮಾರ್ಪಟ್ಟಾಗ ಧೀಮಂತನಾದ ಆ ಯಕ್ಷನು ಕೈಮುಗಿದು ಕೊಂಡು ಆ ಮುನಿಯ ಎದುರಿಗೆ ನಿಂತು ವಿನಯದಿಂದ ತಲೆತಗ್ಗಿಸಿಕೊಂಡು ಮಧುರವಾಗಿ ಮತ್ತೆ ನುಡಿದನು.

೪೪. ಯಕ್ಷನು ಕೇಳುತ್ತಾನೆ :—"ಎಲೈ ಧೀರನೇ, ಎಲೈ ಸರ್ವಜ್ಞನೇ! ನಿನ್ನ ಕೃಪೆಯಿಂದ ನಾನು ಸುಗಂಧಶರೀರನಾದೆನು. ಈ ಸ್ಥಾನವು ಖ್ಯಾತಿಯನ್ನು ಪಡೆಯುವಂತೆ ಮಾಡು.

೪೫. ಎಲೈ ವಿಪ್ರರ್ಷಿಯೇ! ನಿನ್ನ ಪ್ರಸಾದದಿಂದ ಈ ತೀರ್ಥವು ಪ್ರಸಿದ್ಧ ವಾಗುವಂತೆ ಪ್ರಯತ್ನವನ್ನು ಮಾಡು."

೪೬. ಅಗಸ್ತ್ಯನು ಹೇಳುತ್ತಾನೆ :—ಯಕ್ಷನೀರೀತಿ ಹೇಳಲು, ಆ ಮುನಿಯು ಕ್ಷಣಕಾಲ ಕಣ್ಣುಗಳನ್ನು ಸ್ತಿಮಿತವಾಗಿಟ್ಟುಕೊಂಡು ಧ್ಯಾನಮಾಡಿ ಆ ಯಕ್ಷನ ವಿಷಯದಲ್ಲಿ ಪ್ರಸನ್ನಾತ್ಮನಾಗಿ ನಯವಾದ ನುಡಿಗಳಿಂದ ಅವನಿಗೆ ಹೀಗೆ ಹೇಳಿದನು.

೪೭. ವಿಶ್ವಾಮಿತ್ರನು ಹೇಳುತ್ತಾನೆ :—"ಅಯ್ಯಾ ಯಕ್ಷನೆ! ಈ ಸ್ಥಾನವು ಎಣೆಯಿಲ್ಲದಷ್ಟು ಪ್ರಸಿದ್ಧಿಯನ್ನೈದುತ್ತದೆ. ಈ ತೀರ್ಥವು 'ಧನಯಕ್ಷ'ವೆಂದು ಖ್ಯಾತಿಯನ್ನು ಪಡೆಯುತ್ತದೆ.

೪೮. ಇದು ಶರೀರಕ್ಕೆ ಸೌಂದರ್ಯವನ್ನು ಕೊಡುವುದು; ಮಾನವರಿಗೆ

ದಾನಂ ಸ್ವಶ್ರದ್ಧಾಶಕ್ತಿಭ್ಯಾಂ ಲಕ್ಷ್ಮೀಪೂಜಾ ವಿಶೇಷತಃ ।
ತತ್ರ ಸ್ನಾನೇನ ದಾನೇನ ಲಕ್ಷ್ಮೀಪ್ರೀತ್ಯೈ ವಿಶೇಷತಃ ॥ ೪೯ ॥
ಪೂಜಯಾ ತು ನಿಧೀನಾಂ ಚ ನವಾನಾಮಪಿ ಸುವ್ರತ ।
ಇಹ ಲೋಕೇ ಸುಖಂ ಭುಕ್ತ್ವಾ ಪರಲೋಕೇ ಸ ಮೋದತೇ ॥ ೫೦ ॥
ಮಹಾಪದ್ಮಸ್ತಥಾ ಪದ್ಮಃ ಶಂಖೋ ಮಕರಕಚ್ಛಪೌ ।
ಮುಕುಂದ ಕುಂದನೀಲಾಶ್ಚ ಖರ್ವಶ್ಚ ನಿಧಯೋ ನವ ॥ ೫೧ ॥
ಏತೇಷಾಮಪಿ ಕುಂಡೇಽತ್ರ ಸಂನಿಧಿರ್ಭವಿತಾಽನಘ ।
ಏತೇಷಾಂ ತು ವಿಶೇಷೇಣ ಪೂಜಾ ಬಹುಫಲಪ್ರದಾ ॥ ೫೨ ॥
ಜಲಮಧ್ಯೇ ಪ್ರಕರ್ತವ್ಯಂ ನಿಧಿಲಕ್ಷ್ಮೀಪ್ರಪೂಜನಂ ॥ ೫೩ ॥
ಅನ್ನಂ ಬಹುವಿಧಂ ದೇಯಂ ವಾಸಾಂಸಿ ವಿವಿಧಾನಿ ಚ ॥ ೫೪ ॥
ಸುವರ್ಣಾದಿ ಯಥಾಶಕ್ತ್ಯಾ ವಿತ್ತಶಾಠ್ಯಂ ವಿವರ್ಜಯೇತ್ ।
ಗುಪ್ತದಾನಂ ಪ್ರಯತ್ನೇನ ಕರ್ತವ್ಯಂ ಸುಪ್ರಯತ್ನತಃ ॥ ೫೫ ॥

---

ಉತ್ತಮ ಭಕ್ತಿಯನ್ನುಂಟುಮಾಡುವಂಥದು. ಇಲ್ಲಿ ವಿಧಾನಾನುಸಾರವಾಗಿ ಸ್ನಾನ ಮಾಡಿದರೆ ಕ್ಷಣಮಾತ್ರದಲ್ಲಿಯೇ ಮೈಯ ದುರ್ಗಂಧವು ಬಿಟ್ಟುಹೋಗುವುದು. ಪುಣ್ಯವನ್ನಪೇಕ್ಷಿಸುವವರು ಪ್ರಯತ್ನಪಟ್ಟು ಇಲ್ಲಿ ಸ್ನಾನವನ್ನು ಮಾಡಬೇಕು.

೪೯. ತಮ್ಮ ಶ್ರದ್ಧೆಗೂ, ಶಕ್ತಿಗೂ ತಕ್ಕಂತೆ ದಾನಮಾಡಬೇಕು. ಲಕ್ಷ್ಮೀ ಪೂಜೆಯನ್ನು ವಿಶೇಷವಾಗಿ ನಡೆಸಬೇಕು. ಲಕ್ಷ್ಮಿಯ ಪ್ರೀತ್ಯರ್ಥವಾಗಿ ಸ್ನಾನ ದಾನಗಳನ್ನು ಮಾಡಬೇಕು.

೫೦. ನವನಿಧಿಗಳಿಗೂ ಪೂಜೆಮಾಡಬೇಕು. ಎಲೈ ಸುವ್ರತನೇ! ಹಾಗೆ ಪೂಜಿಸಿದವನು ಈ ಲೋಕದಲ್ಲಿ ಸುಖವನ್ನನುಭವಿಸಿ ಪರಲೋಕದಲ್ಲಿ ಸಂತೋಷ ವನ್ನೈದುತ್ತಾನೆ.

೫೧. ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಖರ್ವ ಇವೇ ನವನಿಧಿಗಳು.

೫೨. ಎಲೈ ಪಾಪರಹಿತನೇ! ಈ ಕುಂಡದಲ್ಲಿ ನವನಿಧಿಗಳ ಸಾನ್ನಿಧ್ಯವೂ ಉಂಟಾಗಿರುವುದು. ವಿಶೇಷವಾಗಿ ಇವುಗಳ ಪೂಜೆಯು ಬಹುಫಲವನ್ನು ಕೊಡತಕ್ಕುದಾಗಿರುವುದು.

೫೩–೫೪. ನಿಧಿಲಕ್ಷ್ಮಿಯ ಪೂಜೆಯನ್ನು ಜಲಮಧ್ಯದಲ್ಲಿ ಮಾಡಬೇಕು. ಬಹುವಿಧವಾದ ಅನ್ನವನ್ನೂ, ವಿಧವಿಧವಾದ ಬಟ್ಟೆಯನ್ನೂ ದಾನಮಾಡಬೇಕು.

೫೫. ಚಿನ್ನ ಮೊದಲಾದುವನ್ನು ಶಕ್ತಿಯಿದ್ದಷ್ಟು ಕೊಡಬೇಕು. ವಿತ್ತ ಶಾಠ್ಯವನ್ನು ಮಾಡಬಾರದು (ಎಂದರೆ ಶಕ್ತಿಯಿದ್ದೂ ದಾನಮಾಡುವುದಕ್ಕೆ ಹಿಂಜರಿಯಬಾರದು). ಬಹುವಾಗಿ ಶ್ರಮಿಸಿ ಗುಪ್ತದಾನಮಾಡಲು ಪ್ರಯತ್ನಮಾಡಬೇಕು.

ಫಲಾನಿ ಚ ಸುವರ್ಣಾನಿ ದೇಯಾನಿ ಚ ವಿಶೇಷತಃ ॥ ೫೬ ॥
ಕೃಷ್ಣಪಕ್ಷೇ ಚತುರ್ದಶ್ಯಾಂ ಸ್ನಾನಂ ಬಹುಫಲಪ್ರದಂ ।
ಶ್ರದ್ಧಯಾ ಪರಯಾ ಯುಕ್ತೈಃ ಕರ್ತವ್ಯಂ ಶ್ರದ್ಧಯಾಧಿಕಂ ॥ ೫೭ ॥
ಮಾಘೇ ಕೃಷ್ಣಚತುರ್ದಶ್ಯಾಂ ಯಾತ್ರಾ ಸಾಂವತ್ಸರೀ ಭವೇತ್ ।
ತತ್ರ ಸ್ನಾನಂ ಪಿತೄಣಾಂ ತು ತರ್ಪಣಂ ಚ ವಿಶೇಷತಃ ॥ ೫೮ ॥
ಆಬ್ರಹ್ಮಸ್ತಂಬಪರ್ಯಂತಂ ಜಗತ್ತೃಪ್ಯತ್ವಿತಿ ಬ್ರುವನ್ ।
ಅಪಸವ್ಯೇನ ವಿಧಿವತ್ ತರ್ಪಯೇದಂಜಲಿತ್ರಯಂ ॥ ೫೯ ॥
ಏವಂ ಕುರ್ವನ್ನರೋ ಯಕ್ಷ ನ ಮುಹ್ಯತಿ ಕದಾಚನ ।
ಅತ್ರ ಸ್ನಾತೋ ದಿವಂ ಯಾತಿ ಅತ್ರ ಸ್ನಾತಃ ಸುಖೀಭವೇತ್ ॥ ೬೦ ॥
ಅತ್ರ ಸ್ನಾತೇನ ತೇ ಯಕ್ಷ ಕರ್ತವ್ಯಂ ಪೂಜನಂ ಪುರಃ ।
ತ್ವತ್ಪೂಜನೇನ ವಿಧಿವನ್ನೄಣಾಂ ಪಾಪಕ್ಷಯೋ ಭವೇತ್ ॥ ೬೧ ॥
ನಮಃ ಪ್ರಮಥರಾಜೇತಿ ಪೂಜಾಮಂತ್ರ ಉದಾಹೃತಃ ।
ತೀರ್ಥಮಧ್ಯೇ ಪ್ರಕರ್ತವ್ಯಂ ಪೂಜನಂ ಶ್ರವಣಾದಿಕಂ ॥ ೬೨ ॥

---

೫೬. ಫಲಗಳನ್ನೂ, ಚಿನ್ನವನ್ನೂ ವಿಶೇಷವಾಗಿ ದಾನಮಾಡಬೇಕು.

೫೭. ಕೃಷ್ಣಪಕ್ಷದ ಚತುರ್ದಶಿಯಲ್ಲಿ ಈ ತೀರ್ಥದ ಸ್ನಾನವು ಬಹುಫಲಪ್ರದವಾಗುವುದು. ಆಗ ಪರಮಶ್ರದ್ಧೆಯಿಂದ ಸ್ನಾನಮಾಡಬೇಕು. ಶ್ರದ್ಧೆಯಿಂದಲೇ ಫಲವು ಅಧಿಕವಾಗುವುದು.

೫೮. ಮಾಘಮಾಸದಲ್ಲಿ ಕೃಷ್ಣ ಚತುರ್ದಶಿಯ ದಿನ ಈ ತೀರ್ಥದಲ್ಲಿ ವಾರ್ಷಿಕಯಾತ್ರೆಯು ನಡೆಯುತ್ತದೆ. ಆಗ ಸ್ನಾನವನ್ನೂ, ಪಿತೃಗಳಿಗೆ ತರ್ಪಣವನ್ನೂ ವಿಶೇಷವಾಗಿ ನಡಸಬೇಕು.

೫೯. 'ಬ್ರಹ್ಮನಿಂದ ಮೊದಲಾಗಿ ಹುಲ್ಲುಪೊದೆಯವರೆಗೂ ಇರುವ ಜಗತ್ತೆಲ್ಲವೂ ತೃಪ್ತಿಹೊಂದಲಿ' ಎಂದು ನುಡಿಯುತ್ತ ಅಪಸವ್ಯದಿಂದ ವಿಧಿವತ್ತಾಗಿ ಮೂರು ಅಂಜಲಿಗಳ ಜಲದಿಂದ ತರ್ಪಣವನ್ನು ಕೊಡಬೇಕು.

೬೦. ಅಯ್ಯಾ ಯಕ್ಷನೆ! ಹೀಗೆ ಮಾಡುವ ನರನು ಯಾವೊಂದುಸಲವೂ ಮೋಹಗೊಳ್ಳುವುದಿಲ್ಲ. ಇಲ್ಲಿ ಸ್ನಾನಮಾಡಿದವನು ಸ್ವರ್ಗಕ್ಕೇ ಹೋಗುತ್ತಾನೆ; ಇಲ್ಲಿ ಸ್ನಾನಮಾಡಿದವನು ಸುಖಿಯೇ ಆಗುತ್ತಾನೆ.

೬೧–೬೨. ಇಲ್ಲಿ ಸ್ನಾನವಮಾಡಿದವನು ಮೊದಲು ನಿನ್ನ ಪೂಜೆಯನ್ನು ಮಾಡಬೇಕು. ವಿಧಿವತ್ತಾಗಿ ನಿನ್ನನ್ನು ಪೂಜಿಸುವ ಮಾನವರಿಗೆ ಪಾಪಕ್ಷಯವುಂಟಾಗುತ್ತದೆ. 'ಪ್ರಮಥರಾಜನಿಗೆ ನಮಸ್ಕಾರ'ವೆಂಬುದು ಪೂಜೆಗೆ ಹೇಳಿರುವ ಮಂತ್ರ. ತೀರ್ಥಮಧ್ಯದಲ್ಲಿ ಪೂಜೆಯನ್ನೂ, ತೀರ್ಥಕಥಾಶ್ರವಣಾದಿಗಳನ್ನೂ ಮಾಡಬೇಕು.

ನಿಧಿಲಕ್ಷ್ಮ್ಯೈಸ್ತಥಾ ಯಕ್ಷ ತವ ಪೂಜಾ ವಿಶೇಷತಃ ।
ಏವಂ ಯಃ ಕುರುತೇ ಧೀರಃ ಸರ್ವಾನ್ಕಾಮಾನವಾಪ್ನುಯಾತ್ ॥ ೬೩ ॥
ಧನಾರ್ಥೀ ಧನಮಾಪ್ನೋತಿ ಪುತ್ರಾರ್ಥೀ ಪುತ್ರಮಾಪ್ನುಯಾತ್ ।
ಮೋಕ್ಷಾರ್ಥೀ ಮೋಕ್ಷಮಾಪ್ನೋತಿ ತತ್ಕಿಂ ನ ಯದಿಹಾಪ್ಯತೇ ॥ ೬೪ ॥
ಯಸ್ತು ಮೋಹಾನ್ನರೋ ಯಕ್ಷ ಸ್ನಾನಂ ನ ಕುರುತೇ ಕಿಲ ।
ತಸ್ಯ ಸಾಂವತ್ಸರಂ ಪುಣ್ಯಂ ತ್ವಂ ಗ್ರಹೀಷ್ಯಸಿ ಸರ್ವಶಃ ॥ ೬೫ ॥
ಇತಿ ದತ್ವಾ ವರಾಂಸ್ತಸ್ಮೈ ವಿಶ್ವಾಮಿತ್ರೋ ಮುನೀಶ್ವರಃ ।
ಅಂತರ್ದಧೇ ಮುನಿವರಸ್ತದಾ ಸ ಚ ತಪೋನಿಧಿಃ ॥ ೬೬ ॥
ತದಾ ಪ್ರಭೃತಿ ತತ್ಸ್ಥಾನಂ ಪರಮಾಂ ಖ್ಯಾತಿಮಾಯಯೌ ।
ತಸ್ಯ ತೀರ್ಥಸ್ಯ ಸಕಲಾ ಭೂಮಿಃ ಸ್ವರ್ಣವಿನಿರ್ಮಿತಾ ॥ ೬೭ ॥
ದಿವ್ಯರತ್ನೌಘಖಚಿತಾ ಸಮಂತಾದುಪಶೋಭಿತಾ ।
ಏವಂ ಯಃ ಕುರುತೇ ವಿದ್ವಾನ್ ಸ ಯಾತಿ ಪರಮಾಂ ಗತಿಂ ॥ ೬೮ ॥
ಧನಯಕ್ಷಾದುತ್ತರಸ್ಮಿನ್ ದಿಗ್ಭಾಗೇ ಸಂಸ್ಥಿತಂ ದ್ವಿಜ ।
ವಸಿಷ್ಠಕುಂಡಂ ವಿಖ್ಯಾತಂ ಸರ್ವಪಾಪಾಪಹಂ ಸದಾ ॥ ೬೯ ॥

---

೬೩. ಎಲೈ ಯಕ್ಷನೇ! ನಿಧಿಲಕ್ಷ್ಮಿಯರ ಮತ್ತು ನಿನ್ನ ಪೂಜೆಯನ್ನು ವಿಶೇಷರೀತಿಯಲ್ಲಿ ಮಾಡಬೇಕು. ಯಾವ ಧೀರನು ಹೀಗೆ ಮಾಡುತ್ತಾನೆಯೋ ಅವನು ಇಷ್ಟಾರ್ಥಗಳೆಲ್ಲವನ್ನೂ ಪಡೆಯುತ್ತಾನೆ.

೬೪–೬೫. ಧನಾಪೇಕ್ಷಿಯಾದ ಮಾನವನಿಗೆ ಇಲ್ಲಿ ಧನವು ದೊರೆಯುತ್ತದೆ. ಮಕ್ಕಳನ್ನು ಬಯಸುವವನು ಮಕ್ಕಳನ್ನು ಪಡೆಯುತ್ತಾನೆ. ಮೋಕ್ಷಾಪೇಕ್ಷೆಯುಳ್ಳವನು ಮೋಕ್ಷವನ್ನು ಪಡೆಯುತ್ತಾನೆ. ಆದುದರಿಂದ ಇಲ್ಲಿ ಯಾವುದು ತಾನೆ ಪಡೆಯಲರಿದಾಗಿರುವುದು? ಅಯ್ಯಾ ಯಕ್ಷನೇ! ಯಾವ ನರನು ಮೋಹದಿಂದ ಇಲ್ಲಿ ಸ್ನಾನಮಾಡುವುದಿಲ್ಲವೋ ಅವನಿಗೆ ಒಂದು ಸಂವತ್ಸರಕಾಲದಲ್ಲಿ ಲಭಿಸಿರುವ ಪುಣ್ಯವನ್ನು ನೀನು ತೆಗೆದುಕೊಳ್ಳುವೆ."

೬೬. ಎಲೈ ಮುನಿಯೇ! ಆ ವಿಶ್ವಾಮಿತ್ರನು ಹೀಗೆ ಯಕ್ಷನಿಗೆ ವರಗಳನ್ನು ಕೊಟ್ಟು ಅಂತರ್ಧಾನವನ್ನು ಹೊಂದಿದನು.

೬೭–೬೮. ಆಗಿನಿಂದ ಆ ಸ್ಥಾನವು ಪರಮಖ್ಯಾತಿಯನ್ನು ಪಡೆಯಿತು. ಆ ತೀರ್ಥದ ಭೂಮಿಯೆಲ್ಲವೂ ಸ್ವರ್ಣದಿಂದ ನಿರ್ಮಿತವಾಗಿ ದಿವ್ಯರತ್ನಸಮೂಹಗಳಿಂದ ಖಚಿತವಾಗಿ ಎಲ್ಲ ಕಡೆಯಲ್ಲಿಯೂ ಬಹುಸೊಗಸಾಗಿರುವುದು. ಎಲೈ ವಿದ್ವಾಂಸನೇ! ಈ ರೀತಿ ಯಾವನು ಅಲ್ಲಿ ಯಾತ್ರೆಮಾಡುವನೋ ಅವನು ಪರಮಗತಿಯನ್ನೈದುತ್ತಾನೆ.

೬೯. ಎಲೈ ದ್ವಿಜನೇ! ಧನಯಕ್ಷತೀರ್ಥದಿಂದ ಉತ್ತರದಿಕ್ಕಿನಲ್ಲಿ ವಸಿಷ್ಠ

**ವಸಿಷ್ಠಸ್ಯ ಸದಾ ತತ್ರ ನಿವಾಸಃ ಸುತಪೋನಿಧೇಃ ।**
**ಅರುಂಧತೀ ಸದಾ ಯಸ್ಯ ವರ್ತತೇ ನಿರ್ಮಲವ್ರತಾ ॥ ೭೦ ॥**
**ಅತ್ರ ಸ್ನಾನಂ ವಿಶೇಷೇಣ ಶ್ರಾದ್ಧಪೂರ್ವಮತಂದ್ರಿತಃ ।**
**ಯಃ ಕುರ್ಯಾತ್ ಪ್ರಯತೋ ಧೀಮಾಂಸ್ತಸ್ಯ ಪುಣ್ಯಮನುತ್ತಮಂ ॥**
**ವಾಮದೇವಸ್ಯ ತತ್ರೈವ ಸಂನಿಧಿರ್ವರ್ತತೇಽನಘ ।**
**ವಸಿಷ್ಠವಾಮದೇವೌ ತು ಪೂಜನೀಯೌ ಪ್ರಯತ್ನತಃ ॥ ೭೨ ॥**
**ಪತಿವ್ರತಾ ಪೂಜನೀಯಾಽರುಂಧತೀ ಚ ವಿಶೇಷತಃ ।**
**ಸ್ನಾತವ್ಯಂ ವಿಧಿನಾ ಸಮ್ಯಕ್ ದಾತವ್ಯಂ ಚ ಸ್ವಶಕ್ತಿತಃ ॥ ೭೩ ॥**
**ಸರ್ವಕಾಮಫಲಪ್ರಾಪ್ತಿರ್ಜಾಯತೇ ನಾತ್ರಸಂಶಯಃ ।**
**ಅತ್ರ ಯಃ ಕುರುತೇ ಸ್ನಾನಂ ಸ ವಸಿಷ್ಠಸಮೋ ಭವೇತ್ ॥ ೭೪ ॥**
**ಭಾದ್ರೇ ಮಾಸಿ ಸಿತೇ ಪಕ್ಷೇ ಪಂಚಮ್ಯಾಂ ನಿಯತವ್ರತಃ ।**
**ತಸ್ಯ ಸಾಂವತ್ಸರೀ ಯಾತ್ರಾ ಕರ್ತವ್ಯಾ ವಿಧಿಪೂರ್ವಿಕಾ ॥ ೭೫ ॥**

---

ಕುಂಡವಿರುವುದು. ಅದು ಸದಾಕಾಲದಲ್ಲಿಯೂ ಸರ್ವಪಾಪಹರವೆಂದು ಪ್ರಸಿದ್ಧವಾಗಿರುವುದು.

೭೦. ನಿರ್ಮಲವ್ರತೆಯಾದ ಅರುಂಧತಿಯು ಸದಾಕಾಲವೂ ಯಾರನ್ನು ಅನುವರ್ತಿಸಿಕೊಂಡಿರುವಳೋ ಅಂಥ ತಪೋನಿಧಿಯಾದ ವಸಿಷ್ಠನಿಗೆ ಅದು ಸದಾ ನಿವಾಸಸ್ಥಾನವೆನಿಸಿರುವುದು.

೭೧. ಇಲ್ಲಿ ಯಾವನು ಆಲಸ್ಯವಿಲ್ಲದೆ ಇಂದ್ರಿಯನಿಗ್ರಹಮಾಡಿಕೊಂಡು ಶ್ರಾದ್ಧಾವಂತನಾಗಿ ವಿಶೇಷವಾಗಿ ಸ್ನಾನವನ್ನು ಮಾಡುವನೋ ಆ ಧೀಮಂತನ ಪುಣ್ಯವು ಅತ್ಯುತ್ತಮವಾಗುವುದು.

೭೨ ಅಲ್ಲಿಯೇ ವಾಮದೇವನ ಸನ್ನಿಧಿಯೂ ಇರುವುದು. ಎಲೈ ಅನಘನೇ! ಆ ವಸಿಷ್ಠವಾಮದೇವರನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

೭೩. ಪತಿವ್ರತೆಯಾದ ಅರುಂಧತಿಯನ್ನು ವಿಶೇಷರೀತಿಯಿಂದ ಪೂಜಿಸಬೇಕು. ವಿಧಿಪೂರ್ವಕವಾಗಿ ಸ್ನಾನಮಾಡಬೇಕು; ಶಕ್ತಿಯಿದ್ದಷ್ಟು ಚೆನ್ನಾಗಿ ದಾನಮಾಡಬೇಕು.

೭೪. ಹೀಗೆ ಮಾಡುವುದರಿಂದ ಇಷ್ಟಾರ್ಥಗಳು ಕೈಗೂಡುವುವು. ಈ ವಿಷಯದಲ್ಲಿ ಸಂಶಯವಿಲ್ಲವು. ಅಲ್ಲಿ ಯಾವನು ಸ್ನಾನಮಾಡುವನೋ ಅವನು ವಸಿಷ್ಠನಿಗೆ ಸಮಾನನಾಗುತ್ತಾನೆ.

೭೫. ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಪಂಚಮಿಯ ದಿನ ಮಾನವನು ವ್ರತಸ್ಥನಾಗಿ ವಿಧಿಪೂರ್ವಕವಾಗಿ ಈ ತೀರ್ಥದಲ್ಲಿ ವಾರ್ಷಿಕಯಾತ್ರೆಯನ್ನು ಮಾಡಬೇಕು.

ವಿಷ್ಣುಪೂಜಾ ಪ್ರಯತ್ನೇನ ಕರ್ತವ್ಯಾ ಶ್ರದ್ಧಯಾತ್ರ ವೈ ।
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕೇ ಮಹೀಯತೇ ॥ ೭೬ ॥
ವಸಿಷ್ಠಕುಂಡಾದ್ವಿಪ್ರೇಂದ್ರ ಪ್ರತ್ಯಗ್ದಿಗ್ದಲಮಾಶ್ರಿತಂ ।
ವಿಖ್ಯಾತಂ ಸಾಗರಂ ಕುಂಡಂ ಸರ್ವಕಾಮಾರ್ಥಸಿದ್ಧಿದಂ ।
ಯತ್ರ ಸ್ನಾನೇನ ದಾನೇನ ಸರ್ವಕಾಮಾನವಾಪ್ನುಯಾತ್ ॥ ೭೭ ॥
ಪೌರ್ಣಮಾಸ್ಯಾಂ ಸಮುದ್ರಸ್ಯ ಸ್ನಾನಾದ್ಯತ್ಪುಣ್ಯಮಾಪ್ನುಯಾತ್ ।
ತತ್ಪುಣ್ಯಂ ಪರ್ವಣಿ ಸ್ನಾತೋ ನರಶ್ಚಾಕ್ಷಯಮಾಪ್ನುಯಾತ್ ॥ ೭೮ ॥
ತಸ್ಮಾದತ್ರ ವಿಧಾನೇನ ಸ್ನಾತವ್ಯಂ ಪುತ್ರಕಾಂಕ್ಷಯಾ ।
ಆಶ್ವಿನೇ ಪೌರ್ಣಮಾಸ್ಯಾಂ ತು ವಿಶೇಷಾತ್ ಸ್ನಾನಮಾಚರೇತ್ ॥ ೭೯ ॥
ಏವಂ ಕುರ್ವನ್ನರೋ ವಿದ್ವಾನ್ ಸರ್ವಪಾಪೈಃ ಪ್ರಮುಚ್ಯತೇ ।
ಅತ್ರ ಸ್ನಾತ್ವಾ ನರೋ ದತ್ವಾ ಯಥಾಶಕ್ತ್ಯಾ ದಿವಂ ವ್ರಜೇತ್ ॥ ೮೦ ॥
ಸಾಗರಾನ್ನೈರ್‌ಋತೇ ಭಾಗೇ ಯೋಗಿನೀಕುಂಡಮುತ್ತಮಂ ।
ಯತ್ರಾಽಽಸತೇ ಚತುಃಷಷ್ಠಿಯೋಗಿನ್ಯೋ ಜಲಸಂಸ್ಥಿತಾಃ ॥ ೮೧ ॥

---

೭೬. ಇಲ್ಲಿ ಪ್ರಯತ್ನಪೂರ್ವಕವಾಗಿ ಶ್ರದ್ಧೆಯಿಂದ ವಿಷ್ಣುಪೂಜೆಯನ್ನು ಮಾಡಬೇಕು. ಹಾಗೆ ಪೂಜಿಸಿದವನು ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಶುದ್ಧಾತ್ಮನಾಗಿ ವಿಷ್ಣುಲೋಕದಲ್ಲಿ ಶ್ರೇಷ್ಠನೆನಿಸುತ್ತಾನೆ.

೭೭. ಎಲೈ ವಿಪ್ರೇಂದ್ರನೇ! ವಸಿಷ್ಠಕುಂಡಕ್ಕೆ ಪಶ್ಚಿಮದಿಕ್ಕಿನಲ್ಲಿ ಸರ್ವಕಾಮಫಲಸಿದ್ಧಿಯನ್ನುಂಟುಮಾಡುವ ಸಾಗರಕುಂಡವೆಂಬ ಪ್ರಖ್ಯಾತತೀರ್ಥವಿರುವುದು. ಅಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ, ಸಕಲ ಇಷ್ಟಾರ್ಥಗಳನ್ನೂ ಪಡೆಯಬಹುದು.

೭೮–೭೯. ಹುಣ್ಣಿಮೆಯ ದಿನದ ಸಮುದ್ರಸ್ನಾನದಿಂದ ಯಾವ ಪುಣ್ಯವು ದೊರೆಯುವುದೋ ಅಕ್ಷಯವಾದ ಆ ಪುಣ್ಯವನ್ನು ಇಲ್ಲಿ ಪರ್ವಕಾಲದಲ್ಲಿ ಸ್ನಾನಮಾಡಿದ ನರನು ಪಡೆಯುತ್ತಾನೆ. ಆದುದರಿಂದ ಪುತ್ರಾಪೇಕ್ಷೆಯುಳ್ಳವನು ಇಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ಆಶ್ವೀಜಮಾಸದ ಪೌರ್ಣಿಮೆಯಲ್ಲಾದರೆ ಇಲ್ಲಿ ವಿಶೇಷವಾಗಿ ಸ್ನಾನವನ್ನು ಮಾಡಬೇಕು.

೮೦. ಹೀಗೆ ಮಾಡುವ ವಿದ್ವಾಂಸನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಇಲ್ಲಿ ಸ್ನಾನಮಾಡಿ, ಯಥಾಶಕ್ತಿ ದಾನಮಾಡಿದರೆ ಆ ಫಲದಿಂದ ಮಾನವನು ಸ್ವರ್ಗವನ್ನೈದುತ್ತಾನೆ.

೮೧. ಸಾಗರಕುಂಡದ ನೈರುತ್ಯಭಾಗದಲ್ಲಿ ಉತ್ತಮವಾದ ಯೋಗಿನೀಕುಂಡವಿರುವುದು. ಅಲ್ಲಿಯ ಜಲದಲ್ಲಿ ಅರುವತ್ತುನಾಲ್ಕು ಯೋಗಿನಿಯರೂ ನೆಲಸಿರುವರು.

ಸರ್ವಾರ್ಥಸಿದ್ಧಿದಾಃ ಪುಂಸಾಂ ಸ್ತ್ರೀಣಾಂ ಚೈವ ವಿಶೇಷತಃ ।
ಪರಸಿದ್ಧಿಪ್ರದಾಃ ಸರ್ವಾಃ ಸರ್ವಕಾಮಫಲಪ್ರದಾಃ ॥ ೮೨ ॥
ಆಶ್ವಿನೇ ಶುಕ್ಲಪಕ್ಷಸ್ಯ ಅಷ್ಟಮ್ಯಾಂ ಚ ವಿಶೇಷತಃ ।
ಸ್ನಾತವ್ಯಂ ಚ ಪ್ರಯತ್ನೇನ ಯೋಗಿನೀಪ್ರೀತಯೇ ನೃಭಿಃ ॥ ೮೩ ॥
ಅತ್ರ ಸ್ನಾನಂ ತಥಾ ದಾನಂ ಸರ್ವಂ ಸಫಲತಾಂ ವ್ರಜೇತ್ ।
ಯಕ್ಷಿಣೀಪ್ರಭೃತಯಃ ಸಿದ್ಧಾ ಭವಂತ್ಯತ್ರ ನ ಸಂಶಯಃ ॥ ೮೪ ॥
ಯೋಗಿನೀಕುಂಡತಃ ಪೂರ್ವಂ ಉರ್ವಶೀಕುಂಡಮುತ್ತಮಂ ।
ಯತ್ರ ಸ್ನಾತೋ ನರೋ ವಿದ್ವಾನೂರ್ವಶೀಂ ದಿವಿ ಸಶ್ರಿಯೇತ್ ॥ ೮೫ ॥
ಪುರಾ ಕಿಲ ಮುನಿರ್ಧೀರೋ ರೈಭ್ಯೋ ನಾಮ ತಪೋಧನಃ ।
ಚಚಾರ ಹಿಮವತ್ಪಾರ್ಶ್ವೇ ನಿರಾಹಾರೋ ಜಿತೇಂದ್ರಿಯಃ ॥ ೮೬ ॥
ತತ್ತಪೋ ವಿಪುಲಂ ದೃಷ್ಟ್ವಾ ಭೀತಃ ಸುರಪತಿಸ್ತತಃ ।
ಉರ್ವಶೀಂ ಪ್ರೇಷಯಾಮಾಸ ತಪೋವಿಘ್ನಾಯ ಚಾದರಾತ್ ॥ ೮೭ ॥

---

೮೨. ಆ ಯೋಗಿನಿಯರು ಪುರುಷರಿಗೆ ಸರ್ವಾರ್ಥಸಿದ್ಧಿಯನ್ನುಂಟುಮಾಡಿ ಕೊಡುವರು. ವಿಶೇಷವಾಗಿ ಸ್ತ್ರೀಯರಿಗೂ ಬಹುಶ್ರೇಷ್ಠವಾದ ಸಿದ್ಧಿಯನ್ನು ಕೊಡುವರು. ಅವರೆಲ್ಲರೂ ಬಯಸಿದ ಫಲಗಳೆಲ್ಲವನ್ನೂ ನೀಡುವರು.

೮೩. ಆಶ್ವೀಜಮಾಸದ ಶುಕ್ಲಪಕ್ಷದ ಅಷ್ಟಮಿಯ ದಿನ ಯೋಗಿನಿಯರ ಪ್ರೀತಿಗಾಗಿ ನರರು ಪ್ರಯತ್ನಪೂರ್ವಕವಾಗಿ ವಿಶೇಷರೀತಿಯಿಂದ ಆ ತೀರ್ಥದಲ್ಲಿ ಸ್ನಾನಮಾಡಬೇಕು.

೮೪. ಅಲ್ಲಿಯ ಸ್ನಾನ, ದಾನ ಎಲ್ಲವೂ ಸಫಲತೆಯನ್ನೈದುತ್ತದೆ. ಯಕ್ಷಿಣಿಯೆ ಮೊದಲಾದವರೂ, ಸಿದ್ಧರೇ ಮೊದಲಾದವರೂ ಇದರಲ್ಲಿ ನೆಲಸಿರುವರೆಂಬುದರಲ್ಲಿ ಸಂಶಯವಿಲ್ಲವು.

೮೫. ಯೋಗಿನೀಕುಂಡಕ್ಕೆ ಪೂರ್ವದಿಕ್ಕಿನಲ್ಲಿ ಉತ್ತಮವಾದ ಉರ್ವಶೀ ಕುಂಡವಿರುವುದು. ಅಲ್ಲಿ ಸ್ನಾನಮಾಡುವುದರಿಂದ ನರನು ಸ್ವರ್ಗದಲ್ಲಿ ಉರ್ವಶಿಯ ಸಂಪರ್ಕವನ್ನು ಪಡೆಯುತ್ತಾನೆ.

೮೬. ಪೂರ್ವದಲ್ಲಿ ಧೀರನೂ, ತಪೋಧನನೂ ಆದ ರೈಭ್ಯನೆಂಬ ಮುನಿಯು ನಿರಾಹಾರನಾಗಿ, ಇಂದ್ರಿಯಗಳನ್ನು ಜಯಿಸಿ ಹಿಮವತ್ಪರ್ವತದ ಪಾರ್ಶ್ವದಲ್ಲಿ ಸಂಚರಿಸುತ್ತಿದ್ದನು.

೮೭. ವಿಪುಲವಾದ ಅವನ ತಪಸ್ಸನ್ನು ಕಂಡು ಸುರಪತಿಯು ಭೀತನಾಗಿ ಆ ತಪಸ್ಸಿಗೆ ವಿಘ್ನವನ್ನುಂಟುಮಾಡಲೋಸುಗ ಉರ್ವಶಿಯನ್ನು ಆದರದಿಂದ ಕಳಿಸಿಕೊಟ್ಟನು.

ತತಃ ಸಾ ಪ್ರೇಷಿತಾ ತೇನಾಜಗಾಮ ಗಜಗಾಮಿನೀ ।
ಉವಾಸ ಹಿಮವತ್ಪಾರ್ಶ್ವೇ ರೈಭ್ಯಾಶ್ರಮಮನುತ್ತಮಂ ॥ ೮೮ ॥
ವನಫುಲ್ಲಲತಾಕುಂಜೇ ಮಂಜುಕೂಜದ್ವಿಹಂಗಮೇ ।
ಕಿನ್ನರೀಕೇಲಿಸಂಗೀತಸ್ತಿಮಿರಾಂಗಕುರಂಗಕೇ ॥ ೮೯ ॥
ಪುನ್ನಾಗಕೇಶರಾಶೋಕ ಚ್ಛಿನ್ನಕಿಂಜಲ್ಕಪಿಂಜರೇ ।
ಕಲ್ಪಿತೇ ಕಾಂಚನಗಿರೌ ದ್ವಿತೀಯ ಇವ ವೇಧಸಾ ॥ ೯೦ ॥
ಸಾ ಬಭೌ ಕಾಂತಿಸರ್ವಸ್ವಾ ಕೋಶಃ ಕುಸುಮಧನ್ವನಃ ।
ಉರ್ವಶ್ಯನಲ್ಪಸಾಮಾನ್ಯಲಾವಣ್ಯಾಮೃತವಾಹಿನೀ ॥ ೯೧ ॥
ಅಂಗಪ್ರಭಾಸುವರ್ಣೇನ ಸಿತಮೌಕ್ತಿಕಶೋಭಿತಾ ।
ತಾರುಣ್ಯರುಚಿರತ್ವೇನ ತಾರುಣ್ಯೇನ ವಿಭೂಷಿತಾ ॥ ೯೨ ॥
ವಿಲೋಲಲೋಚನಾಪಾಂಗ ತರಂಗಧವಲತ್ವಿಷಾ ।
ನವಪಲ್ಲವಸಚ್ಛಾಯಂ ಕಲ್ಪಯಂತೀ ನಿಜಾಧರಂ ॥ ೯೩ ॥

---

೮೮. ಅವನಿಂದ ಕಳುಹಿಸಲ್ಪಟ್ಟ ಆ ಗಜಗಾಮಿನಿಯು ಹಿಮವತ್ಪರ್ವತದ ಪಾರ್ಶ್ವಕ್ಕೆ ಬಂದು ಉತ್ತಮವಾದ ಆ ರೈಭ್ಯಾಶ್ರಮಕ್ಕೆ ಬಂದು ನೆಲಸಿದಳು.

೮೯. ಆಗ ಆ ಆಶ್ರಮದಲ್ಲೆಲ್ಲ ಹೂಬಿಟ್ಟ ಕಾಡುಬಳ್ಳಿಗಳ ಮಂಟಪಗಳಿದ್ದವು. ಹಕ್ಕಿಗಳು ಮಂಜುಳವಾಗಿ ಧ್ವನಿಮಾಡುತ್ತಿದ್ದವು. ಕಿನ್ನರಿಯರು ವಿನೋದಕ್ಕಾಗಿ ಸಂಗೀತ ಹಾಡುತ್ತಿರಲು ಅದನ್ನು ಕೇಳಿ ಅಂಗಗಳನ್ನು ಚಲಿಸದೆ ಜಿಂಕೆಗಳು ಸ್ತಿಮಿತವಾಗಿ ನಿಂತಿರುತ್ತಿದ್ದವು.

೯೦. ಪುನ್ನಾಗ, ಕೇಶರ, ಅಶೋಕ ಮೊದಲಾದ ಹೂಗಳ ಕೇಸರಗಳು ಉದುರಿಬಿದ್ದು ಎಲ್ಲೆಡೆಯೂ ಪಿಂಜರ (ಹಳದಿ ಮಿಶ್ರವಾದ ಕೆಂಪು) ವರ್ಣವಾಗಿ ಶೋಭಿಸುತ್ತ ಬ್ರಹ್ಮನು ಸೃಜಿಸಿದ ಎರಡನೆಯ ಕಾಂಚನಗಿರಿಯೋ ಎಂಬಂತೆ ತೋರುತ್ತಿದ್ದಿತು.

೯೧. ಅಂತಹ ಆಶ್ರಮ ಪ್ರದೇಶದಲ್ಲಿ ಮಹತ್ತರವಾದ ಅಸಾಮಾನ್ಯಲಾವಣ್ಯಾಮೃತದ ವಾಹಿನಿಯೆನಿಸಿದ ಆ ಉರ್ವಶಿಯು ಕುಸುಮಬಾಣನಾದ ಮನ್ಮಥನ ಕಾಂತಿಸರ್ವಸ್ವವೂ ತುಂಬಿದ ಹೂವಂಬಿನ ಒರೆಯಂತೆ ಬೆಳಗುತ್ತಿದ್ದಳು.

೯೨. ಅಂಗಪ್ರಭೆಯ ಹೊಂಬಣ್ಣದಿಂದೆಸೆಯುತ್ತ ಬಿಳಿಮುತ್ತುಗಳಿಂದ ಶೋಭಿತಳಾಗಿ ತರುಣತೆಗೊಪ್ಪುವ ಮನೋಹರತೆಯಿಂದೊಡಗೂಡಿದ ತಾರುಣ್ಯದಿಂದಲೇ ಆ ಸುಂದರಿಯು ಭೂಷಿತಳಾಗಿದ್ದಳು.

೯೩. ಅವಳು ಅಡ್ಡಹರಿಯುವ ಕಡೆಗಣ್ನೋಟಗಳ ತೆರೆಗಳ ಬಿಳುಪಿನಿಂದ ತನ್ನ ಕೆಂದುಟಿಗಳನ್ನು ಹೊಸ ಚಿಗುರಿನ ಬಣ್ಣವುಳ್ಳವನ್ನಾಗಿ ಮಾಡುತ್ತಿದ್ದಳು.

ಕರ್ಣೋಪಲಂಬಿ ಸಂಘುಷ್ಯದ್ಭೃಂಗಾಢ್ಯಚೂತಮಂಜರೀ ।
ಸುಧಾಗರ್ಭಸಮುದ್ಭೂತಾ ಪಾರಿಜಾತಲತಾ ಯಥಾ ॥ ೯೪ ॥
ತನುಮಧ್ಯಾ ಪೃಥುಶ್ರೋಣಿರ್ವರ್ಣೋದ್ಭಿನ್ನಪಯೋಧರಾ ।
ನಿಃಶಾಣಿತಶರಸ್ಯೇವ ಶಕ್ತಿಃ ಕುಸುಮಧನ್ವನಃ ॥ ೯೫ ॥
ಅಪಶ್ಯದಾಶ್ರಮೇ ತಸ್ಮಿನ್ಮುನಿರಾಯತಲೋಚನಾಂ ।
ನಯನಾನಲದಾಹೇನ ವಿದಗ್ಧೇನ ಮನೋಭುವಾ ॥ ೯೬ ॥
ತ್ರಿಣೇತ್ರವಂಚನಾಯೈವ ಕಲ್ಪಿತಾಂ ಲಲನಾತನುಂ ।
ತಾಮಾಶ್ರಮಲತಾಪುಷ್ಪಕಾಂಚೀರಚಿತಕುಂಡಲಾಂ ॥ ೯೭ ॥
ವಿಲೋಕ್ಯ ತಾಂ ವಿಶಾಲಾಕ್ಷೀಂ ಮುನಿರ್ವ್ಯಾಕುಲಿತೇಂದ್ರಿಯಃ ।
ಬಭೂವ ರೋಷಸಂತಪ್ತಃ ಶಶಾಪ ಚ ಬಹು ಜ್ವಲನ್ ॥ ೯೮ ॥

ರೈಭ್ಯ ಉವಾಚ :—

ಕುರೂಪತಾಂ ವ್ರಜ ಕ್ಷಿಪ್ರಂ ಯಾ ತ್ವಂ ಸೌಂದರ್ಯಗರ್ವಿತಾ ।
ಸಮಾಗತಾ ತಪೋವಿಘ್ನಹೇತವೇ ಮಮ ಸನ್ನಿಧೌ ॥ ೯೯ ॥

---

೯೪. ಝೇಂಕರಿಸುವ ದುಂಬಿಗಳು ತುಂಬಿದ ಮಾವಿನ ಹೂಗೊಂಚಲನ್ನು ಇಳಿಯಬೀಳುವಂತೆ ಕಿವಿಗೆ ಸಿಕ್ಕಿಸಿಕೊಂಡು ಅಮೃತಗರ್ಭದಲ್ಲಿ ಉದ್ಭವಿಸಿದ ಪಾರಿಜಾತಲತೆಯಂತೆ ಶೋಭಿಸುತ್ತಿದ್ದಳು.

೯೫. ಬಡನಡುವೂ, ಬೃಹನ್ನಿತಂಬವೂ, ಬಣ್ಣದಿಂದಲೇ ಎದ್ದುಕಾಣುವ ಮೊಲೆಗಳೂ ಉಳ್ಳವಳಾದ ಆ ಉರ್ವಶಿಯು ಕುಸುಮಬಾಣನಾದ ಮನ್ಮಥನ ಮಸೆದ ಬಾಣದ ಶಕ್ತಿಯಂತೆ ಪ್ರಕಾಶಿಸುತ್ತಿದ್ದಳು.

೯೬–೯೭. ಕಣ್ಬೆಂಕಿಯಿಂದ ಸುಟ್ಟುರಿದ ಮನೋಭವನಾದ ಮನ್ಮಥ ನಿಂದ ಮುಕ್ಕಣ್ಣನನ್ನು ವಂಚಿಸುವುದಕ್ಕಾಗಿ ಕಲ್ಪಿಸಿಕೊಂಡಿರುವ ಸ್ತ್ರೀರೂಪವೋ ಎಂಬಂತೆ ತೋರುತ್ತ, ಆಶ್ರಮದ ಲತಾಪುಷ್ಪಗಳಿಂದ ಒಡ್ಯಾಣಕುಂಡಲ ಗಳನ್ನು ಮಾಡಿ ಅಲಂಕರಿಸಿಕೊಂಡಿದ್ದ ಆಯತಲೋಚನೆಯಾದ ಆ ಉರ್ವಶಿ ಯನ್ನು ಆ ಮುನಿಯು ಆಶ್ರಮದಲ್ಲಿ ಕಂಡನು.

೯೮. ಆ ವಿಶಾಲಾಕ್ಷಿಯನ್ನು ಕಂಡು ಆ ಮುನಿಯ ಇಂದ್ರಿಯಗಳು ಕಲಕಿ ಹೋದಂತಾದುವು. ಆಗ ಅವನು ರೋಷದಿಂದ ಸಂತಪ್ತನಾದನು. ಕೋಪ ದಿಂದುರಿಯುತ್ತ ಅವಳಿಗೆ ಈ ರೀತಿ ಶಾಪವನ್ನುಕೊಟ್ಟನು.

೯೯. ರೈಭ್ಯನು ಹೇಳುತ್ತಾನೆ:—'ಎಲೆ ಉರ್ವಶೀ! ಸೌಂದರ್ಯದಿಂದ ಗರ್ವಿತೆಯಾಗಿ ತಪಸ್ಸಿಗೆ ವಿಘ್ನಮಾಡಬೇಕೆಂದು ನನ್ನ ಬಳಿಗೆ ಬಂದವಳಾದುದ ರಿಂದ ನೀನು ಬೇಗನೆಯೆ ಕುರೂಪಿಣಿಯಾಗಿಹೋಗು' ಎಂದನು.

ಅಗಸ್ತ್ಯ ಉವಾಚ :—

ಇತಿ ಶಪ್ತಾ ರುಷಾ ತೇನ ಮುನಿನಾ ಸಾ ಶುಭೇಕ್ಷಣಾ ।
ಉವಾಚ ವಿನತಾ ಭೂತ್ವಾ ಪ್ರಾಂಜಲಿರ್ಮುನಿಮಾದರಾತ್ ॥ ೧೦೦ ॥

ಉರ್ವಶ್ಯುವಾಚ :—

ಭಗವನ್ಮೇ ಪ್ರಸೀದ ತ್ವಂ ಪರಾಧೀನಾ ಯತಸ್ತ್ವಹಂ ।
ತ್ವಚ್ಛಾಪಸ್ಯ ಕಥಂ ಮುಕ್ತಿರ್ಭವಿತಾ ನಿಯತವ್ರತ ॥ ೧೦೧ ॥

ರೈಭ್ಯ ಉವಾಚ :—

ಅಯೋಧ್ಯಾಯಾಮಸ್ತಿ ತೀರ್ಥಂ ಪಾವನಂ ಪರಮಂ ಮಹತ್ ।
ತತ್ರಸ್ನಾನಂ ಕುರುಷ್ವಾದ್ಯ ಸೌಂದರ್ಯಂ ಪರಮಾಪ್ನುಹಿ ॥ ೧೦೨ ॥
ತ್ವನ್ನಾಮ್ನೈವ ಚ ವಿಖ್ಯಾತಿಂ ತೋಯಂ ಯಾಸ್ಯತಿ ತದ್ಧ್ರುವಂ ॥೧೦೩॥

ಅಗಸ್ತ್ಯ ಉವಾಚ :—

ಏವಂ ಸಾ ವಿಪ್ರವಚಸಾ ವಿದಧೇ ಸರ್ವಮಾದರಾತ್ ।
ಸುಂದರೀ ಸಾಽಭವತ್ಕ್ಷಿಪ್ರಂ ತತ್ಸ್ಥಾನಂ ಖ್ಯಾತಿಮಾಯಯೌ ॥ ೧೦೪ ॥
ಅತ್ರ ಸ್ನಾನಂ ಮುನಿಶ್ರೇಷ್ಠ ಯಃ ಕುರ್ಯಾದ್ವಿಧಿವಜ್ಜನಃ ।
ಸೌಂದರ್ಯಂ ಪರಮಂ ತಸ್ಯ ಭವೇತ್ತತ್ರ ನ ಸಂಶಯಃ ॥ ೧೦೫ ॥

---

೧೦೦. ಅಗಸ್ತ್ಯನು ಹೇಳುತ್ತಾನೆ:— ಕೋಪಗೊಂಡ ಆ ಮುನಿಯಿಂದ, ಹೀಗೆ ಶಪಿಸಲ್ಪಟ್ಟ ಶುಭೇಕ್ಷಣೆಯಾದ ಆ ಉರ್ವಶಿಯು ವಿನಯದಿಂದ ತಗ್ಗಿ ಕೈಮುಗಿದುಕೊಂಡು ಆದರದಿಂದ ನುಡಿದಳು:—

೧೦೧. ಉರ್ವಶಿಯು ಕೇಳುತ್ತಾಳೆ:— "ಎಲೈ ಋಷಿಯೇ! ನಾನು ಪರಾಧೀನೆ. ಆದುದರಿಂದ ನನ್ನಲ್ಲಿ ಪ್ರಸನ್ನನಾಗು. ವ್ರತದಲ್ಲಿ ನಿಯತನಾದ ನಿನ್ನ ಶಾಪಕ್ಕೆ ಬಿಡುಗಡೆಯುಂಟಾಗುವುದು ಹೇಗೆ?"

೧೦೨. ರೈಭ್ಯನು ಹೇಳುತ್ತಾನೆ:— "ಅಯೋಧ್ಯೆಯಲ್ಲಿ ಮಹತ್ತಾದುದೂ ಪರಮಪಾವನವಾದುದೂ ಆದ ಒಂದು ತೀರ್ಥವಿರುವುದು. ನೀನು ಅಲ್ಲಿಗೆ ಹೋಗಿ ಸ್ನಾನಮಾಡು. ಪರಮಸೌಂದರ್ಯವನ್ನು ಪಡೆಯುತ್ತೀಯೆ.

೧೦೩. ಆ ತೀರ್ಥವು ನಿನ್ನ ಹೆಸರಿನಿಂದಲೇ ವಿಖ್ಯಾತಿಯನ್ನೈದುತ್ತದೆ. ಇದು ದಿಟವು!" ಎಂದನು.

೧೦೪. ಅಗಸ್ತ್ಯನು ಹೇಳುತ್ತಾನೆ:— ಅದೇ ರೀತಿ ಅವಳು ಆ ಬ್ರಾಹ್ಮಣನ ಮಾತಿನಂತೆ ಆದರದಿಂದ ಎಲ್ಲವನ್ನೂ ಮಾಡಿದಳು. ಒಡನೆಯೆ ಅವಳು ಸುಂದರಿಯಾದಳು. ಆ ಸ್ಥಾನವು ಅವಳ ಹೆಸರಿನಿಂದಲೇ ಖ್ಯಾತಿಯನ್ನು ಪಡೆಯಿತು.

೧೦೫. ಓ ಮುನಿಶ್ರೇಷ್ಠಾ! ಇಲ್ಲಿ ಯಾವನು ವಿಧಿವತ್ತಾಗಿ ಸ್ನಾನಮಾಡುವನೋ ಅವನಿಗೆ ಪರಮಸೌಂದರ್ಯವುಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲವು.

ಭಾದ್ರೇ ಶುಕ್ಲತೃತೀಯಾಯಾಂ ಯಾತ್ರಾ ಸಾಂವತ್ಸರೀ ಭವೇತ್ ।
ವಿಷ್ಣುರತ್ರ ಜನೈಃ ಪೂಜ್ಯಃ ಸರ್ವಕಾಮಾರ್ಥಸಿದ್ಧಯೇ ॥ ೧೦೬ ॥
ಏವಂ ಕುರ್ವನ್ನರೋ ವಿದ್ವಾನ್ವಿಷ್ಣುಲೋಕೇ ವಸೇತ್ಸದಾ ।
ನರೋ ವಾ ಯದಿ ವಾ ನಾರೀ ಸರ್ವಾನ್ಕಾಮಾನವಾಪ್ನುಯಾತ್ ॥೧೦೭॥
ಘೋಷಾರ್ಕಕುಂಡಂ ಪರಮಂ ಉರ್ವಶೀಕುಂಡದಕ್ಷಿಣೇ ।
ವರ್ತತೇ ಮುನಿಶಾರ್ದೂಲ ಸರ್ವಪಾಪಾಪಹಂ ಸದಾ ॥ ೧೦೮ ॥
ಯತ್ರ ಸ್ನಾನೇನ ದಾನೇನ ಸೂರ್ಯಲೋಕೇ ಮಹೀಯತೇ ।
ಏತತ್ತೀರ್ಥಸ್ಯ ಸದೃಶಂ ನಾಪರಂ ವಿದ್ಯತೇ ಕ್ವಚಿತ್ ॥ ೧೦೯ ॥
ವ್ರಣೀ ಕುಷ್ಠೀ ದರಿದ್ರೀ ವಾ ದುಃಖಾಕ್ರಾಂತೋಽಪಿ ಯೋ ನರಃ ।
ಕರೋತಿ ವಿಧಿವತ್ ಸ್ನಾನಂ ಸರ್ವಾನ್ಕಾಮಾನವಾಪ್ನುಯಾತ್ ॥ ೧೧೦ ॥
ರವಿವಾರೇ ವಿಶೇಷೇಣ ಕರ್ತವ್ಯಂ ಸ್ನಾನಮಾದರಾತ್ ।
ಭಾದ್ರೇ ಮಾಸಿ ತಥಾ ಮಾಘೇ ಶುಕ್ಲಷಷ್ಠ್ಯಾಂ ಪ್ರಯತ್ನತಃ ॥ ೧೧೧ ॥
ಕರ್ತವ್ಯಂ ವಿಧಿವತ್ಸ್ನಾನಂ ಸೂರ್ಯಲೋಕಾಭಿಕಾಂಕ್ಷಯಾ ।
ಪೌಷೇ ಮಾಸಿ ತಥಾ ಸ್ನಾನಂ ಸೂರ್ಯವಾರೇ ವಿಶೇಷತಃ ॥ ೧೧೨ ॥

೧೦೬. ಭಾದ್ರಪದಶುಕ್ಲ ತದಿಗೆಯ ದಿನ ಇಲ್ಲಿ ವಾರ್ಷಿಕಯಾತ್ರೆಯು ನಡೆಯುತ್ತದೆ. ಇಷ್ಟಾರ್ಥಗಳ ಸಿದ್ಧಿಗಾಗಿ ಇಲ್ಲಿ ಜನರು ವಿಷ್ಣುವನ್ನು ಪೂಜಿಸಬೇಕು.

೧೦೭. ಹೀಗೆ ಪೂಜಿಸುವ ವಿದ್ವಾಂಸನಾದ ನರನು ಸದಾಕಾಲವೂ ವಿಷ್ಣುಲೋಕದಲ್ಲಿ ವಾಸಮಾಡುತ್ತಾನೆ. ನರನೇ ಆಗಲಿ, ನಾರಿಯೇ ಆಗಲಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಾರೆ.

೧೦೮. ಉರ್ವಶೀಕುಂಡದ ದಕ್ಷಿಣದಲ್ಲಿ ಘೋಷಾರ್ಕಕುಂಡವಿದೆ. ಎಲೈ ಮುನಿಶಾರ್ದೂಲನೇ! ಅದು ಸದಾಕಾಲವೂ ಸಮಸ್ತಪಾಪಪರಿಹಾರಕವಾಗಿರುವುದು.

೧೦೯. ಅಲ್ಲಿ ಸ್ನಾನದಾನಗಳನ್ನು ಮಾಡುವುದರಿಂದ ಸೂರ್ಯಲೋಕದಲ್ಲಿ ಶ್ರೇಷ್ಠತೆಯುಂಟಾಗುತ್ತದೆ. ಈ ತೀರ್ಥಕ್ಕೆ ಸಮಾನವಾದ ಬೇರೊಂದು ತೀರ್ಥವು ಮತ್ತೆಲ್ಲಿಯೂ ಇರುವುದಿಲ್ಲವು.

೧೧೦. ವ್ರಣವುಳ್ಳವನೂ, ಕುಷ್ಠದಿಂದ ನರಳುವವನೂ, ದರಿದ್ರನೂ, ದುಃಖಪೀಡಿತನೂ ಆದ ಮಾನವನು ಇಲ್ಲಿ ವಿಧಿವತ್ತಾಗಿ ಸ್ನಾನಮಾಡಿದರೆ ಇಷ್ಟಾರ್ಥಗಳೆಲ್ಲವನ್ನೂ ಪಡೆಯುತ್ತಾನೆ.

೧೧೧–೧೧೩. ವಿಶೇಷವಾಗಿ ರವಿವಾರದಲ್ಲಿ ಆದರದಿಂದ ಇಲ್ಲಿ ಸ್ನಾನಮಾಡಬೇಕು. ಭಾದ್ರಪದಮಾಸದಲ್ಲೂ, ಮಾಘಮಾಸದಲ್ಲೂ, ಶುಕ್ಲಷಷ್ಠಿಯಲ್ಲಿಯೂ ಸೂರ್ಯಲೋಕವನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಮಾನವನು ಪ್ರಯತ್ನ

ಸಪ್ತಮ್ಯಾಂ ರವಿಯುಕ್ತಾಯಾಂ ಸ್ನಾನಂ ಬಹುಫಲಪ್ರದಂ ।
ಘೋಷಾಭಿಧೋಽಭವತ್ಪೂರ್ವಂ ಸೂರ್ಯವಂಶೇ ನರೇಶ್ವರಃ ॥ ೧೧೩ ॥
ಸಮುದ್ರಮೇಖಲಾಮೇಕಃ ಪೃಥಿವೀಂ ಸಮಪಾಲಯತ್ ।
ಯಸ್ಯ ಕೀರ್ತ್ಯಾ ಪ್ರಕಾಶಂತೇ ತ್ರಿಲೋಕೀಮಂಡಲಾನಿ ವೈ ॥ ೧೧೪ ॥
ಯಃ ಪ್ರತಾಪಾತ್ ಸ್ಫುರನ್ಭಾತಿ ಪ್ರಭಾಕರ ಇವಾಪರಃ ।
ಪ್ರಚಂಡತರದೋರ್ದಂಡಖಂಡಿತಾರಾತಿಮಂಡಲಃ ॥ ೧೧೫ ॥
ಸ ಕದಾಚಿತ್ ಪ್ರಜಾಪಾಲೋ ಮಂತ್ರಿವಿನ್ಯಸ್ತಭೂತಲಃ ।
ಬಭ್ರಾಮ ಮೃಗಯಾಸಕ್ತೋ ವನೇಽತಿಗಹನದ್ರುಮೇ ॥ ೧೧೬ ॥
ಸ ರಾಜಾ ಪೂರ್ವಜನ್ಮೋತ್ಥಪಾಪೈರಶುಭಸೂಚಕೈಃ ।
ಕೃಮಿವ್ಯಾಪ್ತಕರಾಂಭೋಜಃ ಸುಂದರೋಽಪಿ ಗತಸ್ಮಯಃ ॥ ೧೧೭ ॥
ಮೃಗಯಾಯಾಮಭೂದೇಕಃ ಕದಾಚಿತ್ಪರ್ಯಟನ್ವನೇ ।
ವರಾಹಸಿಂಹಹರಿಣಾನ್ನಿಘ್ನನ್‌ಗಚ್ಛನ್ನಿತಸ್ತತಃ ॥ ೧೧೮ ॥

---

ಪೂರ್ವಕವಾಗಿ ಇಲ್ಲಿ ಸ್ನಾನವನ್ನು ಮಾಡಬೇಕು. ಇದೇ ರೀತಿ ಪುಷ್ಯಮಾಸದ ಸೂರ್ಯದಿನಗಳಲ್ಲಿ ಸ್ನಾನಮಾಡುವುದು ವಿಶೇಷ; ರವಿಯಿಂದ ಕೂಡಿದ (ರಥ) ಸಪ್ತಮಿಯಂದು ಸ್ನಾನಮಾಡುವುದು ಬಹು ಫಲಪ್ರದವಾಗುವುದು. ಪೂರ್ವದಲ್ಲಿ ಸೂರ್ಯವಂಶದಲ್ಲಿ ಘೋಷನೆಂಬ ಒಬ್ಬ ದೊರೆಯಿದ್ದನು.

೧೧೪. ಸಮುದ್ರಮೇಖಲೆಯಾದ ಪೃಥ್ವಿಯನ್ನು ಅವನೊಬ್ಬನೇ ಪಾಲಿಸುತ್ತಿದ್ದನು. ಅವನ ಕೀರ್ತಿಯಿಂದ ಮೂರು ಲೋಕಗಳೂ ಪ್ರಕಾಶಿಸುತ್ತಿದ್ದವು.

೧೧೫. ಪ್ರಚಂಡತರವಾದ ಬಾಹುದಂಡಗಳಿಂದ ಶತ್ರುಮಂಡಲಗಳನ್ನೆಲ್ಲ ಖಂಡಿಸಿದವನಾದ ಆತನು ಪ್ರತಾಪದಿಂದ ಸ್ಫುರಿಸುತ್ತ ಬೇರೊಬ್ಬ ಪ್ರಭಾಕರ (ಸೂರ್ಯ)ನೋ ಎಂಬಂತೆ ಬೆಳಗುತ್ತಿದ್ದನು.

೧೧೬. ಆ ಪ್ರಜಾಪಾಲಕನು ಒಂದಾನೊಂದು ಸಲ ರಾಜ್ಯವನ್ನೆಲ್ಲ ಮಂತ್ರಿಗೆ ಒಪ್ಪಿಸಿ ಮೃಗಯಾಸಕ್ತನಾಗಿ ಬಹಳ ದಟ್ಟವಾಗಿ ಮರಗಳು ಬೆಳೆದಿದ್ದ ವನದಲ್ಲಿ ಸಂಚರಿಸುತ್ತಿದ್ದನು.

೧೧೭. ಆ ರಾಜನು ಪೂರ್ವಜನ್ಮದಲ್ಲಿ ಮಾಡಿದ ಅಶುಭಸೂಚಕವಾದ ಪಾಪಗಳಿಂದ ಕ್ರಿಮಿಗಳು ವ್ಯಾಪಿಸಿದ ಕೈಗಳುಳ್ಳವನಾಗಿ ಸುಂದರನಾದರೂ ನಗೆಗೀಡಾಗಿ ಹರ್ಷವೇ ಇಲ್ಲದವನಾದನು.

೧೧೮–೧೧೯. ಒಮ್ಮೆ ವನದಲ್ಲಿ ಬೇಟೆಗಾಗಿ ಸುತ್ತುತ್ತಿದ್ದಾಗ ಅವನು ಒಬ್ಬಂಟಿಗನಾದನು. ಹಂದಿ, ಸಿಂಹ, ಜಿಂಕೆಗಳನ್ನು ಕೊಲ್ಲುತ್ತ ಅಲ್ಲಿಂದಿಲ್ಲಿಗೆ ಓಡಾಡುತ್ತ ಬಳಲಿ ಅವನು ಬಾಯಾರಿಹೋದನು. ಆಗ ಅವನಿಗೊಂದು

ತೃಷಾಕ್ರಾಂತೋ ಮ್ಲಾನತನುಃ ಸರೋಽಪಶ್ಯತ್ಪುರೋ ನೃಪಃ ।
ದದರ್ಶ ತತ್ರ ಚ ಮುನೀನ್ ಸ್ನಾನಸಂಧ್ಯಾದಿತತ್ಪರಾನ್ ॥ ೧೧೯ ॥
ತತೋ ವಿಧಿವದಾಚಮ್ಯ ಸ್ನಾನಂ ಚಕ್ರೇ ನರೇಶ್ವರಃ ।
ತತೋ ದಿವ್ಯಶರೀರೋಽಭೂದಾನಂದಾಮಲಮಾನಸಃ ॥ ೧೨೦ ॥
ಮುನಿಭಿಸ್ತೀರ್ಥಮಾಜ್ಞಾಯ ಚಕ್ರೇ ಸೂರ್ಯಸ್ತುತಿಂ ಪ್ರಿಯಾಂ ॥೧೨೧॥

ರಾಜೋವಾಚ :—

ಭಗವನ್ ದೇವದೇವೇಶ ನಮಸ್ತುಭ್ಯಂ ಚಿದಾತ್ಮನೇ ।
ನಮಃ ಸವಿತ್ರೇ ಸೂರ್ಯಾಯ ಜಗದಾನಂದದಾಯಿನೇ ॥ ೧೨೨ ॥
ಪ್ರಭಾಗೇಹಾಯ ದೇವಾಯ ತ್ರಯೀಭೂತಾಯ ತೇ ನಮಃ ।
ವಿವಸ್ವತೇ ನಮಸ್ತುಭ್ಯಂ ಯೋಗಜ್ಞಾಯ ಸದಾತ್ಮನೇ ॥ ೧೨೩ ॥
ಪರಾಯ ಪರಮೇಶಾಯ ತ್ರಿಲೋಕೀತಿಮಿರಚ್ಛಿದೇ ।
ಅಚಿಂತ್ಯಾಯ ಸದಾ ತುಭ್ಯಂ ನಮೋ ಭಾಸ್ಕರತೇಜಸೇ ॥ ೧೨೪ ॥
ಯೋಗಪ್ರಿಯಾಯ ಯೋಗಾಯ ಯೋಗಜ್ಞಾಯ ಸದಾ ನಮಃ ।
ಓಂಕಾರಾಯ ವಷಟ್ಕಾರರೂಪಿಣೇ ಜ್ಞಾನರೂಪಿಣೇ ॥ ೧೨೫ ॥

---

ಸರೋವರವು ಎದುರಿಗೆ ಕಾಣಿಸಿತು. ಅಲ್ಲಿ ಸ್ನಾನ, ಸಂಧ್ಯಾವಂದನೆ ಮೊದಲಾದವುಗಳಲ್ಲಿ ತತ್ಪರರಾಗಿದ್ದ ಮುನಿಗಳನ್ನೂ ಕಂಡನು.

೧೨೦. ಬಳಿಕ ಆ ನರೇಶ್ವರನು ವಿಧಿಪೂರ್ವಕವಾಗಿ ಆಚಮನಮಾಡಿ ಅಲ್ಲಿ ಸ್ನಾನಮಾಡಿದ ಬಳಿಕ ದಿವ್ಯಶರೀರವನ್ನು ತಳೆದು ಆನಂದದಿಂದ ತುಂಬಿ ನಿರ್ಮಲವಾದ ಮನಸ್ಸುಳ್ಳವನಾದನು.

೧೨೧. ಆ ತೀರ್ಥದ ಪರಿಯನ್ನು ಮುನಿಗಳಿಂದ ತಿಳಿದುಕೊಂಡು ಸೂರ್ಯನಿಗೆ ಬಹುಪ್ರಿಯವಾದ ಸ್ತುತಿಯೊಂದನ್ನು ಮಾಡಿದನು.

೧೨೨. ರಾಜನು ಸ್ತುತಿಸುತ್ತಾನೆ :—" ಭಗವನ್, ದೇವದೇವೇಶ ! ಚಿದಾತ್ಮನಾದ ನಿನಗೆ ನಮಸ್ಕಾರವು. ಸವಿತೃವೂ, ಸೂರ್ಯನೂ, ಜಗತ್ತಿಗೆಲ್ಲ ಆನಂದವನ್ನು ಕೊಡುವವನೂ ಆದ ಓ ಸ್ವಾಮಿಯೆ ! ನಿನಗೆ ನಮಸ್ಕಾರವು.

೧೨೩. ಪ್ರಭೆಗೆ ನೆಲೆಯಾದ ಓ ದೇವ ! ನಿನಗೆ ನಮಸ್ಕಾರವು. ವೇದಸ್ವರೂಪನೂ, ವಿವಸ್ವತ್ ಎನಿಸಿರುವವನೂ, ಯೋಗಜ್ಞನೂ, ಸದಾತ್ಮನೂ ಆದ ನಿನಗೆ ನಮಸ್ಕಾರವು.

೧೨೪. ಪರನೂ, ಪರಮೇಶ್ವರನೂ, ಮೂರುಲೋಕದ ಕತ್ತಲೆಯನ್ನು ನೀಗುವವನೂ, ಚಿಂತಿಸಲರಿದಾದವನೂ ಆಗಿರುವ ಓ ಭಾಸ್ಕರ ! ನಿನ್ನ ತೇಜಸ್ಸಿಗೆ ನಮಸ್ಕಾರವು.

೧೨೫. ಯೋಗಪ್ರಿಯನೂ, ಯೋಗಸ್ವರೂಪನೂ, ಯೋಗಜ್ಞನೂ, ಓಂಕಾರ

ಯಜ್ಞಾಯ ಯಜ್ಞಮಾನಾಯ ಹವಿಷೇ ಋತ್ವಿಜೇ ನಮಃ ।
ರೋಗಘ್ನಾಯ ಸ್ವರೂಪಾಯ ಕಮಲಾನಂದದಾಯಿನೇ ॥ ೧೨೬ ॥
ಅತಿಸೌಮ್ಯಾತಿತೀಕ್ಷ್ಣಾಯ ಸುರಾಣಾಂ ಪತಯೇ ನಮಃ ।
ಸತ್ರಾಶ್ರಾಯ ನಮಸ್ತುಭ್ಯಂ ಭಕ್ತತ್ರಾಣಾಯ ಪ್ರಿಯಾತ್ಮನೇ ॥ ೧೨೭ ॥
ಪ್ರಕಾಶಕಾಯ ಸತತಂ ಲೋಕಾನಾಂ ಹಿತಕಾರಿಣೇ ।
ಪ್ರಸೀದ ಪ್ರಣತಾಮಾದ್ಯ ಮಹ್ಯಂ ಭಕ್ತಿಕೃತೇ ಸ್ವಯಂ ॥ ೧೨೮ ॥
ಅಗಸ್ತ್ಯ ಉವಾಚ :—
ಇತ್ಯೇವಂ ಬ್ರುವತಸ್ತಸ್ಯ ಪ್ರಸನ್ನೋ ಸ ರವಿಃ ಸ್ವಯಂ ।
ಆವಿರ್ಬಭೂವ ಸಹಸಾ ಭಕ್ತಸ್ಯ ಪ್ರಿಯಕಾಮ್ಯಯಾ ।
ಉವಾಚ ಮಧುರಂ ವಾಕ್ಯಂ ಪ್ರಶ್ರಯಾನತಮೂರ್ಧಜಂ ॥ ೧೨೯ ॥
ರವಿರುವಾಚ :—
ವರಂ ವರಯ ರಾಜೇಂದ್ರ ಪ್ರಸನ್ನೋಽಸ್ಮಿ ತವಾಗ್ರತಃ ।
ದದಾಮಿ ತದ್ವರಂ ತೇಽದ್ಯ ಯತ್ತ್ವಯಾ ಮನಸೇಪ್ಸಿತಂ ॥ ೧೩೦ ॥

---

ಸ್ವರೂಪನೂ, ವಷಟ್ಕಾರರೂಪಿಯೂ ಆಗಿ ಜ್ಞಾನಸ್ವರೂಪನೇ ಆಗಿರುವ ನಿನಗೆ ನಮಸ್ಕಾರವು.

೧೨೬. ಯಜ್ಞಸ್ವರೂಪನೂ, ಯಜ್ಞದಿಂದ ಗೌರವಿಸಲ್ಪಡುವವನೂ, ಹವಿಸ್ಸ್ವರೂಪನೂ, ಋತ್ವಿಕ್‌ಸ್ವರೂಪನೂ, ರೋಗಪರಿಹಾರಕನೂ, ಕಮಲಕ್ಕೆ ಆನಂದವನ್ನು ನೀಡುವವನೂ ಆದ ನಿನಗೆ ನಮಸ್ಕಾರವು.

೧೨೭. ಅತಿ ಸೌಮ್ಯನೂ, ಅತಿ ತೀಕ್ಷ್ಣನೂ, ಸುರರಿಗೆಲ್ಲ ಒಡೆಯನೂ, ಯಜ್ಞಾಶ್ರಯನೂ, ಭಕ್ತರಕ್ಷಕನೂ, ಪ್ರಿಯಾತ್ಮನೂ ಆದ ನಿನಗೆ ನಮಸ್ಕಾರವು.

೧೨೮. ಸರ್ವಕಾಲದಲ್ಲಿಯೂ ಪ್ರಕಾಶಿಸುತ್ತಿರುವವನೂ, ಸದಾಕಾಲವೂ ಲೋಕಗಳಿಗೆ ಹಿತವನ್ನುಂಟುಮಾಡುತ್ತಿರುವವನೂ ಆದ ಓ ದೇವ! ಭಕ್ತಿಯಿಂದ ಪ್ರಣಾಮಮಾಡುತ್ತಿರುವ ನನ್ನಲ್ಲಿ ಪ್ರಸನ್ನನಾಗು.''

೧೨೯. ಅಗಸ್ತ್ಯನು ಹೇಳುತ್ತಾನೆ:—ಹೀಗೆ ಸ್ತೋತ್ರಮಾಡುತ್ತಿದ್ದ ಭಕ್ತನಾದ ಆ ರಾಜನಿಗೆ ರವಿಯು ಪ್ರಸನ್ನನಾಗಿ ಪ್ರಿಯವನ್ನುಂಟುಮಾಡಬೇಕೆಂದು ಕೂಡಲೆ ಪ್ರತ್ಯಕ್ಷವಾಗಿ ಕಾಣಿಸಿಕೊಂಡನು. ವಿನಯಗೌರವಗಳಿಂದ ತಲೆತಗ್ಗಿಸಿ ನಿಂತ ಆ ದೊರೆಯನ್ನು ಕುರಿತು ಮಧುರವಾದ ಮಾತುಗಳನ್ನಾಡಿದನು.

೧೩೦. ರವಿಯು ಹೇಳುತ್ತಾನೆ:—'' ರಾಜೇಂದ್ರಾ! ವರವನ್ನು ಕೇಳಿಕೊ. ನಾನು ಪ್ರಸನ್ನನಾಗಿ ನಿನ್ನೆದುರಿಗೆ ಬಂದಿದ್ದೇನೆ. ನಿನ್ನ ಮನಸ್ಸಿಗೆ ಯಾವ ವರವು ಇಷ್ಟವಾಗಿ ಬೇಕೆನ್ನಿಸಿದೆಯೋ ಆ ವರವನ್ನು ಬೇಡು ಕೊಡುತ್ತೇನೆ'' ಎಂದನು.

ರಾಜೋವಾಚ :—

ಭಗವನ್ ಭಾಸ್ಕರಾನಂತ ಪ್ರಯಚ್ಛಸಿ ವರಂ ಯದಿ ।
ಮನ್ನಾಮ್ನಾ ಕೃತಮೂರ್ತಿಸ್ತ್ವಂ ತಿಷ್ಠ ತ್ವತ್ರ ಸದಾ ವಿಭೋ ॥ ೧೩೧ ॥

ರವಿರುವಾಚ :—

ಏವಮಸ್ತು ಮನುಷ್ಯೇಂದ್ರ ತವ ವಾಂಛಾ ಮನೋಹರಾ ।
ಏತತ್ ಸ್ತೋತ್ರಂ ತ್ವಯೋಕ್ತಂ ಮೇ ಯೇ ಪಠಂತಿ ಮಾನವಾಃ ॥ ೧೩೨ ॥
ತೇಭ್ಯಸ್ತುಷ್ಟಃ ಪ್ರದಾಸ್ಯಾಮಿ ಸರ್ವಾನ್ಕಾಮಾನ್ನರೇಶ್ವರ ।
ಏತತ್ಸ್ಥಾನಂ ಪರಾಂ ಖ್ಯಾತಿಂ ತ್ವನ್ನಾಮ್ನಾಯಾಸ್ಯತಿ ಕ್ಷಿತೌ ॥ ೧೩೩ ॥
ಸರ್ವಾನ್ಕಾಮಾನವಾಪ್ನೋತಿ ಯೋಽತ್ರ ಸ್ನಾನಂ ಸಮಾಚರೇತ್ ।
ಮದ್ಭಕ್ತೇನ ಸದಾ ರಾಜನ್ ಕರ್ತವ್ಯಂ ಸ್ನಾನಮತ್ರ ವೈ ॥ ೧೩೪ ॥
ಯಂ ಯಂ ಕಾಮಮಿಹೇಚ್ಛೇತ ತಂ ತಂ ಕಾಮಮವಾಪ್ನುಯಾತ್ ॥

ಅಗಸ್ತ್ಯ ಉವಾಚ :—

ಇತಿ ದತ್ವಾ ವರಂ ದೇವಃ ಕೃಪಯಾ ಪರಯಾ ಯುತಃ ।
ಭಾಸ್ವಾನ್ ಸಹಸ್ರಕಿರಣಸ್ತಥಾಂತರ್ಧಾನಮಾಯಯೌ ॥ ೧೩೬ ॥

---

೧೩೧. ರಾಜನು ಕೇಳುತ್ತಾನೆ:— "ಎಲೈ ಭಗವಂತನೇ! ಭಾಸ್ಕರಾ, ಅನಂತನಾದ ನೀನು ನನಗೆ ವರವನ್ನು ಕೊಡುವೆಯಾದರೆ ನನ್ನ ಹೆಸರಿನಿಂದ ಮೂರ್ತಿಸ್ವರೂಪವನ್ನು ತಾಳಿ, ನೀನು ಸದಾಕಾಲದಲ್ಲಿಯೂ ಇಲ್ಲಿಯೆ ನೆಲಸಿರು."

೧೩೨–೧೩೩. ರವಿಯು ಹೇಳುತ್ತಾನೆ:—"ಎಲೈ ಮನುಜೇಂದ್ರನೇ! ಹಾಗೆಯೇ ಆಗಲಿ. ನಿನ್ನ ವಾಂಛೆಯು ಮನೋಹರವಾಗಿದೆ. ನಿನ್ನಿಂದ ಸ್ತುತಿಸಲ್ಪಟ್ಟ ನನ್ನ ಈ ಸ್ತೋತ್ರವನ್ನು ಯಾವ ಮಾನವರು ಪಠಿಸುತ್ತಾರೆಯೋ ಅವರ ವಿಷಯದಲ್ಲಿ ನಾನು ಸಂತುಷ್ಟನಾಗಿ, ಸರ್ವಕಾಮಗಳನ್ನೂ ಕೈಗೂಡಿಸಿ ಕೊಡುತ್ತೇನೆ. ಈ ಸ್ಥಾನವು ನಿನ್ನ ಹೆಸರಿನಿಂದ ಭೂಮಿಯಲ್ಲಿ ಬಹು ಖ್ಯಾತಿಯನ್ನು ಪಡೆಯುತ್ತದೆ.

೧೩೪. ಇಲ್ಲಿ ಯಾವನು ಸ್ನಾನಮಾಡುವನೋ ಅವನು ಇಷ್ಟಾರ್ಥಗಳೆಲ್ಲವನ್ನೂ ಪಡೆದುಕೊಳ್ಳುತ್ತಾನೆ. ಅಯ್ಯಾ ರಾಜನೇ! ನನ್ನ ಭಕ್ತನಾದವನು ಸದಾ ಇಲ್ಲಿ ಸ್ನಾನಮಾಡತಕ್ಕುದು.

೧೩೫. ಹಾಗೆ ಸ್ನಾನಮಾಡಿದವನು ಯಾವ ಯಾವ ಇಷ್ಟಾರ್ಥವನ್ನು ಬಯಸುವನೋ ಆಯಾ ಇಷ್ಟಾರ್ಥವನ್ನು ಪಡೆಯುತ್ತಾನೆ."

೧೩೬. ಅಗಸ್ತ್ಯನು ಹೇಳುತ್ತಾನೆ:—" ಸೂರ್ಯದೇವನು ಈ ರೀತಿ ಪರಮಕೃಪೆಯಿಂದ ಕೂಡಿದವನಾಗಿ ಆ ರಾಜನಿಗೆ ವರವನ್ನು ಕೊಟ್ಟು ಪ್ರಭೆಯೆರಚಿ ಬೆಳಗುತ್ತ ಅಂತರ್ಧಾನವನ್ನು ಹೊಂದಿದನು.

ರಾಜಾ ಭಾಸ್ಕರದೇಹೋತ್ಥಾಂ ರವಿಮೂರ್ತಿಮನುತ್ತಮಾಂ ।
ತತ್ರ ಸಂಸ್ಥಾಪಯಾಮಾಸ ಪೂಜಯಾಮಾಸ ಚ ಸ್ವಯಂ ॥ ೧೩೭ ॥
ಘೋಷಾರ್ಕಕುಂಡಂ ತನ್ನಾಮ್ನಾ ತತ್ರ ಖ್ಯಾತಿಂ ಜಗಾಮ ಹ ।
ಯತ್ರ ಸ್ನಾನಾನ್ನರೋ ರಾಜನ್ ಸೂರ್ಯಲೋಕೇ ವಸೇತ್ಸದಾ ॥ ೧೩೮ ॥
ಇತಿ ರುಚಿರವಿಧಾನೈಸ್ತೂರ್ಣಮಾದಿತ್ಯಮೂರ್ತಿಂ
ವಿಮಲಪರಮಭಕ್ತ್ಯಾ ಪೂಜಯಿತ್ವಾಽಽದರೇಣ ।
ತದಮೃತಮಯಕುಂಡೇ ಸ್ನಾನಮಾದೌ ವಿಧಾಯ
ಪ್ರಚುರವಿಮಲಕೀರ್ತಿಃ ಸೂರ್ಯಲೋಕೇ ವಸೇತ್ಸಃ ॥೧೩೯॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಬೃಹಸ್ಪತಿಕುಂಡ, ರುಕ್ಮಿಣೀಕುಂಡ, ಧನಯಕ್ಷತೀರ್ಥ, ವಸಿಷ್ಠಕುಂಡ, ಸಾಗರಕುಂಡ, ಯೋಗಿನೀ ಕುಂಡ, ಉರ್ವಶೀಕುಂಡ, ಘೋಷಾರ್ಕಕುಂಡಮಾಹಾತ್ಮ್ಯವರ್ಣನಂ" ನಾಮ ಸಪ್ತಮೋಽಧ್ಯಾಯಃ

---

೧೩೭. ಆ ರಾಜನು ಭಾಸ್ಕರನ ದೇಹದಿಂದ ಉದ್ಭವಿಸಿ ಬಂದ ಅನುತ್ತಮವಾದ ರವಿಮೂರ್ತಿಯನ್ನು ಅಲ್ಲಿ ಸ್ಥಾಪನೆಮಾಡಿ ತಾನೇ ಪೂಜೆಮಾಡಿದನು.

೧೩೮. ಘೋಷಾರ್ಕಕುಂಡವು ಅವನ ಹೆಸರಿನಿಂದ ಅಲ್ಲಿ ಖ್ಯಾತಿಯನ್ನು ಪಡೆಯಿತು. ಅಲ್ಲಿ ಸ್ನಾನಮಾಡಿದ ಮಾನವನು ಸದಾ ಸೂರ್ಯಲೋಕದಲ್ಲಿ ವಾಸಮಾಡುತ್ತಾನೆ.

೧೩೯. ಈ ಪ್ರಕಾರವಾಗಿ ಯಾವಾತನು ಅಮೃತಮಯವಾದ ಆ ಕುಂಡದಲ್ಲಿ ಮೊದಲು ಸ್ನಾನಮಾಡಿ, ಮನೋಹರವಾದ ವಿಧಾನಗಳಿಂದ ಆದಿತ್ಯಮೂರ್ತಿಯನ್ನು ನಿರ್ಮಲವಾಗಿರುವ ಮನಸ್ಸಿನಿಂದಲೂ ಪರಮಭಕ್ತಿಯಿಂದಲೂ, ಆದರದಿಂದಲೂ ಪೂಜಿಸುವನೋ ಅವನು ಎಲ್ಲ ಕಡೆಯಲ್ಲಿಯೂ ಹರಡಿದ ವಿಮಲವಾದ ಕೀರ್ತಿಯುಳ್ಳವನಾಗಿ ಸೂರ್ಯಲೋಕದಲ್ಲಿ ವಾಸಮಾಡುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಬೃಹಸ್ಪತಿಕುಂಡ, ರುಕ್ಮಿಣೀಕುಂಡ, ಧನಯಕ್ಷತೀರ್ಥ, ವಸಿಷ್ಠಕುಂಡ, ಸಾಗರಕುಂಡ, ಯೋಗಿನೀಕುಂಡ, ಉರ್ವಶೀಕುಂಡ, ಘೋಷಾರ್ಕಕುಂಡಮಾಹಾತ್ಮ್ಯವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಮೋಽಧ್ಯಾಯಃ

**ಮಹಾರತ್ನತೀರ್ಥ, ದುರ್ಭರತೀರ್ಥ, ಮಹಾಭರತೀರ್ಥ, ಮಹಾವಿದ್ಯಾತೀರ್ಥ, ಸಿದ್ಧಪೀಠ, ಕ್ಷೀರೇಶ್ವರ, ಸೀತಾಕುಂಡ, ಸುಗ್ರೀವತೀರ್ಥ, ಹನುಮತ್ಕುಂಡ, ವಿಭೀಷಣಸರಸ್ತೀರ್ಥ, ಅಯೋಧ್ಯಾಯಾತ್ರಾವಿಧಿಕ್ರಮವರ್ಣನಂ**

**ಅಗಸ್ತ್ಯ ಉವಾಚ :—**

**ಘೋಷಾರ್ಕತೀರ್ಥಾದ್ವಿಪ್ರರ್ಷೇ ಪಶ್ಚಿಮೇ ದಿಕ್ತಟೇ ಸ್ಥಿತಂ ।**
**ರತಿಕುಂಡಮಿತಿ ಖ್ಯಾತಂ ಸರ್ವಪಾಪಹರಂ ಸದಾ ॥ ೧ ॥**
**ಯತ್ರ ಸ್ನಾನೇನ ದಾನೇನ ಪರಾಂ ಕಾಂತಿಮವಾಪ್ನುಯಾತ್ ।**
**ತತ್ಪಶ್ಚಿಮದಿಶಾಭಾಗೇ ಕುಸುಮಾಯುಧನಾಮಕಂ ॥ ೨ ॥**
**ಕುಂಡಂ ಪ್ರಸಿದ್ಧಮತುಲಂ ಸರ್ವಕಾಮಾರ್ಥಸಿದ್ಧಯೇ ।**
**ಯತ್ರ ಸ್ನಾನೇನ ದಾನೇನ ಕಂದರ್ಪಸದೃಶಾಕೃತಿಂ ।**
**ಲಭತೇ ನಾವಿಧಾನೇನ ಮುನೇ ನಾಸ್ತ್ಯತ್ರ ಸಂಶಯಃ ॥ ೩ ॥**
**ರತಿಕುಂಡೇ ತಥಾ ವಿಪ್ರ ಕುಸುಮಾಯುಧಕುಂಡಕೇ ।**
**ಶ್ರದ್ಧಯಾ ಕುರುತೇ ಸ್ನಾನಂ ಸ ಸೌಖ್ಯಪರಮೋ ಭವೇತ್ ॥ ೪ ॥**

---

### ಕನ್ನಡದ ಅನುವಾದ

**ಮಹಾರತ್ನತೀರ್ಥ, ದುರ್ಭರತೀರ್ಥ, ಮಹಾಭರತೀರ್ಥ, ಮಹಾವಿದ್ಯಾತೀರ್ಥ, ಸಿದ್ಧಪೀಠ, ಕ್ಷೀರೇಶ್ವರ, ಸೀತಾಕುಂಡ, ಸುಗ್ರೀವತೀರ್ಥ, ಹನುಮತ್ಕುಂಡ, ವಿಭೀಷಣಸರಸ್ತೀರ್ಥ, ಅಯೋಧ್ಯಾಯಾತ್ರಾವಿಧಿಕ್ರಮವರ್ಣನ**

೧. ಅಗಸ್ತ್ಯನು ಹೇಳುತ್ತಾನೆ :—''ಎಲೈ ಬ್ರಹ್ಮರ್ಷಿಯೇ ! ಘೋಷಾರ್ಕ ತೀರ್ಥಕ್ಕೆ ಪಶ್ಚಿಮದಿಕ್ಕಿನಲ್ಲಿ ರತಿಕುಂಡವೆಂದು ಪ್ರಸಿದ್ಧವಾದ ತೀರ್ಥವಿರುವುದು. ಅದು ಸರ್ವಪಾಪಹರವೆನಿಸಿರುವುದು.

೨–೩. ಅಲ್ಲಿ ಸ್ನಾನವನ್ನೂ ದಾನವನ್ನೂ ಮಾಡುವುದರಿಂದ ಉತ್ತಮವಾದ ಕಾಂತಿಯನ್ನು ಪಡೆಯಲಾಗುತ್ತದೆ. ಅದಕ್ಕೆ ಪಶ್ಚಿಮದಿಕ್ಕಿನಲ್ಲಿ ಕುಸುಮಾಯುಧ ಕುಂಡವೆಂದು ಪ್ರಸಿದ್ಧವಾದ ಕುಂಡವಿರುವುದು. ಸಮಸ್ತ ಇಷ್ಟಾರ್ಥಗಳನ್ನೂ ಸಿದ್ಧಿಮಾಡಿಕೊಡುವುದರಲ್ಲಿ ಅದು ಎಣೆಯಿಲ್ಲದುದಾಗಿರುವುದು. ಅಲ್ಲಿ ವಿಧಾನ ವನ್ನನುಸರಿಸಿ ಸ್ನಾನಮಾಡುವುದರಿಂದಲೂ ದಾನಮಾಡುವುದರಿಂದಲೂ ನರನು ಮನ್ಮಥನಿಗೆ ಸಮಾನವಾದ ಸೌಂದರ್ಯವನ್ನು ಪಡೆಯುತ್ತಾನೆ. ಎಲೈ ಮುನಿಯೇ ! ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

೪. ಯಾವನು ರತಿಕುಂಡದಲ್ಲಿಯೂ, ಕುಸುಮಾಯುಧಕುಂಡದಲ್ಲಿಯೂ ಶ್ರದ್ಧೆಯಿಂದ ಸ್ನಾನಮಾಡುವನೋ ಅವನು ಪರಮಸುಖಿಯಾಗುತ್ತಾನೆ.

ಕುಂಡದ್ವಯೋಽತ್ರ ಮಿಥುನಂ ಯತ್ಸ್ನಾನಂ ಕುರುತೇ ಕಿಲ ।
ರತಿಕಾಮಾವಿವ ಖ್ಯಾತೌ ಸದಾ ತೌ ಸುಂದರೌ ತದಾ ॥ ೫ ॥
ತಸ್ಮಾದತ್ರ ವಿಧಾನೇನ ಸ್ನಾತವ್ಯಂ ಧರ್ಮಕಾಂಕ್ಷಿಭಿಃ ।
ದಾನಂ ದೇಯಂ ಯಥಾಶಕ್ತ್ಯಾ ರತಿಕಂದರ್ಪತುಷ್ಟಯೇ ॥ ೬ ॥
ಭವೇತಾಂ ನಿಯತಾಂ ತಸ್ಯ ಸಂತುಷ್ಟೌ ರತಿಮನ್ಮಥೌ ।
ಮಾಘೇ ವಿಶದಪಂಚಮ್ಯಾಂ ಯತ್ರ ಸ್ನಾನಂ ಶುಭಪ್ರದಂ ॥ ೭ ॥
ರತಿಕುಂಡೇ ಪುರಃ ಸ್ನಾತ್ವಾ ಪಶ್ಚಾತ್ಕಂದರ್ಪಕುಂಡಕೇ ।
ಸ್ನಾತವ್ಯಂ ತದ್ದಿನೇ ವಿಪ್ರ ಮಿಥುನೇನ ಪ್ರಯತ್ನತಃ ॥ ೮ ॥
ರತಿಕಂದರ್ಪಯೋಃ ಪೂಜಾ ವಿಧಾತವ್ಯಾ ವಿಶೇಷತಃ ।
ವಸ್ತ್ರಾದಿಭಿರಲಂಕಾರೈಃ ಸಂಪೂಜ್ಯೌ ದ್ವಿಜದಂಪತೀ ॥ ೯ ॥
ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೦ ॥
ಚಂದನಾಗುರುಕರ್ಪೂರಕಸ್ತೂರೀಕುಂಕುಮಾದಿಭಿಃ ।
ವಾಸೋಭಿರ್ವಿವಿಧೈಃ ಪುಷ್ಪೈಃ ಪೂಜಯೇದ್ದ್ವಿಜದಂಪತೀ ॥ ೧೧ ॥

---

೫. ಈ ಕುಂಡಗಳೆರಡರಲ್ಲಿಯೂ ಯಾವ ದಂಪತಿಗಳು ಸ್ನಾನಮಾಡುತ್ತಾರೆಯೋ ಅವರು ಸುಂದರರಾಗಿ ರತಿಕಾಮರಂತೆಯೆ ಪ್ರಸಿದ್ಧರಾಗುತ್ತಾರೆ.

೬. ಆದುದರಿಂದ ಧರ್ಮಕಾಂಕ್ಷಿಗಳಾದವರು ಇಲ್ಲಿ ವಿಧಾನಪೂರ್ವಕವಾಗಿ ರತಿಮನ್ಮಥರ ತೃಪ್ತಿಗಾಗಿ ಸ್ನಾನಮಾಡಬೇಕು; ಶಕ್ತಿಯಿದ್ದಷ್ಟು ದಾನ ಮಾಡಬೇಕು.

೭. ಹಾಗೆ ಸ್ನಾನದಾನಗಳನ್ನು ಮಾಡಿದವರ ವಿಷಯದಲ್ಲಿ ರತಿಮನ್ಮಥರು ಸಂತುಷ್ಟರಾಗುತ್ತಾರೆ. ಮಾಘಮಾಸದ ಶುಕ್ಲ ಪಂಚಮಿಯಲ್ಲಿ ಅಲ್ಲಿ ಸ್ನಾನವು ಶುಭವನ್ನುಂಟುಮಾಡುವುದು.

೮. ಅಯ್ಯಾ ಬ್ರಾಹ್ಮಣನೆ! ಆ ದಿನ ದಂಪತಿಗಳು ಪ್ರಯತ್ನಪೂರ್ವಕವಾಗಿ ರತಿಕುಂಡದಲ್ಲಿ ಮೊದಲು ಸ್ನಾನಮಾಡಿ ಆ ಬಳಿಕ ಕಂದರ್ಪಕುಂಡದಲ್ಲಿ ಸ್ನಾನ ಮಾಡತಕ್ಕದ್ದು.

೯. ವಿಶೇಷರೀತಿಯಾಗಿ ರತಿಮನ್ಮಥರಿಗೆ ಪೂಜೆಮಾಡಬೇಕು. ಬ್ರಾಹ್ಮಣ ದಂಪತಿಗಳನ್ನು ವಸ್ತ್ರಾದಿ ಅಲಂಕಾರಗಳಿಂದ ಚೆನ್ನಾಗಿ ಪೂಜಿಸಬೇಕು.

೧೦–೧೧. ಹೀಗೆ ಮಾಡಿದವನು ಸರ್ವಕಾಮಗಳನ್ನೂ ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ. ಚಂದನ, ಅಗುರು, ಕರ್ಪೂರ, ಕಸ್ತೂರಿ ಕುಂಕುಮ ಮೊದಲಾದವುಗಳಿಂದಲೂ, ಬಗೆಬಗೆಯ ಬಟ್ಟೆಗಳಿಂದಲೂ, ಪುಷ್ಪಗಳಿಂದಲೂ ಬ್ರಾಹ್ಮಣ ದಂಪತಿಗಳನ್ನು ಪೂಜಿಸಬೇಕು.

ಏವಂ ಕೃತೇನ ಸಂದೇಹೋ ರತಿಕಂದರ್ಪತುಷ್ಟಯೇ ।
ತದ್ವ್ರಜೇನ್ಮಿಥುನಂ ವಿಪ್ರ ರತಿಕಂದರ್ಪತುಲ್ಯತಾಂ ॥ ೧೨ ॥
ಕುಸುಮಾಯುಧಕುಂಡಾತ್ತು ಪ್ರತೀಚ್ಯಾಂ ದಿಶಿ ಸಂಸ್ಥಿತಂ ।
ಮಂತ್ರೇಶ್ವರ ಇತಿ ಖ್ಯಾತಂ ತತ್ಸ್ಥಾನಂ ಭುವಿ ದುರ್ಲಭಂ ॥ ೧೩ ॥
ತತ್ರ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಮಂತ್ರೇಶ್ವರಂ ವಿಭುಂ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೧೪ ॥
ಪುರಾ ರಾಮೋ ದೇವಕಾರ್ಯಂ ವಿಧಾಯಾಮಲಕರ್ಮಕೃತ್ ।
ಕಾಲೇನ ಸಹ ಸಂಗಮ್ಯ ಮಂತ್ರಂ ಚಕ್ರೇ ನರೇಶ್ವರಃ ॥ ೧೫ ॥
ಸ್ವರ್ಗಂ ಪ್ರತಿ ಪ್ರಯಾಣಾಯ ಯತ್ರ ಸ್ನಾತೋ ಜಿತೇಂದ್ರಿಯಃ ।
ತತ್ರೈವ ಸ್ಥಾಪಿತಂ ಲಿಂಗಂ ಮಂತ್ರೇಶ್ವರ ಇತಿ ಶ್ರುತಂ ॥ ೧೬ ॥
ತದುತ್ತರೇ ಸರೋ ರಮ್ಯಂ ಕುಮುದೋತ್ಪಲಮಂಡಿತಂ ।
ತತ್ರ ಸ್ನಾನಂ ತಥಾ ದಾನಂ ನಾನಾಫಲದಮುತ್ತಮಂ ॥ ೧೭ ॥

---

೧೨. ಎಲೈ ವಿಪ್ರನೇ! ರತಿಮನ್ಮಥರಿಗೆ ತೃಪ್ತಿಯಾಗಲೆಂದು ಈ ರೀತಿ ಮಾಡಿದಲ್ಲಿ ಆ ದಂಪತಿಗಳು ರತಿಮನ್ಮಥರ ಸಮಾನತೆಯನ್ನು ಪಡೆಯುತ್ತಾರೆ; ಇದರಲ್ಲಿ ಸಂದೇಹವಿಲ್ಲ.

೧೩. ಕುಸುಮಾಯುಧಕುಂಡದಿಂದ ಪಶ್ಚಿಮ ದಿಕ್ಕಿನಲ್ಲಿ ಮಂತ್ರೇಶ್ವರ ವೆಂದು ಹೆಸರು ಪಡೆದ ತೀರ್ಥವಿರುವುದು. ಆ ತೀರ್ಥಸ್ಥಾನವು ಭೂಮಿಯಲ್ಲಿ ಬಹು ದುರ್ಲಭವೆನಿಸಿರುವುದು.

೧೪. ಯಾವ ನರನು ಆ ತೀರ್ಥದಲ್ಲಿ ಸ್ನಾನಮಾಡಿ ವಿಭುವಾದ ಮಂತ್ರೇಶ್ವರನನ್ನು ದರ್ಶನಮಾಡುವನೋ ಅವರಿಗೆ ನೂರಾರು ಕಲ್ಪಕೋಟಿಗಳು ಕಳೆದರೂ ಪುನರಾವೃತ್ತಿಯಿರುವುದಿಲ್ಲ.

೧೫. ಇಲ್ಲಿ ಪೂರ್ವದಲ್ಲಿ ನರೇಶ್ವರನಾದ ಶ್ರೀರಾಮನು ದೇವಕಾರ್ಯವನ್ನು ನೆರವೇರಿಸಿ, ನಿರ್ಮಲಕರ್ಮಗಳನ್ನು ಮಾಡಿ ಕಾಲನೊಡನೆ ಸೇರಿ ಮಂತ್ರಾಲೋಚನೆ ನಡಸಿದನು.

೧೬. ಸ್ವರ್ಗಕ್ಕೆ ಪ್ರಯಾಣ ಹೊರಟಾಗಲೂ ಜಿತೇಂದ್ರಿಯನಾಗಿ ಅವನು ಇಲ್ಲಿ ಸ್ನಾನಮಾಡಿದನು. ಇಲ್ಲಿಯೇ ಮಂತ್ರೇಶ್ವರನೆಂದು ಹೆಸರಾದ ಲಿಂಗವನ್ನೂ ಸ್ಥಾಪನೆಮಾಡಿದನು.

೧೭. ಅದರ ಉತ್ತರದಿಕ್ಕಿನಲ್ಲಿ ಕುಮುದ ಮತ್ತು ಉತ್ಪಲಗಳಿಂದ ಮಂಡಿತವಾಗಿ ರಮ್ಯವಾಗಿ ಸೊಗಸುತ್ತಿರುವ ಸರೋವರವಿರುವುದು. ಅಲ್ಲಿ ಸ್ನಾನವೂ, ದಾನವೂ ನಾನಾ ಫಲಗಳನ್ನು ನೀಡುವುದು ಮತ್ತು ಅದು ಬಹಳ ಉತ್ತಮವಾದುದು.

ಚೈತ್ರಶುಕ್ಲಚತುರ್ದಶ್ಯಾಂ ಯಾತ್ರಾ ಸಾಂವತ್ಸರೀ ಸ್ಮೃತಾ ।
ತತ್ರ ಸ್ನಾನೇನ ದಾನೇನ ಬ್ರಾಹ್ಮಣಾನಾಂ ಚ ಪೂಜನಾತ್ ।
ಅಕ್ಷಯಂ ಸ್ವರ್ಗಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೮ ॥
ಮಂತ್ರೇಶ್ವರಸ್ಯ ಮಹಿಮಾ ನ ಹಿ ಕೇನಾಪಿ ಶಕ್ಯತೇ ।
ಸಮ್ಯಗ್ವರ್ಣಯಿತುಂ ವಿಪ್ರ ಯ ಉತ್ತಮಫಲಪ್ರದಃ ।
ಮಂತ್ರೇಶ್ವರಸಮಂ ಲಿಂಗಂ ನ ಭೂತಂ ನ ಭವಿಷ್ಯತಿ ॥ ೧೯ ॥
ಸುಗಂಧಿಪುಷ್ಪಧೂಪಾದಿಕುಸುಮಾದ್ಯನುಲೇಪನೈಃ ।
ಪೂಜನೀಯಃ ಪ್ರಯತ್ನೇನ ಸರ್ವಕಾಮಾರ್ಥಸಿದ್ಧಿದಃ ॥ ೨೦ ॥
ಏವಂ ಕೃತೇ ನ ಸಂದೇಹೋ ಮುಕ್ತಿಸ್ತಸ್ಯ ಕರೇ ಸ್ಥಿತಾ ।
ತತ್ರೈವೋತ್ತರಭಾಗೇ ತು ಶೀತಲಾ ವರ್ತತೇऽನಘ ॥ ೨೧ ॥
ತಾಂ ಸಂಪೂಜ್ಯ ನರೋ ವಿದ್ವಾನ್ ಸರ್ವಪಾಪೈಃ ಪ್ರಮುಚ್ಯತೇ ।
ಸರ್ವದಾ ಪೂಜನಂ ತಸ್ಯಾಃ ಸೋಮವಾರೇ ವಿಶೇಷತಃ ।
ಕರ್ತವ್ಯಂ ಸುಪ್ರಯತ್ನೇನ ನೃಭಿಃ ಸರ್ವಾರ್ಥಸಿದ್ಧಯೇ ॥ ೨೨ ॥

---

೧೮. ಚೈತ್ರಶುಕ್ಲ ಚತುರ್ದಶಿಯಲ್ಲಿ ಅಲ್ಲಿ ವಾರ್ಷಿಕಯಾತ್ರೆ ನಡೆಯುವುದು. ಆಗ ಅಲ್ಲಿ ಸ್ನಾನಮಾಡುವುದರಿಂದಲೂ, ದಾನಕೊಡುವುದರಿಂದಲೂ, ಬ್ರಾಹ್ಮಣರನ್ನು ಪೂಜಿಸುವುದರಿಂದಲೂ ನರನು ಅಕ್ಷಯವಾದ ಸ್ವರ್ಗವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೧೯. ಎಲೈ ವಿಪ್ರನೇ! ಮಂತ್ರೇಶ್ವರನು ಉತ್ತಮಫಲಗಳನ್ನು ಕೊಡತಕ್ಕವನು. ಮಂತ್ರೇಶ್ವರನ ಮಹಿಮೆಯನ್ನು ಚೆನ್ನಾಗಿ ವರ್ಣಿಸುವುದಕ್ಕೆ ಯಾವನಿಂದಲೂ ಶಕ್ಯವಿಲ್ಲ. ಮಂತ್ರೇಶ್ವರನಿಗೆ ಸಮವಾದ ಲಿಂಗವು ಹಿಂದಿರಲಿಲ್ಲ. ಮುಂದೆ ಆಗುವುದಿಲ್ಲ.

೨೦. ಸುಗಂಧವುಳ್ಳ ಪುಷ್ಪ ಧೂಪ ಮೊದಲಾದುವುಗಳಿಂದಲೂ, ಕುಸುಮಾದಿ ಅನುಲೇಪನಗಳಿಂದಲೂ ಪ್ರಯತ್ನಪಟ್ಟು ಸಮಸ್ತ ಇಷ್ಟಾರ್ಥಗಳಲ್ಲಿಯೂ ಸಿದ್ಧಿಯನ್ನು ಉಂಟುಮಾಡುವ ಮಂತ್ರೇಶ್ವರನನ್ನು ಸಮಸ್ತರೂ ಪೂಜಿಸಬೇಕು.

೨೧. ಹೀಗೆ ಮಾಡಿದವನಿಗೆ ಮುಕ್ತಿಯು ಕೈಯಲ್ಲಿಯೆ ನೆಲಸಿರುವುದು. ಇದರಲ್ಲಿ ಸಂದೇಹವಿಲ್ಲವು. ಎಲೈ ಅನಘನೇ! ಅಲ್ಲಿಯೇ ಉತ್ತರದಿಕ್ಕಿನ ಭಾಗದಲ್ಲಿ 'ಶೀತಲಾ' ದೇವಿಯು ನೆಲಸಿರುವಳು.

೨೨. ವಿದ್ವಾಂಸನಾದ ನರನು ಅವಳನ್ನು ಪೂಜಿಸಿ ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಅವಳಿಗೆ ಸದಾಕಾಲವೂ ಪೂಜೆಮಾಡಬಹುದು. ಸೋಮವಾರದಲ್ಲಿ ವಿಶೇಷ. ಆದಿನ ನರರು ಸರ್ವಾರ್ಥಸಿದ್ಧಿಗಾಗಿ ಬಹು ಪ್ರಯತ್ನಪಟ್ಟು ಆ ದೇವಿಗೆ ವಿಶೇಷ ಪೂಜೆಯನ್ನು ಸಲ್ಲಿಸಬೇಕು.

ವಿಸ್ಫೋಟಕಾದಿಕಭಯೇ ನರೈಶ್ಚ ಸಮುಪಸ್ಥಿತೇ ।
ಕರ್ತವ್ಯಂ ಪೂಜನಂ ಸಮ್ಯಕ್ ರೋಗಾದಿಭಯನಾಶನಂ ॥ ೨೩ ॥
ತದುತ್ತರೇ ತು ತತ್ರೈವ ದೇವೀ ಬಂದೀತಿ ವಿಶ್ರುತಾ ।
ಯಸ್ಯಾಃ ಸ್ಮರಣಮಾತ್ರೇಣ ನಿಗಡಾದಿಭಯಂ ನ ಹಿ ॥ ೨೪ ॥
ರಾಜ್ಞಾ ಕ್ರುದ್ಧೇನ ಯೇ ಬದ್ಧಾಃ ಶೃಂಖಲಾನಿಗಡಾದಿಭಿಃ ।
ಬಂದೀಂ ಸಂಸ್ಮೃತ್ಯ ದೇವೀಂ ತು ಮುಕ್ತಾಃ ಸ್ಯುಸ್ತತ್ಕ್ಷಣಾದ್ಧಿ ತೇ ॥
ಯಾತ್ರಾ ತಸ್ಯ ಪ್ರಯತ್ನೇನ ಕರ್ತವ್ಯಾ ಯತ್ನತೋ ನರೈಃ ।
ಮಂಗಲೇ ಹಿ ವಿಶೇಷೇಣ ಸರ್ವಕಾಮಾರ್ಥಸಿದ್ಧಿದಾ ॥ ೨೬ ॥
ಗಂಧೈಃ ಪುಷ್ಪೈಸ್ತಥಾ ಧೂಪೈರ್ದೀಪೈರಪಿ ಚ ಸುವ್ರತ ।
ನೈವೇದ್ಯೈರ್ವಿವಿಧೈರ್ವಾಪಿ ಪೂಜನೀಯಾ ಪ್ರಯತ್ನತಃ ॥ ೨೭ ॥
ಬಂದೀಪ್ರೀತ್ಯೈ ಮುನಿಶ್ರೇಷ್ಠ ದೇಯಂ ಬ್ರಾಹ್ಮಣಭೋಜನಂ ।
ಏವಂ ಕೃತೇ ನ ಸಂದೇಹಃ ಸರ್ವಾನ್ಕಾಮಾನವಾಪ್ನುಯಾತ್ ॥ ೨೮ ॥

---

೨೩. ಸಿಡುಬು ಮೊದಲಾದ ಭಯವುಂಟಾದಲ್ಲಿ ನರರು ಶೀತಲಾದೇವಿಗೆ ಚೆನ್ನಾಗಿ ಪೂಜೆಮಾಡಬೇಕು. ಆ ಪೂಜೆಯು ರೋಗಾದಿ ಭಯಗಳನ್ನು ನಾಶಗೊಳಿಸುವುದು.

೨೪. ಅಲ್ಲಿಂದ ಉತ್ತರದಲ್ಲಿ 'ಬಂದೀ' ಎಂಬ ಪ್ರಸಿದ್ಧಳಾದ ದೇವಿಯು ನೆಲಸಿರುವಳು. ಅವಳ ಸ್ಮರಣೆಯ ಮಾತ್ರದಿಂದಲೇ ನಿಗಡ ಮೊದಲಾದವುಗಳ ಭಯವು ಇಲ್ಲವಾಗುವುದು.

೨೫. ಕೃದ್ಧನಾದ ರಾಜನಿಂದ ಯಾರು, ಬೇಡಿ ಸಂಕೋಲೆ ಮೊದಲಾದವುಗಳಿಂದ ಬಂಧಿಸಲ್ಪಟ್ಟಿರುವರೋ ಅವರು ಬಂದೀದೇವಿಯನ್ನು ಸ್ಮರಿಸಿದರೆ ತಕ್ಷಣವೇ ಮುಕ್ತರಾಗುವರು.

೨೬. ನರರು ಪ್ರಯತ್ನಪೂರ್ವಕವಾಗಿ ಅವಳ ಯಾತ್ರೆಯನ್ನು ನಡೆಸಬೇಕು. ವಿಶೇಷವಾಗಿ ಮಂಗಳವಾರದ ದಿನ ಅವಳು ಸಮಸ್ತ ಇಷ್ಟಾರ್ಥಗಳ ಸಿದ್ಧಿಯನ್ನೂ ಕೊಡುವವಳಾಗುತ್ತಾಳೆ.

೨೭. ಎಲೈ ಸುವ್ರತನೇ! ಗಂಧಗಳಿಂದಲೂ, ಪುಷ್ಪಗಳಿಂದಲೂ, ಹಾಗೆಯೇ ಧೂಪದೀಪಗಳಿಂದಲೂ, ವಿಧ ವಿಧವಾದ ನೈವೇದ್ಯಗಳಿಂದಲೂ ಆ ದೇವಿಯನ್ನು ಪ್ರಯತ್ನಪಟ್ಟು ಪೂಜಿಸಬೇಕು.

೨೮. ಎಲೈ ಮುನಿಶ್ರೇಷ್ಠನೇ! ಬಂದೀದೇವಿಯ ಪ್ರೀತಿಗಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಈ ರೀತಿಯಾಗಿ ಮಾಡುವವನು ಸರ್ವಕಾಮಗಳನ್ನೂ ಪಡೆಯುತ್ತಾನೆಂಬುದರಲ್ಲಿ ಸಂದೇಹವಿಲ್ಲವು.

ತದುತ್ತರಸ್ಮಿಂಸ್ತತ್ರೈವ ಚುಡಕೀ ಭುವಿ ಕೀರ್ತಿತಾ ।
ವರ್ತತೇ ಪರಮಾ ಸಿದ್ಧಿರೂಪಿಣೀ ಸ್ಮರಣಾನ್ನೃಣಾಂ ॥ ೨೯ ॥
ಸುಸಂದಿಗ್ಧೇಷು ಕಾರ್ಯೇಷು ಭಯೇ ಚ ಸಮುಪಸ್ಥಿತೇ ।
ಯಸ್ಯಾಃ ಸ್ಮರಣತೋ ನೄಣಾಂ ಸರ್ವಸಿದ್ಧಿಃ ಪ್ರಜಾಯತೇ ॥ ೩೦ ॥
ಅಗ್ರೇ ತಸ್ಯಾಃ ಸದಾ ಕಾರ್ಯೋ ನೃಭಿರಂಗುಷ್ಠತೋ ಧ್ವನಿಃ ।
ದೀಪದಾನಂ ಪ್ರಯತ್ನೇನ ಕರ್ತವ್ಯಂ ನಿಯತಾತ್ಮಭಿಃ ॥ ೩೧ ॥
ಸರ್ವಾಭೀಷ್ಟಪ್ರದಂ ನೄಣಾಂ ದೀಪದಾನಂ ಪ್ರಶಸ್ಯತೇ ।
ಚತುರ್ದಶ್ಯಾಂ ಚತುರ್ದಶ್ಯಾಂ ತಸ್ಯಾ ಯಾತ್ರಾ ವಿನಿರ್ಮಿತಾ ॥ ೩೨ ॥
ತತಃ ಪೂರ್ವದಿಶಾಭಾಗೇ ವರ್ತತೇ ತೀರ್ಥಮುತ್ತಮಂ ।
ಮಹಾರತ್ನ ಇತಿಖ್ಯಾತಂ ಸರ್ವತೀರ್ಥೋತ್ತಮೋತ್ತಮಂ ॥ ೩೩ ॥
ಯತ್ರ ಸ್ನಾನೇನ ದಾನೇನ ಪೂಜಯಾ ಚ ದ್ವಿಜನ್ಮನಾಂ ।
ಸರ್ವಕಾಮಾರ್ಥಸಿದ್ಧಿಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥ ೩೪ ॥
ಭಾದ್ರೇ ಕೃಷ್ಣಚತುರ್ದಶ್ಯಾಂ ಯಾತ್ರಾ ಸಾಂವತ್ಸರೀ ಸ್ಮೃತಾ ।
ಯಾತ್ರಾಽಸ್ತೇ ಕಿಲ ಮುಖ್ಯಾಽಸ್ಯಾ ಮಹಾರತ್ನ ಇತಿ ಸ್ಮೃತಾ ॥ ೩೫ ॥

---

೨೯. ಅದಕ್ಕೆ ಉತ್ತರಭಾಗದ ಭೂಮಿಯಲ್ಲಿಯೇ 'ಚುಡಕೀ' ಎಂಬ ಹೆಸರುವಾಸಿಯಾದ ದೇವಿಯಿದ್ದಾಳೆ. ಸ್ಮರಿಸಿದಮಾತ್ರದಿಂದಲೇ ಅವಳು ನರರಿಗೆ ಪರಮಸಿದ್ಧಿಸ್ವರೂಪಿಣಿಯಾಗುತ್ತಾಳೆ.

೩೦. ಕಾರ್ಯಗಳು ಬಹು ಸಂದಿಗ್ಧವಾದಲ್ಲಿ, ಭಯಬಂದಿರುವಲ್ಲಿ ಅವಳ ಸ್ಮರಣೆಯಿಂದ ನರರಿಗೆ ಸರ್ವಸಿದ್ಧಿಯೂ ಉಂಟಾಗುತ್ತದೆ.

೩೧. ಅವಳ ಎದುರಿನಲ್ಲಿ ನರರು ಸದಾ ಅಂಗುಷ್ಠದಿಂದ ಧ್ವನಿಮಾಡಬೇಕು. ನಿಯತಾತ್ಮರಾಗಿ ಪ್ರಯತ್ನಪಟ್ಟು ದೀಪದಾನವನ್ನು ಮಾಡಬೇಕು.

೩೨. ದೀಪದಾನವು ನರರಿಗೆ ಸರ್ವಾಭೀಷ್ಟಗಳನ್ನೂ ಕೊಡತಕ್ಕುದಾಗಿ ಪ್ರಶಸ್ತವಾಗಿರುವುದು. ಪ್ರತಿ ಚತುರ್ದಶಿಯಲ್ಲಿಯೂ ಆ ದೇವಿಗೆ ಯಾತ್ರೆ ನಡೆಯುವುದು.

೩೩. ಅಲ್ಲಿಂದ ಪೂರ್ವದಿಕ್ಕಿನಲ್ಲಿ ಮಹಾರತ್ನವೆಂದು ಖ್ಯಾತಿಹೊಂದಿದ ಉತ್ತಮತೀರ್ಥವಿರುವುದು. ಅದು ಸರ್ವತೀರ್ಥಗಳಲ್ಲೂ ಉತ್ತಮೋತ್ತಮವಾಗಿರುವುದು.

೩೪. ಅಲ್ಲಿ ಸ್ನಾನದಿಂದಲೂ, ದಾನದಿಂದಲೂ, ಬ್ರಾಹ್ಮಣಪೂಜೆಯಿಂದಲೂ ಸರ್ವಕಾಮಾರ್ಥಸಿದ್ಧಿಯುಂಟಾಗುತ್ತದೆ. ಈ ವಿಷಯದಲ್ಲಿ ವಿಚಾರಮಾಡ ತಕ್ಕದ್ದಲ್ಲ.

೩೫. ಇಲ್ಲಿ ಭಾದ್ರಪದಮಾಸದ ಕೃಷ್ಣಚತುರ್ದಶೀ ದಿನ ಪ್ರತಿ ಸಂವತ್ಸರದ

**ಮಹಾರತ್ನ ಇತಿ ಖ್ಯಾತಂ ತಸ್ಮಾತ್ತೀರ್ಥಮನುತ್ತಮಂ ।**
**ತತ್ರ ದಾನಂ ಪ್ರಕರ್ತವ್ಯಂ ದ್ವಿಜಸಂತೋಷಕಾರಕಂ ॥ ೩೬ ॥**
**ನಾರೀಭಿರಪಿ ವಿಪ್ರರ್ಷೇ ಕರ್ತವ್ಯೋ ಜಾಗರೋತ್ಸವಃ ।**
**ವೀರ್ಯಸೌಭಾಗ್ಯಸಂಪನ್ನಸರ್ವಸೌಖ್ಯಾಯ ಸಂಪದಾ ।**
**ಸ್ನಾನಂ ತತ್ರ ಪ್ರಯತ್ನೇನ ಕರ್ತವ್ಯಂ ಶ್ರದ್ಧಯಾ ನರೈಃ ॥ ೩೭ ॥**
**ತತೋ ನೈಋತ್ಯದಿಗ್ಭಾಗೇ ದುರ್ಭರಾಖ್ಯಂ ಸರೋ ಭುವಂ ।**
**ವರ್ತತೇ ಸುಕೃತೋದಾರಂ ಮಹಾಭರಸರಸ್ತಥಾ ॥ ೩೮ ॥**
**ತತ್ರ ಸ್ನಾನಾದವಾಪ್ನೋತಿ ಸದಾ ಸ್ವರ್ಗಪದಂ ನರಃ ।**
**ಧನಂ ಬಹುವಿಧಂ ದೇಯಂ ವಾಸಾಂಸಿ ವಿವಿಧಾನಿ ಚ ॥ ೩೯ ॥**
**ಶಿವಪೂಜಾ ಪ್ರಕರ್ತವ್ಯಾ ಸ್ನಾತ್ವಾ ಕುಂಡದ್ವಯೋ ನರೈಃ ।**
**ನಾನಾವಿಧೇನ ಭಾವೇನ ಭಕ್ತ್ಯಾ ಪರಮಯಾ ಯುತೈಃ ॥ ೪೦ ॥**
**ಗಂಧಾದಿಭಿಃ ಶುಭೈಃ ಪುಷ್ಪೈರರ್ಚನೀಯೋ ಮಹೇಶ್ವರಃ ।**
**ನೀಲಕಂಠೋಽಂಧಕಾರಾತಿರಾರಾಧ್ಯೋ ಯೋಗಿನಾಮಪಿ ॥ ೪೧ ॥**

---

ಯಾತ್ರೆ ನಡೆಯುವುದೆಂದು ಹೇಳಿದೆ. ಅದಕ್ಕೆ ಮುಖ್ಯಳಾಗಿ ಅಲ್ಲಿ 'ಮಹಾರತ್ನಾ' ಎಂದು ಪ್ರಸಿದ್ಧಳಾದ ದೇವಿಯಿರುವಳು.

೩೬. ಆದರಿಂದ ಆ ತೀರ್ಥವು ಮಹಾರತ್ನವೆಂದು ಪ್ರಖ್ಯಾತವಾಗಿರುವುದು. ಅಲ್ಲಿ ಬ್ರಾಹ್ಮಣರಿಗೆ ಸಂತೋಷವನ್ನುಂಟುಮಾಡುವ ದಾನವನ್ನು ಮಾಡಬೇಕು.

೩೭. ಎಲೈ ವಿಪ್ರರ್ಷಿಯೆ! ನಾರಿಯರು ಕೂಡ, ಈ ತೀರ್ಥದಲ್ಲಿ ಜಾಗರೋತ್ಸವವನ್ನು ಮಾಡಬೇಕು. ವೀರ್ಯಸೌಭಾಗ್ಯಗಳಿಂದೊಡಗೂಡಿದ ಸರ್ವಸೌಖ್ಯವೂ ದೊರೆಯಲೆಂದು ನರರು ಬಹು ಪ್ರಯತ್ನಪಟ್ಟು ಶ್ರದ್ಧೆಯಿಂದ ಅಲ್ಲಿ ಸ್ನಾನಮಾಡಬೇಕು.

೩೮. ಅಲ್ಲಿಂದ ನೈಋತ್ಯದಿಕ್ಕಿನಲ್ಲಿ ದುರ್ಭರವೆಂಬ ಹೆಸರಿನ ಶುಭಕರವಾದ ಸರೋವರವೊಂದಿದೆ. ಹಾಗೆಯೇ ಪುಣ್ಯದಿಂದ ಮೇಲಾದ ಮಹಾಭರಸರೋವರವೂ ಅಲ್ಲಿಯೆ ನೆಲಸಿರುವುದು.

೩೯. ಅಲ್ಲಿ ಸ್ನಾನಮಾಡುವುದರಿಂದ ನರನು ಸದಾ ಸ್ವರ್ಗಪದವಿಯನ್ನು ಪಡೆಯುತ್ತಾನೆ. ಬಹುವಿಧವಾದ ಧನವನ್ನೂ, ವಿಧವಿಧವಾದ ಬಟ್ಟೆಗಳನ್ನೂ ಅಲ್ಲಿ ದಾನಮಾಡಬೇಕು.

೪೦. ಮಾನವರು ಈ ಎರಡು ಕುಂಡಗಳಲ್ಲಿಯೂ ಸ್ನಾನಮಾಡಿ ನಾನಾವಿಧ ಭಾವಗಳಿಂದಲೂ ಪರಮಭಕ್ತಿಯಿಂದಲೂ ಕೂಡಿದವರಾಗಿ ಶಿವಪೂಜೆಯನ್ನು ಮಾಡಬೇಕು.

೪೧. ಗಂಧಾದಿಗಳಿಂದಲೂ, ಶುಭಕರವಾದ ಪುಷ್ಪಗಳಿಂದಲೂ, ಮಹೇಶ್ವರ

ಇತಿ ಧ್ಯಾತ್ವಾ ಶಿವಂ ಸಾರ್ಧಂ ನಿಷ್ಪಾಪಂ ಪ್ರಯತೋ ನರಃ ।
ಸರ್ವಕಾಮಾನವಾಪ್ಯಾಶು ಶಿವಲೋಕೇ ವಸೇತ್ಸದಾ ॥ ೪೨ ॥
ಏವಂ ಕೃತ್ವಾ ನರೋ ವಿಪ್ರ ಸರ್ವಪಾಪೈಃ ಪ್ರಮುಚ್ಯತೇ ।
ಮಹಾಭರೇ ವರೇ ತೀರ್ಥೇ ತಥಾ ದುರ್ಭರಸಂಜ್ಞಕೇ ॥ ೪೩ ॥
ಭಾದ್ರಕೃಷ್ಣಚತುರ್ದಶ್ಯಾಂ ಯಃ ಕುರ್ಯಾಚ್ಛ್ರದ್ಧಯಾನ್ವಿತಃ ।
ಶಿವಪೂಜಾಂ ಚ ವಿಧಿವದ್ದ್ವಿಜಪೂಜಾಂ ವಿಶೇಷತಃ ॥ ೪೪ ॥
ಯಃ ಕರೋತಿ ನರೋ ಭಕ್ತ್ಯಾ ಶಿವಲೋಕೇ ಸ ಸಂವಸೇತ್ ।
ಏವಂ ಕುರ್ವನ್ ನರೋ ವಿದ್ವಾನ್ನ ಮುಹ್ಯತಿ ಕದಾಚನ ॥ ೪೫ ॥
ವಿಷ್ಣುರುದ್ರೌ ಚ ತಸ್ಯಾತಿಸುಪ್ರಸನ್ನೌ ಸನಾತನೌ ।
ತಯೋಃ ಸ್ಮರಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೪೬ ॥
ಅತಃ ಕಿಂ ಬಹುನೋಕ್ತೇನ ವಿಪ್ರ ತೀರ್ಥಮನುತ್ತಮಂ ।
ಸರ್ವಪಾಪೌಘಶಮನಂ ಸರ್ವಾಭೀಷ್ಟಕರಂ ಸದಾ ॥ ೪೭ ॥

---

ನನ್ನು ಅರ್ಚಿಸಬೇಕು. ಅಂಧಕಾರಾತಿಯಾದ (ಅಂಧಕಾಸುರನ ಶತ್ರುವಾದ) ನೀಲಕಂಠನು ಯೋಗಿಗಳಿಂದ ಆರಾಧಿಸಲ್ಪಡತಕ್ಕವನಾಗಿರುವನು.

೪೨. ಆತ್ಮನಿಗ್ರಹವನ್ನು ಮಾಡಿಕೊಂಡವನಾದ ಮಾನವನು ಪಾಪರಹಿತನಾದ ಶಿವನನ್ನು ಈ ರೀತಿಯಾಗಿ ಧ್ಯಾನಿಸಿ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಶಿವಲೋಕದಲ್ಲಿ ಸದಾ ವಾಸಮಾಡುತ್ತಾನೆ.

೪೩. ಎಲೈ ವಿಪ್ರನೇ! ಮಾನವನು ಶ್ರೇಷ್ಠತೀರ್ಥವಾದ ಮಹಾಭರದಲ್ಲಿಯೂ ಹಾಗೆಯೇ ದುರ್ಭರತೀರ್ಥದಲ್ಲಿಯೂ ಹೀಗೆ ಪೂಜಾಪುರಸ್ಕಾರಗಳನ್ನು ಮಾಡಿ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

೪೪–೪೫. ಭಾದ್ರಪದ ಕೃಷ್ಣಚತುರ್ದಶಿಯಲ್ಲಿ ಶ್ರದ್ಧಾವಂತನಾಗಿ ಯಾವನು ಶಿವಪೂಜೆಯನ್ನು ವಿಧಿವತ್ತಾಗಿ ಮಾಡುವನೋ, ಯಾವನು ಭಕ್ತಿಯಿಂದ ವಿಶೇಷವಾಗಿ ಬ್ರಾಹ್ಮಣಪೂಜೆಯನ್ನು ಮಾಡುವನೋ ಅವನು ಶಿವಲೋಕದಲ್ಲಿ ವಾಸಮಾಡುತ್ತಾನೆ. ಹೀಗೆ ಮಾಡುವ ವಿದ್ವಾಂಸನು ಎಂದೆಂದಿಗೂ ಈ ಭವದಲ್ಲಿ ಮೋಹವನ್ನು ಹೊಂದುವುದಿಲ್ಲ.

೪೬–೪೭. ಸನಾತನರಾದ ವಿಷ್ಣುರುದ್ರರಿಬ್ಬರೂ ಅವನಿಗೆ ಬಹಳ ಪ್ರಸನ್ನರಾಗುತ್ತಾರೆ. ಅವರಿಬ್ಬರನ್ನೂ ಸ್ಮರಣೆಮಾಡಿದಮಾತ್ರದಿಂದಲೇ ನರನು ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಆದುದರಿಂದ, ಹೆಚ್ಚು ಹೇಳುವುದರಿಂದೇನು ಪ್ರಯೋಜನ? ಎಲೈ ವಿಪ್ರನೇ! ಆ ತೀರ್ಥಕ್ಕಿಂತ ಮೇಲಾದುದು ಮತ್ತೊಂದಿಲ್ಲವು. ಅದು ಸಮಸ್ತಪಾಪಸಮೂಹವನ್ನು ಶಮನಗೊಳಿಸುವುದು; ಸರ್ವಾಭೀಷ್ಟಫಲಗಳನ್ನೂ ನೆರವೇರಿಸಿಕೊಡುವುದು.

ಅತಃ ಪರಂ ಪ್ರವಕ್ಷ್ಯಾಮಿ ತೀರ್ಥಮನ್ಯಚ್ಛುಭಾವಹಂ ।
ಯತ್ರ ಯಾತ್ರಾ ತಥಾ ದಾನಂ ವಿನಾ ಭಾಗ್ಯಂ ನ ಸಂಭವೇತ್ ॥ ೪೮ ॥
ಈಶಾನೇ ದುರ್ಭರಸ್ಥಾನಾನ್ಮಹಾವಿದ್ಯಾಭಿಧಂ ಮಹತ್ ।
ತಸ್ಯ ದರ್ಶನತೋ ನೄಣಾಂ ಸಿದ್ಧಯಃ ಸ್ಯುಃ ಕರೇ ಸ್ಥಿತಾಃ ॥ ೪೯ ॥
ತದಗ್ರೇ ಸರಸಿ ಸ್ನಾತ್ವಾ ಮಹಾವಿದ್ಯಾಂ ತು ಯೋ ನರಃ ।
ಪಶ್ಯತಿ ಶ್ರದ್ಧಯಾ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೫೦ ॥
ಸಿದ್ಧಪೀಠಂ ತಥಾ ಖ್ಯಾತಂ ಸಮ್ಯಕ್ಪ್ರತ್ಯಯಕಾರಕಂ ।
ತತ್ರ ಪೂಜಾ ವಿಧಾತವ್ಯಾ ಭಕ್ತ್ಯಾ ಪರಮಯಾ ದ್ವಿಜ ॥ ೫೧ ॥
ಮಂತ್ರಂ ಯಃ ಶ್ರದ್ಧಯಾ ವಿಪ್ರ ಶೈವಂ ಶಾಕ್ತಮಥಾಪಿ ವಾ ।
ಗಾಣಾಪತ್ಯಂ ವೈಷ್ಣವಂ ವಾ ತತ್ರ ಯಃ ಪ್ರಯತೋ ನರಃ ॥ ೫೨ ॥
ಏಕಾಗ್ರಮಾನಸೋ ವಿದ್ವನ್ನಾರಾಧ್ಯಾವರ್ತಯೇತ್ಸದಾ ।
ತಸ್ಯ ಸಿದ್ಧಿರ್ಭವೇನ್ನಿತ್ಯಂ ಚಮತ್ಕಾರೋ ಭವೇದ್ದ್ವಿಜ ॥ ೫೩ ॥

---

೪೮. ಇಲ್ಲಿಂದ ಮುಂದೆ ಶುಭವನ್ನುಂಟುಮಾಡುವ ಬೇರೊಂದು ತೀರ್ಥವನ್ನು ಕುರಿತು ವಿವರಿಸುತ್ತೇನೆ. ಅಲ್ಲಿ ಯಾತ್ರೆ ಮತ್ತು ದಾನಗಳನ್ನು ಮಾಡಿದಲ್ಲದೆ ಭಾಗ್ಯವು ದೊರೆಯುವುದಿಲ್ಲ.

೪೯. ದುರ್ಭರತೀರ್ಥಕ್ಕೆ ಈಶಾನ್ಯದಿಕ್ಕಿನಲ್ಲಿ ಮಹಾವಿದ್ಯವೆಂಬ ಹೆಸರಿನ ಮಹತ್ತರವಾದ ಸ್ಥಾನವಿರುವುದು. ಅದರ ದರ್ಶನದಿಂದಲೇ ನರರಿಗೆ ಸಿದ್ಧಿಗಳು ಕೈಯಲ್ಲಿ ನೆಲಸಿ ನಿಲ್ಲುವುವು.

೫೦. ಅದರೆದುರಿಗಿರುವ ಸರೋವರದಲ್ಲಿ ಸ್ನಾನಮಾಡಿ ಮಹಾವಿದ್ಯೆಯನ್ನು ಯಾವ ನರನು ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ದರ್ಶನಮಾಡುತ್ತಾನೆಯೋ ಅವನು ಪರಮಗತಿಯನ್ನೈದುತ್ತಾನೆ.

೫೧. ಅದೇರೀತಿ ಸಿದ್ಧಪೀಠವು ಪ್ರಖ್ಯಾತವಾಗಿರುವುದು. ಅದು ಬಹಳ ನಂಬಿಕೆಯುಂಟುಮಾಡುವಂತಹುದೆನಿಸಿಕೊಂಡಿದೆ. ಅಯ್ಯಾ ದ್ವಿಜನೇ! ಅಲ್ಲಿ ಪರಮಭಕ್ತಿಯಿಂದ ಪೂಜೆಮಾಡಬೇಕು.

೫೨–೫೩. ಎಲೈ ವಿಪ್ರನೇ! ಯಾವನು ಶೈವ, ಶಾಕ್ತ, ಗಾಣಾಪತ್ಯ, ಅಥವಾ ವೈಷ್ಣವ ಮಂತ್ರಗಳಲ್ಲಿ ಯಾವುದನ್ನೇ ಆದರೂ ಅಲ್ಲಿ ಇಂದ್ರಿಯನಿಗ್ರಹಮಾಡಿಕೊಂಡು ಮನಸ್ಸನ್ನು ಏಕಾಗ್ರವಾಗಿಟ್ಟುಕೊಂಡು ಶ್ರದ್ಧೆಯಿಂದ ಕೂಡಿದವನಾಗಿ ಆರಾಧಿಸಿ ಸದಾ ಆವರ್ತನೆಮಾಡುತ್ತಿರುತ್ತಾನೆಯೋ ಅವನಿಗೆ ನಿಶ್ಚಯವಾಗಿಯೂ ಸಿದ್ಧಿಯುಂಟಾಗುವುದು. ಎಲೈ ದ್ವಿಜನೇ! ಈ ಬಗೆಯ ಚಮತ್ಕಾರವು ಅಲ್ಲಿ ನೆಲಸಿರುತ್ತದೆ.

ತಸ್ಮಾದತ್ರ ಪ್ರಕರ್ತವ್ಯಂ ಜಪಾದಿಕಮತಂದ್ರಿತೈಃ ।
ಅಷ್ಟಮ್ಯಾಂ ಚ ನವಮ್ಯಾಂ ಚ ಯಾತ್ರಾ ಸ್ಯಾತ್ಪ್ರತಿಮಾಸಿಕೀ ॥ ೫೪ ॥
ದೇಯಾನ್ಯನ್ನಾನಿ ಬಹುಶೋ ನಾನಾವಿಧಫಲಾನಿ ಚ ।
ಕ್ಷೀರೇಣ ಸ್ನಪನಂ ಕಾರ್ಯಂ ಪೂಜನೀಯಾ ಪ್ರಯತ್ನತಃ ॥ ೫೫ ॥
ಉಚ್ಚಾಟನಾದೀನ್ಯಪಿ ಚ ಮೋಹನಾದಿ ವಿಶೇಷತಃ ।
ಅತ್ರ ಸ್ಥಾನೇ ವಿಶೇಷೇಣ ದುಷ್ಟಮಂತ್ರೋಽಪಿ ಸಿದ್ಧ್ಯತಿ ॥ ೫೬ ॥
ಸಿದ್ಧಸ್ಥಾನೇ ಪರಂ ಮೋಕ್ಷಂ ವಶೀಕರಣಮುತ್ತಮಂ ।
ಜಪೋ ಹೋಮಸ್ತಥಾ ದಾನಂ ಸರ್ವಮಕ್ಷಯತಾಂ ವ್ರಜೇತ್ ॥ ೫೭ ॥
ಆಶ್ವಿನೇ ಶುಕ್ಲಪಕ್ಷಸ್ಯ ನವರಾತ್ರಿಷು ಸುವ್ರತ ।
ಯತ್ರ ಗತ್ವಾ ನರೋ ವಿಪ್ರ ಸರ್ವಪಾಪೈಃ ಪ್ರಮುಚ್ಯತೇ ॥ ೫೮ ॥
ಯದಾ ಪೂರ್ವಂ ವಿನಿರ್ಜಿತ್ಯ ರಾವಣಂ ಲೋಕರಾವಣಂ ।
ಸಮಾಗತೋ ರಘುಪತಿಃ ಸೀತಾಲಕ್ಷ್ಮಣಸಂಯುತಃ ॥ ೫೯ ॥
ಯತ್ರ ಗತ್ವಾ ಸದಾ ವೀರೋ ಭರತೋ ರಾಮಕಾಂಕ್ಷಯಾ ।
ಸ್ಥಿತಃ ಸಾನುಚರಃ ಶ್ರೀಮಾಂಛ್ರಿಯಾ ಪರಮಯಾ ಯುತಃ ॥ ೬೦ ॥

---

೫೪. ಆದುದರಿಂದ ಇಲ್ಲಿ ಮಾನವರು ಆಲಸ್ಯವಿಲ್ಲದವರಾಗಿ ಜಪಾದಿಗಳನ್ನು ನಡಸಬೇಕು. ಪ್ರತಿತಿಂಗಳೂ ಅಷ್ಟಮೀ ನವಮಿಗಳಲ್ಲಿ ಇಲ್ಲಿ ಯಾತ್ರೆಯು ನಡೆಯುವುದು.

೫೫. ಇಲ್ಲಿ ಬಹುವಾಗಿ ಅನ್ನದಾನಮಾಡಬೇಕು. ನಾನಾ ವಿಧ ಫಲಗಳನ್ನೂ ದಾನಕೊಡಬೇಕು. ಹಾಲಿನಿಂದ ಅಭಿಷೇಕಮಾಡಬೇಕು. ಪ್ರಯತ್ನಪೂರ್ವಕ ವಾಗಿ ಪೂಜೆ ನಡಸಬೇಕು.

೫೬. ಉಚ್ಚಾಟನ, ಮೋಹನ ಮೊದಲಾದ ವಿದ್ಯೆಗಳು ವಿಶೇಷವಾಗಿ ಇಲ್ಲಿ ಸಿದ್ಧಿಸುತ್ತವೆ. ಈ ಸ್ಥಾನದಲ್ಲಿ ದುಷ್ಟಮಂತ್ರವೇ ಆದರೂ ಸಿದ್ಧಿಸುತ್ತದೆ. ಇದು ಇಲ್ಲಿನ ವಿಶೇಷ.

೫೭. ಸಿದ್ಧಸ್ಥಾನದಲ್ಲಿ ಪರಮಮೋಕ್ಷವೂ, ಉತ್ತಮವಾದ ವಶೀಕರಣವೂ, ಜಪ, ಹೋಮ, ದಾನಗಳೂ—ಎಲ್ಲವೂ ಅಕ್ಷಯವಾಗುತ್ತವೆ.

೫೮. ಎಲೈ ಸುವ್ರತನಾದ ವಿಪ್ರನೇ! ಆಶ್ವೀಜಮಾಸದ ಶುಕ್ಲಪಕ್ಷದ ನವರಾತ್ರಿಯ ದಿನಗಳಲ್ಲಿ ಮನುಷ್ಯನು ಅಲ್ಲಿಗೆ ಹೋಗಿ ಸರ್ವಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ.

೫೯–೬೧. ಪೂರ್ವದಲ್ಲಿ ರಘುಪತಿಯು ಲೋಕಗಳನ್ನೆಲ್ಲ ಪೀಡಿಸುತ್ತಿದ್ದ ರಾವಣನನ್ನು ಜಯಿಸಿ ಸೀತಾಲಕ್ಷ್ಮಣಸಮೇತನಾಗಿ ಹಿಂದಿರುಗಿಬಂದಾಗ ವೀರ ನಾದ ಭರತನು ಅನುಚರರಿಂದೊಡಗೂಡಿ ಪರಮಸಂಪತ್ಸಮೇತನಾಗಿ ಪಾದಚಾರಿ

ತತ್ಪ್ರಾಗಮುತ್ಸುರಗವೀ ಪ್ರಾದುರ್ಭೂತಾಸ್ರವಸ್ತನೀ ।
ತತ್ ಸ್ತನೇಭ್ಯಃ ಪ್ರಸುಸ್ರಾವ ದುಗ್ಧಂ ಬಹುಗುಣಾಧಿಕಂ ॥ ೬೧ ॥
ತದ್ಭೂಮಿಪತಿತಂ ದುಗ್ಧಂ ದೃಷ್ಟ್ವಾ ವಾನರರಾಕ್ಷಸಾಃ ।
ವಿಸ್ಮಯಂ ಪರಮಂ ಜಗ್ಮುಃ ಪಪ್ರಚ್ಛುಸ್ತೇ ಚರಾಚರಂ ॥ ೬೨ ॥
ಕಿಮೇತದಿತಿ ರಾಜೇಂದ್ರ ತಾನುವಾಚ ರಘೂದ್ವಹಃ ।
ವಸಿಷ್ಠೋ ವೇತ್ತಿ ತತ್ಸರ್ವಂ ಪೃಚ್ಛಾಮಸ್ತಂ ಮುನಿಂ ವಯಂ ॥ ೬೩ ॥
ಇತ್ಯುಕ್ತಾಸ್ತು ತತಃ ಸರ್ವೇ ವಸಿಷ್ಠಪ್ರಮುಖೇ ಸ್ಥಿತಾಃ ।
ತೇ ಪಪ್ರಚ್ಛುಃ ಪ್ರಾಂಜಲಯಃ ಕೃತ್ವಾ ಚಾಗ್ರೇಸರಂ ನೃಪಂ ॥ ೬೪ ॥
ವಸಿಷ್ಠೋಽಪಿ ಕ್ಷಣಂ ಧ್ಯಾತ್ವಾ ತಮುವಾಚ ನಿರಾಕುಲಂ ।
ರಾಘವಂ ಪ್ರತಿ ಸಂಬೋಧ್ಯ ಸರ್ವೇಷಾಮಗ್ರತೋ ಮುನಿಃ ॥ ೬೫ ॥

ವಸಿಷ್ಠ ಉವಾಚ :—

ಶೃಣು ರಾಮ ಮಹಾಬಾಹೋ ಕಾಮಧೇನುರಿಯಂ ಶುಭಾ ।
ಸಮಾಗತಾ ತವ ಸ್ನೇಹಾತ್ ಪ್ರಸ್ರವಂತೀ ಸ್ತನಾತ್ ಪಯಃ ॥ ೬೬ ॥

---

ಯಾಗಿ ಅಲ್ಲಿಗೆ ಹೋಗಿ ಶ್ರೀರಾಮನನ್ನೇ ಎದುರುನೋಡುತ್ತಾ ನಿಂತನು. ಅಲ್ಲಿ ಕಾಮಧೇನುವು ಬಂದು ಮೊಲೆಗಳಿಂದ ಹಾಲು ಸುರಿಸತೊಡಗಿತು. ಆ ಕಾಮಧೇನುವಿನ ಮೊಲೆಗಳಿಂದ ಬಹುಗುಣಗಳಿಂದ ಕೂಡಿ ಶ್ರೇಷ್ಠವಾದ ಹಾಲು ಹೊರ ಹರಿಯಿತು.

೬೨–೬೩. ಭೂಮಿಗೆ ಬಿದ್ದ ಆ ಹಾಲನ್ನು ಕಂಡು ವಾನರರೂ ರಾಕ್ಷಸರೂ ಪರಮವಿಸ್ಮಯವನ್ನೈದಿದರು. ಅವರೆಲ್ಲರೂ ಚರಾಚರಸ್ವರೂಪಿಯಾದ ಶ್ರೀರಾಮನನ್ನು 'ರಾಜೇಂದ್ರಾ, ಇದೇನು?' ಎಂದು ಪ್ರಶ್ನೆಮಾಡಿದರು. ರಘುನಂದನನು ಅವರನ್ನು ಕುರಿತು, 'ಅದೆಲ್ಲವನ್ನೂ ವಸಿಷ್ಠನು ಬಲ್ಲನು. ನಾವು ಆ ಮುನಿಯನ್ನು ಕೇಳೋಣ' ಎಂದನು.

೬೪. ಹೀಗೆ ಹೇಳಲ್ಪಟ್ಟವರಾಗಿ ಅವರು ವಸಿಷ್ಠನೆದುರಿಗೆ ಬಂದು ನಿಂತರು. ದೊರೆಯನ್ನು ಪುರಸ್ಕರಿಸಿಕೊಂಡು ಅವರೆಲ್ಲರೂ ಕೈಮುಗಿದುಕೊಂಡು ಪ್ರಶ್ನೆ ಮಾಡಿದರು.

೬೫. ವಸಿಷ್ಠಮುನಿಯು ಕೂಡ ಕ್ಷಣಕಾಲ ಧ್ಯಾನಮಾಡಿ ಎಲ್ಲರ ಎದುರಿಗೂ ರಾಘವನನ್ನು ಕುರಿತು ಸುಪ್ರಸನ್ನನಾಗಿ ಹೀಗೆ ಹೇಳಿದನು :—

೬೬. ವಸಿಷ್ಠನು ಹೇಳುತ್ತಾನೆ :—'' ಎಲೈ ಮಹಾಬಾಹುವಾದ ರಾಮನೆ! ಕೇಳು. ಇದು ಶುಭಕರವಾದ ಕಾಮಧೇನುವು. ನಿನ್ನಮೇಲಣ ಸ್ನೇಹದಿಂದ ಇದು ಹಾಲುಸುರಿಸುತ್ತ ಇಲ್ಲಿಗೆ ಬಂದಿರುವುದು.

ದುಗ್ಧಮಧ್ಯೇ ಸಮುದ್ಭೂತ ರುದ್ರಸ್ತ್ವಾಂ ದ್ರಷ್ಟುಮಾಗತಃ ।
ನಿಷ್ಪನ್ನಕಾರ್ಯಂ ದೇವಾನಾಂ ನಿರ್ಜಿತಾರಾತಿಮುತ್ತಮಂ ॥ ೬೭ ॥
ಇಮಂ ಸಂಪೂಜಯ ಕ್ಷಿಪ್ರಂ ಏತತ್ಕುಂಡಸ್ಯ ಸನ್ನಿಧೌ ।
ಶೀಘ್ರಂ ತ್ವಮಪಿ ಯತ್ನೇನ ಪೂಜಯೇಮಂ ಶಿವಂ ಶುಭಂ ।
ದುಗ್ಧೇಶ್ವರಮಿತಿ ಖ್ಯಾತಂ ಕ್ಷೀರಕುಂಡೇ ಪವಿತ್ರಕಂ ॥ ೬೮ ॥

ಅಗಸ್ತ್ಯ ಉವಾಚ :—

ತತೋ ರಘುಪತಿಃ ಶ್ರೀಮಾನ್ ವಸಿಷ್ಠೋಕ್ತವಿಧಾನತಃ ।
ಪೂಜಯಾಮಾಸ ತಲ್ಲಿಂಗಂ ದುಗ್ಧೇಶ್ವರಮಿತಿ ಸ್ಮೃತಂ ॥ ೬೯ ॥
ಸೀತಯಾ ಸತ್ಕೃತಂ ಯಸ್ಮಾತ್ ತತ್ಕುಂಡಂ ಕ್ಷೀರಸಂಗಮಂ ।
ಸೀತಾಕುಂಡಮಿತಿ ಖ್ಯಾತಿಂ ಜಗಾಮಾನುಪಮಾಂ ತತಃ ॥ ೭೦ ॥
ಸೀತಾಕುಂಡೇ ನರಾಃ ಸ್ನಾತ್ವಾ ದೃಷ್ಟ್ವಾ ದುಗ್ಧೇಶ್ವರಂ ಪ್ರಭುಂ ।
ಸರ್ವಪಾಪೈಃ ಪ್ರಮುಚ್ಯಂತೇ ನಾತ್ರ ಕಾರ್ಯಾ ವಿಚಾರಣಾ ॥ ೭೧ ॥
ಅತ್ರ ಸ್ನಾನಂ ಜಪೋ ಹೋಮೋ ದಾನಂ ಚಾಕ್ಷಯತಾಂ ವ್ರಜೇತ್ ।
ಸೀತಾಕುಂಡೇ ತು ಸಂಪೂಜ್ಯ ಸೀತಾರಾಮೌ ಸ ಲಕ್ಷ್ಮಣೌ ॥ ೭೨ ॥

---

೬೭–೬೮. ಆ ಹಾಲಿನ ಮಧ್ಯದಲ್ಲಿ ಉದ್ಭವಿಸಿರುವ ರುದ್ರನು, ಶತ್ರುಗಳನ್ನು ಜಯಿಸಿ ದೇವಕಾರ್ಯವನ್ನು ನೆರವೇರಿಸಿದ ಪುರುಷೋತ್ತಮನಾದ ನಿನ್ನನ್ನು ನೋಡಲು ಬಂದಿರುವನು. ಈ ಕುಂಡದ ಸನ್ನಿಧಿಯಲ್ಲಿರುವ ಈತನನ್ನು ನೀನು ಕ್ಷಿಪ್ರವಾಗಿ ಪೂಜಿಸು. ಶುಭಕರನೂ, ಕ್ಷೀರಕುಂಡದಲ್ಲಿ ಉದಿಸಿ ದುಗ್ಧೇಶ್ವರನೆಂದು ಪ್ರಸಿದ್ಧನೂ. ಪವಿತ್ರನೂ ಆದ ಈ ಶಿವನನ್ನು ನೀನು ಪ್ರಯತನಾಗಿ ಪೂಜೆಮಾಡು."

೬೯. ಅಗಸ್ತ್ಯನು ಹೇಳುತ್ತಾನೆ:— ಬಳಿಕ ಶ್ರೀಮಂತನಾದ ಆ ರಘುಪತಿಯು ವಸಿಷ್ಠನು ಹೇಳಿದ ವಿಧಾನವನ್ನನುಸರಿಸಿ ದುಗ್ಧೇಶ್ವರನೆಂದು ಹೆಸರಾದ ಆ ಶಿವಲಿಂಗವನ್ನು ಪೂಜಿಸಿದನು.

೭೦. ಕ್ಷೀರದಿಂದ ತುಂಬಿದ ಆ ಕುಂಡವು ಸೀತಾದೇವಿಯಿಂದ ಸತ್ಕೃತವಾದುದರಿಂದ ಸೀತಾಕುಂಡವೆಂದು ಪ್ರಖ್ಯಾತಿಯನ್ನು ಪಡೆಯಿತು.

೭೧. ಈ ಸೀತಾಕುಂಡದಲ್ಲಿ ಸ್ನಾನಮಾಡಿ ಪ್ರಭುವಾದ ದುಗ್ಧೇಶ್ವರನನ್ನು ದರ್ಶನಮಾಡಿದ ಮಾನವರು ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದುತ್ತಾರೆ. ಈ ವಿಷಯದಲ್ಲಿ ವಿಚಾರಮಾಡತಕ್ಕುದಲ್ಲವು.

೭೨–೭೩. ಇಲ್ಲಿ ಸ್ನಾನ, ಜಪ, ಹೋಮ, ದಾನಗಳೆಲ್ಲವೂ ಅಕ್ಷಯವಾಗುತ್ತವೆ. ಸೀತಾಕುಂಡದಲ್ಲಿ ಲಕ್ಷ್ಮಣಸಮೇತರಾದ ಶ್ರೀಸೀತಾರಾಮರನ್ನು ಪೂಜಿಸಿ, ದುಗ್ಧೇಶ್ವರನನ್ನು ಅರ್ಚಿಸಿದವನು ಸರ್ವಕಾಮಗಳನ್ನು ಪಡೆಯುತ್ತಾನೆ.

ದುಗ್ಧೇಶ್ವರಂ ಚ ಸಂಪೂಜ್ಯ ಸರ್ವಾನ್ಕಾಮಾನವಾಪ್ನುಯಾತ್ ।
ಜ್ಯೇಷ್ಠೇ ಮಾಸಿ ಚತುರ್ದಶ್ಯಾಂ ಯಾತ್ರಾ ಸಾಂವತ್ಸರೀ ಸ್ಮೃತಾ ॥ ೭೩ ॥
ಏವಂ ಯೋ ವಿಧಿವತ್ಕುರ್ಯಾತ್ ದಯಾಧರ್ಮವಿಶಾರದಃ ।
ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೭೪ ॥
ತತ್ರ ಪೂರ್ವದಿಶಾಭಾಗೇ ಸುಗ್ರೀವರಚಿತಂ ಮಹತ್ ।
ತೀರ್ಥಂ ತಪೋನಿಧೇಸ್ತತ್ರ ವರ್ತತೇ ಸನ್ನಿಧೌ ಶುಭಂ ॥ ೭೫ ॥
ಯತ್ರ ಸ್ನಾತ್ವಾ ಚ ದತ್ವಾ ಚ ರಾಮಂ ಸಂಪೂಜ್ಯ ಯತ್ನತಃ ।
ತಸ್ಮಿನ್ನೇವ ದಿನೇ ತತ್ರ ಸರ್ವಾನ್ಕಾಮಾನವಾಪ್ನುಯಾತ್ ॥ ೭೬ ॥
ತತ್ಪ್ರತ್ಯಗ್ದಿಶಿ ವೈ ಸ್ಥಾನಂ ಹನುಮತ್ಕುಂಡಮಿತ್ಯಪಿ ।
ತಸ್ಯ ಪಶ್ಚಿಮತೋ ವಿಪ್ರ ವಿಭೀಷಣಸರಃ ಶುಭಂ ॥ ೭೭ ॥
ತಯೋಸ್ಸ್ನಾನೇನ ದಾನೇನ ರಾಮಸಂಪೂಜನೇನ ಚ ।
ಸರ್ವಾನ್ಕಾಮಾನವಾಪ್ನೋತಿ ತಸ್ಮಿನ್ನೇವ ವಿಧಾನತಃ ।
ಇಯಂ ಸಾ ಪರಮಾ ಮೇಧ್ಯಾಯೋಧ್ಯಾ ಧರ್ಮನಿಧಿಃ ಸ್ಮೃತಾ ॥ ೭೮ ॥

---

ಈ ಸೀತಾಕುಂಡದಲ್ಲಿ ಜ್ಯೇಷ್ಠಮಾಸದಲ್ಲಿ ಚತುರ್ದಶೀದಿನ ಅಲ್ಲಿ ಪ್ರತಿಸಂವತ್ಸರದ ಯಾತ್ರೆಯು ನಡೆಯುತ್ತದೆ.

೭೪. ದಯಾಧರ್ಮವಿಶಾರದನಾಗಿ ಯಾವನು ಈ ರೀತಿ ವಿಧಿವತ್ತಾಗಿ ಯಾತ್ರೆ ನಡಸುವನೋ ಅವನು ಯಾವೆಡೆಗೆ ಹೋದರೆ ಶೋಕಿಸುವ ಸಂಭವವೇ ಇಲ್ಲವೋ ಅಂತಹ ಪರಮಸ್ಥಾನಕ್ಕೆ ಹೋಗುತ್ತಾನೆ.

೭೫. ಎಲೈ ತಪೋನಿಧಿಯೆ! ಆ ಸೀತಾಕುಂಡಕ್ಕೆ ಪೂರ್ವದಿಕ್ಕಿನಲ್ಲಿ ಸುಗ್ರೀವನಿಂದ ನಿರ್ಮಿತವಾಗಿ ಮಹತ್ತರವಾದ ಶುಭತೀರ್ಥವು ಕಂಗೊಳಿಸುತ್ತಿರುವುದು.

೭೬. ಅಲ್ಲಿ ಸ್ನಾನಮಾಡಿ, ದಾನ ಕೊಟ್ಟು, ಪ್ರಯತ್ನಪೂರ್ವಕವಾಗಿ ಶ್ರೀರಾಮನನ್ನು ಪೂಜಿಸಿದ ಮಾನವನು ಅಂದೇ ಸರ್ವಾಭೀಷ್ಟಗಳನ್ನೂ ಪಡೆಯುತ್ತಾನೆ.

೭೭. ಎಲೈ ವಿಪ್ರನೇ! ಅದರ ಪಶ್ಚಿಮದಿಕ್ಕಿನಲ್ಲಿ ಹನುಮತ್ಕುಂಡವೆಂಬ ತೀರ್ಥವಿರುವುದು. ಅದಕ್ಕೆ ಪಶ್ಚಿಮಕ್ಕೆ ಶುಭಕರವಾದ ವಿಭೀಷಣಸರೋವರವಿರುವುದು.

೭೮. ನರನು ಅವುಗಳಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ, ವಿಧಾನವನ್ನನುಸರಿಸಿ ರಾಮನನ್ನು ಪೂಜಿಸುವುದರಿಂದಲೂ ಸರ್ವಕಾಮಗಳನ್ನೂ ಪಡೆಯುತ್ತಾನೆ. ಇಂತು ಪರಮಪವಿತ್ರವಾದ ಅಯೋಧ್ಯೆಯು ಧರ್ಮನಿಧಿಯೆಂದು ಹೆಸರುಪಡೆದಿರುವುದು.

ಇತ್ಯುಕ್ತಾಸ್ತು ತತಃ ಸರ್ವೇ ವಸಿಷ್ಠಮುನಿಮಾದರಾತ್ ।
ಪಪ್ರಚ್ಛುರ್ವಿನಯಾತ್ ಕ್ಷಿಪ್ರಂ ವಿಭೀಷಣಪುರಃಸರಾಃ ।
ಕಥಯಸ್ವ ತಪೋರಾಶೇ ಕಥಾಮೇತಾಂ ಸುದುರ್ಲಭಾಂ ॥ ೭೯ ॥
ಅಯೋಧ್ಯಾಯಾಃ ಪರಂ ವಿಪ್ರ ಮಾಹಾತ್ಮ್ಯಂ ಕಥಯಂತಿ ಯತ್ ।
ತತ್ಸರ್ವಂ ಕಥಯ ಕ್ಷಿಪ್ರಂ ಶ್ರುತ್ವಾ ಮಾಹಾತ್ಮ್ಯಮುತ್ತಮಂ ॥ ೮೦ ॥
ಯಥಾ ಯಾತ್ರಾಂ ವಿಧಾಸ್ಯಾಮಃ ಕ್ರಮೇಣ ಚ ವಿಧಾನತಃ ।
ತದಸ್ಮಾಸು ಕೃಪಾಂ ಕೃತ್ವಾ ಕಥಯಸ್ವ ತಪೋನಿಧೇ ॥ ೮೧ ॥

ವಸಿಷ್ಠ ಉವಾಚ :—

ಶೃಣ್ವಂತು ಮುನಯಃ ಸರ್ವೇ ಅಯೋಧ್ಯಾಮಹಿಮಾದ್ಭುತಾ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೮೨ ॥
ಇದಂ ಗುಹ್ಯತರಂ ಕ್ಷೇತ್ರಮಯೋಧ್ಯಾಭಿಧಮುತ್ತಮಂ ।
ಸರ್ವೇಷಾಮೇವ ಭೂತಾನಾಂ ಹೇತುರ್ಮೋಕ್ಷಸ್ಯ ಸರ್ವದಾ ॥ ೮೩ ॥
ಅಸ್ಮಿನ್ ಸಿದ್ಧಾಃ ಸದಾ ದೇವಾ ವೈಷ್ಣವಂ ವ್ರತಮಾಸ್ಥಿತಾಃ ।
ನಾನಾಲಿಂಗಧರಾ ನಿತ್ಯಂ ವಿಷ್ಣುಲೋಕಾಭಿಕಾಂಕ್ಷಿಣಃ ॥ ೮೪ ॥

---

೭೯–೮೧. ಹೀಗೆಂದು ಹೇಳಲ್ಪಟ್ಟ ಅವರೆಲ್ಲರೂ ವಿನಯವಂತರಾಗಿ ವಿಭೀಷಣನನ್ನು ಮುಂದಿಟ್ಟುಕೊಂಡು ವಸಿಷ್ಠಮುನಿಯನ್ನು ಆದರದಿಂದ ಪ್ರಶ್ನೆ ಮಾಡಿದರು :—"ಎಲೈ ತಪೋರಾಶಿಯೆ ! ಬಹು ದುರ್ಲಭವಾದ ಈ ಕಥೆಯನ್ನು ನಮಗೆ ಹೇಳು. ಎಲೈ ವಿಪ್ರನೇ ! ಯಾವ ಕಾರಣದಿಂದ ಅಯೋಧ್ಯೆಯ ಮಾಹಾತ್ಮ್ಯವು ಪರಮಶ್ರೇಷ್ಠವೆನ್ನುತ್ತಾರೆಯೋ ಅದೆಲ್ಲವನ್ನೂ ಬೇಗನೆ ನಮಗೆ ಹೇಳಬೇಕು. ಉತ್ತಮವಾದ ಆ ಮಾಹಾತ್ಮ್ಯವನ್ನು ಕೇಳಿ ನಾವು ಕ್ರಮವಾಗಿಯೂ, ವಿಧಿಪ್ರಕಾರವಾಗಿಯೂ ಯಾತ್ರೆಯನ್ನು ಮಾಡುತ್ತೇವೆ. ಎಲೈ ತಪೋನಿಧಿಯೇ ! ನಮ್ಮಲ್ಲಿ ಕೃಪೆಮಾಡಿ ಅದನ್ನೆಲ್ಲ ನಮಗೆ ತಿಳಿಸು" ಎಂದು ಪ್ರಾರ್ಥಿಸಿದರು.

೮೨. ವಸಿಷ್ಠನು ಹೇಳುತ್ತಾನೆ:—"ಅಯ್ಯಾ ! ಮುನಿಗಳೆಲ್ಲರೂ ಕೇಳಿರಿ. ಅಯೋಧ್ಯೆಯ ಮಹಿಮೆಯು ಅದ್ಭುತವಾದುದು. ಇದನ್ನು ಕೇಳಿದವನು ಸರ್ವ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲವು.

೮೩–೮೪. ಅಯೋಧ್ಯೆಯೆಂಬ ಹೆಸರುಳ್ಳ ಈ ಕ್ಷೇತ್ರವು ಗುಹ್ಯತರವೂ, ಉತ್ತಮವೂ, ಸರ್ವಭೂತಗಳಿಗೂ ಸರ್ವಕಾಲದಲ್ಲಿಯೂ ಮೋಕ್ಷಕ್ಕೆ ಕಾರಣವೂ ಆದ ಕ್ಷೇತ್ರವಾಗಿರುವುದು. ಈ ಅಯೋಧ್ಯೆಯಲ್ಲಿ ಸಿದ್ಧರೂ, ದೇವತೆಗಳೂ ಸದಾಕಾಲವೂ ನಾನಾ ಬಗೆಯ ಚಿಹ್ನೆಗಳನ್ನು ಧರಿಸಿ ವಿಷ್ಣುಲೋಕವನ್ನು ಬಯಸಿ ವೈಷ್ಣವವ್ರತವನ್ನು ನಡೆಸುತ್ತಿರುವರು.

ಅಭ್ಯಸ್ಯಂತಿ ಪರಂ ಯೋಗಂ ಯುಕ್ತಪ್ರಾಣಾ ಜಿತೇಂದ್ರಿಯಾಃ ।
ನಾನಾವೃಕ್ಷಸಮಾಕೀರ್ಣೇ ನಾನಾವಿಹಗವಾಸಿನಿ ॥ ೮೫ ॥
ಕಮಲೋತ್ಪಲಶೋಭಾಢ್ಯೇ ಸರೋಭಿಃ ಸಮಲಂಕೃತೇ ।
ಅಪ್ಸರೋಗಣಸಂಕೀರ್ಣೇ ಸರ್ವದಾ ಸೇವಿತೇ ಶುಭೇ ॥ ೮೬ ॥
ರೋಚತೇ ಹಿ ಸದಾ ವಾಸಃ ಕ್ಷೇತ್ರೇ ನಿತ್ಯಂ ಹರೇರಿಹ ।
ಮನ್ಯಮಾನಾ ವಿಷ್ಣುಭಕ್ತಾ ವಿಷ್ಣೌ ಸರ್ವೇಽರ್ಪಿತಕ್ರಿಯಾಃ ॥ ೮೭ ॥
ಯಥಾ ಮೋಕ್ಷಮಿಹಾಯಾಂತಿ ನಾನ್ಯತ್ರ ಹಿ ತಥಾ ಕ್ವಚಿತ್ ।
ಅತಃ ಶ್ರೇಷ್ಠತಮಂ ಕ್ಷೇತ್ರಂ ಯಸ್ಮಾಚ್ಚ ವಸತಿರ್ಹರೇಃ ।
ಮಹಾಕ್ಷೇತ್ರಮಿದಂ ಯಸ್ಮಾದಯೋಧ್ಯಾಭಿಧಮುತ್ತಮಂ ॥ ೮೮ ॥
ನೈಮಿಷೇ ಚ ಕುರುಕ್ಷೇತ್ರೇ ಗಂಗಾದ್ವಾರೇ ಚ ಪುಷ್ಕರೇ ।
ಸ್ನಾನಾತ್ಸಂಸೇವನಾದ್ವಾಪಿ ನ ಮೋಕ್ಷಃ ಪ್ರಾಪ್ಯತೇ ತಥಾ ॥ ೮೯ ॥
ಇಹ ಸಂಪ್ರಾಪ್ಯತೇ ಯದ್ವತ್ತತ ಏವ ವಿಶಿಷ್ಯತೇ ।
ಪ್ರಯಾಗೇ ವಾ ಭವೇನ್ಮೋಕ್ಷ ಇಹ ವಾ ಹರಿಸಂಶ್ರಯಾತ್ ।
ಸರ್ವಸ್ಮಾದಪಿ ತೀರ್ಥಾಗ್ರ್ಯಾದಿದಮೇವ ಮಹತ್ ಸ್ಮೃತಂ ॥ ೯೦ ॥

---

೮೫–೮೮. ಇಲ್ಲಿ ಅವರೆಲ್ಲರೂ ಜಿತೇಂದ್ರಿಯರಾಗಿ ಪ್ರಾಣಾಯಾಮವನ್ನು ಮಾಡುತ್ತ ಶ್ರೇಷ್ಠವಾದ ಯೋಗವನ್ನು ಅಭ್ಯಾಸಮಾಡುತ್ತಿರುತ್ತಾರೆ. ನಾನಾ ಬಗೆಯ ವೃಕ್ಷಗಳಿಂದ ತುಂಬಿ, ಬಗೆಬಗೆಯ ಪಕ್ಷಿಗಳು ವಾಸಮಾಡುತ್ತ, ಕಮಲಕನ್ನೈದಿಲೆಗಳ ಸೌಂದರ್ಯದಿಂದ ತುಂಬಿ ತುಳುಕುವ ಸರೋವರ ಗಳಿಂದಲಂಕೃತವಾಗಿ, ಅಪ್ಸರೆಯರ ಗಣಗಳಿಂದ ಕಂಗೊಳಿಸುತ್ತ, ಸರ್ವದಾ ಆ ಅಪ್ಸರಾಂಗನೆಯರಿಂದ ಸೇವಿತವಾಗಿ, ಎಲ್ಲ ಕಾಲಗಳಲ್ಲಿಯೂ ಶುಭಕರವಾದ ಈ ಕ್ಷೇತ್ರದಲ್ಲಿ ಶ್ರೀಹರಿಗೆ ವಾಸವೆಂದರೆ ಬಹು ಇಷ್ಟವಾಗಿರುವುದು. ತಾವು ವಿಷ್ಣುಭಕ್ತರೆಂದು ಭಾವಿಸಿ ವಿಷ್ಣುವಿನಲ್ಲಿ ತಮ್ಮ ಕ್ರಿಯೆಗಳೆಲ್ಲವನ್ನೂ ಅರ್ಪಿಸಿದವ ರೆಲ್ಲರೂ ಇಲ್ಲಿ ಮೋಕ್ಷವನ್ನು ಹೊಂದುವಹಾಗೆ ಬೇರೆಲ್ಲಿಯೂ ಹೊಂದಲಾರರು. ಆದುದರಿಂದ ಈ ಕ್ಷೇತ್ರವು ಶ್ರೇಷ್ಠತಮವೆನಿಸಿರುವುದು. ಅಯೋಧ್ಯೆಯೆಂದು ಹೆಸರುಹೊಂದಿರುವ ಈ ಕ್ಷೇತ್ರವು ಶ್ರೀಹರಿಗೆ ವಸತಿಯಾಗಿರುವುದರಿಂದ ಇದು ಮಹಾಕ್ಷೇತ್ರವೆನಿಸಿರುವುದು.

೮೯. ನೈಮಿಷ, ಕುರುಕ್ಷೇತ್ರ, ಗಂಗಾದ್ವಾರ, ಪುಷ್ಕರ ಮುಂತಾದ ಕ್ಷೇತ್ರ ಗಳಲ್ಲೆಲ್ಲ ಸ್ನಾನಮಾಡುವುದರಿಂದಲೂ, ತೀರ್ಥಸೇವೆಮಾಡುವುದರಿಂದಲೂ, ಈ ಅಯೋಧ್ಯಾಕ್ಷೇತ್ರದಲ್ಲಿ ದೊರಕುವಂತಹ ಮೋಕ್ಷವು ದೊರೆಯುವುದಿಲ್ಲ.

೯೦. ಇಲ್ಲಿ ಈ ರೀತಿ ಮೋಕ್ಷವು ದೊರಕುವುದರಿಂದಲೇ ಇದು ಎಲ್ಲ ಕ್ಷೇತ್ರಗಳಿಗಿಂತಲೂ ಮೇಲಾಗಿರುವುದು. ಪ್ರಯಾಗದಲ್ಲಾಗಲಿ, ಶ್ರೀಹರಿಯು

ಅವ್ಯಕ್ತಲಿಂಗೈರ್ಮುನಿಭಿಃ ಸರ್ವೈಃ ಸಿದ್ಧೈರ್ಮಹರ್ಷಿಭಿಃ ।
ಇಹ ಸಂಪ್ರಾಪ್ಯತೇ ಮೋಕ್ಷೋ ದುರ್ಲಭೋಽನ್ಯತ್ರ ಯೋ ಮತಃ ॥೯೧॥
ತೇಭ್ಯಃ ಪ್ರಯಚ್ಛತಿ ಹರಿರ್ಯೋಗಮೈಶ್ವರ್ಯಮುತ್ತಮಂ ।
ಆತ್ಮನಶ್ಚೈವ ಸಾಯುಜ್ಯಮೀಪ್ಸಿತಂ ಸ್ಥಾನಮುತ್ತಮಂ ॥ ೯೨ ॥
ಬ್ರಹ್ಮಾ ದೇವರ್ಷಿಭಿಃ ಸಾರ್ಧಂ ಶ್ರೀಶ್ಚ ವಾಯುರ್ದಿವಾಕರಃ ।
ದೇವರಾಜಸ್ತಥಾ ಚಕ್ರೋ ಯೇ ಚಾನ್ಯೇಽಪಿ ದಿವೌಕಸಃ ॥ ೯೩ ॥
ಉಪಾಸತೇ ಮಹಾತ್ಮಾನಃ ಸರ್ವತ್ರ ಹರಿಮಾದರಾತ್ ।
ಅನ್ಯೇಽಪಿ ಯೋಗಿನಃ ಸಿದ್ಧಾಃ ಕ್ಷೇತ್ರರೂಪಾ ಮಹಾವ್ರತಾಃ ।
ಅನನ್ಯಮನಸೋ ಭೂತ್ವಾ ಸರ್ವದೋಪಾಸತೇ ಹರಿಂ ॥ ೯೪ ॥
ವಿಷಯಾಸಕ್ತಚಿತ್ತೋಽಪಿ ತ್ಯಕ್ತಧರ್ಮರತಿರ್ನರಃ ।
ಇಹ ಕ್ಷೇತ್ರೇ ಮೃತಃ ಸೋಽಪಿ ಸಂಸಾರೀ ನ ಪುನರ್ಭವೇತ್ ॥ ೯೫ ॥

---

ನೆಲಸಿರುವುದರಿಂದ ಈ ಅಯೋಧ್ಯೆಯಲ್ಲಿಯಾಗಲಿ ಮೋಕ್ಷವುಂಟಾಗುವುದು. ತೀರ್ಥಶ್ರೇಷ್ಠಗಳೆನಿಸಿರುವ ಸಮಸ್ತತೀರ್ಥಗಳಿಗಿಂತಲೂ ಇದೇ ಮಹತ್ತರ ವಾದುದೆಂದು ಹೇಳಲಾಗಿರುವುದು.

೯೧. ವ್ಯಕ್ತವಾಗಿ ಕಾಣಿಸಿಕೊಳ್ಳದಿರುವ ಲಕ್ಷಣಗಳುಳ್ಳ ಮುನಿಗಳೂ, ಸಿದ್ಧರೂ, ಮಹರ್ಷಿಗಳೂ ಎಲ್ಲರೂ ಇಲ್ಲಿ ಮೋಕ್ಷವನ್ನು ಪಡೆಯುತ್ತಾರೆ. ಅಂತಹ ಮೋಕ್ಷವು ಬೇರೆ ಕಡೆಯಲ್ಲಿ ದುರ್ಲಭವೆಂದು ಹೇಳಲ್ಪಟ್ಟಿದೆ.

೯೨. ಅವರಿಗೆ ಶ್ರೀಹರಿಯು ಯೋಗವನ್ನೂ, ಉತ್ತಮವಾದ ಐಶ್ವರ್ಯ ವನ್ನೂ, ತನ್ನ ಸಾಯುಜ್ಯವನ್ನೂ, ಉತ್ತಮವಾದ ಈಪ್ಸಿತಸ್ಥಾನವನ್ನೂ ದಯಪಾಲಿಸುತ್ತಾನೆ.

೯೩-೯೪. ದೇವರ್ಷಿಗಳಿಂದೊಡಗೂಡಿದ ಬ್ರಹ್ಮನೂ, ಶ್ರೀದೇವಿಯೂ, ಮಹಾತ್ಮರಾದ ವಾಯು, ಸೂರ್ಯ, ಇಂದ್ರರೂ, ಇನ್ನುಳಿದ ದೇವತೆಗಳೂ ಎಲ್ಲ ಕಡೆಗಳಲ್ಲಿಯೂ ಶ್ರೀಹರಿಯನ್ನು ಆದರದಿಂದ ಉಪಾಸನೆ ಮಾಡುತ್ತಾರೆ. ಕ್ಷೇತ್ರರೂಪರೂ, ಮಹಾವ್ರತಧಾರಿಗಳೂ ಆದ ಬೇರೆ ಯೋಗಿಗಳೂ, ಸಿದ್ಧರೂ ತಮ್ಮ ಮನಸ್ಸನ್ನು ಬೇರೆಲ್ಲಿಯೂ ನಿಲ್ಲಿಸದೆ ಅವನೊಬ್ಬನಲ್ಲಿಯೆ ನೆಲೆಗೊಳಿಸಿ ಸರ್ವದಾ ಅವನೊಬ್ಬನನ್ನೇ ಉಪಾಸನೆಮಾಡುತ್ತಾರೆ.

೯೫. ವಿಷಯಗಳಲ್ಲೇ ಆಸಕ್ತಿಗೊಂಡ ಚಿತ್ತವುಳ್ಳವನೇ ಆದರೂ, ಧರ್ಮಾ ಸಕ್ತಿಯನ್ನು ತೊರೆದವನೇ ಆದರೂ ಮಾನವನು ಈ ಕ್ಷೇತ್ರದಲ್ಲಿ ಮೃತನಾದಲ್ಲಿ ಅವನು ಕೂಡ ಮತ್ತೆ ಹುಟ್ಟುಸಾವುಗಳ ತೊಡಕಿನಲ್ಲಿ ಸಿಕ್ಕುವುದಿಲ್ಲ.

ಯೇ ಪುನರ್ನಿಗಮಾಧೀನಾಃ ಸತ್ರಸ್ಥಾ ವಿಜಿತೇಂದ್ರಿಯಾಃ ।
ವ್ರತಿನಶ್ಚ ನಿರಾರಂಭಾಃ ಸರ್ವೇ ತೇ ಹರಿಭಾವಿತಾಃ ॥ ೯೬ ॥
ದೇಹಭಂಗಂ ಸಮಾಪದ್ಯ ಧೀಮಂತಃ ಸಂಗವರ್ಜಿತಾಃ ।
ಗತಾಸ್ತೇ ಚ ಪರಂ ಮೋಕ್ಷಂ ಪ್ರಸಾದಾತ್ ಸರ್ವದಾ ಹರೇಃ ॥ ೯೭ ॥
ಜನ್ಮಾಂತರಸಹಸ್ರೇಷು ಯುಂಜನ್ಯೋಗೀ ನ ಚಾಪ್ನುಯಾತ್ ।
ತದಿಹೈವ ಪರಂ ಮೋಕ್ಷಂ ಮರಣಾದಪಿ ಗಚ್ಛತಿ ॥ ೯೮ ॥
ಏತತ್ಸಂಕ್ಷೇಪತೋ ವಚ್ಮಿ ಕ್ಷೇತ್ರಸ್ಯ ಮಹಿಮಾದ್ಭುತಾ ।
ಏತದೇವ ಪರಂ ಸ್ಥಾನಮೇತದೇವ ಪರಂ ಪದಂ ।
ಏತಾದೃಙ್ನಪರಂ ಸ್ಥಾನಂ ಪುನರನ್ಯತ್ರ ದೃಶ್ಯತೇ ॥ ೯೯ ॥
ಅತ್ರ ಗತ್ವಾ ಪ್ರಯತ್ನೇನ ಯಾತ್ರಾ ಪುಣ್ಯಾಭಿಕಾಂಕ್ಷಿಭಿಃ ।
ಕರ್ತವ್ಯಾ ವಿಧಿವದ್ಧೀರಾಃ ಕ್ರಮೇಣ ಶ್ರದ್ಧಯಾನ್ವಿತೈಃ ॥ ೧೦೦ ॥
ಪ್ರಥಮೇಽಹನಿ ಕರ್ತವ್ಯಾ ಉಪವಾಸೋ ಯತಾತ್ಮಭಿಃ ।
ನಿಯಮೇನ ತತಃ ಸ್ನಾನಂ ದಾನಂ ಚೈವ ಸ್ವಶಕ್ತಿತಃ ॥ ೧೦೧ ॥

---

೯೬-೯೭. ಯಾರು ವೇದಶಾಸ್ತ್ರಗಳನ್ನು ನಂಬಿ ಯಾಗಯಜನಾದಿಗಳನ್ನು ಮಾಡಿ, ಇಂದ್ರಿಯಗಳನ್ನು ನಿಗ್ರಹಿಸಿ, ವ್ರತವನ್ನು ಧರಿಸಿ, ಇತರ ಯಾವಬಗೆಯ ಪ್ರಯತ್ನವೂ ಇಲ್ಲದೆ ಶ್ರೀಹರಿಯನ್ನೇ ಭಾವಿಸುತ್ತಾ, ಧೀಮಂತರಾಗಿ ಸಂಗಗಳನ್ನೆಲ್ಲ ತೊರೆದು, ಕಡೆಗೆ ದೇಹಭಂಗವನ್ನು ಹೊಂದುತ್ತಾರೆಯೋ ಅವರು ಕೂಡ ಶ್ರೀಹರಿಯ ಪ್ರಸಾದದಿಂದ ಪರಮಮೋಕ್ಷವನ್ನೇ ಪಡೆಯುತ್ತಾರೆ.

೯೮. ಇಲ್ಲಿ ಮರಣಹೊಂದುವುದರಿಂದ ಅವರು ಜನ್ಮಾಂತರಗಳಿಂದಲೂ ಯೋಗಾಭ್ಯಾಸಮಾಡುವುದರಿಂದ ಯೋಗಿಗಳು ಯಾವುದನ್ನು ಪಡೆಯಲಾರರೋ ಆ ಶ್ರೇಷ್ಠವಾದ ಮೋಕ್ಷವನ್ನು ಪಡೆಯುತ್ತಾರೆ.

೯೯. ಈ ಕ್ಷೇತ್ರದ ಮಹಿಮೆಯನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಕ್ಷೇತ್ರದ ಮಹಿಮೆಯು ಅದ್ಭುತವಾದುದು. ಇದೇ ಉತ್ತಮೋತ್ತಮವಾದ ಸ್ಥಾನವು. ಇದೇ ಪರಮಪದವು. ಈ ರೀತಿಯಿರುವ ಮತ್ತೊಂದು ಸ್ಥಾನವು ಮತ್ತೆಲ್ಲಿಯೂ ಕಾಣುವುದೇ ಇಲ್ಲವು.

೧೦೦. ಎಲೈ ಧೀರರೇ! ಪುಣ್ಯವು ಬೇಕೆಂದು ಬಯಸುವವರು ಇಲ್ಲಿಗೆ ಬಂದು ಕ್ರಮವನ್ನನುಸರಿಸಿ ಶ್ರದ್ಧೆಯಿಂದ ಪ್ರಯತ್ನಪೂರ್ವಕವಾಗಿ ಯಾತ್ರೆಯನ್ನು ಮಾಡಬೇಕು.

೧೦೧. ಮೊದಲನೆಯ ದಿನ ಆತ್ಮನಿಗ್ರಹಮಾಡಿಕೊಂಡು ಉಪವಾಸ ಮಾಡಬೇಕು. ಆ ಬಳಿಕ ನಿಯಮವನ್ನನುಸರಿಸಿ ತಮ್ಮ ತಮ್ಮ ಶಕ್ತಿಗನುಸಾರವಾಗಿ ಸ್ನಾನವನ್ನೂ, ದಾನವನ್ನೂ ಮಾಡಬೇಕು.

ಉಪಾವೃತ್ತಿಸ್ತು ಪಾಪೇಭ್ಯೋ ಯಸ್ಯ ವಾಸೋ ಗುಣೈಃ ಸಹ ।
ಉಪವಾಸಃ ಸ ವಿಜ್ಞೇಯಃ ಸರ್ವಭೋಗವಿವರ್ಜಿತಃ ॥ ೧೦೨ ॥
ಉಪವಾಸಂ ವಿಧಾಯಾಸೌ ಚಕ್ರತೀರ್ಥೇ ನರಃ ಕೃತೀ ।
ಉಪವಾಸದಿನೇ ಸ್ನಾಯಾದ್ದದ್ಯಾಚ್ಚೈವ ಸ್ವಶಕ್ತಿತಃ ॥ ೧೦೩ ॥
ವಿಪ್ರಂ ಸಂಪೂಜ್ಯ ವಿಧಿವತ್ಪಶ್ಯೇದ್ವಿಷ್ಣುಹರಿಂ ವಿಭುಂ ।
ಸ್ವರ್ಗದ್ವಾರೇ ನರಃ ಸ್ನಾತ್ವಾ ವಿಷ್ಣುಂ ಸಂಪೂಜ್ಯ ಯತ್ನತಃ ॥ ೧೦೪ ॥
ಕ್ಷೌರಂ ಚ ಕಾರಯೇತ್ತತ್ರ ವ್ರತೀ ಧರ್ಮಾಭಿಧೇ ತತಃ ।
ಪಾಪಮೋಚನಕೇ ಸ್ನಾನಮೃಣಮೋಚನಕೇ ತತಃ ॥ ೧೦೫ ॥
ಸ್ನಾತ್ವಾ ಸಹಸ್ರಧಾರಾಯಾಂ ಶೇಷಂ ಸಂಪೂಜ್ಯ ಯತ್ನತಃ ।
ದೃಷ್ಟ್ವಾ ಚಂದ್ರಹರಿಂ ದೇವಂ ತತೋ ಧರ್ಮಹರಿಂ ವಿಭುಂ ॥ ೧೦೬ ॥
ತತಶ್ಚಕ್ರಹರಿಂ ದೃಷ್ಟ್ವಾ ದದ್ಯಾಚ್ಚೈವ ಸ್ವಶಕ್ತಿತಃ ।
ಬ್ರಹ್ಮಕುಂಡೇ ನರಃ ಸ್ನಾತ್ವಾ ಸರ್ವಕಾಮಾರ್ಥಸಿದ್ಧಯೇ ।
ಮಹಾವಿದ್ಯಾಸಮೀಪೇ ತು ರಾತ್ರೌ ಜಾಗರಣಂ ಚರೇತ್ ॥ ೧೦೭ ॥

---

೧೦೨. ಪಾಪಪರಾಙ್ಮುಖನಾಗಿ ಶುಭಗುಣಶೋಭಿತನಾಗಿ ಸರ್ವಭೋಗಗಳನ್ನೂ ಬಿಟ್ಟು ಶ್ರೀಹರಿಸನ್ನಿಧಿಯಲ್ಲಿರುವುದೇ ಉಪವಾಸವೆಂದು ತಿಳಿಯಬೇಕು.

೧೦೩. ಪುಣ್ಯವಂತನಾದ ನರನು ಉಪವಾಸವನ್ನು ಮಾಡಿ ಚಕ್ರತೀರ್ಥದಲ್ಲಿ ಉಪವಾಸದ ದಿನ ಸ್ನಾನಮಾಡಬೇಕು. ತನಗೆ ಶಕ್ತಿಯಿರುವಮಟ್ಟಿಗೂ ದಾನ ಮಾಡಬೇಕು.

೧೦೪. ವಿಧಿವತ್ತಾಗಿ ಬ್ರಾಹ್ಮಣನನ್ನು ಪೂಜಿಸಿ ವಿಭುವಾದ ವಿಷ್ಣುಹರಿಯನ್ನು ದರ್ಶನಮಾಡಬೇಕು. ನರನು ಸ್ವರ್ಗದ್ವಾರದಲ್ಲಿ ಸ್ನಾನಮಾಡಿ ಪ್ರಯತ್ನಪೂರ್ವಕವಾಗಿ ವಿಷ್ಣುವನ್ನು ಪೂಜಿಸಬೇಕು.

೧೦೫. ಧರ್ಮತೀರ್ಥದಲ್ಲಿ ವ್ರತಧಾರಿಯಾಗಿ ಕ್ಷೌರಮಾಡಿಸಿಕೊಳ್ಳಬೇಕು. ಪಾಪಮೋಚನತೀರ್ಥದಲ್ಲಿಯೂ, ಆ ಬಳಿಕ ಋಣಮೋಚನತೀರ್ಥದಲ್ಲಿಯೂ ಸ್ನಾನಮಾಡಬೇಕು.

೧೦೬. ಸಹಸ್ರಧಾರಾತೀರ್ಥದಲ್ಲಿ ಸ್ನಾನಮಾಡಿ ಪ್ರಯತ್ನಪೂರ್ವಕವಾಗಿ ಶೇಷನನ್ನು ಪೂಜಿಸಿ ದೇವದೇವನಾದ ಚಂದ್ರಹರಿಯ ದರ್ಶನವನ್ನು ಮಾಡಿದ ಬಳಿಕ ವಿಭುವಾದ ಧರ್ಮಹರಿಯನ್ನು ದರ್ಶನಮಾಡಬೇಕು.

೧೦೭. ಆಮೇಲೆ ಚಕ್ರಹರಿಯನ್ನು ಸಂದರ್ಶಿಸಿ ಶಕ್ತಿಗೆ ತಕ್ಕಂತೆ ದಾನ ಮಾಡಬೇಕು. ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಸರ್ವಕಾಮಾರ್ಥಸಿದ್ಧಿಗಾಗಿ ಮಹಾವಿದ್ಯೆಯ ಸಮೀಪದಲ್ಲಿ ರಾತ್ರಿಯಹೊತ್ತು ಜಾಗರಣೆಮಾಡಬೇಕು.

**ತತಃ ಪ್ರಭಾತೇ ವಿಮಲೇ ಪುನರುತ್ಥಾಯ ಸದ್ವ್ರತೀ ।**
**ಸ್ವರ್ಗದ್ವಾರೇ ಪ್ರಯತ್ನೇನ ವಿಧಿವತ್ ಸ್ನಾನಮಾಚರೇತ್ ॥ ೧೦೮ ॥**
**ಶ್ರಾದ್ಧಂ ಚ ವಿಧಿವತ್ಕೃತ್ವಾ ದತ್ವಾ ಚೈವ ಸ್ವಶಕ್ತಿತಃ ।**
**ವಿಷ್ಣುಂ ಸಂಪೂಜ್ಯ ವಿಧಿವತ್ ವಿಪ್ರಾನಪಿ ಪುನಃ ಪುನಃ ॥ ೧೦೯ ॥**
**ದಂಪತೀ ಚ ಪ್ರಯತ್ನೇನ ಪೂಜ್ಯೌ ವಸ್ತ್ರಾದಿಭಿಸ್ತಥಾ ।**
**ಶ್ರದ್ಧಯಾ ಪರಯಾ ಯುಕ್ತೈರ್ದಾತವ್ಯಾ ಭೂರಿದಕ್ಷಿಣಾ ॥ ೧೧೦ ॥**
**ವಿಪ್ರಾನ್ ಸಂಪೂಜ್ಯ ವಿಧಿವದ್ಭುಂಜೀತ ಪ್ರಯತೋ ನರಃ ॥ ೧೧೧ ॥**
**ಅನ್ಯೇದ್ಯುರಪಿ ಚೋತ್ಥಾಯ ಶ್ರದ್ಧಯಾ ಪರಯಾ ಯುತಃ ।**
**ರುಕ್ಮಿಣೀಪ್ರಭೃತೀನ್ಯತ್ರ ಪಶ್ಯೇತ್ತೀರ್ಥಾನಿ ಚ ಕ್ರಮಾತ್ ॥ ೧೧೨ ॥**
**ತತ್ರ ತತ್ರ ನರಃ ಸ್ನಾತ್ವಾ ದತ್ವಾ ಚೈವ ಸ್ವಶಕ್ತಿತಃ ।**
**ವಿಷ್ಣುಂ ಸಂಪೂಜ್ಯ ಯತ್ನೇನ ಮನೋವಾಕ್ಕಾಯನಿರ್ಮಲಃ ॥ ೧೧೩ ॥**
**ಯಾತ್ರಾಂ ಸಮಾಪಯೇತ್ಸಮ್ಯಙ್ನಿಯತಾತ್ಮಾ ಶುಚಿವ್ರತಃ ।**
**ಯತ್ರ ಕ್ವಾಪಿ ಮೃತೋ ಧೀರಃ ಪರಂ ಮೋಕ್ಷಮವಾಪ್ನುಯಾತ್ ॥**

---

೧೦೮. ವ್ರತಿಯಾದವನು ಬೆಳಗಾದಬಳಿಕ ಪುನಃ ಎದ್ದು ಸ್ವರ್ಗದ್ವಾರದಲ್ಲಿ ವಿಧಿವತ್ತಾಗಿ ಸ್ನಾನವನ್ನು ಮಾಡಬೇಕು.

೧೦೯–೧೧೦. ಅಲ್ಲಿ ವಿಧಿವತ್ತಾಗಿ ತೀರ್ಥಶ್ರಾದ್ಧವನ್ನು ಮಾಡಿ ಸ್ವಶಕ್ತಿಗೆ ಅನುಸಾರವಾಗಿ ದಾನ ಕೊಟ್ಟು ವಿಧಿಯಲ್ಲಿರುವಂತೆ ವಿಷ್ಣುವನ್ನು ಪೂಜಿಸಿ ವಿಪ್ರರನ್ನು ಮತ್ತೆ ಪೂಜಿಸಿ, ಪ್ರಯತ್ನಮಾಡಿ ವಸ್ತ್ರಾದಿಗಳಿಂದ ದಂಪತಿಗಳನ್ನು ಪೂಜಿಸಬೇಕು. ಮೇಲಾದ ಶ್ರದ್ಧೆಯುಳ್ಳವರಾಗಿ ಭೂರಿದಕ್ಷಿಣೆಯನ್ನು ಕೊಡಬೇಕು.

೧೧೧. ವಿಪ್ರರನ್ನು ವಿಧಿವತ್ತಾಗಿ ಪೂಜಿಸಿ ಇಂದ್ರಿಯಗಳನ್ನಡಗಿಸಿಕೊಂಡು ಭೋಜನಮಾಡಬೇಕು.

೧೧೨. ಮರುದಿನವೂ ಎದ್ದು ಪರಮಶ್ರದ್ಧೆಯನ್ನು ತಾಳಿ ರುಕ್ಮಿಣೀ ತೀರ್ಥವೇ ಮೊದಲಾದ ತೀರ್ಥಗಳನ್ನು ಕ್ರಮವಾಗಿ ದರ್ಶನಮಾಡಬೇಕು.

೧೧೩. ಅವುಗಳಲ್ಲೆಲ್ಲ ಸ್ನಾನಮಾಡಿ ಶಕ್ತ್ಯನುಸಾರವಾಗಿ ದಾನಮಾಡಿ ಮನಸ್ಸು ಮಾತು ಮೈಗಳಿಂದ ನಿರ್ಮಲನಾಗಿ ಪ್ರಯತ್ನಪೂರ್ವಕವಾಗಿ ವಿಷ್ಣುವನ್ನು ಪೂಜಿಸಬೇಕು.

೧೧೪. ಹೀಗೆ ಒಳ್ಳೆಯ ನಿಯಮಗಳನ್ನನುಸರಿಸಿ ಶುಚಿವ್ರತನಾಗಿ ಯಾತ್ರೆಯನ್ನು ಸಮಾಪ್ತಿಮಾಡಬೇಕು. ಅಲ್ಲೆಲ್ಲಿಯಾದರೂ ಮೃತನಾದಲ್ಲಿ ಆ ಧೀರನು ಪರಮಶ್ರೇಷ್ಠವಾದ ಮೋಕ್ಷವನ್ನು ಪಡೆಯುತ್ತಾನೆ.

ಅಗಸ್ತ್ಯ ಉವಾಚ :—

ವಸಿಷ್ಠೋಕ್ತಮಿತಿ ಶ್ರುತ್ವಾ ಕೃತ್ವಾ ಚೈವ ಯಥಾವಿಧಿ ।
ವಿಭೀಷಣಪುರೋಗಾಸ್ತೇ ಬಭೂವುರ್ನಿರ್ಮಲಾಸ್ತದಾ ॥ ೧೧೫ ॥

ಇತಿ ಬಹುಲ ವಿಧಾನೈಸ್ತೀರ್ಥಯಾತ್ರಾಂ ವಿಧಾಯ
ಪ್ರಚುರಸುಕೃತ ಪೂರ್ಣಾಸ್ತೇ ಚ ಸುಗ್ರೀವಮುಖ್ಯಾಃ ।
ಗತಮಲಿನಸುದೇಹಾಃ ಸ್ವರ್ಗಚರ್ಯಾಪ್ರಯತ್ನಾ
ದುಪಗುಣಿತಗುಣೌಘಾಸ್ತೇ ಬಭೂವುಃ ಸಮಸ್ತಾಃ ॥ ೧೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಮಹಾರತ್ನತೀರ್ಥ, ದುರ್ಭರತೀರ್ಥ, ಮಹಾಭರತೀರ್ಥ, ಮಹಾವಿದ್ಯಾತೀರ್ಥ, ಸಿದ್ಧಪೀಠ, ಕ್ಷೀರೇಶ್ವರ, ಸೀತಾಕುಂಡ, ಸುಗ್ರೀವತೀರ್ಥ, ಹನುಮತ್ಕುಂಡ, ವಿಭೀಷಣಸರಸ್ತೀರ್ಥ, ಅಯೋಧ್ಯಾ ಯಾತ್ರಾವಿಧಿಕ್ರಮವರ್ಣನಂ"ನಾಮಾಷ್ಟಮೋಽಧ್ಯಾಯಃ

---

೧೧೫. ಅಗಸ್ತ್ಯನು ಹೇಳುತ್ತಾನೆ :— ವಸಿಷ್ಠನು ಹೇಳಿದ ಈ ಮಾತುಗಳನ್ನು ಕೇಳಿ ಅದರಂತೆ ವಿಧಿವತ್ತಾಗಿ ನಡೆಸಿ ವಿಭೀಷಣನೇ ಮೊದಲಾದವರೆಲ್ಲರೂ ನಿರ್ಮಲರಾದರು.

೧೧೬. ಈ ರೀತಿಯಾಗಿ ಬಹುವಿಧಾನಗಳಿಂದ ತೀರ್ಥಯಾತ್ರೆಯನ್ನು ಮಾಡಿ ಹೆಚ್ಚಾದ ಸುಕೃತದಿಂದ ತುಂಬಿದವರಾಗಿ ಸುಗ್ರೀವನೇ ಮೊದಲಾದ ಆ ಸಮಸ್ತರೂ ಮಲಿನತೆಯನ್ನು ತೊಳೆದು ಬೆಳಗುವ ಒಳ್ಳೆಯ ದೇಹವುಳ್ಳವರಾಗಿ ಸ್ವರ್ಗಕ್ಕೊಪ್ಪುವ ಚರ್ಯೆಗಳನ್ನು ತಳೆಯುವ ಪ್ರಯತ್ನದಿಂದ ಹಲವುಮಡಿ ಹೆಚ್ಚಾದ ಗುಣಗಳುಳ್ಳವರಾಗಿ ಶೋಭಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಮಹಾರತ್ನತೀರ್ಥ, ದುರ್ಭರತೀರ್ಥ, ಮಹಾಭರತೀರ್ಥ, ಮಹಾವಿದ್ಯಾತೀರ್ಥ, ಸಿದ್ಧಪೀಠ, ಕ್ಷೀರೇಶ್ವರ, ಸೀತಾಕುಂಡ, ಸುಗ್ರೀವತೀರ್ಥ, ಹನುಮತ್ಕುಂಡ, ವಿಭೀಷಣಸರಸ್ತೀರ್ಥ, ಅಯೋಧ್ಯಾಯಾತ್ರಾವಿಧಿಕ್ರಮವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವಮೋಽಧ್ಯಾಯಃ

**ಗಯಾಕೂಪ, ಪಿಶಾಚಮೋಚನತೀರ್ಥ, ಮಾನಸತೀರ್ಥ, ತಮಸಾನದೀ, ಮಾಂಡವ್ಯಾದ್ಯಾಶ್ರಮ, ಸೀತಾಕುಂಡ, ದುಗ್ಧೇಶ್ವರ ಭೈರವಭಾರತಕುಂಡ, ಜಟಾಕುಂಡ ಮಾಹಾತ್ಮ್ಯವರ್ಣನಂ**

**ಅಗಸ್ತ್ಯ ಉವಾಚ :—**

**ಜಟಾಕುಂಡತ ಆಜ್ಞೇಯದಿಗ್ದಲೇ ಸಂಶ್ರಿತಂ ಮಹತ್ ।**
**ಗಯಾಕೂಪಮಿತಿ ಖ್ಯಾತಂ ಸರ್ವಾಭೀಷ್ಟಫಲಪ್ರದಂ ॥ ೧ ॥**
**ಯತ್ರ ಸ್ನಾತ್ವಾ ಚ ದತ್ವಾ ಚ ಯಥಾಶಕ್ತ್ಯಾ ಜಿತೇಂದ್ರಿಯಃ ।**
**ಸರ್ವಾನ್ಕಾಮಾನವಾಪ್ನೋತಿ ಶ್ರಾದ್ಧಂ ಕೃತ್ವಾ ದ್ವಿಜೋತ್ತಮಃ ॥ ೨ ॥**
**ನರಕಸ್ಥಾಶ್ಚ ಯೇ ಕೇಚಿತ್ಪಿತರಶ್ಚ ಪಿತಾಮಹಾಃ ।**
**ವಿಷ್ಣುಲೋಕೇ ತು ಗಚ್ಛಂತಿ ತಸ್ಮಿನ್ಶ್ರಾದ್ಧೇ ಕೃತೇ ತು ವೈ ॥ ೩ ॥**
**ತಸ್ಮಿನ್ ಶ್ರಾದ್ಧೇ ಕೃತೇ ವಿಪ್ರ ಪಿತೄಣಾಮನೃಣೋ ಭವೇತ್ ।**
**ಶಕ್ತಿಭಿಃ ಪಿಂಡದಾನಂ ತು ಸಯವೈಃ ಪಾಯಸೇನ ಚ ॥ ೪ ॥**
**ಕರ್ತವ್ಯಮೃಷಿನಿರ್ದಿಷ್ಟಂ ಪಿಣ್ಯಾಕೇನ ಗುಡೇನ ವಾ ।**
**ಶ್ರಾದ್ಧಂ ತತ್ತೀರ್ಥಕೇ ಪ್ರೋಕ್ತಂ ಪಿತೄಣಾಂ ತುಷ್ಟಿಕಾರಕಂ ॥ ೫ ॥**

---

## ಕನ್ನಡದ ಅನುವಾದ

**ಗಯಾಕೂಪ, ಪಿಶಾಚಮೋಚನತೀರ್ಥ, ಮಾನಸತೀರ್ಥ, ತಮಸಾನದಿ, ಮಾಂಡವ್ಯಾದ್ಯಾಶ್ರಮ, ಸೀತಾಕುಂಡ, ದುಗ್ಧೇಶ್ವರ ಭೈರವ ಭರತಕುಂಡ, ಜಟಾಕುಂಡಗಳ ಮಾಹಾತ್ಮ್ಯವರ್ಣನ**

೧. ಅಗಸ್ತ್ಯನು ಹೇಳುತ್ತಾನೆ:— ಜಟಾಕುಂಡಕ್ಕೆ ಆಗ್ನೇಯದಿಕ್ಕಿನಲ್ಲಿ ಗಯಾಕೂಪವೆಂದು ಪ್ರಖ್ಯಾತವಾಗಿ ಸರ್ವಾಭೀಷ್ಟಫಲದಾಯಕವೂ, ಮಹತ್ತರವೂ ಆದ ಒಂದು ತೀರ್ಥವಿರುವುದು.

೨. ದ್ವಿಜೋತ್ತಮನು ಜಿತೇಂದ್ರಿಯನಾಗಿ ಅಲ್ಲಿ ಸ್ನಾನಮಾಡಿ ಯಥಾಶಕ್ತಿಯಾಗಿ ದಾನಮಾಡಿ ಶ್ರಾದ್ಧವನ್ನಾಚರಿಸಿದರೆ ತನ್ನ ಇಷ್ಟಾರ್ಥಗಳೆಲ್ಲವನ್ನೂ ಪಡೆಯುತ್ತಾನೆ.

೩. ಅಲ್ಲಿ ಶ್ರಾದ್ಧಮಾಡಿದ್ದೇ ಆದರೆ ನರಕದಲ್ಲಿರುವ ಪಿತೃಗಳೂ, ಪಿತಾಮಹರೂ ವಿಷ್ಣುಲೋಕಕ್ಕೆ ಹೋಗುತ್ತಾರೆ.

೪–೫. ಎಲೈ ವಿಪ್ರನೇ! ಮಾನವನು ಆ ತೀರ್ಥದಲ್ಲಿ ಶ್ರಾದ್ಧಮಾಡಿದ್ದಾದರೆ ಪಿತೃಋಣವನ್ನು ತೀರಿಸಿ ಋಣವಿಮೋಚನೆಯನ್ನು ಹೊಂದುತ್ತಾನೆ. ಪಾಯಸಗಳಿಂದಲೂ, ಯವಗಳಿಂದಲೂ ಶಕ್ತ್ಯನುಗುಣವಾಗಿ ಪಿಂಡಗಳನ್ನು ಮಾಡಿ ಅಲ್ಲಿ

**ತತ್ರ ಶ್ರಾದ್ಧಂ ಪ್ರಕರ್ತವ್ಯಂ ನರೈಃ ಶ್ರದ್ಧಾಸಮನ್ವಿತೈಃ ।**
**ತುಷ್ಯಂತಿ ಪಿತರಸ್ತೇಷಾಂ ತುಷ್ಟಾಃ ಸ್ಯುಃ ಸರ್ವದೇವತಾಃ ॥ ೬ ॥**
**ತುಷ್ಟೇಷು ಪಿತೃಷು ಶ್ರೀಮಾನ್ಸ್ಯಾಯತೇ ಪುತ್ರವಾಂಸ್ತಥಾ ।**
**ಶ್ರಾದ್ಧೇನ ಪಿತರಸ್ತುಷ್ಟಾಃ ಪ್ರಯಚ್ಛಂತಿ ಸುತಾನ್ಬಹೂನ್ ॥ ೭ ॥**
**ಶ್ರಿಯಂ ಚ ವಿಪುಲಾನ್ ಭೋಗಾನ್ ಶ್ರಾದ್ಧಕೃದ್ಭ್ಯೋ ನ ಸಂಶಯಃ ।**
**ತಸ್ಮಾದತ್ರ ವಿಧಾನೇನ ವಿಧಾತವ್ಯಂ ಪ್ರಯತ್ನತಃ ॥ ೮ ॥**
**ಶ್ರಾದ್ಧಂ ಶ್ರದ್ಧಾಯುತೈಃ ಸಮ್ಯಗಭೀಷ್ಟಫಲಕಾಂಕ್ಷಿಭಿಃ ।**
**ಗಯಾಕೂಪೇ ವಿಶೇಷೇಣ ಪಿತೄಣಾಂ ದತ್ತಮಕ್ಷಯಂ ॥ ೯ ॥**
**ಸೋಮವಾರೇಣ ಸಂಯುಕ್ತಾ ಅಮಾವಾಸ್ಯಾ ಯದಾ ಭವೇತ್ ।**
**ತತ್ರಾನಂತಫಲಂ ಶ್ರಾದ್ಧಂ ಪಿತೄಣಾಂ ದತ್ತಮಕ್ಷಯಂ ॥ ೧೦ ॥**
**ಅನ್ಯದಾ ಸೋಮವಾರೇಣ ತತ್ರ ಶ್ರಾದ್ಧಂ ವಿಧಾನತಃ ।**
**ಪಿತೃಸಂತೋಷದಂ ನಿತ್ಯಂ ತತ್ರ ದತ್ತಾಕ್ಷಯೋ ಭವೇತ್ ॥ ೧೧ ॥**

---

ಪಿತೃಗಳಿಗೆ ಪಿಂಡಪ್ರದಾನಮಾಡಬೇಕು; ಅಥವಾ ಋಷಿಗಳು ನಿರ್ದೇಶ ಮಾಡಿರುವಂತೆ ಪಿಣ್ಯಾಕಹಿಟ್ಟಿನಿಂದಲಾಗಲಿ, ಬೆಲ್ಲದಿಂದಲಾಗಲಿ ಪಿಂಡಪ್ರದಾನ ಮಾಡಬೇಕು. ಆ ತೀರ್ಥದಲ್ಲಿ ಶ್ರಾದ್ಧವು ಪಿತೃಗಳಿಗೆ ತೃಪ್ತಿಯುಂಟುಮಾಡು ವುದೆಂದು ಹೇಳಿದೆ.

೬. ಮಾನವರು ಶ್ರದ್ಧೆಯಿಂದ ಆ ಗಯಾಕೂಪದಲ್ಲಿ ಶ್ರಾದ್ಧವನ್ನು ಮಾಡ ಬೇಕು. ಅದರಿಂದ ಅವರ ಪಿತೃಗಳೆಲ್ಲರೂ ತೃಪ್ತರಾಗುತ್ತಾರೆ; ಸಮಸ್ತ ದೇವತೆಗಳೂ ಸಂತೋಷಗೊಳ್ಳುತ್ತಾರೆ.

೭. ಪಿತೃಗಳು ಸಂತುಷ್ಟರಾದರೆ ಶ್ರಾದ್ಧಮಾಡಿದಾತನು ಶ್ರೀಮಂತನೂ ಪುತ್ರವಂತನೂ ಆಗುತ್ತಾನೆ. ಶ್ರಾದ್ಧದಿಂದ ಪಿತೃಗಳು ಸಂತುಷ್ಟರಾಗಿ ಬಹು ಜನ ಪುತ್ರರನ್ನು ಅನುಗ್ರಹಿಸುತ್ತಾರೆ.

೮–೯. ಅಲ್ಲದೆ ಸಂಪತ್ತನ್ನೂ ವಿಪುಲವಾದ ಭೋಗಗಳನ್ನೂ ಶ್ರಾದ್ಧಕರ್ತರಿಗೆ ನೀಡುತ್ತಾರೆ. ಇದರಲ್ಲಿ ಸಂಶಯವಿಲ್ಲವು. ಆದುದರಿಂದ ಇಷ್ಟಾರ್ಥಫಲವನ್ನು ಬಯಸುವವರು ಇಲ್ಲಿ ಶ್ರಾದ್ಧವಿಧಾನವನ್ನನುಸರಿಸಿ ಪ್ರಯತ್ನಪೂರ್ವಕವಾಗಿ ಶ್ರದ್ಧೆಯಿಂದ ಪಿತೃಶ್ರಾದ್ಧಮಾಡಬೇಕು. ಪಿತೃಗಳಿಗೆ ಗಯಾಕೂಪದಲ್ಲಿ ಕೊಟ್ಟದ್ದು ವಿಶೇಷವಾಗಿ ಅಕ್ಷಯವಾಗುವುದು.

೧೦. ಅಮಾವಾಸ್ಯೆಯೊಡಗೂಡಿದ ಸೋಮವಾರವು ಬಂದಂದು ಶ್ರಾದ್ಧ ಮಾಡುವುದು ಅನಂತಫಲವನ್ನು ಕೊಡುವುದು. ಆಗ ಪಿತೃಗಳಿಗೆ ಕೊಟ್ಟದ್ದು ನಿಸ್ಸಂಶಯವಾಗಿಯೂ ಅಕ್ಷಯವಾಗುವುದು.

೧೧. ಬೇರೆ ಕಾಲಗಳಲ್ಲಿ ಸೋಮವಾರದ ದಿನ ವಿಧಾನಪೂರ್ವಕವಾಗಿ

ತತ್ರ ಪೂರ್ವದಿಶಾಭಾಗೇ ತೀರ್ಥಂ ಸರ್ವೋತ್ತಮೋತ್ತಮಂ ।
ಪಿಶಾಚಮೋಚನಂ ನಾಮ ವಿದ್ಯತೇ ಚ ಫಲಪ್ರದಂ ॥ ೧೨ ॥
ತತ್ರ ಸ್ನಾತ್ವಾ ಚ ದತ್ವಾ ಚ ಪಿಶಾಚೋ ನೈವ ಜಾಯತೇ ।
ತತ್ರ ಸ್ನಾನಂ ತಥಾ ದಾನಂ ಶ್ರಾದ್ಧಂ ಚೈವ ವಿಶೇಷತಃ ।
ಕರ್ತವ್ಯಂ ಚ ಪ್ರಯತ್ನೇನ ನರೈಃ ಶ್ರದ್ಧಾಸಮನ್ವಿತೈಃ ॥ ೧೩ ॥
ಮಾರ್ಗಶೀರ್ಷೇ ಶುಕ್ಲಪಕ್ಷೇ ಚತುರ್ದಶ್ಯಾಂ ವಿಶೇಷತಃ ।
ಸ್ನಾನಂ ತತ್ರ ಪ್ರಕರ್ತವ್ಯಂ ಪಿಶಾಚತ್ವವಿಮುಕ್ತಯೇ ॥ ೧೪ ॥
ತತ್ಸನ್ನಿಧೌ ಪೂರ್ವಭಾಗೇ ಮಾನಸಂ ನಾಮ ನಾಮತಃ ।
ತೀರ್ಥಂ ಪುಣ್ಯನಿವಾಸಾಗ್ರ್ಯಂ ಸ್ನಾತವ್ಯಂ ಚ ವಿಶೇಷತಃ ।
ತತ್ರ ಸ್ನಾನೇನ ದಾನೇನ ಸರ್ವಾನ್ಕಾಮಾನವಾಪ್ನುಯಾತ್ ॥ ೧೫ ॥
ನಾನಾವಿಧಾನಿ ಪಾಪಾನಿ ಮೇರುತುಲ್ಯಾನಿ ವೈ ಪುನಃ ।
ತತ್ರ ಸ್ನಾನಾತ್ಕ್ಷಯಂ ಯಾಂತಿ ನಾತ್ರ ಕಾರ್ಯಾ ವಿಚಾರಣಾ ॥ ೧೬ ॥
ಯತ್ಕಿಂಚಿದ್ವಿದ್ಯತೇ ಪಾಪಂ ಮಾನಸಂ ಕಾಯಿಕಂ ತಥಾ ।
ವಾಚಿಕಂ ಚ ತಥಾ ಪಾಪಂ ಸ್ನಾನತೋ ವಿಲಯಂ ವ್ರಜೇತ್ ॥ ೧೭ ॥

---

ಶ್ರಾದ್ಧಮಾಡಿದರೆ ಪಿತೃಗಳಿಗೆ ಸತತವಾದ ತೃಪ್ತಿಯನ್ನುಂಟುಮಾಡುವುದು. ಅಲ್ಲಿ ಕೊಟ್ಟದ್ದು ಅಕ್ಷಯವಾಗುವುದು.

೧೨. ಅಲ್ಲಿಗೆ ಪೂರ್ವದಿಗ್ಭಾಗದಲ್ಲಿ ಸರ್ವೋತ್ತಮೋತ್ತಮವೂ, ಫಲಪ್ರದವೂ ಆದ ಪಿಶಾಚಮೋಚನವೆಂಬ ತೀರ್ಥವಿರುವುದು.

೧೩. ಅಲ್ಲಿ ಸ್ನಾನಮಾಡಿ ದಾನಮಾಡಿದವನು ಎಂದಿಗೂ ಪಿಶಾಚಿಯಾಗುವುದಿಲ್ಲವು. ಮಾನವರು ಆ ಪಿಶಾಚಮೋಚನತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನೂ, ದಾನವನ್ನೂ, ಶ್ರಾದ್ಧವನ್ನೂ ಪ್ರಯತ್ನಪೂರ್ವಕವಾಗಿ ನೆರವೇರಿಸಬೇಕು.

೧೪. ಮಾರ್ಗಶೀರ್ಷಮಾಸದ ಶುಕ್ಲಚತುರ್ದಶಿಯಲ್ಲಿ ಪಿಶಾಚತ್ವನಿವಾರಣೆಗಾಗಿ ಅಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಬೇಕು.

೧೫. ಅದರ ಪೂರ್ವದಿಗ್ಭಾಗದಲ್ಲಿಯೆ ಮಾನಸವೆಂಬ ತೀರ್ಥವಿರುವುದು. ಅದು ಪುಣ್ಯತೀರ್ಥಗಳಲ್ಲಿ ಅಗ್ರಗಣ್ಯವಾದುದು. ಅಲ್ಲಿ ವಿಶೇಷವಾಗಿ ಸ್ನಾನಮಾಡಬೇಕು. ಅಲ್ಲಿಯ ಸ್ನಾನದಿಂದಲೂ, ದಾನದಿಂದಲೂ ಮಾನವನು ಸರ್ವಕಾಮಗಳನ್ನು ಪಡೆಯುವನು.

೧೬. ಮೇರುವಿಗೆ ಸಮಾನವಾಗಿ ಬೆಳೆದಿರುವ ಬಗೆಬಗೆಯ ಪಾಪಗಳೂ ಅಲ್ಲಿಯ ಸ್ನಾನದಿಂದ ಕ್ಷಯವನ್ನೈದುತ್ತವೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೧೭. ಮನಸ್ಸಿನಿಂದಲೂ, ದೇಹದಿಂದಲೂ, ಮಾತಿನಿಂದಲೂ ಮಾಡಿದ

ಪ್ರೌಷ್ಠಪದ್ಯಾಂ ಸದಾ ಕಾರ್ಯಾ ಪೌರ್ಣಮಾಸ್ಯಾಂ ವಿಶೇಷತಃ ।
ಯಾತ್ರಾ ತಸ್ಯ ನೃಭಿರ್ವಿಪ್ರ ಪುಣ್ಯವದ್ಭಿಃ ಕ್ರಿಯಾಪರೈಃ ॥ ೧೮ ॥
ತಸ್ಮಾದ್ದಕ್ಷಿಣದಿಗ್ಭಾಗೇ ವರ್ತತೇ ಸುಕೃತೈಕಭೂಃ ।
ತಮಸಾನಾಮ ತಟಿನೀ ಮಹಾಪಾತಕನಾಶಿನೀ ॥ ೧೯ ॥
ಯತ್ರ ಸ್ನಾನಂ ತಥಾ ದಾನಂ ಸರ್ವಪಾಪಹರಂ ಸದಾ ।
ಯಸ್ಯಾಸ್ತಟೇ ತಥಾ ರಮ್ಯೇ ಸರ್ವದಾ ಫಲದಾಯಕೇ ॥ ೨೦ ॥
ನಾನಾವಿಧಾನಿ ಸ್ಥಾನಾನಿ ಮುನೀನಾಂ ಭಾವಿತಾತ್ಮನಾಂ ।
ಮಾಂಡವ್ಯಸ್ಯ ಮುನೇಃ ಸ್ಥಾನಂ ವರ್ತತೇ ಪಾಪನಾಶನಂ ॥ ೨೧ ॥
ಯಸ್ಯಾಸ್ತೀರೇ ಮುನಿಶ್ರೇಷ್ಠ ಸರ್ವತ್ರ ಸುಮನೋಹರಂ ।
ತಸ್ಯಾಶ್ರಮಪದಂ ರಮ್ಯಂ ನಾನಾವೃಕ್ಷಮನೋಹರಂ ॥ ೨೨ ॥
ಯಸ್ಮಾತ್ ಸ್ಥಾನಾತ್ ಸಮುದ್ಭೂತಾ ತಮಸಾ ಸುತರಂಗಿಣೀ ।
ತದ್ವನಂ ಪುಣ್ಯಮಧಿಕಂ ಪಾವನಂ ಪದಮುತ್ತಮಂ ॥ ೨೩ ॥

---

ಯಾವುದೇ ಪಾಪವಿದ್ದರೂ ಅಲ್ಲಿ ಸ್ನಾನಮಾಡುವುದರಿಂದ ನಾಶವಾಗಿ ಹೋಗುತ್ತದೆ.

೧೮. ಎಲೈ ವಿಪ್ರನೇ! ಕ್ರಿಯಾಪರರಾದ (ಕರ್ಮಠರಾದ) ಪುಣ್ಯವಂತರು ಪ್ರತಿವರ್ಷದ ಭಾದ್ರಪದಮಾಸದಲ್ಲಿಯೂ ಅಲ್ಲಿ ಯಾತ್ರೆ ಮಾಡಬೇಕು. ಅದರಲ್ಲಿಯೂ ಭಾದ್ರಪದ ಪೂರ್ಣಿಮೆಯಲ್ಲಿ ವಿಶೇಷವಾಗಿ ಯಾತ್ರೆಯನ್ನು ನಡೆಸಬೇಕು.

೧೯. ಎಲೈ ವಿಪ್ರರೇ! ಆ ಮಾನಸತೀರ್ಥಕ್ಕೆ ದಕ್ಷಿಣದಲ್ಲಿ ಸುಕೃತಕ್ಕೆ ತಾನೇ ನೆಲೆಯೆನಿಸಿ, ಮಹಾಪಾತಕಗಳನ್ನೂ ನಾಶಮಾಡುವುದಾದ 'ತಮಸಾ' ಎಂಬ ನದಿಯಿರುವುದು.

೨೦–೨೨. ಆ ನದಿಯಲ್ಲಿ ಸ್ನಾನವೂ, ದಾನವೂ ಸರ್ವಕಾಲಗಳಲ್ಲಿಯೂ ಸರ್ವಪಾಪಗಳನ್ನೂ ಪರಿಹರಿಸುತ್ತವೆ. ಸರ್ವದಾ ಫಲಪ್ರದವೆನಿಸಿರುವ ಆ ನದಿಯ ರಮ್ಯವಾದ ತೀರಗಳಲ್ಲಿ ಆತ್ಮಜ್ಞಾನಿಗಳಾದ ಮುನಿಗಳ ಅನೇಕ ಆಶ್ರಮ ಪ್ರದೇಶಗಳಿರುವುವು. ಎಲೈ ಮುನಿಶ್ರೇಷ್ಠನೇ! ಎಲ್ಲ ಕಡೆಯೂ ಬಹು ಮನೋಹರವಾಗಿ ಪಾಪನಾಶಕವೂ ಆಗಿರುವ ಮಾಂಡವ್ಯಮುನಿಯ ಆಶ್ರಮವೂ ಅಲ್ಲಿಯೇ ಇರುವುದು. ನಾನಾ ವೃಕ್ಷಗಳಿಂದ ಮನೋಹರವಾಗಿವಾರುವುದು.

೨೩. ಆ ಸ್ಥಾನದಿಂದಲೇ ಶ್ರೇಷ್ಠವೆನಿಸಿದ ತಮಸಾನದಿಯು ಉದ್ಭವಿಸಿತು. ಆದುದರಿಂದ ಆ ಆಶ್ರಮೋಪವನವು ಬಹು ಪುಣ್ಯಕರವಾದುದೂ, ಪಾವನವಾದುದೂ ಆದ ಉತ್ತಮಸ್ಥಾನವಾಗಿರುವುದು.

ಯಸ್ಯ ದರ್ಶನತೋ ನೃಣಾಂ ಸರ್ವಪಾಪಕ್ಷಯೋ ಭವೇತ್ ॥ ೨೪ ॥
ಪ್ರಫುಲ್ಲನಾನಾವಿಧಗುಲ್ಮಶೋಭಿತಂ
ಲತಾಪ್ರತಾನಾವನತಂ ಮನೋಹರಂ ।
ವಿರೂಢಪುಷ್ಪೈಃ ಪರಿತಃ ಪ್ರಿಯಂಗುಭಿಃ
ಸುಪುಷ್ಪಿತೈಃ ಕಂಟಕಿತೈಶ್ಚ ಕೇತಕೈಃ ॥ ೨೫ ॥
ತಮಾಲಗುಲ್ಮೈರ್ನಿಚಿತಂ ಸುಗಂಧಿಭಿಃ
ಸಕರ್ಣಿಕಾರೈರ್ಬಕುಲೈಶ್ಚ ಸರ್ವತಃ ।
ಅಶೋಕಪುನ್ನಾಗವರೈಃ ಸುಪುಷ್ಪಿತೈ
ರ್ದ್ವಿರೇಫಮಾಲಾಕುಲಪುಷ್ಪಸಂಚಯೈಃ ॥ ೨೬ ॥
ಕ್ವಚಿತ್ಪ್ರಫುಲ್ಲಾಂಬುಜರೇಣುಭೂಷಿತೈ
ರ್ವಿಹಂಗಮೈಶ್ಚಾರುಫಲಪ್ರಚಾರಿಭಿಃ ।
ವಿನಾದಿತಂ ಸಾರಸಮುತ್ಕುಲಾದಿಭಿಃ
ಪ್ರಮತ್ತದಾತ್ಯೂಹಕುಲೈಶ್ಚ ವಲ್ಗುಭಿಃ ॥ ೨೭ ॥
ಕ್ವಚಿಚ್ಚ ಚಕ್ರಾಹ್ವರವೋಪನಾದಿತಂ
ಕ್ವಚಿಚ್ಚ ಕಾದಂಬಕದಂಬಕೈರ್ಯುತಂ ।

---

೨೪. ಪವಿತ್ರವಾದ ಆ ತಪೋವನದ ದರ್ಶನದಿಂದ ಮಾನವರಿಗೆ ಸಮಸ್ತ ಪಾಪಗಳೂ ನಿವಾರಣೆಯಾಗುತ್ತವೆ.

೨೫. ಆ ವನವು ಕುಸುಮಿಸಿರುವ ಬಗೆಬಗೆಯ ಪೊದೆಗಳಿಂದಲೂ, ಬಾಗಿ ಬಳುಕುತ್ತಿರುವ ಬಳ್ಳಿಬಳಗಗಳಿಂದಲೂ, ಚೆನ್ನಾಗಿ ಹೂಬಿಟ್ಟಿರುವ ಪ್ರಿಯಂಗು ವೃಕ್ಷಗಳಿಂದ ಸುತ್ತುವರೆದುದಾಗಿಯೂ ಬಹು ಮನೋಹರವಾಗಿರುವುದಲ್ಲದೆ, ಕೇದಗೆಯ ಪೊದೆಗಳಿಂದಲೂ ತುಂಬಿ ತುಳುಕುತ್ತಿರುವುದು.

೨೬–೨೭. ಹೊಂಗೆಯ ತೋಪುಗಳಿಂದ ಕಿಕ್ಕಿರಿದು, ಸುಗಂಧಭರಿತವಾದ ಕರ್ಣಿಕಾರಗಳಿಂದಲೂ, ಬಕುಲವೃಕ್ಷಗಳಿಂದಲೂ ನಿಬಿಡವಾಗಿರುವುದು. ಅಲ್ಲಿಯ ಕೆಲವೆಡೆಗಳಲ್ಲಿ ಅಶೋಕ, ಪುನ್ನಾಗ ವೃಕ್ಷಗಳು ಚೆನ್ನಾಗಿ ಹೂ ಬಿಟ್ಟಿರಲು ಆ ಹೂವುಗಳ ಗುಂಪಿನಲ್ಲೆಲ್ಲ ದುಂಬಿಗಳ ಸಾಲುಗಳು ದಟ್ಟವಾಗಿ ಸೇರಿ ಮೊರೆಯುತ್ತಿರುವುವು. ಒಂದೊಂದು ಕಡೆ ಚೆನ್ನಾಗಿ ಅರಳಿದ ಪದ್ಮಪುಷ್ಪಗಳ ರೇಣುಗಳಿಂದ ಭೂಷಿತಗಳಾಗಿ ಮನೋಹರವಾದ ಫಲಗಳಿಗಾಗಿ ಓಡಾಡುತ್ತಿರುವ ಸಾರಸಗಳಿಂದಲೂ, ಬೇಟೆವಕ್ಕಿಗಳಿಂದಲೂ, ಮದಿಸಿದ ನೀರುಕೋಳಿಗಳಿಂದಲೂ ಹಕ್ಕಿಗಳಿಂದಲೂ ಕಂಗೊಳಿಸುತ್ತಿರುವ ಸರೋವರವು ಕಲಕಲನಾದದಿಂದ ತುಂಬಿ ಸುಂದರವಾಗಿರುವುದು.

೨೮. ಕೆಲವೆಡೆಗಳಲ್ಲಿ ಚಕ್ರವಾಕಪಕ್ಷಿಗಳ ಧ್ವನಿಯಿಂದ ನಾದಿತವಾಗಿಯೂ

ಕ್ವಚಿಚ್ಚ ಕರಾಂಡವನಾದನಾದಿತಂ
ಕ್ವಚಿಚ್ಚ ಮತ್ತಾಲಿಕುಲಾಕುಲೀಕೃತಂ ॥ ೨೮ ॥
ಮದಾಕುಲಾಭಿರ್ಭ್ರಮರೀಭಿರಾದರಾ
ನ್ನಿಷೇವಿತಂ ಚಾರುಸುಗಂಧಪುಷ್ಪವತ್ ।
ಕ್ವಚಿಚ್ಚ ಪುಷ್ಪೈಃ ಸಹಕಾರವೃಕ್ಷೈ
ರ್ಲತೋಪಗೂಢೈಸ್ತಿಲಕದ್ರುಮೈಶ್ಚ ॥ ೨೯ ॥
ಪ್ರಹೃಷ್ಟನಾನಾವಿಧಪಕ್ಷಿಸೇವಿತಂ
ಪ್ರಮತ್ತಹಾರೀತಕುಲೋಪನಾದಿತಂ ।
ಸಮಂತತಃ ಸುಂದರದರ್ಶನೀಯತಾಂ
ಸಮುದ್ವಹತ್ತದ್ವನಮುಲ್ಲಸನ್ಮಹತ್ ॥ ೩೦ ॥
ನಿಬಿಡನಿಚುಲನೀಲಂ ನೀಲಕಂಠಾಭಿರಾಮಂ
ಮದಮುದಿತವಿಹಂಗೀವೃಂದನಾದಾಭಿರಾಮಂ ।
ಕುಸುಮಿತತರುಶಾಖಾಲೀನಮತ್ತದ್ವಿರೇಫಂ
ನವಕಿಸಲಯಶೋಭಾಶೋಭಿತಂ ಸತ್ಫಲಾಢ್ಯಂ ॥ ೩೧ ॥

---

ಕೆಲವೆಡೆಗಳಲ್ಲಿ ಕಲಹಂಸಪಕ್ಷಿಗಳ ಸಮೂಹಗಳಿಂದ ಕೂಡಿಯೂ ಸೊಗಸುತ್ತಿರುವುದು. ಕೆಲವೆಡೆಗಳು ಕಾರಂಡವನಾದಗಳಿಂದ ತುಂಬಿರುವುವು. ಕೆಲವೆಡೆಗಳು ಮದಿಸಿದ ಭ್ರಮರಸಮೂಹಗಳಿಂದ ಆಕುಲಗೊಂಡಿರುವುವು.

೨೯. ಸುಗಂಧಭರಿತವಾಗಿ ಮನೋಹರವಾದ ಪುಷ್ಪಗಳಲ್ಲಡಗಿ ಮದಿಸಿ ಝುಂಕಾರಮಾಡುತ್ತಿರುವ ಪೆಣ್ದುಂಬಿಗಳಿಂದ ಸರ್ವಕಡೆಗಳಲ್ಲೂ ಆ ವನವು ಸೇವಿಸಲ್ಪಡುತ್ತಿರುವುದು. ಒಂದೊಂದು ಕಡೆ ಹೂವುಗಳಿಂದ ತುಂಬಿ ತುಳುಕುತ್ತಿರುವ ಮಾವಿನ ಮರಗಳಿಂದಲೂ, ಬಳ್ಳಿಗಳು ಹಬ್ಬಿ ಮರೆಯಾಗಿಹೋಗಿರುವ ತಿಲಕವೃಕ್ಷಗಳಿಂದಲೂ ಮನೋಹರವಾಗಿರುವುದು.

೩೦. ಬಹಳವಾಗಿ ಹರ್ಷಗೊಂಡಿರುವ ನಾನಾ ಬಗೆಯ ಪಕ್ಷಿಗಳಿಂದ ಆ ತಪೋವನವು ಎಲ್ಲೆಲ್ಲಿಯೂ ಸೇವಿಸಲ್ಪಡುತ್ತಿರುವುದು. ಮದಿಸಿದ ಪಾರಿವಾಳಗಳ ಗುಂಪುಗಳ ನಾದದಿಂದ ಹೊಳಲುಗೊಡುತ್ತಿರುವುದು. ಹೀಗೆ ಆ ಮಹಾವನವು ಎಲ್ಲ ಕಡೆಯಲ್ಲಿಯೂ ಸುಂದರವಾಗಿ ನೋಟಕ್ಕೆ ಸೊಗಸನ್ನು ಬೀರಿ ಬೆಳಗುತ್ತಿರುವುದು.

೩೧. ದಟ್ಟವಾಗಿ ಬೆಳೆದ ನೀರುಹಲಸಿನಗಿಡ (ನಿಚುಲ)ಗಳಿಂದ ನೀಲವರ್ಣವಾಗಿಯೂ, ನೀಲಕಂಠ (ನವಿಲು)ಗಳಿಂದ ಮನೋಹರವಾಗಿಯೂ, ಮದಿಸಿ ಸಂತೋಷಹೊಂದಿದ ಹೆಣ್ಣುಹಕ್ಕಿ ಗುಂಪುಗಳ ಬಗೆಬಗೆಯ ನಾದಗಳಿಂದಲೂ ಆ ತಪೋವನವು ಹೃದಯಂಗಮವಾಗಿದ್ದಿತು. ಹೂಬಿಟ್ಟ ಮರಗಳ ಕೊಂಬೆಗಳಲ್ಲಿ

**ಇತ್ಯಾದಿ ಬಹುಶೋಭಾಢ್ಯಂ ಸರ್ವದಿಕ್ಷು ಮನೋಹರಂ ।**
**ಯತ್ರ ಮಾಂಡವ್ಯಮುನಿನಾ ತಪಸ್ತಪ್ತಂ ಮಹತ್ಕಿಲ ।**
**ಯತ್ಪ್ರಭಾವಾದಭೂತ್ತೀರ್ಥಂ ಪಾವನಂ ತತ್ಸದಾ ಮಹತ್ ॥ ೩೨ ॥**
**ತತ್ಪೂರ್ವಂ ಗೌತಮಸ್ಯರ್ಷೇರಾಶ್ರಮಂ ಪಾವನಂ ಮಹತ್ ।**
**ತತ್ಪೂರ್ವಂ ಚ್ಯವನಸ್ಯರ್ಷೇಃ ಪರಾಶರಮುನೇರಿದಂ ।**
**ಪ್ರಥಮಂ ತೇ ಮುನಿಶ್ರೇಷ್ಠ ಪಿತುಃ ಕಿಲ ತಪೋನಿಧೇಃ ॥ ೩೩ ॥**
**ನಾನಾವಿಧಾನಿ ತೀರ್ಥಾನಿ ಚಾಶ್ರಮಾಶ್ಚೈವ ಸರ್ವಶಃ ।**
**ವರ್ತಂತೇ ತಾಪಸಾನಾಂ ಚ ಯಸ್ಯಾಸ್ತೀರೇ ಸಮಂತತಃ ॥ ೩೪ ॥**
**ತಮಸಾನಾಮ ಸಾ ಜ್ಞೇಯಾ ವರ್ತತೇ ತಟಿನೀ ಶುಭಾ ।**
**ಯಜ್ಞಯೂಪಾನ್ ಸಮುತ್ಥಾಯ ಶೋಭಿತಾ ಬಹುಶೋಭಿತಃ ॥ ೩೫ ॥**
**ತತ್ರ ಸ್ನಾನೇನ ದಾನೇನ ಶ್ರಾದ್ಧೇನ ಚ ವಿಶೇಷತಃ ।**
**ಸರ್ವಕಾಮಾರ್ಥಸಿದ್ಧಿಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ॥ ೩೬ ॥**

---

ಮದಿಸಿದ ದುಂಬಿಗಳು ಅಪಗಿದ್ದವು. ಹೊಸ ಚಿಗುರುಗಳ ಸೊಬಗಿನಿಂದ ಅವು ಬಹುವಾಗಿ ಶೋಭಿಸುತ್ತಿದ್ದುವಲ್ಲದೆ ಒಳ್ಳೆಯ ಹಣ್ಣುಗಳಿಂದಲೂ ತುಂಬಿದ್ದುವು.

೩೨. ಆ ವನವು ಇವೇ ಮೊದಲಾದ ಅನೇಕ ರಾಮಣೀಯತೆಗಳಿಂದ ಕೂಡಿ ಸರ್ವ ದಿಕ್ಕುಗಳಲ್ಲಿಯೂ ಮನೋಹರವಾಗಿ ಮೆರೆಯುತ್ತಿರುವುದು. ಅಲ್ಲಿಯೇ ಮಾಂಡವ್ಯಮುನಿಯು ಮಹತ್ತರವಾದ ತಪಸ್ಸನ್ನು ಮಾಡಿದನು. ಅವನ ತಪಃಪ್ರಭಾವದಿಂದ ಮಹತ್ತಾದ ಆ ತಮಸಾತೀರ್ಥವು ಸದಾ ಪಾವನವಾಗಿರುವುದು.

೩೩. ಅದರಿಂದ ಪೂರ್ವಕ್ಕೆ ಗೌತಮಋಷಿಯ ಮಾಹಾತ್ಮ್ಯಯುಕ್ತವಾದ ಪಾವನಾಶ್ರಮವಿರುವುದು. ಅದಕ್ಕೆ ಪೂರ್ವದಲ್ಲಿ ಚ್ಯವನಋಷಿಯ ಆಶ್ರಮವಿರುವುದು. ಎಲೈ ಮುನಿಶ್ರೇಷ್ಠನೇ! ಅಲ್ಲಿಯೆ ತಪೋಧನನಾದ ನಿಮ್ಮ ತಂದೆಯಾದ ಪರಾಶರನ ಆಶ್ರಮವೂ ಇರುವುದು.

೩೪. ಆ ತಮಸಾನದಿಯ ತೀರದಲ್ಲಿ ಸುತ್ತಮುತ್ತಲೂ ನಾನಾ ವಿಧಗಳಾದ ತೀರ್ಥಗಳೂ, ತಾಪಸಾಶ್ರಮಗಳೂ ಇರುವುವು.

೩೫. ಆ ತಮಸಾನದಿಯು ಶುಭನದಿಯೆನಿಸಿರುವುದು. ತೀರದ ಸುತ್ತಮುತ್ತಲೂ ಲೆಕ್ಕವಿಲ್ಲದಷ್ಟು ನೆಟ್ಟಿರುವ ಯಜ್ಞಯೂಪಸ್ತಂಭಗಳನ್ನೊಳಕೊಂಡು ಅದು ಬಹುವಾಗಿ ಶೋಭಿಸುತ್ತಿರುವುದು.

೩೬. ಆ ನದಿಯಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ ವಿಶೇಷವಾಗಿ ಶ್ರಾದ್ಧಮಾಡುವುದರಿಂದಲೂ ಸರ್ವ ಕಾಮಾರ್ಥಗಳ ಸಿದ್ಧಿಯೂ ಉಂಟಾಗುತ್ತದೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

ಮಾರ್ಗಶೀರ್ಷೇ ಶುಕ್ಲಪಕ್ಷೇ ಪಂಚದಶ್ಯಾಂ ವಿಶೇಷತಃ ।
ಸ್ನಾನಂ ತಸ್ಯ ಫಲಪ್ರಾಪ್ತಿದಾಯಕಂ ಸರ್ವದಾ ನೃಣಾಂ ॥ ೩೭ ॥
ತಸ್ಮಾದತ್ರ ಪ್ರಕರ್ತವ್ಯಂ ಸ್ನಾನಂ ನಿರ್ಮಲಮಾನಸೈಃ ।
ಪ್ರಯತ್ನತೋ ಮುನಿಶ್ರೇಷ್ಠ ಸರ್ವಕಾಮಾರ್ಥಸಿದ್ಧಿದಂ ॥ ೩೮ ॥
ಅತಃ ಪರಂ ಪ್ರವಕ್ಷ್ಯಾಮಿ ತಮಸಾಪರಮಂ ಶುಭಂ ।
ಸೀತಾಕುಂಡಮಿತಿಖ್ಯಾತಂ ಶ್ರೀದುಗ್ಧೇಶ್ವರಸನ್ನಿಧೌ ॥ ೩೯ ॥
ಭಾದ್ರೇ ಶುಕ್ಲಚತುರ್ಥ್ಯಾಂ ತು ತಸ್ಯ ಯಾತ್ರಾ ಶುಭಾವಹಾ ।
ಸರ್ವಕಾಮಾರ್ಥಸಿದ್ಧ್ಯರ್ಥಂ ಪೂಜ್ಯೋ ವಿಘ್ನೇಶ್ವರಸ್ತಥಾ ।
ತಸ್ಯ ಸ್ಮರಣಮಾತ್ರೇಣ ಸರ್ವವಿಘ್ನವಿನಾಶನಂ ॥ ೪೦ ॥
ತಸ್ಮಾದ್ದಕ್ಷಿಣದಿಗ್ಭಾಗೇ ಭೈರವೋನಾಮ ನಾಮತಃ ।
ಯಂ ದೃಷ್ಟ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೪೧ ॥
ರಕ್ಷಿತೋ ವಾಸುದೇವೇನ ಕ್ಷೇತ್ರರಕ್ಷಾರ್ಥಮಾದರಾತ್ ।
ತಸ್ಯ ಪೂಜಾ ವಿಧಾತವ್ಯಾ ಪ್ರಯತ್ನೇನ ಯಥಾವಿಧಿ ।
ಮನೋಽಭೀಷ್ಟಫಲಪ್ರಾಪ್ತಿರ್ಭೈರವಸ್ಯ ಸದಾಽಽದರಾತ್ ॥ ೪೨ ॥

---

೩೭. ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ಪೂರ್ಣಿಮೆಯ ದಿನ ವಿಶೇಷ ರೀತಿಯಾಗಿ ಸ್ನಾನಮಾಡಿದರೆ ಮಾನವರಿಗೆ ಸದಾಕಾಲವೂ ಸತ್ಫಲಪ್ರಾಪ್ತಿಯುಂಟಾಗುತ್ತದೆ.

೩೮. ಎಲೈ ಮುನಿಶ್ರೇಷ್ಠನೇ! ಆದ್ದರಿಂದ ಎಲ್ಲರೂ ನಿರ್ಮಲಮನಸ್ಸಿನಿಂದ ಪ್ರಯತ್ನಪೂರ್ವಕವಾಗಿ ಇಲ್ಲಿ ಸ್ನಾನಮಾಡಬೇಕು. ಇದು ಸರ್ವಾಭೀಷ್ಟಗಳ ಸಿದ್ಧಿಯನ್ನುಂಟುಮಾಡಿಕೊಡುತ್ತದೆ.

೩೯. ಇಲ್ಲಿಂದ ಮುಂದೆ, ಶ್ರೀದುಗ್ಧೇಶ್ವರನ ಸನ್ನಿಧಿಯಲ್ಲಿ ಕಂಗೊಳಿಸುತ್ತಿರುವುದೂ, ಶುಭಕರವೂ, ತಮಸಾತೀರ್ಥಕ್ಕಿಂತಲೂ ಪವಿತ್ರವೂ ಆದ ಸೀತಾಕುಂಡವೆಂದು ಪ್ರಖ್ಯಾತವಾದ ತೀರ್ಥವನ್ನು ವಿವರಿಸುತ್ತೇನೆ.

೪೦. ಭಾದ್ರಪದಮಾಸದ ಶುಕ್ಲಚತುರ್ಥಿಯಲ್ಲಿ ಅಲ್ಲಿಯ ಯಾತ್ರೆಯು ಶುಭಪನ್ನುಂಟುಮಾಡುವುದು. ಅಲ್ಲಿ ಮೊದಲು ಸರ್ವಕಾಮಾರ್ಥಸಿದ್ಧಿಗಾಗಿ ವಿಘ್ನೇಶ್ವರನನ್ನು ಪೂಜಿಸಬೇಕು. ಆವನ ಸ್ಮರಣಮಾತ್ರದಿಂದಲೇ ಸರ್ವವಿಘ್ನಗಳೂ ನಾಶವಾಗುತ್ತವೆ.

೪೧. ಆದರಿಂದ ದಕ್ಷಿಣದಿಕ್ಕಿನಲ್ಲಿ ಪ್ರಸಿದ್ಧನಾದ ಭೈರವಸ್ವಾಮಿಯಿರುವನು. ಆ ಭೈರವನನ್ನು ದರ್ಶನಮಾಡುವುದರಿಂದ ಸರ್ವಪಾಪಗಳಿಂದಲೂ ಬಿಡುಗಡೆಯುಂಟಾಗುತ್ತದೆಯೆಂಬುದರಲ್ಲಿ ಸಂಶಯವಿಲ್ಲವು.

೪೨. ಪೂರ್ವದಲ್ಲಿ ವಾಸುದೇವನೇ ಕ್ಷೇತ್ರರಕ್ಷಣೆಗೋಸ್ಕರ ಆ ಭೈರವ

ಮಾರ್ಗಶೀರ್ಷಸ್ಯ ಕೃಷ್ಣಾಯಾಂ ಅಷ್ಟಮ್ಯಾಂ ತಸ್ಯ ನಿರ್ಮಿತಾ ।
ಯಾತ್ರಾ ಸಾಂವತ್ಸರೀ ತತ್ರ ಸರ್ವಕಾಮಾರ್ಥಸಿದ್ಧಯೇ ॥ ೪೩ ॥
ಪಶೂಪಹಾರಸಂಭೂತಿಃ ಕರ್ತವ್ಯಂ ಪೂಜನಂ ಜನೈಃ ।
ಸರ್ವಕಾಮಫಲಪ್ರಾಪ್ತಿರ್ಜಾಯತೇ ನಾತ್ರ ಸಂಶಯಃ ॥ ೪೪ ॥
ನಿರ್ವಿಘ್ನಂ ತೀರ್ಥವಸತಿರ್ಭೈರವಸ್ಯ ಪ್ರಸಾದತಃ ।
ಜಾಯತೇ ತೇನ ಕರ್ತವ್ಯಾ ಪೂಜಾ ತಸ್ಯ ಪ್ರಯತ್ನತಃ ॥ ೪೫ ॥
ಏತಸ್ಮಿನ್ನುತ್ತರೇ ಭಾಗೇ ರಮ್ಯಂ ಭರತಕುಂಡಕಂ ।
ಯತ್ರ ಸ್ನಾತ್ವಾ ನರಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥ ೪೬ ॥
ತತ್ರ ಸ್ನಾನಂ ತಥಾ ದಾನಂ ಸರ್ವಮಕ್ಷಯತಾಂ ವ್ರಜೇತ್ ।
ಅನ್ನಂ ಬಹುವಿಧಂ ಧೇಯಂ ವಾಸಾಂಸಿ ವಿವಿಧಾನ್ಯಪಿ ॥ ೪೭ ॥
ಯತ್ನತೋ ದೇವತಾಃ ಪೂಜ್ಯಾ ವಸ್ತ್ರಾದಿಭಿರಲಂಕೃತೈಃ ।
ನಂದಿಗ್ರಾಮೇ ವಸನ್ಪೂರ್ವಂ ಭರತೋ ರಘುವಂಶಜಃ ॥ ೪೮ ॥

---

ನನ್ನು ಆದರದಿಂದ ಇಲ್ಲಿ ಸ್ಥಾಪಿಸಿ ರಕ್ಷಿಸಿದನು. ಪ್ರಯತ್ನಪಟ್ಟು ಯಥಾವಿಧಿಯಾಗಿ ಅವನ ಪೂಜೆಮಾಡಬೇಕು. ಭೈರವನ ಸಂತುಷ್ಟಿಯಿಂದ ಮನೋಭೀಷ್ಟಫಲಗಳು ಸಿದ್ಧಿಸುತ್ತವೆ.

೪೩. ಸಮಸ್ತ ಇಷ್ಟಾರ್ಥಗಳ ಸಿದ್ಧಿಗಾಗಿ ಮಾರ್ಗಶೀರ್ಷಮಾಸದ ಕೃಷ್ಣಾಷ್ಟಮಿಯಲ್ಲಿ ಅಲ್ಲಿ ಪ್ರತಿಸಂವತ್ಸರದ ಯಾತ್ರೆಯು ಗೊತ್ತಾಗಿದೆ.

೪೪. ಜನರು ಪಶುಬಲಿಯಿಂದ ಅವನಿಗೆ ಪೂಜೆಮಾಡಬೇಕು. ಅದರಿಂದ ಸರ್ವಕಾಮಫಲಗಳ ಪ್ರಾಪ್ತಿಯುಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲವು.

೪೫. ಭೈರವನ ಪ್ರಸಾದದಿಂದ ಕ್ಷೇತ್ರವಾಸವು ನಿರ್ವಿಘ್ನವಾಗಿ ನೆರವೇರುತ್ತದೆ. ಆದುದರಿಂದ ಅಲ್ಲಿ ಅವನ ಪೂಜೆಯನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು.

೪೬. ಈ ಭೈರವಕ್ಷೇತ್ರಕ್ಕೆ ಉತ್ತರಭಾಗದಲ್ಲಿ ರಮ್ಯವಾದ ಭರತಕುಂಡವಿರುವುದು. ಅಲ್ಲಿ ಸ್ನಾನಮಾಡಿದ ನರನು ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲವು.

೪೭. ಎಲೈ ವಿಪ್ರರೇ! ಆ ಭರತಕುಂಡದ ಸ್ನಾನ, ದಾನಗಳೆಲ್ಲವೂ ಅಕ್ಷಯತ್ವವನ್ನೈದುತ್ತವೆ. ಅಲ್ಲಿ ಬಹುವಿಧವಾದ ಅನ್ನವನ್ನೂ, ವಿಧವಿಧವಾದ ಬಟ್ಟೆಗಳನ್ನೂ ದಾನಮಾಡಬೇಕು.

೪೮-೪೯. ವಸ್ತ್ರಾದ್ಯಲಂಕಾರಗಳಿಂದ ಪ್ರಯತ್ನಪೂರ್ವಕವಾಗಿ ದೇವತೆಗಳನ್ನು ಪೂಜಿಸಬೇಕು. ಪೂರ್ವದಲ್ಲಿ ರಘುವಂಶೋತ್ಪನ್ನನಾದ ಭರತನು ನಂದಿಗ್ರಾಮದಲ್ಲಿ ವಾಸಮಾಡುತ್ತಿದ್ದನು. ಆಗಲಾ ಭೂವಲ್ಲಭನು ನಿರ್ಮಲಾತ್ಮನೂ,

ರಾಮಚಂದ್ರಂ ಹೃದಿ ಧ್ಯಾಯನ್ನಿರ್ಮಲಾತ್ಮಾ ಜಿತೇಂದ್ರಿಯಃ ।
ತತಃ ಸ್ಥಿತ್ವಾ ಪ್ರಜಾಃ ಸರ್ವಾ ರರಕ್ಷತ್ ಕ್ಷಿತಿವಲ್ಲಭಃ ॥ ೪೯ ॥
ತತ್ರ ಚಕ್ರೇ ಮಹತ್ಕುಂಡಂ ಭರತೋನಾಮ ಭೂಪತಿಃ ।
ರಾಮಮೂರ್ತಿಂ ಚ ಸಂಸ್ಥಾಪ್ಯ ಚಚಾರ ವಿಜಿತೇಂದ್ರಿಯಃ ॥ ೫೦ ॥
ತತ್ಕುಂಡೇ ಸುಮಹತ್ಪುಣ್ಯಂ ನಾನಾಪುಣ್ಯಸಮನ್ವಿತಂ ।
ಕುಮುದೋತ್ಪಲಕಲ್ಹಾರಪುಂಡರೀಕಸಮನ್ವಿತಂ ॥ ೫೧ ॥
ಹಂಸಸಾರಸಚಕ್ರಾಹ್ವವಿಹಂಗಮವಿರಾಜಿತಂ ।
ಉದ್ಯಾನಪಾದಪಚ್ಛಾಯಾಸಚ್ಛಾಯಮಮಲಂ ಸದಾ ॥ ೫೨ ॥
ತತ್ರ ಸ್ನಾನಂ ಮಹಾಪುಣ್ಯಂ ಪ್ರಮೋದಾನಂದನಿರ್ಮಲಂ ।
ತತ್ರ ಸ್ನಾನಂ ತಥಾ ಶ್ರಾದ್ಧಂ ಪಿತ್ರೂನುದ್ದಿಶ್ಯ ಕುರ್ವತಃ ।
ಪಿತರಸ್ತಸ್ಯ ತುಷ್ಯಂತಿ ತುಷ್ಟಾಃ ಸ್ಯುಃ ಸರ್ವದೇವತಾಃ ॥ ೫೩ ॥
ಸ್ವರ್ಣಂ ಚಾನ್ನಂ ವಿಧಾನೇನ ದಾತವ್ಯಂ ಚ ದ್ವಿಜನ್ಮನೇ ।
ಶ್ರದ್ಧಾಪೂರ್ವಕಮೇತತ್ತು ಕರ್ತವ್ಯಂ ಪ್ರಯತೈಃ ನರೈಃ ॥ ೫೪ ॥

---

ಜಿತೇಂದ್ರಿಯನೂ ಆಗಿ ಶ್ರೀರಾಮಚಂದ್ರನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ ಅಲ್ಲಿಯೇ ನೆಲಸಿದವನಾಗಿ ಸಮಸ್ತ ಪ್ರಜೆಗಳನ್ನೂ ರಕ್ಷಿಸುತ್ತಿದ್ದನು.

೫೦. ಆ ಭರತಭೂಪತಿಯು ಅಲ್ಲಿ ಮಹತ್ತಾದ ಕುಂಡವೊಂದನ್ನು ನಿರ್ಮಿಸಿದನು. ಅಲ್ಲಿಯೇ ಶ್ರೀರಾಮಮೂರ್ತಿಯನ್ನು ಸ್ಥಾಪನೆಮಾಡಿ ಜಿತೇಂದ್ರಿಯನಾಗಿ ಕೆಲಕಾಲ ಅಲ್ಲಿಯೇ ವಾಸಿಸುತ್ತಿದ್ದನು.

೫೧. ಆ ಕುಂಡದಲ್ಲಿ ಸೇವೆ ಸತ್ಕಾರಗಳನ್ನೆಸಗಿದರೆ ಮಹತ್ತರವಾದ ಪುಣ್ಯವುಂಟಾಗುತ್ತದೆ. ಅಲ್ಲಿ ಪುಣ್ಯಗಳೆಲ್ಲವೂ ಏಕಕಾಲದಲ್ಲಿಯೆ ಒಟ್ಟಾಗಿ ದೊರೆಯುತ್ತವೆ. ಕುಮುದ, ಉತ್ಪಲ, ಕಲ್ಹಾರ, ಪುಂಡರೀಕ, ಮೊದಲಾದ ಹೂಗಳಿಂದ ಆ ಕುಂಡವು ಬಹುವಾಗಿ ಶೋಭಿಸುತ್ತಿರುವುದು.

೫೨. ಹಂಸ, ಸಾರಸ, ಚಕ್ರವಾಕವೇ ಮೊದಲಾದ ಹಕ್ಕಿಗಳಿಂದ ವಿರಾಜಿಸುತ್ತಿರುವುದು; ಉದ್ಯಾನದ ಮರಗಳ ನೆರಳಿನಿಂದ ಯಾವಾಗಲೂ ತಂಪಾಗಿಯೂ ನಿರ್ಮಲವಾಗಿಯೂ ಇರುವುದು.

೫೩. ಅಲ್ಲಿ ಸ್ನಾನಮಾಡುವುದು ಮಹಾಪುಣ್ಯಕರವಾದುದಲ್ಲದೆ ಅಮಿತಾನಂದವನ್ನು ಕೊಡುವುದು; ನೈರ್ಮಲ್ಯವನ್ನುಂಟುಮಾಡುವುದು. ಅಲ್ಲಿ ಯಾವನು ಪಿತೃಗಳನ್ನುದ್ದೇಶಿಸಿ ಸ್ನಾನವನ್ನೂ ದಾನವನ್ನೂ ಮಾಡುವನೋ ಅವನ ಪಿತೃಗಳು ತೃಪ್ತಿಪಡುತ್ತಾರೆ. ಸರ್ವದೇವತೆಗಳೂ ತೃಪ್ತರಾಗುತ್ತಾರೆ.

೫೪. ಮಾನವರು ಇಂದ್ರಿಯನಿಗ್ರಹಶೀಲರಾಗಿ ಶ್ರದ್ಧೆಯಿಂದ ಚಿನ್ನವನ್ನೂ, ಅನ್ನವನ್ನೂ ವಿಧಾನವನ್ನನುಸರಿಸಿ ಬ್ರಾಹ್ಮಣನಿಗೆ ದಾನಮಾಡಬೇಕು.

ತತ್ಪಶ್ಚಿಮದಿಶಾಭಾಗೇ ಜಟಾಕುಂಡಮನುತ್ತಮಂ ।
ಯತ್ರ ರಾಮಾದಿಭಿಃ ಸರ್ವೈರ್ಜಟಾಃ ಪರಿಹೃತಾ ನಿಜಾಃ ॥ ೫೫ ॥
ಜಟಾಕುಂಡಮಿತಿ ಖ್ಯಾತಂ ಸರ್ವತೀರ್ಥೋತ್ತಮೋತ್ತಮಂ ।
ಯತ್ರ ಸ್ನಾನೇನ ದಾನೇನ ಸರ್ವಾನ್ಕಾಮಾನವಾಪ್ನುಯಾತ್ ॥ ೫೬ ॥
ಪೂರ್ವಕುಂಡೇಷು ಸಂಪೂಜ್ಯೋ ಭರತಃ ಶ್ರೀಸಮನ್ವಿತಃ ।
ಜಟಾಕುಂಡೇಷು ಸಂಪೂಜ್ಯೌ ಸಸೀತೌ ರಾಮಲಕ್ಷ್ಮಣೌ ।
ಚೈತ್ರಕೃಷ್ಣಚತುರ್ದಶ್ಯಾಂ ಯಾತ್ರಾ ಸಾಂವತ್ಸರೀ ಭವೇತ್ ॥ ೫೭ ॥
ಇತಿ ಪರಮವಿಧಾನೈಃ ಪೂಜಯೇದ್ರಾಮಸೀತೇ
ತದನು ಭರತಕುಂಡೇ ಲಕ್ಷ್ಮಣಂ ಚ ಪ್ರಪೂಜ್ಯ ।
ವಿಧಿವದಮೃತಕುಂಡೇ ದ್ವಂದ್ವಸಂಮಜ್ಜನೇನ
ವಸತಿ ಸುಕೃತಿಮೂರ್ತಿರ್ವೈಷ್ಣವೇ ತತ್ರ ಲೋಕೇ ॥೫೮॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ "ಗಯಾಕೂಪ, ಪಿಶಾಚಮೋಚನತೀರ್ಥ, ಮಾನಸತೀರ್ಥ, ತಮಸಾನದೀ, ಮಾಂಡವ್ಯಾದ್ಯಾಶ್ರಮ, ಸೀತಾಕುಂಡ, ದುಗ್ಧೇಶ್ವರ ಭೈರವಭಾರತಕುಂಡ, ಜಟಾಕುಂಡಮಾಹಾತ್ಮ್ಯ ವರ್ಣನಂ" ನಾಮ ನವಮೋಽಧ್ಯಾಯಃ

---

೫೫. ಅದಕ್ಕೆ ಪಶ್ಚಿಮದಲ್ಲಿ ಅತ್ಯುತ್ತಮವಾದ ಜಟಾಕುಂಡವಿರುವುದು. ಅಲ್ಲಿ ಶ್ರೀರಾಮಾದಿಗಳೆಲ್ಲರೂ ತಮ್ಮತಮ್ಮ ಜಟೆಗಳನ್ನು ವಿಸರ್ಜನೆಮಾಡಿದರು.

೫೬. ಜಟಾಕುಂಡವು ಸರ್ವತೀರ್ಥಗಳಲ್ಲಿಯೂ, ಉತ್ತಮೋತ್ತಮವೆಂದು ಪ್ರಸಿದ್ಧವಾಗಿರುವುದು. ಅಲ್ಲಿ ಸ್ನಾನದಿಂದಲೂ, ದಾನದಿಂದಲೂ ಇಷ್ಟಾರ್ಥಗಳೆಲ್ಲವನ್ನು ಪಡೆಯಲಾಗುವುದು.

೫೭. ಮೊದಲಿನ ಕುಂಡಗಳಲ್ಲಿ ಶ್ರೀಮಂತನಾದ ಭರತನನ್ನು ಪೂಜಿಸಬೇಕು. ಜಟಾಕುಂಡದಲ್ಲಿ ಸೀತಾಸಮೇತರಾದ ಶ್ರೀರಾಮಲಕ್ಷ್ಮಣರನ್ನು ಪೂಜಿಸಬೇಕು. ಚೈತ್ರಕೃಷ್ಣಚತುರ್ದಶೀ ದಿನ ಅಲ್ಲಿ ಪ್ರತಿವರ್ಷದಲ್ಲಿಯೂ ಯಾತ್ರೆ ನಡೆಯುತ್ತದೆ.

೫೮. ಈ ರೀತಿಯಾಗಿ ಪರಮವಿಧಾನಗಳಿಂದ ಶ್ರೀಸೀತಾರಾಮರನ್ನು ಪೂಜಿಸಬೇಕು. ಬಳಿಕ ಭರತಕುಂಡದಲ್ಲಿ ಲಕ್ಷ್ಮಣನನ್ನು ಪೂಜಿಸಿ ಅಮೃತಕುಂಡದಲ್ಲಿ ಸ್ತ್ರೀಪುರುಷರು ಒಟ್ಟಿಗೆ ವಿಧಿವತ್ತಾಗಿ ಸ್ನಾನಮಾಡುವುದರಿಂದ ಪುಣ್ಯಮೂರ್ತಿಗಳಾಗಿ ವೈಷ್ಣವಲೋಕದಲ್ಲಿ ವಾಸಮಾಡುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಗಯಾಕೂಪ, ಪಿಶಾಚಮೋಚನತೀರ್ಥ, ಮಾನಸತೀರ್ಥ, ತಮಸಾನದಿ, ಮಾಂಡವ್ಯಾದ್ಯಾಶ್ರಮ, ಸೀತಾಕುಂಡ, ದುಗ್ಧೇಶ್ವರಭೈರವ ಭರತಕುಂಡ, ಜಟಾಕುಂಡಗಳ ಮಾಹಾತ್ಮ್ಯವರ್ಣನ"ವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ಅಯೋಧ್ಯಾಯಾತ್ರಾವಿಧಿಕ್ರಮವರ್ಣನಂ

**ಅಗಸ್ತ್ಯ ಉವಾಚ :—**

**ನಿರಾಹಾರೋ ನರೋ ಭೂತ್ವಾ ಕ್ಷೀರಾಹಾರೋಽಪಿ ವಾ ಪುನಃ ।**
**ಅಜಿತಂ ಪೂಜಯೇದ್ವಿಪ್ರ ತಸ್ಯ ಸಿದ್ಧಿಃ ಕರೇ ಸ್ಥಿತಾ ॥ ೧ ॥**
**ಮಹೋತ್ಸವಸ್ತು ಕರ್ತವ್ಯೋ ಗೀತವಾದಿತ್ರಸಂಯುತಃ ।**
**ಏವಂ ಯಃ ಕುರುತೇ ಧೀಮಾನ್ ಸರ್ವಾನ್ಕಾಮಾನವಾಪ್ನುಯಾತ್॥ ೨ ॥**
**ಏತಸ್ಮಾದುತ್ತರೇ ವಿದ್ವನ್ವೀರಸ್ಯ ಶುಭಸೂಚಕಂ ।**
**ಸ್ಥಾನಂ ಮತ್ತಗಜೇಂದ್ರಸ್ಯ ವರ್ತತೇ ನಿಯತವ್ರತ ॥ ೩ ॥**
**ತದಗ್ರೇ ಸರಸಿ ಸ್ನಾತ್ವಾ ವಸೇತ್ತತ್ರ ಸುನಿಶ್ಚಿತಂ ।**
**ಪೂರ್ಣಾಂ ಸಿದ್ಧಿಮವಾಪ್ನೋತಿ ಯಾಮವಾಪ್ಯ ನ ಶೋಚತಿ ॥ ೪ ॥**
**ಅಯೋಧ್ಯಾ ರಕ್ಷಕೋ ವೀರಃ ಸರ್ವಕಾಮಾರ್ಥಸಿದ್ಧಿದಃ ।**
**ನವರಾತ್ರಿಷು ಪಂಚಮ್ಯಾಂ ಯಾತ್ರಾ ಸಾಂವತ್ಸರೀ ಭವೇತ್ ॥ ೫ ॥**

---

## ಕನ್ನಡದ ಅನುವಾದ

### ಅಯೋಧ್ಯಾಯಾತ್ರಾವಿಧಿಕ್ರಮವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—"ಎಲೈ ವಿಪ್ರನೇ! ನರನು ನಿರಾಹಾರಿಯಾಗಿಯೋ ಅಥವಾ ಕ್ಷೀರಾಹಾರಿಯಾಗಿಯೋ ಅಜಿತನನ್ನು ಪೂಜಿಸಬೇಕು. ಇದರಿಂದ ಅವನಿಗೆ ಸಿದ್ಧಿಯು ಕರಗತವಾಗುವುದು.

೨. ಗೀತವಾದ್ಯಗಳಿಂದ ಮಹೋತ್ಸವವನ್ನು ಮಾಡಬೇಕು. ಯಾವ ಧೀಮಂತನು ಹೀಗೆ ಮಾಡುವನೋ ಅವನು ಸರ್ವಾಭೀಷ್ಟಗಳನ್ನೂ ಪಡೆಯುತ್ತಾನೆ.

೩. ಎಲೈ ವಿದ್ವಾಂಸನೇ! ಅದಕ್ಕೆ ಉತ್ತರದಲ್ಲಿ ವೀರನಾದ ಮತ್ತಗಜೇಂದ್ರನ ಶುಭಸೂಚಕವಾದ ಸ್ಥಾನವಿರುವುದು.

೪. ಅದರೆದುರಿಗಿರುವ ಸರೋವರದಲ್ಲಿ ಸ್ನಾನಮಾಡಿ ಅಲ್ಲಿ ವಾಸಮಾಡಬೇಕು. ಅದರಿಂದ ಯಾವುದನ್ನು ಪಡೆದಮೇಲೆ ಶೋಕವಿರುವುದಿಲ್ಲವೋ ಅಂತಹ ಪೂರ್ಣಸಿದ್ಧಿಯನ್ನು ಪಡೆಯುತ್ತಾನೆ.

೫. ವೀರನು ಅಯೋಧ್ಯೆಯ ರಕ್ಷಕನು; ಅವನು ಸರ್ವಕಾಮ್ಯಾರ್ಥಗಳನ್ನೂ ಕೊಡತಕ್ಕವನು. ನವರಾತ್ರಿಯ ಪಂಚಮಿಯಲ್ಲಿ ಅಲ್ಲಿ ವರ್ಷದ ಯಾತ್ರೆಯು ನಡೆಯುತ್ತದೆ.

ಗಂಧಪುಷ್ಪಾದಿ ಧೂಪಾದಿ ನೈವೇದ್ಯಾದಿ ವಿಧಾನತಃ ।
ಪೂಜನೀಯಃ ಪ್ರಯತ್ನೇನ ಸರ್ವಕಾಮಾರ್ಥಸಿದ್ಧಿದಃ ।
ಯಂ ಯಂ ಕಾಮಮಿಹೇಚ್ಛೇತ ತಂ ತಂ ಕಾಮಮವಾಪ್ನುಯಾತ್ ॥ ೬ ॥
ಏತಸ್ಮಾದ್ದಕ್ಷಿಣೇ ಭಾಗೇ ಸುರಸಾ ನಾಮ ರಾಕ್ಷಸೀ ।
ವಿಷ್ಣುಭಕ್ತಾ ಸದಾ ವಿಪ್ರ ವರ್ತತೇ ಸಿದ್ಧಿದಾಯಿಕಾ ॥ ೭ ॥
ತಾಂ ಸಂಪೂಜ್ಯ ನರೋ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥ ೮ ॥
ಲಂಕಾಸ್ಥಾನಾದಿಹಾನೀತಾ ರಾಮೇಣೋತ್ಕೃಷ್ಟಕರ್ಮಣಾ ।
ಅಯೋಧ್ಯಾಯಾಂ ಸ್ಥಾಪಿತಾ ಸಾ ರಕ್ಷಾರ್ಥಂ ನಿಯತವ್ರತೈಃ ॥ ೯ ॥
ಸಂಪೂಜ್ಯ ವಿಧಿವತ್ತಸ್ಯಾ ದರ್ಶನಂ ಕಾರ್ಯಮಾದರಾತ್ ।
ಸರ್ವಕಾಮಾರ್ಥಸಿದ್ಧ್ಯರ್ಥಂ ಉತ್ಸವೋಽಪಿ ಶುಭಪ್ರದಃ ।
ಕರ್ತವ್ಯೋ ಸುಪ್ರಯತ್ನೇನ ಗೀತವಾದಿತ್ರಸಂಯುತೈಃ ॥ ೧೦ ॥
ನವರಾತ್ರೇ ತೃತೀಯಾಯಾಂ ಯಾತ್ರಾ ಸಾಂವತ್ಸರೀ ಭವೇತ್ ।
ಸರ್ವದಾ ಸುಖಸಂತಾನಸಿದ್ಧಯೇ ಪರಮಾರ್ಥದಾ ।
ನಾನಾಸಂಗೀತವಾದಿತ್ರನೃತ್ಯೋತ್ಸವಮನೋಹರಾ ॥ ೧೧ ॥

---

೬. ಎಲ್ಲ ಬಯಕೆಗಳನ್ನು ಸಿದ್ಧಿಸಿಕೊಡುವವನಾದ ಆ ವೀರನನ್ನು ಗಂಧ, ಪುಷ್ಪ, ಧೂಪ, ನೈವೇದ್ಯ, ಮೊದಲಾದ ವಿಧಾನಗಳಿಂದ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಅದರಿಂದ ಮಾನವನು ಇಲ್ಲಿ ಯಾವ ಯಾವ ಬಯಕೆಯನ್ನು ಬಯಸುವನೋ ಅದನ್ನೆಲ್ಲವನ್ನೂ ಪಡೆಯುವನು.

೭–೮. ಇದರಿಂದ ದಕ್ಷಿಣಭಾಗದಲ್ಲಿ ವಿಷ್ಣುಭಕ್ತಳಾದ ಸುರಸೆಯೆಂಬ ರಾಕ್ಷಸಿಯು ಸದಾ ನೆಲಸಿರುತ್ತಾಳೆ. ಎಲೈ ವಿಪ್ರನೇ! ಅವಳು ಭಕ್ತರಿಗೆ ಸಿದ್ಧಿಯನ್ನುಂಟುಮಾಡಿಕೊಡುವಳು. ಅವಳನ್ನು ಪೂಜಿಸಿದ ಮಾನವನು ಇಷ್ಟಾರ್ಥಗಳೆಲ್ಲವನ್ನೂ ಪಡೆಯುತ್ತಾನೆ.

೯. ಉತ್ಕೃಷ್ಟಕರ್ಮಗಳನ್ನು ಮಾಡಿದ ಶ್ರೀರಾಮನು ಅವಳನ್ನು ಲಂಕಾಸ್ಥಾನದಿಂದ ಇಲ್ಲಿಗೆ ಕರೆತಂದನು. ರಕ್ಷಾರ್ಥವಾಗಿ ಅವಳನ್ನು ಅಯೋಧ್ಯೆಯಲ್ಲಿ ಸ್ಥಾಪನೆಮಾಡಿದನು.

೧೦. ನಿಯಮಶಾಲಿಗಳಾದವರು ವಿಧಿವತ್ತಾಗಿ ಪೂಜಿಸಿ ಆದರದಿಂದ ಅವಳ ದರ್ಶನಮಾಡಬೇಕು. ಸರ್ವಕಾಮಫಲಗಳೂ ಸಿದ್ಧಿಸಲೆಂದು ಬಹು ಪ್ರಯತ್ನಪೂರ್ವಕವಾಗಿ ಗೀತವಾದ್ಯಗಳೊಡನೆ ಅವಳಿಗೆ ಶುಭಕರವಾದ ಉತ್ಸವವನ್ನು ನಡಸಬೇಕು.

೧೧–೧೨. ನವರಾತ್ರಿಯಲ್ಲಿ ತದಿಗೆಯ ದಿನ ಅಲ್ಲಿ ನಾನಾ ಬಗೆಯ ಸಂಗೀತ, ವಾದ್ಯ, ನೃತ್ಯ ಮತ್ತು ಉತ್ಸವಗಳಿಂದ ಮನೋಹರವಾದ ವಾರ್ಷಿಕಯಾತ್ರೆ

ಏವಂ ಕೃತೇ ನ ಸಂದೇಹಃ ಸರ್ವದಾ ರಕ್ಷಿತೋ ಭವೇತ್ ॥ ೧೨ ॥
ಏತತ್ಪಶ್ಚಿಮದಿಗ್ಭಾಗೇ ವರ್ತತೇ ಪರಮೋ ಮುನೇ ।
ಪಿಂಡಾರಕ ಇತಿ ಖ್ಯಾತೋ ವೀರಃ ಪರಮಪೌರುಷಃ ।
ಪೂಜನೀಯಃ ಪ್ರಯತ್ನೇನ ಗಂಧಪುಷ್ಪಾಕ್ಷತಾದಿಭಿಃ ॥ ೧೩ ॥
ಯಸ್ಯ ಪೂಜಾವಶಾನ್ನೄಣಾಂ ಸಿದ್ಧಯಃ ಕರಸಂಶ್ರಿತಾಃ ।
ತಸ್ಯ ಪೂಜಾವಿಧಾನೇನ ಕರ್ತವ್ಯಂ ಪೂಜನಂ ನರೈಃ ॥ ೧೪ ॥
ಸರಯೂಸಲಿಲೇ ಸ್ನಾತ್ವಾ ಪಿಂಡಾರಕಂ ಚ ಪೂಜಯೇತ್ ।
ಪಾಪಿನಾಂ ಮೋಹಕರ್ತಾರಂ ಮತಿದಂ ಕೃತಿನಾಂ ಸದಾ ॥ ೧೫ ॥
ತಸ್ಯ ಯಾತ್ರಾ ವಿಧಾತವ್ಯಾ ಸಪುಷ್ಯಾ ನವರಾತ್ರಿಷು ।
ತತ್ಪಶ್ಚಿಮದಿಶಾಭಾಗೇ ವಿಘ್ನೇಶಂ ಕಿಲ ಪೂಜಯೇತ್ ॥ ೧೬ ॥
ಯಸ್ಯ ದರ್ಶನತೋ ನೄಣಾಂ ವಿಘ್ನಲೇಶೋ ನ ವಿದ್ಯತೇ ।
ತಸ್ಮಾದ್ವಿಘ್ನೇಶ್ವರಃ ಪೂಜ್ಯಃ ಸರ್ವಕಾಮಫಲಪ್ರದಃ ॥ ೧೭ ॥
ತಸ್ಮಾತ್ ಸ್ಥಾನತ ಐಶಾನೇ ರಾಮಜನ್ಮ ಪ್ರವರ್ತತೇ ।
ಜನ್ಮಸ್ಥಾನಮಿದಂ ಪ್ರೋಕ್ತಂ ಮೋಕ್ಷಾದಿ ಫಲಸಾಧನಂ ॥ ೧೮ ॥

---

ನಡೆಯಬೇಕು. ಆ ಯಾತ್ರೆಯು ಸುಖಸಂತಾನಗಳನ್ನೂ ಪರಮಾರ್ಥವನ್ನೂ ಕೊಡುವುದು. ಹೀಗೆ ಮಾಡಿದವನು ಸರ್ವದಾ ರಕ್ಷಿತನಾಗಿರುತ್ತಾನೆ.

೧೩. ಎಲೈ ಮುನಿಯೇ! ಇದರ ಪಶ್ಚಿಮದಿಕ್ಕಿನಲ್ಲಿ ಪರಮಪೌರುಷವಂತನಾದ ಪಿಂಡಾರಕನೆಂದು ಪ್ರಸಿದ್ಧನಾದ ವೀರನಿದ್ದಾನೆ. ಆ ಪಿಂಡಾರಕನನ್ನು ಗಂಧ, ಪುಷ್ಪ, ಅಕ್ಷತೆ ಮೊದಲಾದುವುಗಳಿಂದ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

೧೪. ಅವನಿಗೆ ಪೂಜೆಮಾಡುವುದರಿಂದ ಮನುಷ್ಯರಿಗೆ ಸಿದ್ಧಿಗಳು ಕೈಯಲ್ಲೇ ನೆಲಸಿರುತ್ತವೆ. ಆದುದರಿಂದ ವಿಧಿಪೂರ್ವಕವಾಗಿ ಅವನನ್ನು ಪೂಜೆಮಾಡಬೇಕು.

೧೫. ಸರಯೂನದಿಯಲ್ಲಿ ಸ್ನಾನಮಾಡಿ ಪಿಂಡಾರಕನನ್ನು ಪೂಜೆಮಾಡಬೇಕು. ಆ ಪಿಂಡಾರಕನು ಪಾಪಿಗಳ ಮೋಹವನ್ನು ಕತ್ತರಿಸುವನು; ಕರ್ತವ್ಯತತ್ಪರರಾದವರಿಗೆ ಸದ್ಬುದ್ಧಿಯನ್ನು ನೀಡುವನು.

೧೬. ನವರಾತ್ರಿಯಲ್ಲಿ ಪುಷ್ಯನಕ್ಷತ್ರಯೋಗದಲ್ಲಿ ಅವನಿಗೆ ಪೂಜೆಯನ್ನು ಸಲ್ಲಿಸಬೇಕು. ಅಲ್ಲಿಂದ ಪಶ್ಚಿಮದಿಗ್ಭಾಗದಲ್ಲಿ ವಿಘ್ನೇಶನನ್ನು ಪೂಜಿಸಬೇಕು.

೧೭. ಅವನ ದರ್ಶನದಿಂದ ನರರಿಗೆ ವಿಘ್ನಲೇಶವೂ ಇರುವುದಿಲ್ಲ. ಆದುದರಿಂದ ಸರ್ವಕಾಮಫಲದಾಯಕನಾದ ವಿಘ್ನೇಶ್ವರನನ್ನು ಪೂಜಿಸಬೇಕು.

೧೮. ಆ ಸ್ಥಾನಕ್ಕೆ ಈಶಾನ್ಯದಿಕ್ಕಿನಲ್ಲಿ 'ಶ್ರೀರಾಮಜನ್ಮ'ವೆಂಬ ಸ್ಥಾನವಿರು

**ವಿಘ್ನೇಶ್ವರಾತ್ಪೂರ್ವಭಾಗೇ ವಾಸಿಷ್ಠಾದುತ್ತರೇ ತಥಾ ।**
**ಲೌಮಸಾತ್ಪಶ್ಚಿಮೇ ಭಾಗೇ ಜನ್ಮಸ್ಥಾನಂ ತತಃ ಸ್ಮೃತಂ ॥ ೧೯ ॥**
**ಯದ್ದೃಷ್ಟ್ವಾ ಚ ಮನುಷ್ಯಸ್ಯ ಗರ್ಭವಾಸಜಯೋ ಭವೇತ್ ।**
**ವಿನಾ ದಾನೇನ ತಪಸಾ ವಿನಾ ತೀರ್ಥೈರ್ವಿನಾ ಮಖೈಃ ॥ ೨೦ ॥**
**ನವಮೀದಿವಸೇ ಪ್ರಾಪ್ತೇ ವ್ರತಧಾರೀ ಹಿ ಮಾನವಃ ।**
**ಸ್ನಾನದಾನಪ್ರಭಾವೇಣ ಮುಚ್ಯತೇ ಜನ್ಮಬಂಧನಾತ್ ॥ ೨೧ ॥**
**ಕಪಿಲಾಗೋಸಹಸ್ರಾಣಿ ಯೋ ದದಾತಿ ದಿನೇ ದಿನೇ ।**
**ತತ್ಫಲಂ ಸಮವಾಪ್ನೋತಿ ಜನ್ಮಭೂಮೇಃ ಪ್ರದರ್ಶನಾತ್ ॥ ೨೨ ॥**
**ಆಶ್ರಮೇ ವಸತಾಂ ಪುಂಸಾಂ ತಾಪಸಾನಾಂ ಚ ಯತ್ಫಲಂ ।**
**ರಾಜಸೂಯಸಹಸ್ರಾಣಿ ಪ್ರತಿವರ್ಷಾಗ್ನಿಹೋತ್ರತಃ ॥ ೨೩ ॥**
**ನಿಯಮಸ್ಥಂ ನರಂ ದೃಷ್ಟ್ವಾ ಜನ್ಮಸ್ಥಾನೇ ವಿಶೇಷತಃ ।**
**ಮಾತಾಪಿತ್ರೋರ್ಗುರೂಣಾಂ ಚ ಭಕ್ತಿಮುದ್ವಹತಾಂ ಸತಾಂ ॥ ೨೪ ॥**
**ತತ್ಫಲಂ ಸಮವಾಪ್ನೋತಿ ಜನ್ಮಭೂಮೇಃ ಪ್ರದರ್ಶನಾತ್ ॥ ೨೫ ॥**

---

ವುದು. ಈ ಜನ್ಮಸ್ಥಾನವು ಮೋಕ್ಷಾದಿಫಲಗಳಿಗೆ ಸಾಧನವಾಗಿರುವುದೆಂದು ಹೇಳಲ್ಪಟ್ಟಿರುವುದು.

೧೯. ವಿಘ್ನೇಶ್ವರನಿಗೆ ಪೂರ್ವಕ್ಕೂ, ವಸಿಷ್ಠಕ್ಷೇತ್ರದಿಂದ ಉತ್ತರಕ್ಕೂ, ಲೋಮಶಸ್ಥಾನದಿಂದ ಪಶ್ಚಿಮಕ್ಕೂ ಈ ರಾಮ ಜನ್ಮಸ್ಥಾನವಿರುವುದೆಂದು ಹೇಳಿದೆ.

೨೦. ಅದನ್ನು ದರ್ಶನಮಾಡುವುದರಿಂದ, ದಾನವಿಲ್ಲದೆ, ತಪಸ್ಸಿಲ್ಲದೆ, ತೀರ್ಥಯಾತ್ರೆಯಿಲ್ಲದೆ, ಯಜ್ಞಾದಿಗಳೂ ಇಲ್ಲದೆ ಇದ್ದರೂ ಮನುಷ್ಯನಿಗೆ ಮತ್ತೆ ಹುಟ್ಟಿ ಬರದಂತೆ ಮುಕ್ತಿಯು ದೊರೆಯುತ್ತದೆ.

೨೧. ನವಮೀದಿವಸವು ಬರಲಾಗಿ ವ್ರತಧಾರಿಯಾದ ಮನುಷ್ಯನು ಅಲ್ಲಿಯ ಸ್ನಾನದಾನಗಳ ಪ್ರಭಾವದಿಂದ, ಜನ್ಮಬಂಧನದಿಂದ ಬಿಡುಗಡೆಹೊಂದುತ್ತಾನೆ.

೨೨. ಮಾನವನು ಸಹಸ್ರ ಕಪಿಲೆಗೋವುಗಳನ್ನು ದಿನದಿನವೂ ದಾನಮಾಡುವುದರಿಂದ ಯಾವ ಫಲವನ್ನು ಪಡೆಯುತ್ತಾನೆಯೊ ಆ ಫಲವನ್ನು ಶ್ರೀರಾಮನ ಜನ್ಮಭೂಮಿಯ ದರ್ಶನದಿಂದ ಪಡೆಯುತ್ತಾನೆ.

೨೩–೨೫. ಆಶ್ರಮದಲ್ಲಿ ವಾಸಮಾಡುವ ಪುರುಷರಿಗೂ, ತಾಪಸರಿಗೂ ಯಾವ ಫಲವುಂಟೋ, ಸಹಸ್ರಾರು ರಾಜಸೂಯಗಳನ್ನೂ, ಪ್ರತಿವರ್ಷವೂ ಅಗ್ನಿಹೋತ್ರಗಳನ್ನೂ ನಡೆಸುವುದರಿಂದ ಯಾವ ಫಲವು ದೊರೆಯುವುದೋ, ವಿಶೇಷವಾಗಿ ಜನ್ಮಸ್ಥಾನದಲ್ಲಿ ನಿಯಮಗಳನ್ನು ನಡೆಸುತ್ತಿರುವ ನರನನ್ನು ನೋಡುವುದರಿಂದ ಯಾವ ಫಲವುಂಟೋ, ತಂದೆ ತಾಯಿಗಳಲ್ಲಿಯೂ, ಗುರುಗಳಲ್ಲಿಯೂ

ಅಥ ಸರಯೂವರ್ಣನಂ

ಪಿತೄಣಾಮಕ್ಷಯಾ ತೃಪ್ತಿರ್ಗಯಾಶ್ರಾದ್ಧಾಧಿಕಂ ಫಲಂ ॥ ೨೬ ॥
ಮನ್ವಂತರಸಹಸ್ರೈಸ್ತು ಕಾಶೀವಾಸೇಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸರಯೂದರ್ಶನೇ ಕೃತೇ ॥ ೨೭ ॥
ಗಯಾಶ್ರಾದ್ಧಂ ಚ ಯೇ ಕೃತ್ವಾ ಪುರುಷೋತ್ತಮದರ್ಶನಂ ।
ಕುರ್ವಂತಿ ತತ್ಫಲಂ ಪ್ರೋಕ್ತಂ ಕಲೌ ದಾಶರಥೀಂ ಪುರೀಂ ॥ ೨೮ ॥
ಮಥುರಾಯಾಂ ಕಲ್ಪಮೇಕಂ ವಸತೇ ಮಾನವೋ ಯದಿ ।
ತತ್ಫಲಂ ಸಮವಾಪ್ನೋತಿ ಸರಯೂದರ್ಶನೇ ಕೃತೇ ॥ ೨೯ ॥
ಪುಷ್ಕರೇಷು ಪ್ರಯಾಗೇಷು ಮಾಘೇ ವಾ ಕಾರ್ತಿಕೇ ತಥಾ ।
ತತ್ಫಲಂ ಸಮವಾಪ್ನೋತಿ ಸರಯೂದರ್ಶನೇ ಕೃತೇ ॥ ೩೦ ॥
ಕಲ್ಪಕೋಟಿಸಹಸ್ರಾಣಿ ಹ್ಯವಂತೀವಾಸತೋ ಹಿ ಯತ್ ।
ತತ್ಫಲಂ ಸಮವಾಪ್ನೋತಿ ಸರಯೂದರ್ಶನೇ ಕೃತೇ ॥ ೩೧ ॥

---

ಭಕ್ತಿಯನ್ನಿಟ್ಟಿರುವವರಿಗೆ ಯಾವ ಫಲವುಂಟಾಗುವುದೋ ಆ ಫಲವನ್ನು ಜನ್ಮಭೂಮಿಯ ದರ್ಶನದಿಂದಲೇ ಮಾನವನು ಪಡೆಯುತ್ತಾನೆ.

ಸರಯೂನದಿಯ ವರ್ಣನೆ

೨೬–೨೭. ಎಲೈ ವಿಪ್ರರೇ! ಸರಯೂನದಿಯನ್ನು ದರ್ಶನಮಾಡಿದರೆ ಪಿತೃಗಳಿಗೆ ಅಕ್ಷಯವಾದ ತೃಪ್ತಿಯುಂಟಾಗುತ್ತದೆ. ಗಯಾಶ್ರಾದ್ಧವಮಾಡಿದುದಕ್ಕಿಂತಲೂ ಹೆಚ್ಚು ಫಲವುಂಟಾಗುತ್ತದೆ. ಸಾವಿರ ಮನ್ವಂತರಗಳವರೆಗೆ ಕಾಶೀವಾಸ ಮಾಡುವುದರಿಂದ ಯಾವ ಫಲವುಂಟೋ ಆ ಫಲವನ್ನು ಸರಯೂ ದರ್ಶನದಿಂದಲೇ ಪಡೆಯುತ್ತಾನೆ.

೨೮–೨೯. ಗಯಾಶ್ರಾದ್ಧವನ್ನು ಮಾಡಿ ಪುರುಷೋತ್ತಮನನ್ನು ದರ್ಶನ ಮಾಡಿದವರು ಯಾವ ಫಲವನ್ನು ಪಡೆಯುತ್ತಾರೆಯೊ ಆ ಫಲವು ಕಲಿಯುಗದಲ್ಲಿ ದಾಶರಥಿಯ ಪಟ್ಟಣವಾದ ಅಯೋಧ್ಯೆಯನ್ನು ದರ್ಶನಮಾಡುವುದರಿಂದ ದೊರೆಯುವುದೆಂದು ಹೇಳಿದೆ. ಮಾನವನು ಮಥುರೆಯಲ್ಲಿ ಒಂದುಕಲ್ಪದವರೆಗೆ ವಾಸಮಾಡಿದರೆ ಯಾವ ಫಲವನ್ನು ಪಡೆಯುವನೋ ಅದನ್ನು ಸರಯೂದರ್ಶನ ಮಾಡಿದ ಮಾತ್ರದಿಂದಲೇ ಪಡೆಯುತ್ತಾನೆ.

೩೦. ಪುಷ್ಕರಕ್ಷೇತ್ರದಲ್ಲಿಯೂ, ಪ್ರಯಾಗಕ್ಷೇತ್ರದಲ್ಲಿಯೂ ಮಾಘಮಾಸ ಅಥವಾ ಕಾರ್ತಿಕ ಮಾಸಗಳಲ್ಲಿ ವಾಸಮಾಡುವುದರಿಂದ ಯಾವ ಫಲವುಂಟೋ ಅದನ್ನು ಸರಯೂ ದರ್ಶನಮಾಡಿದಮಾತ್ರದಿಂದಲೇ ಪಡೆಯುತ್ತಾನೆ.

೩೧. ಸಾವಿರಾರುಕೋಟಿ ಕಲ್ಪಗಳವರೆಗೆ ಅವಂತೀವಾಸದಿಂದ ಯಾವ ಫಲವುಂಟೋ ಸರಯೂ ದರ್ಶನಮಾಡಿದರೆ ಆ ಫಲವನು ಪಡೆಯುತ್ತಾನೆ.

ಷಷ್ಟಿವರ್ಷಸಹಸ್ರಾಣಿ ಭಾಗೀರಥ್ಯವಗಾಹಜಂ ।
ತತ್ಫಲಂ ನಿಮಿಷಾರ್ಧೇನ ಕಲೌ ದಾಶರಥೀಂ ಪುರೀಂ ॥ ೩೨ ॥
ನಿಮಿಷಂ ನಿಮಿಷಾರ್ಧಂ ವಾ ಪ್ರಾಣಿನಾಂ ರಾಮಚಿಂತನಂ ।
ಸಂಸಾರಕಾರಣಾಜ್ಞಾನನಾಶಕಂ ಜಾಯತೇ ಧ್ರುವಂ ॥ ೩೩ ॥
ಯತ್ರ ಕುತ್ರ ಸ್ಥಿತೋ ಯಸ್ತು ಹ್ಯಯೋಧ್ಯಾಂ ಮನಸಾ ಸ್ಮರೇತ್ ।
ನ ತಸ್ಯ ಪುನರಾವೃತ್ತಿಃ ಕಲ್ಪಾಂತರಶತೈರಪಿ ॥ ೩೪ ॥
ಜಲರೂಪೇಣ ಬ್ರಹ್ಮೈವ ಸರಯೂ ಮೋಕ್ಷದಾ ಸದಾ ।
ನೈವಾತ್ರ ಕರ್ಮಣೋ ಭೋಗೋ ರಾಮರೂಪೋ ಭವೇನ್ನರಃ ॥ ೩೫ ॥
ಪಶುಪಕ್ಷಿಮೃಗಾಶ್ಚೈವ ಯೇ ಚಾನ್ಯೇ ಪಾಪಯೋನಯಃ ।
ತೇಽಪಿ ಮುಕ್ತಾ ದಿವಂ ಯಾಂತಿ ಶ್ರೀರಾಮವಚನಂ ಯಥಾ ॥ ೩೬ ॥
ಇತ್ಯುಕ್ತ್ವಾ ವಿರತೇ ತಸ್ಮಿನ್ ಮುನೌ ಕಲಶಜನ್ಮನಿ ।
ಕೃಷ್ಣದ್ವೈಪಾಯನೋ ವ್ಯಾಸಃ ಪುನರೂಚೇ ತಪೋಧನಃ ॥ ೩೭ ॥

---

೩೨. ಅರುವತ್ತುಸಾವಿರ ವರ್ಷಗಳವರೆಗೆ ಭಾಗೀರಥಿಯಲ್ಲಿ ಮುಳುಗಿ ಸ್ನಾನಮಾಡುವುದರಿಂದ ಯಾವ ಫಲವು ದೊರೆಯುವುದೋ ಆ ಫಲವು ಕಲಿಯುಗದಲ್ಲಿ ದಾಶರಥಿಯ ನೆಲೆವೀಡಾದ ಅಯೋಧ್ಯಾಪುರಿಯ ದರ್ಶನದಿಂದ ನಿಮಿಷಾರ್ಧದಲ್ಲಿಯೇ ಲಭಿಸುವುದು.

೩೩. ನಿಮಿಷಕಾಲವೊ, ಅರ್ಧನಿಮಿಷಕಾಲವೊ ಶ್ರೀರಾಮನನ್ನು ಚಿಂತನೆ ಮಾಡುವುದು ಪ್ರಾಣಿಗಳಿಗೆ ಸಂಸಾರಕ್ಕೆ ಕಾರಣವಾದ ಅಜ್ಞಾನವನ್ನು ಶಾಶ್ವತವಾಗಿ ನಾಶಮಾಡುವುದು.

೩೪. ಎಲ್ಲಿಯೋ ಒಂದೆಡೆ ನೆಲಸಿದವನಾದರೂ ಯಾವನೊಬ್ಬನು ಅಯೋಧ್ಯೆಯನ್ನು ಮನಸ್ಸಿನಲ್ಲಿ ಸ್ಮರಿಸುವನೋ ಅವನಿಗೆ ನೂರಾರು ಕಲ್ಪಾಂತರಗಳು ಕಳೆದರೂ ಪುನರಾವೃತ್ತಿಯಿರುವುದಿಲ್ಲವು.

೩೫. ಜಲರೂಪದಿಂದಿರುವ ಬ್ರಹ್ಮವೇ ಸರಯೂನದಿಯು. ಅದು ಸದಾ ಮೋಕ್ಷದಾಯಕವಾಗಿರುವುದು. ಇಲ್ಲಿ ಕರ್ಮಗಳ ಭೋಗವಿಲ್ಲ. ಇದರ ಸೇವನೆಯಿಂದಲೂ ಮಾನವನು ಶ್ರೀರಾಮರೂಪಿಯೇ ಆಗುತ್ತಾನೆ.

೩೬. ಪಶುಪಕ್ಷಿಮೃಗಗಳೂ, ಉಳಿದ ಇತರ ಪಾಪಜನ್ಮಧಾರಿಗಳೂ ಸಹ ಅಲ್ಲಿ ಮುಕ್ತರಾಗಿ ಸ್ವರ್ಗವನ್ನೈದುವರೆಂದು ಶ್ರೀರಾಮನ ವಚನವಿರುವುದು.

೩೭. ಹೀಗೆಂದು ನುಡಿದು ಕುಂಭಸಂಭವನಾದ ಆ ಅಗಸ್ತ್ಯಮುನಿಯು ಸುಮ್ಮನಾಗಲು ತಪೋಧನನೂ, ಕೃಷ್ಣದ್ವೈಪಾಯನನೂ ಆದ ವ್ಯಾಸಮುನಿಯು ಮತ್ತೆ ಹೀಗೆ ಹೇಳಿದನು :—

**ದುರ್ಲಭಾ ಸರ್ವಜಂತೂನಾಂ ಕಥಾ ವಿಸ್ತರತಃ ಕ್ರಮಾತ್ ।**
**ಯಾತ್ರಾಕ್ರಮೋಽಪಿ ಚ ಮಯಾ ಶ್ರುತ ಆಗಚ್ಛತಾಂ ನೃಣಾಂ ॥ ೩೮ ॥**
**ಇದಾನೀಂ ಶ್ರೋತುಮಿಚ್ಛಾಮಿ ಕ್ಷೇತ್ರಸ್ನಾನಂ ಯಥಾವಿಧಿ ।**
**ಯಾತ್ರಾಕ್ರಮಂ ಮುನಿಶ್ರೇಷ್ಠ ಸಮ್ಯಕ್ತ್ವತ್ತಸ್ತಪೋಧನ ॥ ೩೯ ॥**
**ಫಲಂ ಬ್ರೂಹಿ ಕ್ರಮೇಣೈವ ವಿಸ್ತರಾತ್ಪೃಚ್ಛತೋ ಮಮ ।**
**ಯದ್ಯಸ್ತಿ ಮಯಿ ತೇ ವಿದ್ವನ್ ಕೃಪಾ ಕಾರುಣಿಕೋತ್ತಮ ॥ ೪೦ ॥**
**ಯಥಾ ಶ್ರುತ್ವಾ ಕ್ರಮೇಣೈವ ಯಾತ್ರಾಂ ವಿಶ್ವವಿದಾಂ ವರ ।**
**ಕರೋಮಿ ತ್ವತ್ಪ್ರಸಾದೇನ ತಥಾ ಕುರು ಯತವ್ರತಂ ॥ ೪೧ ॥**

**ಅಗಸ್ತ್ಯ ಉವಾಚ:—**

**ಶೃಣು ವಕ್ಷ್ಯಾಮಿ ತತ್ತ್ವೇನ ಯಾತ್ರಾಕ್ರಮಮಥಾದಿತಃ ।**
**ಅಯೋಧ್ಯಾಂ ಸಪ್ತತೀರ್ಥಾನಾಂ ಯಥಾವದನುಪೂರ್ವಶಃ ॥ ೪೨ ॥**
**ಮನೋವಾಕ್ಕಾಯಶುದ್ಧೇನ ನಿರ್ದೋಷೇಣಾಂತರಾತ್ಮನಾ ।**
**ಮಾನಸೇಷು ಸುತೀರ್ಥೇಷು ಸ್ನಾತ್ವಾ ಕಿಲ ಜಿತೇಂದ್ರಿಯಃ ।**
**ಯಃ ಕರೋತಿ ವಿಧಿಂ ಸಮ್ಯಕ್ ಸ ತೀರ್ಥಫಲಮಶ್ನುತೇ ॥ ೪೩ ॥**

---

೩೮. "ಎಲೈ ಮುನಿಯೆ! ನೀನು, ಸರ್ವಜಂತುಗಳಿಗೂ ದುರ್ಲಭವಾದ ಈ ಕಥೆಯನ್ನು ವಿಸ್ತಾರವಾಗಿಯೂ ಕ್ರಮವಾಗಿಯೂ ನನಗೆ ಹೇಳಿರುವೆ. ಇಲ್ಲಿ ಬಂದುಹೋಗುವ ಮಾನವರ ಯಾತ್ರಾಕ್ರಮವನ್ನು ನಾನು ಕೇಳಿದ್ದೇನೆ.

೩೯. ಎಲೈ ತಪೋಧನನಾದ ಮುನಿಶ್ರೇಷ್ಠನೇ! ಈಗ ಯಥಾವಿಧಿಯಾಗಿ ಕ್ಷೇತ್ರಸ್ನಾನವನ್ನೂ, ಯಾತ್ರಾಕ್ರಮವನ್ನೂ ನಿನ್ನಿಂದ ಕೇಳಬೇಕೆಂದು ಅಪೇಕ್ಷಿಸುತ್ತೇನೆ.

೪೦. ಕಾರುಣಿಕೋತ್ತಮನಾದ ಎಲೈ ವಿದ್ವಾಂಸನೇ! ನಿನಗೆ ನನ್ನಲ್ಲಿ ಕೃಪೆಯಿರುವುದಾದರೆ ಪ್ರಶ್ನೆಮಾಡುತ್ತಿರುವ ನನಗೆ ತೀರ್ಥಫಲವನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ತಿಳಿಸು.

೪೧. ಎಲೈ ವ್ರತಶೀಲನೇ! ವಿಶ್ವವನ್ನು ಬಲ್ಲವರಲ್ಲಿ ಶ್ರೇಷ್ಠನಾದವನೇ! ನಿನ್ನ ಅನುಗ್ರಹದಿಂದ ನಾನು ಅದನ್ನೆಲ್ಲ ಕೇಳಿ ಕ್ರಮವಾಗಿ ಯಾತ್ರೆಯನ್ನು ಮಾಡಬೇಕೆಂದಿರುವೆನು. ಈ ನನ್ನ ಅಭೀಷ್ಟವನ್ನೂ ನೆರವೇರಿಸಿಕೊಡು."

೪೨. ಅಗಸ್ತ್ಯನು ಹೇಳುತ್ತಾನೆ:—"ಯಾತ್ರಾಕ್ರಮವನ್ನು ಮೊದಲಿನಿಂದಲೂ ಇದ್ದುದನ್ನಿದ್ದಂತೆಯೆ ವಿವರಿಸುತ್ತೇನೆ; ಕೇಳು. ಸಪ್ತತೀರ್ಥಗಳ ಆನುಪೂರ್ವಿಯನ್ನನುಸರಿಸಿ ಅಯೋಧ್ಯೆಯನ್ನು ವಿವರಿಸುತ್ತೇನೆ.

೪೩. ಮನೋವಾಕ್ಕಾಯಗಳ ಶುದ್ಧಿಯುಳ್ಳವನಾಗಿ ಅಂತರಾತ್ಮನನ್ನು ನಿರ್ದೋಷವಾಗಿಟ್ಟುಕೊಂಡು ಜಿತೇಂದ್ರಿಯನಾಗಿ ಮಾನಸವೇ ಮೊದಲಾದ

ವ್ಯಾಸ ಉವಾಚ:—

ಮಾನಸಾನ್ಯೇವ ತೀರ್ಥಾನಿ ಕಥಯಸ್ವ ತಪೋಧನ ।

ಯೇಷು ಸ್ನಾನವತಾಂ ನೄಣಾಂ ವಿಶುದ್ಧಿರ್ಮನಸೋ ಭವೇತ್ ॥ ೪೪ ॥

ಅಗಸ್ತ್ಯ ಉವಾಚ:—

ಶೃಣು ತೀರ್ಥಾನಿ ಗದತೋ ಮಾನಸಾನಿ ಮಮಾನಘ ।

ಯೇಷು ಸಮ್ಯಙ್ನರಃ ಸ್ನಾತ್ವಾ ಪ್ರಯಾತಿ ಪರಮಾಂ ಗತಿಂ ॥ ೪೫ ॥

ಸತ್ಯಂ ತೀರ್ಥಂ ಕ್ಷಮಾ ತೀರ್ಥಂ ತೀರ್ಥಮಿಂದ್ರಿಯನಿಗ್ರಹಃ ।

ಸರ್ವಭೂತದಯಾ ತೀರ್ಥಂ ತೀರ್ಥಾನಾಂ ಸತ್ಯವಾದಿತಾ ॥ ೪೬ ॥

ಜ್ಞಾನತೀರ್ಥಂ ತಪಸ್ತೀರ್ಥಂ ಕಥಿತಂ ತೀರ್ಥಸಪ್ತಕಂ ।

ಸರ್ವಭೂತದಯಾತೀರ್ಥೇ ವಿಶುದ್ಧಿರ್ಮನಸೋ ಭವೇತ್ ॥ ೪೭ ॥

ನ ತೋಯಪೂತದೇಹಸ್ಯ ಸ್ನಾನಮಿತ್ಯಭಿಧೀಯತೇ ।

ಸ ಸ್ನಾತೋ ಯಸ್ಯ ವೈ ಪುಂಸಃ ಸುವಿಶುದ್ಧಂ ಮನೋ ಮತಂ ।

ಭೌಮಾನಾಮಪಿ ತೀರ್ಥಾನಾಂ ಪುಣ್ಯತ್ವೇ ಕಾರಣಂ ಶೃಣು ॥ ೪೮ ॥

ಯಥಾ ಶರೀರಸ್ಯೋದ್ದೇಶಾಃ ಕೇಚಿನ್ಮಧ್ಯೋತ್ತಮಾಃ ಸ್ಮೃತಾಃ ।

ತಥಾ ಪೃಥಿವ್ಯಾಮುದ್ದೇಶಾಃ ಕೇಚಿತ್ಪುಣ್ಯತಮಾಃ ಸ್ಮೃತಾಃ ॥ ೪೯ ॥

---

ಪವಿತ್ರತೀರ್ಥಗಳಲ್ಲಿ ಸ್ನಾನಮಾಡಿ ಚೆನ್ನಾಗಿ ವಿಧಿಯನ್ನು ಯಾವನು ನಡೆಸುತ್ತಾನೆಯೊ ಅವನು ತೀರ್ಥಸ್ನಾನಫಲವನ್ನು ಪಡೆಯುತ್ತಾನೆ.

೪೪. ವ್ಯಾಸನು ಕೇಳುತ್ತಾನೆ:—"ಎಲೈ ತಪೋಧನನೇ! ಸ್ನಾನಮಾಡಿದ ಮಾನವರಿಗೆ ಮನಶ್ಶುದ್ಧಿಯನ್ನುಂಟಾಗುವ ಮಾನಸತೀರ್ಥಗಳನ್ನೇ ವಿವರಿಸು."

೪೫. ಅಗಸ್ತ್ಯನು ಹೇಳುತ್ತಾನೆ:— "ಎಲೈ ಪಾಪರಹಿತನೇ! ಕೇಳು. ಮಾನಸಗಳಾದ ತೀರ್ಥಗಳನ್ನು ಕುರಿತು ಹೇಳುತ್ತೇನೆ. ಮಾನವನು ಅವುಗಳಲ್ಲಿ ವಿಧ್ಯುಕ್ತವಾಗಿ ಸ್ನಾನಮಾಡಿ ಪರಮಗತಿಯನ್ನು ಪಡೆಯುತ್ತಾನೆ.

೪೬–೪೭. ಸತ್ಯತೀರ್ಥ, ಕ್ಷಮಾತೀರ್ಥ, ಇಂದ್ರಿಯನಿಗ್ರಹತೀರ್ಥ, ಸರ್ವಭೂತದಯಾತೀರ್ಥ, ಸತ್ಯವಾದಿತ್ವತೀರ್ಥ, ಜ್ಞಾನತೀರ್ಥ, ತಪಸ್ತೀರ್ಥ ಇವು ಏಳೂ ಸಪ್ತತೀರ್ಥಗಳೆಂದು ಹೇಳಲ್ಪಟ್ಟಿವೆ. ಸರ್ವಭೂತದಯಾತೀರ್ಥದಲ್ಲಿ ಮನಶ್ಶುದ್ಧಿಯುಂಟಾಗುತ್ತದೆ.

೪೮. ದೇಹವನ್ನು ನೀರಿನಿಂದ ಶುದ್ಧಿಮಾಡುವುದಕ್ಕೆ (ನಿಜವಾದ) ಸ್ನಾನ ಎಂದು ಹೇಳುವುದಿಲ್ಲ. ಯಾವ ಪುರುಷನ ಮನಸ್ಸು ಸಂಪೂರ್ಣವಾಗಿ ಶುದ್ಧವಾಗಿರುವುದೋ ಅವನೇ ಸ್ನಾನಮಾಡಿದವನೆಂದು ತಿಳಿಯಬೇಕು. ಭೂಮಿಯಲ್ಲಿರುವ ತೀರ್ಥಗಳ ಪುಣ್ಯತ್ವಕ್ಕೂ ಕಾರಣವೇನೆಂಬುದನ್ನು ಹೇಳುತ್ತೇನೆ; ಕೇಳು.

೪೯. ಶರೀರದಲ್ಲಿರುವ ಸ್ಥಾನಗಳಲ್ಲಿ ಕೆಲವು ಉತ್ತಮ ಮಧ್ಯಮಗಳೆಂದು

**ತಸ್ಮಾದ್ಭೌಮೇಷು ತೀರ್ಥೇಷು ಮಾನಸೇಷು ಚ ಸಂವಸೇತ್ ।**
**ಉಭಯೇಷು ಚ ಯಃ ಸ್ನಾತಿ ಸ ಯಾತಿ ಪರಮಾಂ ಗತಿಂ ॥ ೫೦ ॥**
**ತಸ್ಮಾತ್ತ್ವಮಪಿ ವಿಪ್ರೇಂದ್ರ ವಿಶುದ್ಧೇನಾಂತರಾತ್ಮನಾ ।**
**ಯಾತ್ರಾಂ ಕುರು ಪ್ರಯತ್ನೇನ ಯಾತ್ರಾ ವೈ ನೋದಿತಾ ಮಯಾ ।**
**ತಂ ತು ವಕ್ಷ್ಯಾಮಿ ವಿಪ್ರೇಂದ್ರ ತೀರ್ಥಯಾತ್ರಾವಿಧಿಂ ಕ್ರಮಾತ್ ॥ ೫೧ ॥**
**ಜಾಯಂತೇ ಚ ಜಲೇಷ್ವೇವ ಮ್ರಿಯಂತೇ ಚ ಜಲೌಕಸಃ ।**
**ನ ಚ ಗಚ್ಛಂತಿ ತೇ ಸ್ವರ್ಗಮಶುದ್ಧಮನಸೋ ಮಲಾಃ ॥ ೫೨ ॥**
**ವಿಷಯೇಷ್ವನಿಶಂ ರಾಗೋ ಮನಸೋ ಮಲ ಉಚ್ಯತೇ ।**
**ತೇಷ್ವೇವ ಹಿ ನ ಸಂಗಮ್ಯ ನೈರ್ಮಲ್ಯಂ ಸಮುದಾಹೃತಂ ॥ ೫೩ ॥**
**ಚಿತ್ತಮಂತರ್ಗತಂ ದುಷ್ಟಂ ತೀರ್ಥಸ್ನಾನಂ ನ ಶುದ್ಧ್ಯತಿ ।**
**ಶತಶೋಽಪಿ ಜಲೈರ್ಧೌತೇ ಸುರಾಭಾಂಡಮಪಾವನಂ ॥ ೫೪ ॥**
**ದಾನಮಿಜ್ಯಾ ತಪಃ ಶೌಚಂ ತೀರ್ಥಸೇವಾ ಶ್ರುತಿಸ್ತಥಾ ।**
**ಸರ್ವಾಣ್ಯೇತಾನಿ ತೀರ್ಥಾನಿ ಯದಿ ಭಾವೇತು ನಿರ್ಮಲಃ ॥ ೫೫ ॥**

---

ಯಾವರೀತಿ ಭಾವಿಸಲ್ಪಟ್ಟಿರುವುವೋ ಅದೇರೀತಿ ಭೂಮಿಯಲ್ಲಿ ಕೂಡ ಕೆಲವು ಸ್ಥಳಗಳು ಪುಣ್ಯತಮವಾದುವೆಂದು ತಿಳಿಯಲ್ಪಟ್ಟಿರುವುವು.

೫೦. ಆದುದರಿಂದ ಭೂಮಿಯಮೇಲಿನ ತೀರ್ಥಗಳಲ್ಲಿಯೂ, ಮಾನಸ ತೀರ್ಥಗಳಲ್ಲಿಯೂ ವಾಸಮಾಡಬೇಕು. ಯಾವನು ಎರಡು ಬಗೆಯ ತೀರ್ಥ ಗಳಲ್ಲಿಯೂ ಸ್ನಾನಮಾಡುವನೋ ಅವನು ಪರಮಗತಿಯನ್ನೈದುತ್ತಾನೆ.

೫೧. ಎಲೈ ವಿಪ್ರೇಂದ್ರನೇ! ಆದುದರಿಂದ ನೀನು ಕೂಡ ಶುದ್ಧವಾದ ಅಂತರಾತ್ಮವುಳ್ಳವನಾಗಿ ಪ್ರಯತ್ನಪೂರ್ವಕವಾಗಿ ಯಾತ್ರೆಯನ್ನು ಮಾಡು. ಯಾತ್ರೆಯ ವಿಚಾರವನ್ನು ತಿಳಿಸಿದ್ದಾಯಿತು. ಇನ್ನು ತೀರ್ಥಯಾತ್ರಾವಿಧಿ ಯನ್ನು ಕ್ರಮವಾಗಿ ವಿವರಿಸುತ್ತೇನೆ.

೫೨–೫೪. ಜಲಚರಗಳು ನೀರಿನಲ್ಲಿಯೇ ಹುಟ್ಟುತ್ತವೆ, ನೀರಿನಲ್ಲಿಯೇ ಸಾಯುತ್ತವೆ. ಮನಸ್ಸಿನ ಮಲವನ್ನು ಶುದ್ಧಿಮಾಡಿಕೊಳ್ಳದಿರುವ ಅವು ಸ್ವರ್ಗಕ್ಕೆ ಹೋಗುವುದಿಲ್ಲ. ವಿಷಯಗಳಲ್ಲಿ ಯಾವಾಗಲೂ ಇರುವ ರಾಗವು ಮನಸ್ಸಿನ ಮಲವೆನಿಸಿಕೊಳ್ಳುತ್ತದೆ. ಅವುಗಳಲ್ಲಿ ಸೇರದಿರುವುದೇ ನೈರ್ಮಲ್ಯವೆಂದು ಹೇಳಲ್ಪಡುವುದು. ಒಳಗಿರುವ ದುಷ್ಟವಾದ ಚಿತ್ತವನ್ನು ತೀರ್ಥಸ್ನಾನವು ಶುದ್ಧ ಮಾಡುವುದಿಲ್ಲ. ನೂರಾರುಸಲ ನೀರಿನಿಂದ ತೊಳೆದರೂ ಹೆಂಡದ ಗಡಿಗೆಯು ಅಪವಿತ್ರವೇ ಆಗಿರುವುದು.

೫೫. ದಾನ, ಯಜ್ಞ, ತಪಸ್ಸು, ಶೌಚ, ತೀರ್ಥಸೇವೆ, ಶ್ರುತಿ—ಈ ಎಲ್ಲವೂ ಭಾವದಿಂದ ನಿರ್ಮಲವಾಗಿರುವ ಪಕ್ಷದಲ್ಲಿ ತೀರ್ಥಗಳೇ ಸರಿ.

ನಿಗೃಹೀತೇಂದ್ರಿಯಗ್ರಾಮೋ ಯತ್ರೈವ ವಸತೇ ನರಃ ।
ತತ್ರ ತಸ್ಯ ಕುರುಕ್ಷೇತ್ರಂ ನೈಮಿಷಂ ಪುಷ್ಕರಂ ತಥಾ ॥ ೫೬ ॥
ಏತತ್ತೇ ಕಥಿತಂ ವಿಪ್ರ ಮಾನಸಂ ತೀರ್ಥಲಕ್ಷಣಂ ।
ಸ್ನಾತೇ ಯಸ್ಮಿನ್ ಕ್ರಿಯಾಃ ಸರ್ವಾಃ ಸಫಲಾಃ ಸ್ಯುಃ ಕ್ರಿಯಾವತಾಂ॥
ಪ್ರಾತರುತ್ಥಾಯ ಮತಿಮಾನ್ ಸಂಗಮೇ ಸ್ನಾನಮಾಚರೇತ್ ।
ವಿಭುಂ ವಿಷ್ಣುಹರಿಂ ದೃಷ್ಟ್ವಾ ಸ್ನಾಯಾದ್ವೈ ಬ್ರಹ್ಮಕುಂಡಕೇ ॥ ೫೮ ॥
ಚಕ್ರತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಚಕ್ರಹರಿಂ ವಿಭುಂ ।
ತತೋ ಧರ್ಮಹರಿಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೫೯ ॥
ಏಕಾದಶ್ಯಾಮೇಕಾದಶ್ಯಾಮಿಯಂ ಯಾತ್ರಾ ಶುಭಾವಹಾ ।
ಪ್ರಾತರುತ್ಥಾಯ ಮತಿಮಾನ್ ಸ್ವರ್ಗದ್ವಾರಜಲಪ್ಲುತಃ ॥ ೬೦ ॥
ವಿಧಾಯ ನಿತ್ಯಜಂ ಕರ್ಮ ಅಯೋಧ್ಯಾಂ ಚ ವಿಲೋಕಯೇತ್ ।
ಸರಯೂಂ ತು ತತೋ ದೃಷ್ಟ್ವಾ ಪಶ್ಯೇನ್ಮತ್ತಗಜಂ ತತಃ ॥ ೬೧ ॥
ಬಂದೀಂ ಚ ಶೀತಲಾಂ ಚೈವ ಬಟುಕಂ ಚ ವಿಲೋಕಯೇತ್ ।
ತದಗ್ರಸರಸಿ ಸ್ನಾತ್ವಾ ಮಹಾವಿದ್ಯಾಂ ವಿಲೋಕಯೇತ್ ॥ ೬೨ ॥

---

೫೬. ಮನುಷ್ಯನು ಇಂದ್ರಿಯಸಮೂಹಗಳನ್ನು ನಿಗ್ರಹಿಸಿ ಎಲ್ಲಿ ವಾಸ ಮಾಡುತ್ತಾನೆಯೊ ಅಲ್ಲಿಯೇ ಅವನಿಗೆ ಕುರುಕ್ಷೇತ್ರ, ನೈಮಿಷ, ಪುಷ್ಕರಕ್ಷೇತ್ರ ಗಳಾಗುವುವು.

೫೭. ಅಯ್ಯಾ ವಿಪ್ರನೇ! ಈ ಮಾನಸತೀರ್ಥ ಲಕ್ಷಣವನ್ನು ನಿನಗೆ ಹೇಳಿದ್ದೇನೆ. ಈ ತೀರ್ಥದಲ್ಲಿ ಸ್ನಾನಮಾಡುವುದರಿಂದಲೇ ಕ್ರಿಯಾವಂತರ ಕ್ರಿಯೆಗಳೆಲ್ಲವೂ ಸಫಲಗಳಾಗುತ್ತವೆ.

೫೮. ಬುದ್ಧಿವಂತನಾದವನು ಬೆಳಗ್ಗೆದ್ದು ಸಂಗಮದಲ್ಲಿ ಸ್ನಾನಮಾಡಬೇಕು. ವಿಭುವಾದ ವಿಷ್ಣುಹರಿಯನ್ನು ದರ್ಶನಮಾಡಿ ಬ್ರಹ್ಮಕುಂಡದಲ್ಲಿ ಸ್ನಾನಮಾಡಬೇಕು.

೫೯. ಮಾನವನು ಚಕ್ರತೀರ್ಥದಲ್ಲಿ ಸ್ನಾನಮಾಡಿ ವಿಭುವಾದ ಚಕ್ರಹರಿಯನ್ನು ದರ್ಶನಮಾಡಿದ ಬಳಿಕ ಧರ್ಮಹರಿಯನ್ನು ದರ್ಶನಮಾಡಿ ಸರ್ವಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ.

೬೦–೬೧. ಏಕಾದಶೀ ದಿನಗಳಲ್ಲಿ ಈ ಯಾತ್ರೆಯು ಶುಭವನ್ನುಂಟುಮಾಡುವುದು. ಮತಿವಂತನು ಪ್ರಾತಃಕಾಲದಲ್ಲಿ ಸ್ವರ್ಗದ್ವಾರದ ಜಲದಲ್ಲಿ ಮುಳುಗಿ ಸ್ನಾನಮಾಡಿ, ನಿತ್ಯಕರ್ಮಗಳನ್ನು ನಡೆಸಿ ಅಯೋಧ್ಯೆಯನ್ನು ಅವಲೋಕಿಸಬೇಕು. ಬಳಿಕ ಸರಯೂನದಿಯನ್ನು ಸಂದರ್ಶಿಸಿ ಮತ್ತಗಜನನ್ನು ಸಂದರ್ಶಿಸಬೇಕು.

೬೨. ಬಳಿಕ ಬಂದಿಯನ್ನೂ, ಶೀತಲಾದೇವಿಯನ್ನೂ, ಬಟುಕನನ್ನೂ

ಪಿಂಡಾರಕಂ ತತೋ ದೃಷ್ಟ್ವಾ ತತೋ ಭೈರವದರ್ಶನಂ ।
ಅಷ್ಟಮ್ಯಾಂ ಚ ಚತುರ್ದಶ್ಯಾಮೇಷಾ ಯಾತ್ರಾ ಫಲಪ್ರದಾ ॥ ೬೩ ॥
ಅಂಗಾರಕಚತುರ್ಥ್ಯಾಂ ತು ಪೂರ್ವೋಕ್ತಾ ದೇವತಾ ಅಪಿ ।
ವಿಘ್ನೇಶಂ ಚ ತತಃ ಪಶ್ಯೇತ್ಸರ್ವಕಾಮಾರ್ಥಸಿದ್ಧಯೇ ॥ ೬೪ ॥
ಪ್ರಾತರುತ್ಥಾಯ ಮತಿಮಾನ್ ಬ್ರಹ್ಮಕುಂಡಜಲೇ ಪ್ಲುತಃ ।
ವಿಷ್ಣುಂ ವಿಷ್ಣುಹರಿಂ ದೃಷ್ಟ್ವಾ ಮನೋವಾಕ್ಕಾಯಶುದ್ಧಿಮಾನ್ ॥ ೬೫ ॥
ಮಂತ್ರೇಶ್ವರಂ ತತೋ ದೃಷ್ಟ್ವಾ ಮಹಾವಿದ್ಯಾಂ ವಿಲೋಕಯೇತ್ ।
ಅಯೋಧ್ಯಾಂ ಚ ತತೋ ದೃಷ್ಟ್ವಾ ಸರ್ವಕಾಮಾರ್ಥಸಿದ್ಧಯೇ ॥ ೬೬ ॥
ಸ್ವರ್ಗದ್ವಾರೇ ನರಃ ಸ್ನಾತ್ವಾ ಸಚೈಲೋ ವಿಜಿತೇಂದ್ರಿಯಃ ।
ನಾನಾವಿಧಾನಿ ಪಾಪಾನಿ ಬಹುಜನ್ಮಕೃತಾನಿ ಚ ।
ಸಚೈಲಸ್ನಾನತೋ ಯಾಂತಿ ತಸ್ಮಾತ್ಸಚೈಲಮಾಚರೇತ್ ॥ ೬೭ ॥
ಏಷಾ ವೈ ಗದಿತಾ ಯಾತ್ರಾ ಸರ್ವಪಾಪಹರಾ ಶುಭಾ ॥ ೬೮ ॥

---

ದರ್ಶನಮಾಡಬೇಕು. ಮುಂದಿನ ಸರೋವರದಲ್ಲಿ ಸ್ನಾನಮಾಡಿ ಮಹಾವಿದ್ಯೆಯನ್ನು ಸಂದರ್ಶಿಸಬೇಕು.

೬೩. ಆಮೇಲೆ ಪಿಂಡಾರಕನನ್ನು ಕಂಡು, ಬಳಿಕ ಭೈರವನನ್ನು ದರ್ಶನ ಮಾಡಬೇಕು. ಅಷ್ಟಮಿಯಲ್ಲಿಯೂ ಚತುರ್ದಶಿಯಲ್ಲಿಯೂ ಈ ಯಾತ್ರೆಯು ಫಲಪ್ರದವಾಗುವುದು.

೬೪. ಅಂಗಾರಕ ಚತುರ್ಥಿಯಲ್ಲಿ ಸರ್ವಕಾಮಾರ್ಥಗಳಸಿದ್ಧಿಗಾಗಿ ಮೇಲೆ ಹೇಳಿದ ದೇವತೆಗಳನ್ನೂ, ಬಳಿಕ ವಿಘ್ನೇಶ್ವರನನ್ನೂ ದರ್ಶನಮಾಡಬೇಕು.

೬೫. ಪ್ರಾತಃಕಾಲದಲ್ಲೆದ್ದು ಮತಿವಂತನು ಬ್ರಹ್ಮಕುಂಡದ ಜಲದಲ್ಲಿ ಸ್ನಾನಮಾಡಿ ವಿಷ್ಣುವನ್ನೂ, ವಿಷ್ಣುಹರಿಯನ್ನೂ ದರ್ಶನಮಾಡಿ ಮನೋವಾಕ್ಕಾಯಗಳಿಂದ ಶುದ್ಧನಾಗುತ್ತಾನೆ.

೬೬–೬೭. ಆಮೇಲೆ ಮಂತ್ರವಿದ್ಯೆಯನ್ನು ಕಂಡು ಮಹಾವಿದ್ಯೆಯನ್ನು ವಿಲೋಕಿಸಬೇಕು. ಬಳಿಕ ಅಯೋಧ್ಯೆಯನ್ನು ನೋಡಿ. ಸರ್ವಕಾಮಾರ್ಥಗಳೂ ಸಿದ್ಧಿಸಲೆಂದು ಸ್ವರ್ಗದ್ವಾರದಲ್ಲಿ ನರನು ಜಿತೇಂದ್ರಿಯನಾಗಿ ವಸ್ತ್ರಸಮೇತನಾಗಿ ಸ್ನಾನಮಾಡಬೇಕು. ಬಹುಜನ್ಮಗಳಲ್ಲಿ ಮಾಡಿದ ನಾನಾಬಗೆಯ ಪಾಪಗಳೂ ಕೂಡ ಸಚೇಲಸ್ನಾನದಿಂದ ಪರಿಹಾರವಾಗಿಹೋಗುತ್ತವೆ. ಆದುದರಿಂದ ಸಚೇಲವಾಗಿ ಸ್ನಾನವನ್ನಾಚರಿಸಬೇಕು.

೬೮. ಈ ಯಾತ್ರೆಯು ಉತ್ತಮಗತಿಯನ್ನು ಕೊಡುವುದು; ಸರ್ವಪಾಪ ಪರಿಹಾರಕವಾದುದು ಮತ್ತು ಶುಭವಾದುದು.

ಯ ಏವಂ ಕುರುತೇ ಯಾತ್ರಾಂ ನಿತ್ಯಂ ಶುಭಫಲಪ್ರದಾಂ ।
ನ ತಸ್ಯ ಪುನಾರಾವೃತ್ತಿಃ ಕಲ್ಪಕೋಟಿಶತೈರಪಿ ॥ ೬೯ ॥
ತಸ್ಮಾತ್ತ್ವಮಪಿ ವಿಪ್ರೇಂದ್ರ ಅಯೋಧ್ಯಾಂ ವ್ರಜ ಮಾ ಚಿರಂ ।
ತತ್ರ ಗತ್ವಾ ಕ್ರಮೇಣೈವ ಯಾತ್ರಾಂ ಕುರು ಯತೇಂದ್ರಿಯಃ ॥ ೭೦ ॥
ಅಯೋಧ್ಯಾ ಪರಮಂ ಸ್ಥಾನಂ ಅಯೋಧ್ಯಾ ಪರಮಂ ಮಹತ್ ।
ಅಯೋಧ್ಯಾಯಾಃ ಸಮಾ ಕಾಚಿತ್ ಪುರೀ ನೈವ ಪ್ರದೃಶ್ಯತೇ ॥ ೭೧ ॥
ಅಯೋಧ್ಯಾ ಪರಮಂ ಸ್ಥಾನಂ ವಿಷ್ಣುಚಕ್ರೇ ಪ್ರತಿಷ್ಠಿತಂ ॥ ೭೨ ॥
ಇತ್ಯೇತತ್ಕಥಿತಂ ವಿಪ್ರ ಮಯಾ ಪೃಷ್ಟಾ ಹಿ ಯತ್ತ್ವಯಾ ।
ಸಮಾಶ್ರಯ ಮುನೇ ತಾಂ ತ್ವಮನುಜಾನೀಹಿ ಮಾಮತಃ ॥ ೭೩ ॥

ಸೂತ ಉವಾಚ :—

ಇತ್ಯೇತದುಕ್ತ್ವಾ ವಿರತೇ ಮುನೌ ಕಲಶಜನ್ಮನಿ ।
ಉವಾಚ ಮಧುರಂ ವಾಕ್ಯಂ ವ್ಯಾಸಃ ಸತಪಸಾಂ ನಿಧಿಃ ॥ ೭೪ ॥

---

೬೯. ಯಾವನು ಈ ರೀತಿ ಶುಭಫಲಗಳನ್ನು ಕೊಡುವುದಾದ ಯಾತ್ರೆಯನ್ನು ನಿತ್ಯವೂ ಮಾಡುತ್ತಾನೆಯೋ ಅವನಿಗೆ ನೂರಾರುಕೋಟಿ ಕಲ್ಪಗಳಾದರೂ ಪುನರಾವೃತ್ತಿಯಿರುವುದಿಲ್ಲವು.

೭೦. ಎಲೈ ವಿಪ್ರೇಂದ್ರನೇ! ಆದುದರಿಂದ ಬೇಗನೆ ಅಯೋಧ್ಯೆಗೆ ಹೋಗು. ಅಲ್ಲಿಗೆ ಹೋಗಿ ಇಂದ್ರಿಯಗಳನ್ನು ನಿಗ್ರಹಿಸಿ ಕ್ರಮವಾಗಿ ಯಾತ್ರೆಯನ್ನು ಮಾಡು.

೭೧. ಅಯೋಧ್ಯೆಯು ಪರಮ (ಶ್ರೇಷ್ಠ)ಸ್ಥಾನವು. ಅಯೋಧ್ಯೆಯು ಪರಮಮಹತ್ತಾದುದು. ಅಯೋಧ್ಯೆಗೆ ಸಮನಾದ ಪಟ್ಟಣವು ಭೂಮಂಡಲದಲ್ಲಿಯೆ ಯಾವುದೊಂದೂ ಕಾಣಿಸುವುದೇ ಇಲ್ಲವು.

೭೨. ವಿಷ್ಣುಚಕ್ರದಲ್ಲಿ ಪ್ರತಿಷ್ಠಿತವಾಗಿರುವ ಅಯೋಧ್ಯೆಯು ಪರಮ (ಶ್ರೇಷ್ಠ)ಸ್ಥಾನವು.

೭೩. ಎಲೈ ವಿಪ್ರನೇ! ನೀನು ಯಾವುದನ್ನು ಕುರಿತು ನನ್ನನ್ನು ಪ್ರಶ್ನೆ ಮಾಡಿದೆಯೋ ಆದನ್ನು ಈ ರೀತಿ ವಿವರಿಸಿದ್ದೇನೆ. ಮುನಿಯೇ! ನೀನು ಆ ಅಯೋಧ್ಯೆಯನ್ನು ಹೋಗಿ ಸೇರು. ಈಗ ನನ್ನನ್ನು ಬೀಳುಕೊಡು" ಎಂದನು.

೭೪. ಸೂತನು ಹೇಳುತ್ತಾನೆ:—ಕಲಶ ಜನ್ಮನಾದ ಅಗಸ್ತ್ಯಮುನಿಯು ಈರೀತಿ ನುಡಿದು ಸುಮ್ಮನಾಗಲು ತಪೋನಿಧಿಯಾದ ವ್ಯಾಸಮುನಿಯು ಮಧುರವಾದ ವಾಕ್ಯವನ್ನು ನುಡಿದನು.

ವ್ಯಾಸ ಉವಾಚ :—
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಕೃತಕೃತ್ಯೋಽಸ್ಮ್ಯಹಂ ಮುನೇ ।
ಸತ್ಯಂ ಶೌಚಂ ಶ್ರುತಂ ವಿತ್ತಂ ಸುಶೀಲಂಚ ಕ್ಷಮಾರ್ಜವಂ ।
ಸರ್ವಂ ಚ ನಿಷ್ಫಲಂ ತಸ್ಯ ಅಯೋಧ್ಯಾಂ ನಾಗತೋ ಯದಿ ॥ ೭೫ ॥
ಯಸ್ಮಿನ್ಮಯಿ ಪ್ರಸನ್ನೇನ ತ್ವಯೋಕ್ತೋ ಧರ್ಮನಿರ್ಣಯಃ ।
ಇದಾನೀಮಪಿ ಗಚ್ಛಾಮಿ ಹ್ಯಯೋಧ್ಯಾಂ ನಿರ್ಮಲಾಂ ಪುರೀಂ ।
ತ್ವಮಪಿ ವ್ರಜ ವಿಪ್ರೇಂದ್ರ ಸ್ವಮಾಶ್ರಮಪದಂ ನಿಜಂ ॥ ೭೬ ॥
ಸೂತ ಉವಾಚ :—
ಇತ್ಯೇವಮುಕ್ತ್ವಾ ಕ್ರಮಶೋ ಯಾತ್ರಾವಿಧಿಮನುತ್ತಮಂ ।
ಜಗಾಮ ತಪಸಾಂ ರಾಶಿರಗಸ್ತ್ಯಃ ಕುಂಭಸಂಭವಃ ॥ ೭೭ ॥
ಸ್ವಮಾಶ್ರಮಪದಂ ಧೀರೋ ವಿಸ್ಮಯೋತ್ಫುಲ್ಲಲೋಚನಃ ।
ವ್ಯಾಸೋಽಪಿ ಮಹಸಾಂ ರಾಶಿರ್ಜಗಾಮ ವಿಜಿತೇಂದ್ರಿಯಃ ॥ ೭೮ ॥
ಅಯೋಧ್ಯಾಮಾಗತೋ ವಿಪ್ರಃ ಸರ್ವಕಾಮಾರ್ಥಸಿದ್ಧಯೇ ।
ಆಗತ್ಯೈತದ್ವಿಧಾನೇನ ಕೃತ್ವಾ ಯಾತ್ರಾಂ ಯಥಾಕ್ರಮಂ ॥ ೭೯ ॥
ದೃಷ್ಟ್ವಾ ಮಹಾಶ್ಚರ್ಯಕರಂ ಕಾರಣಂ ತೀರ್ಥಮುತ್ತಮಂ ।
ಆನಂದತುಂದಿಲಸ್ತತ್ರ ಸಮ್ಯಗಾಚಮ್ಯ ಬುದ್ಧಿಮಾನ್ ॥ ೮೦ ॥

---

೭೫. ವ್ಯಾಸನು ಹೇಳುತ್ತಾನೆ:—"ಎಲೈ ಮುನಿಯೇ! ನಾನು ಧನ್ಯನಾದೆ; ಅನುಗೃಹೀತನಾದೆ; ಕೃತಕೃತ್ಯನಾದೆ, ಸತ್ಯ, ಶೌಚ, ಶ್ರುತ (ಶಾಸ್ತ್ರಜ್ಞಾನ), ವಿತ್ತ (ಹಣ), ಸುಶೀಲ, ಕ್ಷಮೆ, ಆರ್ಜವ (ಸರಳತೆ)—ಸರ್ವವೂ ಅಯೋಧ್ಯೆಗೆ ಹೋಗದೆ ಇದ್ದವನಿಗೆ ವ್ಯರ್ಥವಾಗುವುದು.

೭೬. ನೀನು ನನ್ನಲ್ಲಿ ಪ್ರಸನ್ನನಾಗಿ ಧರ್ಮನಿರ್ಣಯವನ್ನು ಹೇಳಿರುವೆ. ನಿರ್ಮಲವಾದ ಅಯೋಧ್ಯಾಪಟ್ಟಣಕ್ಕೆ ಈಗಲೇ ಹೊರಡುತ್ತೇನೆ. ಎಲೈ ವಿಪ್ರೇಂದ್ರನೇ! ನೀನು ಕೂಡ ನಿನ್ನ ಆಶ್ರಮಕ್ಕೆ ಪ್ರಯಾಣಮಾಡು."

೭೭. ಸೂತಪುರಾಣಿಕನು ಹೇಳುತ್ತಾನೆ:—ತಪಸ್ಸುಗಳಿಗೆ ರಾಶಿಯೆನಿಸಿದ ಅಗಸ್ತ್ಯನು ವ್ಯಾಸನಿಗೆ ಉತ್ತಮವಾದ ಯಾತ್ರಾವಿಧಿಯನ್ನು ಈ ರೀತಿಯಾಗಿ ಕ್ರಮವಾಗಿ ವಿವರಿಸಿಹೇಳಿ ಹೊರಟುಹೋದನು.

೭೮. ತೇಜೋರಾಶಿಯೂ, ಜಿತೇಂದ್ರಿಯನೂ, ಧೀರನೂ ಆದ ವ್ಯಾಸ ಮುನಿಯೂ ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ತನ್ನ ಆಶ್ರಮಕ್ಕೆ ಹೊರಟುಹೋದನು.

೭೯–೮೧. ಆ ವಿಪ್ರನು ಸರ್ವಕಾಮಾರ್ಥಸಿದ್ಧಿಗಾಗಿ ಅಯೋಧ್ಯೆಗೆ ಬಂದನು. ಬಂದು ಈ ವಿಧಾನದಿಂದಲೇ ಕ್ರಮವಾಗಿ ಯಾತ್ರೆಯನ್ನು ಮಾಡಿ,

ತತೋ ಜಗಾಮ ವಿಪ್ರೇಂದ್ರಃ ಸ್ವಮಾಶ್ರಮಪದಂ ಮುನಿಃ ।
ವ್ಯಾಸೇನ ಕಥಿತಂ ಮಹ್ಯಂ ಮಾಹಾತ್ಮ್ಯಂ ಕ್ರಮಶಸ್ತದಾ ॥ ೮೧ ॥
ಮಯಾ ಶ್ರುತ್ವಾ ಚ ಮಾಹಾತ್ಮ್ಯಂ ಯಾತ್ರಾಂ ಕೃತ್ವಾ ವಿಧಾನತಃ ।
ಕುರುಕ್ಷೇತ್ರೇ ಸಮಾಗತ್ಯ ಭವದಗ್ರೇ ನಿರೂಪಿತಂ ॥ ೮೨ ॥
ಇದಂ ಮಾಹಾತ್ಮ್ಯಮತುಲಂ ಯಃ ಪಠೇತ್ಪ್ರಯತೋ ನರಃ ।
ಶ್ರದ್ಧಯಾ ಯಶ್ಚ ಶೃಣುಯಾತ್ಸ ಯಾತಿ ಪರಮಾಂ ಗತಿಂ ॥ ೮೩ ॥
ತಸ್ಮಾದೇತತ್ಪ್ರಯತ್ನೇನ ಶ್ರೋತವ್ಯಂ ಚ ಜನೈಃ ಸದಾ ।
ದ್ವಿಜಪೂಜಾ ವಿಷ್ಣುಪೂಜಾ ವಿಧಾತವ್ಯಾ ಪ್ರಯತ್ನತಃ ॥ ೮೪ ॥
ದಾತವ್ಯಂ ಚ ಸುವರ್ಣಾದಿ ಯಥಾಶಕ್ತ್ಯಾ ದ್ವಿಜನ್ಮನೇ ।
ಪುತ್ರಾರ್ಥೀ ಲಭತೇ ಪುತ್ರಾನ್ ಧರ್ಮಾರ್ಥೀ ಧರ್ಮಮಾಪ್ನುಯಾತ್ ॥
ಅತಿವಿಪುಲವಿಧಾನೈರ್ವರ್ಣಿತಂ ಧರ್ಮಮಾದ್ಯಂ
ಕಲಯತಿ ಪರಭಕ್ತ್ಯಾ ಕ್ಷೇತ್ರಮಾಹಾತ್ಮ್ಯಮೇತತ್ ।
ಯ ಇಹ ಮನುಜವರ್ಯಃ ಶ್ರೀಸನಾಥಃ ಸ ಸಮ್ಯಕ್
ವ್ರಜತಿ ಹರಿನಿವಾಸಂ ಸರ್ವಭೋಗಾಂಶ್ಚ ಭುಕ್ತ್ವಾ ॥ ೮೬ ॥

---

ಮಹದಾಶ್ಚರ್ಯಕರವಾದ ಉತ್ತಮತೀರ್ಥವನ್ನು ದರ್ಶನಮಾಡಿ ಆನಂದತುಂದಿಲನಾಗಿ ಆಚಮನಮಾಡಿದನು. ಆ ಬಳಿಕ ಬುದ್ಧಿವಂತನೂ, ವಿಪ್ರೇಂದ್ರನೂ ಆದ ಆ ಮುನಿಯು ತನ್ನ ಆಶ್ರಮಕ್ಕೆ ಹೊರಟುಹೋದನು. ಆಗ ಈ ಮಾಹಾತ್ಮ್ಯವು ವ್ಯಾಸನಿಂದ ಕ್ರಮವಾಗಿ ನನಗೆ ಹೇಳಲ್ಪಟ್ಟಿತು.

೮೨. ನಾನು ಈ ಮಾಹಾತ್ಮ್ಯವನ್ನಾಲಿಸಿ ವಿಧಾನಾನುಸಾರವಾಗಿ ಯಾತ್ರೆ ಮಾಡಿ ಕುರುಕ್ಷೇತ್ರಕ್ಕೆ ಬಂದು ನಿಮ್ಮೆದುರಿಗೆ ಇದೀಗ ನಿರೂಪಿಸಿದ್ದೇನೆ.

೮೩. ಎಣೆಯಿಲ್ಲದುದಾದ ಈ ಮಾಹಾತ್ಮ್ಯವನ್ನು ಯಾವ ನರನು ಇಂದ್ರಿಯನಿಗ್ರಹಶೀಲನಾಗಿ ಪಠಿಸುವನೋ, ಯಾವನು ಶ್ರದ್ಧೆಯಿಂದ ಆಲಿಸುವನೋ ಅವನು ಪರಮಗತಿಯನ್ನು ಪಡೆಯುತ್ತಾನೆ.

೮೪. ಆದುದರಿಂದ ಜನರು ಸದಾ ಇದನ್ನು ಪ್ರಯತ್ನಪೂರ್ವಕವಾಗಿ ಕೇಳಬೇಕು. ಬ್ರಾಹ್ಮಣಪೂಜೆಯನ್ನೂ, ವಿಷ್ಣುಪೂಜೆಯನ್ನೂ ಪ್ರಯತ್ನಪಟ್ಟು ಮಾಡಬೇಕು.

೮೫. ಬ್ರಾಹ್ಮಣನಿಗೆ ಸುವರ್ಣ ಮೊದಲಾದುದನ್ನು ಯಥಾಶಕ್ತಿಯಾಗಿ ದಾನಮಾಡಬೇಕು. ಇದರಿಂದ ಪುತ್ರಾರ್ಥಿಯಾದವನು ಪುತ್ರರನ್ನು ಪಡೆಯುತ್ತಾನೆ. ಧರ್ಮಾರ್ಥಿಯು ಧರ್ಮವನ್ನು ಪಡೆಯುತ್ತಾನೆ.

೮೬. ಧರ್ಮಸಾಧಕವೂ, ಎಲ್ಲಕ್ಕೂ ಮೊದಲನೆಯದೂ ಆದ ಈ ಕ್ಷೇತ್ರ ಮಾಹಾತ್ಮ್ಯವನ್ನು ಅತಿ ವಿಪುಲವಾದ ವಿಧಾನಗಳಿಂದ ವರ್ಣಿಸಿದುದಾಗಿದೆ.

ಯಃ ಪಾಠಕಸ್ಯಾಪಿ ಕದಾಚಿದೇವ
ದದಾತಿ ವಿತ್ತಂ ಚ ಯಥಾತ್ಮಶಕ್ತ್ಯಾ ।
ಪಾತ್ರಾಣಿ ವಸ್ತ್ರಾಣಿ ಮನೋಹರಾಣಿ
ರೌಪ್ಯಂ ಸುವರ್ಣಂ ಚ ಗವೀಃ ಸ ಮುಚ್ಯೇತ್ ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಅಯೋಧ್ಯಾಮಾಹಾತ್ಮ್ಯೇ ಅಗಸ್ತ್ಯವ್ಯಾಸಸಂವಾದೇ "ಅಯೋಧ್ಯಾಯಾತ್ರಾವಿಧಿಕ್ರಮವರ್ಣನಂ" ನಾಮ ದಶಮೋಽಧ್ಯಾಯಃ

## ಅಯೋಧ್ಯಾಮಾಹಾತ್ಮ್ಯಂ ಸಂಪೂರ್ಣಂ

---

ಈ ಮಾಹಾತ್ಮ್ಯವು ಪರಮಭಕ್ತಿಯನ್ನುಂಟುಮಾಡುತ್ತದೆ. ಯಾವ ಮನುಜ ಶ್ರೇಷ್ಠನು ಈ ಮಾಹಾತ್ಮ್ಯವನ್ನು ಭಕ್ತಿಯಿಂದ ಪಠಿಸುವನೋ ಅವನು ಸಂಪತ್ತಿನಿಂದ ಕೂಡಿದವನಾಗಿ ಸರ್ವಭೋಗಗಳನ್ನೂ ಚೆನ್ನಾಗಿ ಅನುಭವಿಸಿ ಶ್ರೀಹರಿಯ ನಿವಾಸವನ್ನೈದುತ್ತಾನೆ.

೮೭. ಯಾವನು ತನಗೆ ಶಕ್ತಿಯಿರುವಮಟ್ಟಿಗೆ ಪಾಠಕನಿಗೆ ಕೂಡ ಯಾವಾಗಲಾದರೂ ಹಣವನ್ನೂ, ಪಾತ್ರೆಗಳು, ಮನೋಹರವಾದ ವಸ್ತ್ರಗಳು, ಚಿನ್ನ, ಬೆಳ್ಳಿಗಳೂ, ಹಸುಗಳು ಇವನ್ನು ದಾನಮಾಡುವನೋ ಅವನು ಮುಕ್ತನಾಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದ ಅಗಸ್ತ್ಯವ್ಯಾಸ ಸಂವಾದದಲ್ಲಿ "ಅಯೋಧ್ಯಾಯಾತ್ರಾವಿಧಿಕ್ರಮವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

## ಅಯೋಧ್ಯಾಮಾಹಾತ್ಮ್ಯಂ ಸಂಪೂರ್ಣಂ

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಶ್ರೀ ವಾಸುದೇವಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರನಾಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಸಾವರ್ಣಿಪ್ರಶ್ನಃ

ಶೌನಕ ಉವಾಚ :—

**ಜೀವಾನಾಂ ಶ್ರೇಯಸೇ ಸೌತೇ ಬಹುಧಾ ಸಾಧನಾನಿ ತೇ ।**
**ಧರ್ಮೋ ಜ್ಞಾನಂ ಚ ವೈರಾಗ್ಯಂ ಯೋಗಾದೀನ್ಯುದಿತಾನಿ ನಃ ॥ ೧ ॥**
**ಇತಿಹಾಸೈರ್ಬಹುವಿಧೈರ್ವಿಸ್ಪಷ್ಟಾರ್ಥಾನಿ ತಾನಿ ಚ ।**
**ಸರ್ವಾಣ್ಯಪಿ ಮಹಾಬುದ್ಧೇ ಶ್ರುತಾನ್ಯಸ್ಮಾಭಿರಾದರಾತ್ ॥ ೨ ॥**
**ಸರ್ವೇಷಾಂ ಮನುಜಾನಾಂ ತು ದುಷ್ಕರಾಣ್ಯೇವ ತಾನಿ ತು ।**
**ಬಾಹುಲ್ಯಾಚ್ಚಾಂತರಾಯಾಣಾಂ ತತ್ಸಿದ್ಧಿರಪಿ ದುರ್ಲಭಾ ॥ ೩ ॥**

---

### ಕನ್ನಡದ ಅನುವಾದ

#### ಸಾವರ್ಣಿಯ ಪ್ರಶ್ನೆ

೧. ಶೌಕನು ಹೇಳುತ್ತಾನೆ:—ಎಲೈ ಸೌತಿಯೇ! ಜೀವಿಗಳ ಶ್ರೇಯಸ್ಸಿಗಾಗಿ ನೀನು ಸಾಧನಗಳೆಂದು ಧರ್ಮ, ಜ್ಞಾನ, ವೈರಾಗ್ಯಗಳನ್ನೂ, ಯೋಗ ಮೊದಲಾದವನ್ನೂ ನಮಗೆ ಹೇಳಿದ್ದೀಯೆ.

೨. ಬಹುವಿಧವಾದ ಇತಿಹಾಸಗಳಿಂದ ಅವೆಲ್ಲವುಗಳ ಅರ್ಥವೂ ನಮಗೆ ಸ್ಪಷ್ಟವಾಗಿದೆ. ಎಲೈ ಮಹಾಬುದ್ಧಿಶಾಲಿಯೇ! ನಾವು ನಿನ್ನಿಂದಲೇ ಅವೆಲ್ಲವನ್ನೂ ಆದರದಿಂದ ಕೇಳಿದ್ದೇವೆ.

೩. ಅವುಗಳೆಲ್ಲವೂ ಸಮಸ್ತಮನುಜರಿಗೂ ಮಾಡಲು ಬಹುಕಷ್ಟವಾದುವೇ ಆಗಿರುವುವು. ವಿಘ್ನಗಳು ಬಹು ಹೆಚ್ಚಾಗಿರುವುದರಿಂದ ಅವುಗಳ ಸಿದ್ಧಿಯು ಕೂಡ ದುರ್ಲಭವೇ ಸರಿ.

ಪ್ರಯತ್ನೇನಾತಿಮಹತಾ ಪುರುಷೈರ್ಧೈರ್ಯಶಾಲಿಭಿಃ ।
ಸಾಧಿತಾನ್ಯಪಿ ಸಿದ್ಧ್ಯಂತಿ ತಾನಿ ಕಾಲೇನ ಭೂಯಸಾ ॥ ೪ ॥
ಅತೋ ಭವಾನ್ ದ್ವಿಜಾತೀನಾಮಾಶ್ರಮಾಣಾಂ ಚ ಸರ್ವಶಃ ।
ಬ್ರವೀತು ಸುಕರೋಪಾಯಂ ಸ್ತ್ರೀಶೂದ್ರಾದೇರಪೀಹ ನಃ ॥ ೫ ॥
ಕೃತೇನ ಯೇನಾಪ್ಯಲ್ಪೇನ ಯೇನ ಕೇನಾಪಿ ದೇಹಿನಾ ।
ಅಂತರಾಯೈರವಿಹತಂ ಮಹದೇವ ಫಲಂ ಭವೇತ್ ॥ ೬ ॥
ಮೋಕ್ಷಸ್ಯ ಸಾಧನಂ ತಾದೃಕ್ ಸುವಿಚಾರ್ಯ ಮಹಾಮತೇ ।
ಹಿತಾಯ ಸರ್ವಜೀವಾನಾಂ ಕೃಪಯಾ ವಕ್ತುಮರ್ಹಸಿ ॥ ೭ ॥
ಪ್ರಸಾದಾದ್ಬಲದೇವಸ್ಯ ವ್ಯಾಸಸ್ಯ ಜನಕಸ್ಯ ಚ ।
ಜಾನಾಸಿ ಸರ್ವಮೇವ ತ್ವಂ ತನ್ನೋ ಬ್ರೂಹಿ ಬುಭುತ್ಸತಃ ॥ ೮ ॥

ಸೌತಿರುವಾಚ :—

ಮಹರ್ಷಿರಪಿ ಸಾವರ್ಣಿರೇವಮೇವ ಹಿ ಶೌನಕ ।
ವಿನೀತಃ ಸ್ಕಂದಮಪ್ರಾಕ್ಷೀತ್ ಪುನಃ ಶಂಕರನಂದನಂ ॥ ೯ ॥

---

೪. ಧೈರ್ಯಶಾಲಿಗಳಾದ ಪುರುಷರು ಮಹತ್ತರವಾದ ಪ್ರಯತ್ನದಿಂದ ಅವನ್ನು ಸಾಧಿಸಿದರಾದರೂ ಇತರರಿಗೆ ಅವು ಬಹಳ ದೀರ್ಘಕಾಲವು ಕಳೆದ ಬಳಿಕಲೇ ಸಿದ್ಧಿಸುತ್ತವೆ.

೫. ಆದುದರಿಂದ ನೀನು ಬ್ರಾಹ್ಮಣರಲ್ಲಿ ಎಲ್ಲ ಆಶ್ರಮಗಳವರಿಗೂ ಸ್ತ್ರೀಶೂದ್ರಾದಿಗಳಿಗೂ ಸುಲಭವಾಗಿ ಆಚರಿಸಲು ಸಾಧ್ಯವಾಗಿರುವ ಧರ್ಮೋಪಾಯವನ್ನು ನಮಗೆ ತಿಳಿಸುವವನಾಗು.

೬–೭. ಎಲೈ ಮಹಾಮತಿಯೇ! ಸಮಸ್ತ ಜೀವಿಗಳ ಹಿತಸಾಧನೆಗಾಗಿ ಯಾವ ದೇಹಿಯಾದರೂ ಸರಿಯೆ, ಆ ಧರ್ಮದಲ್ಲಿ ಎಷ್ಟೇ ಸ್ವಲ್ಪವನ್ನೇ ಆದರೂ ಮಾಡಿದಲ್ಲಿ ವಿಘ್ನಗಳಿಂದ ತೊಂದರೆಗೀಡಾಗದೆ ಯಾವುದು ಮಹತ್ಫಲವನ್ನೇ ಕೊಡುವುದೋ ಆ ಬಗೆಯ ಮೋಕ್ಷಸಾಧನೆಯನ್ನು ಚೆನ್ನಾಗಿ ವಿಚಾರಮಾಡಿ, ಕೃಪೆಯಿಟ್ಟು ಹೇಳಬೇಕು.

೮. ಬಲದೇವನ, ವ್ಯಾಸಮುನಿಯ ಮತ್ತು ನಿಮ್ಮ ತಂದೆಯಾದ ಸೂತ ಪುರಾಣಿಕನ ಪ್ರಸಾದದಿಂದ ನೀನು ಎಲ್ಲವನ್ನೂ ತಿಳಿದಿದ್ದೀಯೆ. ಅದನ್ನೇ ತಿಳಿಯಲಪೇಕ್ಷಿಸುತ್ತಿರುವ ನಮಗೆ ಅದನ್ನು ತಿಳಿಯಪಡಿಸು.

೯. ಸೌತಿಯು ಹೇಳುತ್ತಾನೆ:— ಎಲೈ ಶೌನಕನೇ! ಸಾವರ್ಣಿ ಮಹರ್ಷಿಯೂ ಕೂಡ ಇದೇ ರೀತಿಯಲ್ಲಿಯೇ ವಿನೀತನಾಗಿ ಶಂಕರನಂದನನಾದ ಸ್ಕಂದಸ್ವಾಮಿಯನ್ನು ಪ್ರಶ್ನೆಮಾಡಿದನು.

ಸಾವರ್ಣಿರುವಾಚ :—

ಶ್ರುತಾ ನಾನಾವಿಧಾ ಧರ್ಮಾಃ ಸಾಂಖ್ಯಜ್ಞಾನಂ ಚ ನೈಕಧಾ ।
ಯೋಗಾದೀನಿ ತ್ವದುಕ್ತಾನಿ ಸಾಧನಾನಿ ಮಯಾ ಗುಹ ॥ ೧೦ ॥
ಸುದುಷ್ಕರಾಣಿ ಮನ್ಯೇಽಹಂ ತಾನಿ ತ್ವಸ್ಮಾದೃಶಾಂ ಕಿಲ ।
ಮಹತಾಮಪಿ ಚಾನ್ಯೇಷಾಂ ಕೃಚ್ಛ್ರಸಾಧ್ಯಾನಿ ವೈ ಚಿರಾತ್ ॥ ೧೧ ॥
ಅತೋ ವರ್ಣಾಶ್ರಮವತಾಂ ಶ್ರೇಯಸ್ಕೃತ್ಸುಕರಂ ಚ ಯತ್ ।
ಸಾಧನಂ ತಚ್ಛ್ರೇಷ್ಠತಮಂ ವಕ್ತುಮರ್ಹಸಿ ಮೇಽಧುನಾ ॥ ೧೨ ॥

ಸೌತಿರುವಾಚ :—

ಇತಿ ಪೃಷ್ಟೋ ಮುನೀಂದ್ರೇಣ ತೇನ ಜಿಜ್ಞಾಸುನಾ ಗುಹಃ ।
ವಾಸುದೇವಂ ಹೃದಿ ಧ್ಯಾಯನ್ ಕಾರ್ತಿಕೇಯಃ ಸ ಊಚಿವಾನ್ ॥ ೧೩ ॥

ಸ್ಕಂದ ಉವಾಚ :–

ಶೃಣು ಬ್ರಹ್ಮನ್ ಪ್ರವಕ್ಷ್ಯೇಽಹಂ ಶ್ರುತಂ ಪಿತೃಮುಖಾನ್ಮಯಾ ।
ಸರ್ವೇಷಾಮಪಿ ಜೀವಾನಾಂ ಸುಕರಂ ಮೋಕ್ಷಸಾಧನಂ ॥ ೧೪ ॥
ದೇವತಾಪ್ರೀಣನಸಮಂ ಸ್ವೇಷ್ಟಸಿದ್ಧಿಮಭೀಪ್ಸಿತಾಂ ।
ನಾಸ್ತ್ಯನ್ಯಸಾಧನಂ ಕಿಂಚಿದ್ವರ್ಣಾಶ್ರಮವತಾಮಿಹ ॥ ೧೫ ॥

---

೧೦. ಸಾವರ್ಣಿಯು ಕೇಳುತ್ತಾನೆ:—" ಎಲೈ ಗುಹನೇ! ನಿನ್ನಿಂದ ನಾನಾ ವಿಧಗಳಾದ ಧರ್ಮಗಳನ್ನೂ, ಅನೇಕ ಬಗೆಯಾದ ಸಾಂಖ್ಯಜ್ಞಾನವನ್ನೂ, ಯೋಗವೇ ಮೊದಲಾದ ಸಾಧನಗಳನ್ನೂ ನಾನು ಕೇಳಿ ತಿಳಿದಿದ್ದೇನೆ.

೧೧. ಅವುಗಳಾದರೋ ನಮ್ಮಂತಹವರಿಗೆ ಆಚರಿಸಲು ಬಹು ಕಷ್ಟತರವಾದುವೆಂದು ತಿಳಿಯುತ್ತೇನೆ. ಇತರ ಮಹಾತ್ಮರಿಗೂ ಅವು ಬಹುಕಾಲದವರೆಗೂ ಅತಿ ಕಷ್ಟದಿಂದ ನಡೆಸಿದರೇ ಮಾತ್ರ ಸಾಧ್ಯವಾಗುವಂತಹುವು.

೧೨. ಆದುದರಿಂದ ವರ್ಣಾಶ್ರಮವಂತರಿಗೆ ಶ್ರೇಯಸ್ಸನ್ನುಂಟುಮಾಡುವುದೂ, ಸುಖಕರವಾಗಿರುವುದೂ ಆದುದು ಯಾವುದೋ ಅಂತಹ ಶ್ರೇಷ್ಠತಮವಾದ ಸಾಧನವನ್ನು ಈಗ ನನಗೆ ತಿಳಿಸು."

೧೩. ಸೌತಿಯು ಹೇಳುತ್ತಾನೆ:— ವಿಷಯಗಳನ್ನು ತಿಳಿಯಬೇಕೆಂಬ ಆಸೆಯುಳ್ಳ ಆ ಸಾವರ್ಣಿಮುನಿಯಿಂದ ಈ ರೀತಿಯಾಗಿ ಪ್ರಶ್ನಿಸಲ್ಪಟ್ಟ ಕಾರ್ತಿಕೇಯನಾದ ಗುಹನು ವಾಸುದೇವನನ್ನು ಹೃದಯದಲ್ಲಿ ಧ್ಯಾನಿಸುತ್ತ ಹೇಳತೊಡಗಿದನು.

೧೪. ಸ್ಕಂದನು ಹೇಳುತ್ತಾನೆ:—" ಎಲೈ ಬ್ರಾಹ್ಮಣನೇ! ಹೇಳುತ್ತೇನೆ ಕೇಳು. ಸರ್ವಜೀವಗಳಿಗೂ ಮಾಡಲು ಸುಲಭವಾಗಿರುವ ಮೋಕ್ಷಸಾಧನವನ್ನು ನಮ್ಮ ತಂದೆಯಿಂದ ನಾನು ಕೇಳಿ ತಿಳಿದಿದ್ದೇನೆ.

೧೫. ಇಷ್ಟಸಿದ್ಧಿಯುಂಟಾಗಬೇಕೆಂದು ಬಯಸುವ ವರ್ಣಾಶ್ರಮವಂತರಿಗೆ

ಅಪ್ಯಲ್ಪಂ ಸುಕೃತಂ ಕರ್ಮ ದೇವಸಂಬಂಧತಃ ಕೃತಂ ।
ಫಲಂ ದದಾತಿ ನಿರ್ವಿಘ್ನಂ ಮಹದೇವ ಹಿ ತನ್ನೃಣಾಂ ॥ ೧೬ ॥
ದೈವಂ ಪಿತ್ರ್ಯಂ ಸ್ವಧರ್ಮಶ್ಚ ಕಾಮ್ಯಂ ಕರ್ಮಾಪಿ ಯಚ್ಚ ತತ್ ।
ದೇವತಾಯಾಸ್ತು ಸಂಬಂಧಾತ್ ಸದ್ಯಃ ಸ್ಯಾದಿಷ್ಟಸಿದ್ಧಿದಂ ॥ ೧೭ ॥
ಸಾಂಖ್ಯಯೋಗವಿರಾಗಾದಿ ಪ್ರಾಗುಕ್ತಂ ಯಚ್ಚ ದುಷ್ಕರಂ ।
ತದಪಿ ಸ್ಯಾದ್ಧಿ ಸುಕರಮನೇನೈವಾಶು ಸಿದ್ಧಿದಂ ॥ ೧೮ ॥
ದೇವಸ್ಯಾರಾಧನೇನೈವ ಯತಃ ಸಿಧ್ಯತಿ ವಾಂಛಿತಂ ।
ಅತಃ ಸರ್ವೈರ್ಯಥಾಶಕ್ತಿ ಪ್ರೀತ್ಯಾರಾಧ್ಯಃ ಸ ಮಾನವೈಃ ॥ ೧೯ ॥

ಸಾವರ್ಣಿರುವಾಚ :—

ದೇವಾ ಬಹುವಿಧಾ ಪ್ರೋಕ್ತಾಸ್ತ್ವಯಾ ಷಣ್ಮುಖ ಮೇ ಪುರಾ ।
ನಾನಾವಿಧಾ ವರ್ಣಿತಾಶ್ಚ ತದಾರಾಧನರೀತಯಃ ॥ ೨೦ ॥
ತತ್ಫಲಾನಿ ಚ ಸರ್ವಾಣಿ ತ್ವಯೋಕ್ತಾನಿ ಪೃಥಕ್ ಪೃಥಕ್ ।
ಸ್ವರ್ಗಾದಿಪ್ರಾಪ್ತಿಮುಖ್ಯಾನಿ ಕಾಲಗ್ರಸ್ತಾನಿ ತಾನಿ ತು ॥ ೨೧ ॥

---

ದೇವತಾಪ್ರೀತಿಯುಂಟುಮಾಡುವುದಕ್ಕೆ ಸಮಾನವಾದ ಬೇರೆ ಸಾಧನವು ಯಾವುದೊಂದೂ ಇರುವುದಿಲ್ಲ.

೧೬. ದೇವಸಂಬಂಧವಾಗಿ ಪುಣ್ಯಕರ್ಮವನ್ನು ಅತ್ಯಲ್ಪವಾಗಿ ಮಾಡಿದರೂ ಆ ಕರ್ಮವು ಮನುಷ್ಯರಿಗೆ ನಿರ್ವಿಘ್ನವಾಗಿ ಮಹತ್ತಾದ ಫಲವನ್ನೇ ಉಂಟುಮಾಡುತ್ತದೆ.

೧೭. ದೈವಕರ್ಮವೇ ಆಗಲಿ, ಪಿತೃಗಳಿಗೆ ಸಂಬಂಧಿಸಿದ ಕರ್ಮವೇ ಆಗಲಿ, ಸ್ವಧರ್ಮವೇ ಆಗಲಿ, ಕಾಮ್ಯಕರ್ಮವೇ ಆಗಲಿ ದೇವತೆಯ ಸಂಬಂಧದಿಂದ ತಕ್ಷಣವೆ ಇಷ್ಟಾರ್ಥಸಿದ್ಧಿಯನ್ನುಂಟುಮಾಡುತ್ತದೆ.

೧೮. ಸಾಂಖ್ಯ, ಯೋಗ, ವೈರಾಗ್ಯ ಮೊದಲಾಗಿ ದುಷ್ಕರವಾದ ಏನೇನನ್ನು ಈ ಹಿಂದೆ ಹೇಳಿದೆಯೋ ಅದು ಕೂಡ ಈ ದೈವಸಂಬಂಧದಿಂದಲೇ ಸುಕರವಾಗಿ ಬೇಗನೆಯೆ ಸಿದ್ಧಿಯನ್ನು ಕೊಡುತ್ತದೆ.

೧೯. ದೇವತಾರಾಧನೆಯಿಂದಲೇ ಬಯಸಿದುದೆಲ್ಲವೂ ಸಿದ್ಧಿಸುವುದರಿಂದ ಮಾನವರೆಲ್ಲರೂ ಯಥಾಶಕ್ತಿಯಾಗಿ ಪ್ರೀತಿಯಿಂದ ಆ ಪರಮಾತ್ಮನನ್ನೇ ಆರಾಧಿಸಬೇಕು.''

೨೦. ಸಾವರ್ಣಿಯು ಕೇಳುತ್ತಾನೆ:— ''ಎಲೈ ಷಣ್ಮುಖನೇ! ಪೂರ್ವದಲ್ಲಿ ನೀನು ಅನೇಕ ದೇವತೆಗಳ ವಿಷಯವನ್ನು ನನಗೆ ತಿಳಿಸಿದ್ದೀಯೆ. ಅವರನ್ನು ಆರಾಧಿಸುವ ನಾನಾ ವಿಧವಾದ ರೀತಿಗಳನ್ನೂ ವರ್ಣಿಸಿರುವೆ.

೨೧. ಅವುಗಳ ಫಲಗಳೆಲ್ಲವನ್ನೂ ಬೇರೆ ಬೇರೆಯಾಗಿಯೂ ತಿಳಿಯ

ನಿವೃತ್ತಿಧರ್ಮಿಣಾಂ ಬ್ರಹ್ಮಾದ್ಯುಪಾಸ್ತೇರ್ಯೋಗಿನಾಂ ಗುಹ ।
ಜನಾದಿಲೋಕಾಪ್ತಿಫಲಂ ದ್ವಿಪರಾರ್ಧಾಂತನಶ್ವರಂ ॥ ೨೨ ॥
ದುಷ್ಕರಾಣೀಹ ಸಂಸಾಧ್ಯ ಕರ್ಮಾಣಿ ಪುರುಕೃಚ್ಛ್ರತಃ ।
ಕ್ಷಯಿಷ್ಣುಫಲಲಾಭಶ್ಚೇತ್ತರ್ಹಿ ಕಿಂ ತದುಪಾರ್ಜನೈಃ ॥ ೨೩ ॥
ಕಾಲೇನ ನಾಶ್ಯತೇ ಯೇಷಾಂ ವಪುಃ ಸ್ಥಾನಬಲಾದಿಕಂ ।
ತೇಷಾಂ ನ ರೋಚತೇ ಮಹ್ಯಮುಪಾಸಾಽತ್ರ ದಿವೌಕಸಾಂ ॥ ೨೪ ॥
ಯಃ ಸ್ವಯಂ ನಿರ್ಭಯೋಽನ್ಯೇಷಾಂ ಭಯಹರ್ತಾ ಸನಾತನಃ ।
ನಿತ್ಯಧಾಮಾಽಕ್ಷಯಫಲಪ್ರದಾತಾ ಭಕ್ತವತ್ಸಲಃ ॥ ೨೫ ॥
ಯಸ್ಯ ಪ್ರಸಾದಾತ್ ಸರ್ವೇಷಾಂ ಸರ್ವ ಏವ ಮನೋರಥಾಃ ।
ಸಿದ್ಧ್ಯೇಯುಶ್ಚಾಂಜಸೈವಾಽತ್ರ ತಂ ದೇವಂ ವದ ಮೇ ಗುಹ ॥ ೨೬ ॥
ತದಾರಾಧನರೀತಿಂ ಚ ಸುಕರಾಂ ಶಿಷ್ಟಸಮ್ಮತಾಂ ।
ಬ್ರೂಹಿ ಸರ್ವಾಂ ವಿಶೇಷೇಣ ಜಿಜ್ಞಾಸಾಮ್ಯಾದಮಂಜಸಾ ॥ ೨೭ ॥

---

ಹೇಳಿರುವೆ. ಸ್ವರ್ಗಾದಿಗಳನ್ನು ಪಡೆಯುವುದೇ ಅವುಗಳ ಮುಖ್ಯ ಫಲ. ಅಲ್ಲದೆ ಅವು ಕಾಲದ ಹಿಡಿತಕ್ಕೆ ಸಿಕ್ಕಿರುವಂತಹುವು.

೨೨. ನಿವೃತ್ತಿಧರ್ಮಿಗಳಾದ ಯೋಗಿಗಳಿಗೆ ಬ್ರಹ್ಮಾದಿ ಉಪಾಸನೆಯ ಫಲವಾಗಿ ಜನಾದಿ ಲೋಕಗಳು ದೊರೆಯುತ್ತವೆ. ಆ ಫಲವು ಬ್ರಹ್ಮನ ಎರಡು ಪರಾರ್ಧಗಳು ಕಳೆದಮೇಲೆ ನಶ್ವರವಾಗುವುದು.

೨೩. ದುಷ್ಕರವಾದ ಕರ್ಮಗಳನ್ನು ಬಹಳ ಕಷ್ಟಪಟ್ಟು ಸಾಧಿಸಿದರೂ ಅದರಿಂದ ನಾಶವಾಗಿಹೋಗುವಂತಹ ಫಲವೇ ದೊರೆಯುವುದಾದರೆ ಅವನ್ನು ಸಂಪಾದಿಸುವುದರಿಂದ ಏನುತಾನೆ ಪ್ರಯೋಜನ?

೨೪. ಯಾರ ಶರೀರವೂ, ಸ್ಥಾನ, ಬಲ ಮೊದಲಾದುವೂ ಕಾಲವು ಕಳೆದಂತೆಲ್ಲ ನಾಶವಾಗುವುದೋ ಅಂತಹ ಸ್ವರ್ಗವಾಸಿಗಳಾದ ದೇವತೆಗಳ ಉಪಾಸನೆಯು ನಮಗೆ ರುಚಿಸುವುದಿಲ್ಲವು.

೨೫–೨೬. ಎಲೈ ಗುಹನೇ! ಯಾವನು ಸ್ವಯಂನಿರ್ಭಯನೋ, ಇತರರ ಭಯವನ್ನು ಪರಿಹರಿಸುವನೋ, ಸನಾತನನೋ, ಶಾಶ್ವತವಾದ ನೆಲೆಯನ್ನು ಹೊಂದಿರುವನೋ, ಅಕ್ಷಯಫಲವನ್ನು ನೀಡುವನೋ, ಭಕ್ತವತ್ಸಲನೋ, ಯಾರ ಪ್ರಸಾದದಿಂದ ಸರ್ವರ ಸರ್ವಮನೋರಥಗಳೂ ಬಹುಬೇಗನೆ ಇಲ್ಲಿಯೆ ಸಿದ್ಧಿಯಾಗುವುವೋ ಆ ದೇವನನ್ನು ನನಗೆ ತಿಳಿಸು.

೨೭. ಶಿಷ್ಟರಿಗೆ ಸಮ್ಮತವಾಗಿಯೂ ಸುಕರವಾಗಿಯೂ ಇರುವ ಆ ದೇವನ ಆರಾಧನದ ರೀತಿಯನ್ನೂ, ಎಲ್ಲವನ್ನೂ ವಿಶೇಷವಾಗಿ ನನಗೆ ತಿಳಿಸು. ಇದನ್ನು ನಾನು ನಿನ್ನಿಂದ ಸಮಗ್ರವಾಗಿ ತಿಳಿಯಬಯಸುತ್ತಿದ್ದೇನೆ.''

**ಸೌತಿರುವಾಚ :—**

**ಇತ್ಥಂ ಮಹರ್ಷಿಣಾ ತೇನ ಸಂಪೃಷ್ಟೋ ಭಗವಾನ್ ಗುಹಃ ।**
**ಸುಪ್ರಸನ್ನ ಉವಾಚೇದಂ ಮಾನಯಂಸ್ತಮುದಾರಧೀಃ ॥ ೨೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಸಾವರ್ಣಿಪ್ರಶ್ನೋ" ನಾಮ ಪ್ರಥಮೋಽಧ್ಯಾಯಃ**

---

೨೮. ಸೌತಿಯು ಹೇಳುತ್ತಾನೆ:— ಈ ರೀತಿಯಾಗಿ ಆ ಮಹರ್ಷಿಯಿಂದ ಪ್ರಶ್ನಿಸಲ್ಪಟ್ಟ ಭಗವಂತನಾದ ಆ ಗುಹನು ಸುಪ್ರಸನ್ನನಾಗಿ ಉದಾರಬುದ್ಧಿಯಾದ ಆತನನ್ನು ಮನ್ನಿಸಿ ಹೀಗೆ ನುಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವಮಾಹಾತ್ಮ್ಯದಲ್ಲಿ "ಸಾವರ್ಣಿಯ ಪ್ರಶ್ನೆ" ಎಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ನಾರದನಾರಾಯಣಸಮಾಗಮಃ

ಸ್ಕಂದ ಉವಾಚ :—

ಮಹಾಂತಂ ಪ್ರಶ್ನಮಿತ್ಥಂ ತ್ವಂ ಪೃಚ್ಛಸಿ ತ್ವಮಿಹಾಽನಘ ।
ನಾಸ್ಯೋತ್ತರಂ ವರ್ಷಶತೈರ್ವಕ್ತುಂ ಶಕ್ಯಂ ಸ್ವತರ್ಕತಃ ।
ಋತೇ ದೇವಪ್ರಸಾದಾದ್ವೈ ಬ್ರಹ್ಮಜ್ಞಾನಿವರೈರಪಿ ॥ ೧ ॥
ವಾಸುದೇವಪ್ರಸಾದಾತ್ತು ಮಯಾ ಜ್ಞಾತಂ ವದಾಮಿ ತೇ ।
ಅನಾಖ್ಯೇಯಂ ನ ತೇ ಕಿಂಚಿತ್‌ಧರ್ಮನಿಷ್ಠಾಯ ಸನ್ಮತೇ ॥ ೨ ॥
ಏವಮೇವ ಹಿ ಪಪ್ರಚ್ಛ ನಿವೃತ್ತೇ ಭಾರತೇ ರಣೇ ।
ಅಜಾತಶತ್ರುರ್ನೃಪತಿರ್ಭೀಷ್ಮಂ ಧರ್ಮವಿದಾಂವರಂ ॥ ೩ ॥
ಶಯಾನಂ ಶರಶಯ್ಯಾಯಾಂ ಧ್ಯಾನಪ್ರಾಪ್ತಾಚ್ಯುತೇನ ಚ ।
ಪ್ರಾಪ್ತಮೈಕಾತ್ಮ್ಯಮವ್ಯಗ್ರಂ ನಿಗಮಾಗಮಪಾರಗಂ ॥ ೪ ॥

ಯುಧಿಷ್ಠಿರ ಉವಾಚ :—

ಚತುರ್ಷು ತಾತ ವರ್ಣೇಷು ಚತುರ್ಷ್ವಾಶ್ರಮೇಷು ಯಃ ।
ಇಚ್ಛೇಚ್ಚತುರ್ವರ್ಗಸಿದ್ಧಿಂ ದೇವತಾಂ ಕಾಂ ಯಜೇತ ಸಃ ॥ ೫ ॥

---

## ಕನ್ನಡದ ಅನುವಾದ

### ನಾರದ ನಾರಾಯಣ ಸಮಾಗಮ ವರ್ಣನ

೧. ಸ್ಕಂದನು ಹೇಳುತ್ತಾನೆ :—ಎಲೈ ಅನಘನೇ! ಪ್ರಶ್ನೆಯನ್ನು ಬಲ್ಲ ನೀನು ಮಹತ್ತಾದ ಪ್ರಶ್ನೆಯನ್ನೇ ಕೇಳಿದ್ದೀಯೆ. ಎಲೈ ಬ್ರಾಹ್ಮಣನೇ! ಇದಕ್ಕೆ ದೇವರ ಅನುಗ್ರಹವಿಲ್ಲದೆ ಸ್ವಂತ ತರ್ಕದಿಂದ ಮಾತ್ರವೇ ಉತ್ತರ ಹೇಳಲು ಜ್ಞಾನಿಶ್ರೇಷ್ಠರಿಗೂ ಕೂಡ ನೂರಾರು ವರ್ಷಗಳಾದರೂ ಸಾಧ್ಯವಿಲ್ಲ.

೨. ವಾಸುದೇವನ ಪ್ರಸಾದದಿಂದ ನಾನು ತಿಳಿದುಕೊಂಡಿರುವುದನ್ನು ನಿನಗೆ ಹೇಳುತ್ತೇನೆ. ಎಲೈ ಸನ್ಮತಿಯೇ! ಧರ್ಮನಿಷ್ಠನಾದ ನಿನಗೆ ಹೇಳದೆ ಇರಬೇಕಾದದ್ದು ಏನೂ ಇರುವುದಿಲ್ಲ.

೩. ಭಾರತಯುದ್ಧವು ಮುಗಿದಿರಲಾಗಿ ಅಜಾತಶತ್ರುವಾದ ಧರ್ಮರಾಜನು ಧರ್ಮಜ್ಞರಲ್ಲಿ ಶ್ರೇಷ್ಠನಾದ ಭೀಷ್ಮನನ್ನು ಹೀಗೆಯೇ ಪ್ರಶ್ನೆಮಾಡಿದನು.

೪. ಶರಶಯ್ಯೆಯಲ್ಲಿ ಮಲಗಿ, ಧ್ಯಾನದಲ್ಲಿ ಮೂಡಿಬಂದ ಅಚ್ಯುತನೊಡನೆ ಏಕಾತ್ಮತೆಯನ್ನು ಪಡೆದು, ಸ್ವಲ್ಪವೂ ಕಳವಳವಿಲ್ಲದವನಾಗಿ ನಿಗಮಾಗಮಗಳಲ್ಲಿ ಪಾರಂಗತನಾದ ಆ ಭೀಷ್ಮನನ್ನು ಕುರಿತು ಆತನು ಇಂತೆಂದನು :—

೫. ಯುಧಿಷ್ಠಿರನು ಕೇಳುತ್ತಾನೆ :—'' ತಾತ! ಚತುರ್ವರ್ಣಗಳಲ್ಲಿಯೂ

**ನಿರ್ವಿಘ್ನೇನ ಚ ಕಾ ಸಿದ್ಧಿಃ ಕಥಂ ಸ್ಯಾದಲ್ಪಕಾಲತಃ ।**
**ಕಥಂ ಚಾಪ್ಯಲ್ಪಸುಕೃತೀ ಪದವೀಂ ಮಹತೀಮಿಯಾತ್ ।**
**ಏತಂ ಮೇ ಸಂಶಯಂ ಛಿಂದಿ ಸರ್ವಜ್ಞಸ್ತ್ವಂ ಪಿತಾಮಹ ॥ ೬ ॥**

ಸ್ಕಂದ ಉವಾಚ :—

**ಏವಂ ಧರ್ಮಾತ್ಮನಾ ತೇನ ಪೃಷ್ಟಃ ಶಾಂತನವೋ ಮುನೇ ।**
**ಕಿಂಚಿಜ್ಜಹಾಸ ವೀಕ್ಷ್ಯೈವ ಶ್ರೀಕೃಷ್ಣಮುಖಪಂಕಜಂ ॥ ೭ ॥**
**ದೃಶಾ ಸ ಪ್ರೇರಿತಸ್ತೇನ ನರನಾರಾಯಣೋದಿತಂ ।**
**ಶ್ರೀವಾಸುದೇವಮಾಹಾತ್ಮ್ಯಂ ಪಿತುಃ ಶೃತಮುವಾಚ ತಂ ॥ ೮ ॥**
**ತತಃ ಶೃತ್ವಾ ನಾರದೋಽಪಿ ಕುರುಕ್ಷೇತ್ರಂ ಗತಃ ಪುನಃ ।**
**ಕೈಲಾಸ ಏತ್ಯ ತತ್ಪ್ರಾಹ ಪಿತರಂ ಮೇ ಸ ಚಾಪಿ ಮಾಂ ॥ ೯ ॥**
**ತತ್ತೇಽಹಂ ಸಂಪ್ರವಕ್ಷ್ಯಾಮಿ ನಿಶ್ಛದ್ಮ ಪರಿಪೃಚ್ಛತೇ ।**
**ಮಹಾ ಸದಸಿ ನಿರ್ಣೀತಂ ಮುನಿವರ್ಯಾಽಪಸಂಶಯಂ ॥ ೧೦ ॥**

---

ಚತುರಾಶ್ರಮಗಳಲ್ಲಿಯೂ ಯಾವನು ಚತುರ್ವರ್ಗಸಿದ್ಧಿಯನ್ನು ಅಪೇಕ್ಷಿಸುವನೋ ಅವನು ಯಾವ ದೇವತೆಯನ್ನು ಪೂಜಿಸಬೇಕು?

೬. ಯಾವ ಸಿದ್ಧಿಯು ನಿರ್ವಿಘ್ನವಾಗಿ ಅಲ್ಪಕಾಲದಲ್ಲಿಯೇ ಸಿದ್ಧಿಸುತ್ತದೆ? ಅಲ್ಪಪುಣ್ಯವನ್ನು ಮಾಡಿದವನಾದರೂ ಮಹತ್ತಾದ ಪದವಿಯನ್ನು ಹೇಗೆ ಪಡೆಯುತ್ತಾನೆ? ಎಲೈ ಪಿತಾಮಹನೇ! ನೀನು ಸರ್ವಜ್ಞನು. ನನ್ನ ಈ ಸಂಶಯವನ್ನು ಕಳೆಯುವವನಾಗು.''

೭. ಸ್ಕಂದನು ಹೇಳುತ್ತಾನೆ:— ಎಲೈ ಮುನಿಯೇ! ಧರ್ಮಾತ್ಮನಾದ ಆ ಯುಧಿಷ್ಠಿರನಿಂದ ಹೀಗೆ ಪ್ರಶ್ನಿಸಲ್ಪಟ್ಟ ಆ ಶಂತನುಕುಮಾರನು ಶ್ರೀಕೃಷ್ಣನ ಮುಖಕಮಲವನ್ನು ನೋಡಿ ನಸುನಕ್ಕನು.

೮. ಶ್ರೀಕೃಷ್ಣನ ಆ ಕಣ್ನೋಟದಿಂದಲೇ ಪ್ರೇರಿತನಾಗಿ, ತನ್ನ ತಂದೆಯಿಂದ ತಾನು ಕೇಳಿದ್ದ ನರನಾರಾಯಣೋಕ್ತವಾದ ಶ್ರೀವಾಸುದೇವ ಮಾಹಾತ್ಮ್ಯವನ್ನು ಯುಧಿಷ್ಠಿರನಿಗೆ ಹೇಳಿದನು.

೯. ಅವನಿಂದ ಕೇಳಿತಿಳಿದ ನಾರದನು ಮತ್ತೆ ಕುರುಕ್ಷೇತ್ರಕ್ಕೆ ಹೋದನು. ಕೈಲಾಸಕ್ಕೆ ಬಂದು ತಂದೆಗೆ ಅದನ್ನು ತಿಳಿಸಲು ಆತನದನ್ನು ನನಗೆ ಹೇಳಿದನು.

೧೦. ಎಲೈ ಮುನಿವರ್ಯನೇ! ಮಹಾಸಭೆಯಲ್ಲಿ ನಿಸ್ಸಂಶಯವಾಗಿ ನಿರ್ಣಯಸಿದ್ಧವಾಗಿರುವ ಆ ವಿಷಯವನ್ನೇ ಪ್ರಶ್ನೆಮಾಡುತ್ತಿರುವ ನಿನಗೆ ನಿರ್ವಂಚನೆಯಾಗಿ ತಿಳಿಯಹೇಳುತ್ತೇನೆ.

ವಾಸುದೇವಃ ಪರಂ ಬ್ರಹ್ಮ ಶ್ರೀಕೃಷ್ಣಃ ಪುರುಷೋತ್ತಮಃ ।
ದೇವೋಽಕಾಮೈಃ ಸಕಾಮೈಶ್ಚ ಪೂಜ್ಯೋ ಮುಕ್ತೈರ್ನರೈರಪಿ ॥ ೧೧ ॥
ದ್ವಿಜಾತೀನಾಂ ಚಾಶ್ರಮಾಣಾಂ ಸ್ತ್ರೀ ಶೂದ್ರಾದೇಶ್ಚ ಸರ್ವಥಾ ।
ಸ್ವಸ್ವಧರ್ಮೈರಲೇಷ ಏವ ತೋಷಣೀಯೋಽಸ್ತಿ ಭಕ್ತಿತಃ ॥ ೧೨ ॥
ತಸ್ಮಾತ್ಕರ್ಮಾಖಿಲಮಪಿ ದೈವಂ ಪಿತ್ರ್ಯಂ ಚ ಸರ್ವದಾ ।
ತತ್ಪ್ರೀತ್ಯಾ ಏವ ಕರ್ತವ್ಯಂ ವೇದೋಕ್ತಂ ಚ ಯಥೋಚಿತಂ ॥ ೧೩ ॥
ಸುಖಾಪ್ತಯೇ ನೃಭಿರ್ಯದ್ಯತ್ ಕರ್ಮಾಽತ್ರ ಕ್ರಿಯತೇ ಶುಭಂ ।
ಅಪಿ ಸ್ವನುಷ್ಠಿತಂ ತಚ್ಚೇತ್ ಕೃಷ್ಣಸಂಬಂಧವರ್ಜಿತಂ ।
ತದಾ ಕ್ಷಯಿಷ್ಣ್ವಲ್ಪಫಲಂ ಜ್ಞೇಯಂ ತಚ್ಚ ಗುಣಾತ್ಮಕಂ ॥ ೧೪ ॥
ಫಲವೈಗುಣ್ಯಕೃತ್ತಚ್ಚಾಽಶುಭದೇಶಾದಿಯೋಗತಃ ।
ಬಹುವಿಘ್ನಂ ಚ ತನ್ನೄಣಾಂ ನೈವ ವಾಂಛಿತಸಿದ್ಧಿದಂ ॥ ೧೫ ॥
ಕರ್ಮೈತದೇವ ಶ್ರೀಕೃಷ್ಣಪ್ರೀಣನಾಯ ಕ್ರಿಯೇತ ಚೇತ್ ।
ತತ್ಸಂಬಂಧೇನ ತರ್ಹ್ಯೇತತ್ ಭವೇತ್ ಸರ್ವಂ ಹಿ ನಿರ್ಗುಣಂ ॥ ೧೬ ॥

---

೧೧. ವಾಸುದೇವನು ಪರಬ್ರಹ್ಮವು; ಅವನೇ ಶ್ರೀಕೃಷ್ಣನು; ಪುರುಷೋತ್ತಮನು. ಅಕಾಮರೂ ಸಕಾಮರೂ ಆ ದೇವನನ್ನು ಪೂಜಿಸಬೇಕು. ಮುಕ್ತರಾದವರಿಗೂ ಕೂಡ ಅವನು ಪೂಜ್ಯನು.

೧೨. ಬ್ರಾಹ್ಮಣರೂ, ನಾಲ್ಕು ಆಶ್ರಮಗಳಲ್ಲಿರುವವರೂ, ಸ್ತ್ರೀ ಶೂದ್ರರೇ ಮೊದಲಾದವರೂ, ತಮ್ಮ ತಮ್ಮ ಧರ್ಮಗಳಲ್ಲಿ ನಿಷ್ಠರಾಗಿರುವವರೆಲ್ಲರೂ ಭಕ್ತಿಯಿಂದ ತೃಪ್ತಿಪಡಿಸಬೇಕಾಗಿರುವುದು ಇವನನ್ನೇ.

೧೩. ಆದುದರಿಂದ ದೇವತೆಗಳಿಗೆ ಸಂಬಂಧಿಸಿದ್ದು, ಪಿತೃಗಳಿಗೆ ಸಂಬಂಧಿಸಿದ್ದು, ಮೊದಲಾದ ಎಲ್ಲ ಕರ್ಮಗಳನ್ನೂ ಸರ್ವಕಾಲದಲ್ಲಿಯೂ ಆ ವಾಸುದೇವನ ಪ್ರೀತಿಗಾಗಿಯೇ ಮಾಡಬೇಕು. ಇದೇ ವೇದೋಕ್ತವಾದುದು ಮತ್ತು ಉಚಿತವಾದುದು.

೧೪. ಸುಖವನ್ನು ಪಡೆಯುವುದಕ್ಕಾಗಿ ನರರು ಯಾವ ಯಾವ ಶುಭಕರ್ಮವನ್ನು ಮಾಡುತ್ತಾರೆಯೋ ಅದು ಚೆನ್ನಾಗಿ ಮಾಡಿದ್ದೇ ಆದರೂ ಕೃಷ್ಣನ ಸಂಬಂಧವಿಲ್ಲದಪಕ್ಷದಲ್ಲಿ ಆಗ ಅದು ಕ್ಷಯವಾಗತಕ್ಕುದೆಂದೂ, ಅಲ್ಪಫಲವನ್ನು ಕೊಡತಕ್ಕುದಾಗುವುದೆಂದೂ, ಕೇವಲ ಗುಣಾತ್ಮಕವೆಂದೂ ತಿಳಿಯತಕ್ಕುದು.

೧೫–೧೬. ಆ ಕರ್ಮವು ಅಶುಭಸ್ಥಾನ ಮೊದಲಾದುವುಗಳ ಸಂಬಂಧದಿಂದ ಫಲದ ಗುಣವು ಕೆಟ್ಟುಹೋಗುವಂತೆ ಮಾಡುವುದು. ಅದು ಬಹು ವಿಘ್ನಗಳಿಂದ ಕೂಡಿದ್ದೂ ಆಗಿರುವುದು. ಅದು ನರರಿಗೆ ಎಂದಿಗೂ ಇಷ್ಟಾರ್ಥಸಿದ್ಧಿಯನ್ನು ಉಂಟುಮಾಡುವುದೇ ಇಲ್ಲವು. ಅದೇ ಕರ್ಮವೇ ಶ್ರೀಕೃಷ್ಣನ ಪ್ರೀತಿಸಾಧನೆಗಾಗಿ

ಸ್ವವಾಂಛಿತಾದಪ್ಯಧಿಕಂ ದದಾತಿ ಫಲಮಕ್ಷಯಂ ।
ಅಸದ್ದೇಶಾದಿಸಂಬಂಧಾತ್ತದ್ವೈಗುಣ್ಯಂ ಭವೇನ್ನ ಚ ॥ ೧೭ ॥
ವಿಘ್ನಸ್ತು ಕೋಽಪಿ ಬ್ರಹ್ಮರ್ಷೇ ಪ್ರತಾಪಾಚ್ಚಕ್ರಪಾಣಿನಃ ।
ತಸ್ಮಿನ್ನ ಪ್ರಭವೇತ್ಕ್ವಾಪಿ ತತ್ಸ್ಯಾದೀಪ್ಸಿತಸಿದ್ಧಿದಂ ॥ ೧೮ ॥
ಯದ್ಯಪ್ಯಲ್ಪಂ ಸ್ವಸುಕೃತಂ ತಥಾಪಿ ಪರಮಾತ್ಮನಃ ।
ಸಾಕ್ಷಾತ್ಸಂಬಂಧತೋ ಬ್ರಹ್ಮನ್ ಭವತ್ಯೇವ ಮಹತ್ತರಂ ॥ ೧೯ ॥
ಯಥಾ ಸ್ಫುಲಿಂಗಮಾತ್ರೋಽಪಿ ವನ್ಯಕಾಷ್ಠೌಘಯೋಗತಃ ।
ಅನಿವಾರ್ಯೋ ಭವೇದ್ದಾವಃ ತಥೈತದ್ಧರಿಯೋಗತಃ ॥ ೨೦ ॥
ಪ್ರವೃತ್ತೇ ವಾ ನಿವೃತ್ತೇ ವಾ ತಸ್ಮಾದ್ಧರ್ಮೇ ಸ್ಥಿತೈರ್ನರೈಃ ।
ಉಪಾಸ್ತವ್ಯೋ ವಾಸುದೇವಃ ತತ್ಸಮ್ಯಕ್ಸಿದ್ಧಿಮೀಪ್ಸುಭಿಃ ॥ ೨೧ ॥
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ನಾರದಸ್ಯ ಚ ಸಂವಾದಮೃಷೇರ್ನಾರಾಯಣಸ್ಯ ಚ ॥ ೨೨ ॥

---

ಮಾಡಿದ್ದಾದರೆ ಅದೆಲ್ಲವೂ ನಿರ್ಗುಣವೇ ಆಗಿದ್ದರೂ ಆ ಶ್ರೀಕೃಷ್ಣನ ಸಂಬಂಧದಿಂದ ತಾನು ಬಯಸಿದ್ದಕ್ಕಿಂತಲೂ ಅಧಿಕವಾದ ಮತ್ತು ಅಕ್ಷಯವಾದ ಫಲವನ್ನು ಕೊಡುತ್ತದೆ. ಹೀಗಾದರೆ ಒಳ್ಳೆಯದಲ್ಲದ ಪ್ರದೇಶ ಮೊದಲಾದವುಗಳ ಸಂಬಂಧದಿಂದ ಫಲದಲ್ಲಿ ವೈಗುಣ್ಯವುಂಟಾಗುವುದಿಲ್ಲವು.

೧೮. ಎಲೈ ಬ್ರಹ್ಮರ್ಷಿಯೆ! ವಿಘ್ನವಾದರೋ, ಚಕ್ರಪಾಣಿಯ ಪ್ರತಾಪದಿಂದ ಆ ಕರ್ಮದಲ್ಲಿ ಎಲ್ಲಿಯೂ ಪ್ರಭಾವವನ್ನು ಬೀರಲು ಸಮರ್ಥವಾಗುವುದಿಲ್ಲವು. ಆ ಕರ್ಮವು ಇಷ್ಟಾರ್ಥಸಿದ್ಧಿಯನ್ನು ಕೊಡಬಲ್ಲುದಾಗುವುದು.

೧೯. ಎಲೈ ಬ್ರಾಹ್ಮಣನೇ! ಪುಣ್ಯವು ಅಲ್ಪವೇ ಆಗಿದ್ದರೂ ಪರಮಾತ್ಮನ ಸಾಕ್ಷಾತ್ ಸಂಬಂಧದಿಂದ ಮಹತ್ತರವೇ ಆಗುವುದು.

೨೦. ಒಂದು ಕಿಡಿಯು ಮಾತ್ರವೇ ಆದರೂ ಕಾಡಿನ ಕಟ್ಟಿಗೆಯ ಸೇರಿಕೆಯಿಂದ ಕಾಡುಬೆಂಕಿಯು ಹೇಗೆ ತಡೆಯಲಾರದಷ್ಟಾಗುವುದೋ ಹಾಗೆ ಇದೂ ಶ್ರೀಹರಿಯ ಸಂಬಂಧದಿಂದ ಮಹತ್ತಾಗುವುದು.

೨೧. ಪ್ರವೃತ್ತಿಧರ್ಮದಲ್ಲಿಯೋ ಆಗಲಿ, ನಿವೃತ್ತಿಧರ್ಮದಲ್ಲಿಯೋ ಆಗಲಿ ತೊಡಗಿರುವ ಮಾನವರು ಚೆನ್ನಾದ ಸಿದ್ಧಿಯು ದೊರೆಯಬೇಕೆಂದು ಬಯಸುವವರಾದರೆ, ವಾಸುದೇವನನ್ನು ಉಪಾಸನೆಮಾಡಬೇಕು.

೨೨. ಈ ವಿಷಯದಲ್ಲಿ ಪುರಾತನವಾದ ಇದೊಂದು ಇತಿಹಾಸವನ್ನು ನಾರದನಿಗೂ ನಾರಾಯಣಋಷಿಗೂ ನಡೆದ ಸಂವಾದವನ್ನಾಗಿ ಉದಾಹರಿಸುತ್ತಾರೆ.

ಯೋ ವಾಸುದೇವೋ ಭಗವಾನ್ನಿತ್ಯಂ ಬ್ರಹ್ಮಪುರೇ ಸ್ಥಿತಃ ।
ದಾಕ್ಷಾಯಣ್ಯಾಮಾವಿರಾಸೀತ್ ಧರ್ಮಾಲ್ಲೋಕಹಿತಾಯ ಸಃ ॥ ೨೩ ॥
ಕೃತೇ ಯುಗೇ ದ್ವಿಜವರ ಪುರಾ ಸ್ವಾಯಂಭುವಾಂತರೇ ।
ನರೋ ನಾರಾಯಣಶ್ಚೇತಿ ದ್ವಿರೂಪಃ ಪ್ರಾದುರಾಸ ಸಃ ॥ ೨೪ ॥
ಧರ್ಮಾಶ್ರಮಾತ್ತಪಸ್ತಪ್ತುಂ ಕ್ಷೇಮಾಯೈವ ನೃಣಾಂ ಭುವಿ ।
ನರನಾರಾಯಣೌ ತೌ ಚ ಬದರ್ಯಾಶ್ರಮಮೀಯತುಃ ॥ ೨೫ ॥
ತತ್ರಾದ್ಯೌ ಲೋಕನಾಥೌ ತೌ ಕೃಶೌ ಧಮನಿಸಂತತೌ ।
ತೇಪಾತೇ ತೇಜಸಾ ಸ್ವೇನ ದುರ್ನಿರೀಕ್ಷ್ಯೌ ಸುರೈರಪಿ ॥ ೨೬ ॥
ಯಸ್ಯ ಪ್ರಸಾದಂ ಕುರ್ವಾತೇ ಸ ವೈ ತೌ ದ್ರಷ್ಟುಮರ್ಹತಿ ।
ಶಕ್ಯತೇ ನಾನ್ಯಥಾ ದ್ರಷ್ಟುಮಪಿ ತದ್ಧಾಮವಾಸಿಭಿಃ ॥ ೨೭ ॥
ಏಕದಾ ನಾರದೋ ಯೋಗೀ ತಾಭ್ಯಾಮೇವ ದಿದೃಕ್ಷಿತಃ ।
ಅಂತರಾತ್ಮತಯಾ ಚಾಂತರ್ಹೃದಯೇಽಪಿ ಪ್ರಚೋದಿತಃ ॥ ೨೮ ॥

---

೨೩. ಭಗವಂತನಾದ ಯಾವ ವಾಸುದೇವನು ಬ್ರಹ್ಮಪುರದಲ್ಲಿ ಸದಾ ನೆಲಸಿರುವನೋ ಅವನು ಲೋಕಹಿತಕ್ಕಾಗಿ ಧರ್ಮನಿಂದ ದಾಕ್ಷಾಯಣಿಯಲ್ಲಿ ಅವತಾರಮಾಡಿದನು.

೨೪. ಎಲೈ ದ್ವಿಜಶ್ರೇಷ್ಠನೇ! ಪೂರ್ವದ ಸ್ವಾಯಂಭುವಮನ್ವಂತರದಲ್ಲಿ ಕೃತಯುಗದಲ್ಲಿ ನರ, ನಾರಾಯಣ ಎಂಬ ಎರಡು ರೂಪಗಳುಳ್ಳವನಾಗಿ ಆ ವಾಸುದೇವನು ಜನ್ಮವೆತ್ತಿದನು.

೨೫. ಭೂಮಿಯಲ್ಲಿರುವ ಸಮಸ್ತ ಮಾನವರ ಕ್ಷೇಮಕ್ಕಾಗಿ ತಪಸ್ಸುಮಾಡುವುದಕ್ಕೋಸ್ಕರ ಆ ನರ ನಾರಾಯಣರು ಧರ್ಮಾಶ್ರಮದಿಂದ ಬದರ್ಯಾಶ್ರಮಕ್ಕೆ ಹೋದರು.

೨೬. ಅಲ್ಲಿ ಎಲ್ಲಕ್ಕೂ ಮೊದಲಿಗರೂ ಲೋಕದೊಡೆಯರೂ ಆದ ಅವರು ರಕ್ತನಾಳಗಳೆಲ್ಲ ಸಂಪೂರ್ಣವಾಗಿ ಕೃಶವಾಗಿ ಹೋಗುತ್ತಿರಲು, ತಮ್ಮ ತೇಜಸ್ಸಿನಿಂದಲೇ ಹೊಳೆಯುತ್ತ ದೇವತೆಗಳಿಂದಲೂ ನೋಡಲಸದಳರಾಗಿ ತಪಸ್ಸು ಮಾಡಿದರು.

೨೭. ಅವರು ಯಾರಿಗೆ ಅನುಗ್ರಹಮಾಡುವರೋ ಅವರುಮಾತ್ರ ಅವರಿಬ್ಬರನ್ನೂ ಸಂದರ್ಶಿಸಲು ಅರ್ಹರಾಗುವರು. ಹಾಗಲ್ಲದೆ ಬೇರೆ ರೀತಿಯಿಂದ ಆ ಪ್ರದೇಶದಲ್ಲಿಯೆ ವಾಸಮಾಡುವವರಿಗೂ ಅವರನ್ನು ಸಂದರ್ಶಿಸಲು ಶಕ್ಯವಾಗುವುದಿಲ್ಲ.

೨೮–೨೯. ಎಲೈ ಬ್ರಾಹ್ಮಣನೇ! ಒಂದಾನೊಂದು ಕಾಲದಲ್ಲಿ ಯೋಗಿಯಾದ ನಾರದನು ಅವರಿಬ್ಬರನ್ನೂ ನೋಡಬೇಕೆಂಬ ಬಯಕೆಯುಳ್ಳವನಾಗಿ,

ಮೇರೋರ್ಮಹಾಗಿರೇಃ ಶೃಂಗಾತ್ಸದ್ಯೋ ಗಗನವರ್ತ್ಮನಾ ।
ತಂ ದೇಶಮಾಗಮದ್ಬ್ರಹ್ಮನ್ ಬದರ್ಯಾಶ್ರಮಸಂಜ್ಞಿತಂ ॥ ೨೯ ॥
ತಯೋರಾಹ್ನಿಕವೇಲಾಯಾಮಾಗತಸ್ತತ್ರ ಸ ದ್ರುತಂ ।
ಆದ್ಯಾಶ್ರಮಕ್ರಿಯಾಸಕ್ತೌ ತೌ ದದರ್ಶ ಚ ದೂರತಃ ॥ ೩೦ ॥
ದೃಷ್ಟ್ವೈವೇಶ್ವರಚರ್ಯಾಂ ತಾಂ ತಸ್ಯ ಕೌತೂಹಲಂ ತ್ವಭೂತ್ ।
ಅಹೋ ವರೌ ಜಗತ್ಪೂಜ್ಯಾವೀಶ್ವರೌ ಸರ್ವದೇಹಿನಾಂ ।
ಏತೌ ಹಿ ಪರಮಂ ಬ್ರಹ್ಮ ಕಾಽನಯೋರಾಹ್ನಿಕೀ ಕ್ರಿಯಾ ॥ ೩೧ ॥
ಪಿತರೌ ಸರ್ವಭೂತಾನಾಂ ದೇವತಾನಾಂ ಚ ದೈವತಂ ।
ತಾಂ ದೇವತಾಂ ತು ಯಜತಃ ಪಿತ್ರೂನ್ವೈ ತೌ ಮಹಾಮತೀ ॥ ೩೨ ॥
ಇತಿ ಸಂಚಿಂತ್ಯ ಮನಸಾ ಭಕ್ತೋ ನಾರಾಯಣಸ್ಯ ಸಃ ।
ತತ್ಸಮೀಪಮುಪೇತ್ಯಾಽಥ ತಸ್ಥೌ ನತ್ವಾ ಕೃತಾಂಜಲಿಃ ॥ ೩೩ ॥
ಕೃತೇ ದೈವೇಚ ಪಿತ್ರ್ಯೇ ಚ ತತಸ್ತಾಭ್ಯಾಂ ನಿರೀಕ್ಷಿತಃ ।
ಪೂಜಿತಶ್ಚೈವ ವಿಧಿನಾ ಶಾಸ್ತ್ರದೃಷ್ಟೇನ ಸೋಽನಘ ॥ ೩೪ ॥

---

ಅಂತರಾತ್ಮನಿಂದ ಪ್ರಚೋದಿತನೂ ಆಗಿ ಮೇರುಮಹಾಪರ್ವತದ ಶಿಖರದಿಂದ ಹೊರಟು ತತ್ಕ್ಷಣವೇ ಆಕಾಶಮಾರ್ಗವಾಗಿ ಬದರ್ಯಾಶ್ರಮ ಪ್ರದೇಶಕ್ಕೆ ಬಂದನು.

೩೦. ಆಗ ಅವರಿಬ್ಬರಿಗೂ ಆಹ್ನಿಕದ ವೇಳೆಯಾಗಿದ್ದಿತು. ಆಗಲಾ ನಾರದನು ಬೇಗನೆ ಅಲ್ಲಿಗೈತಂದು, ಬ್ರಹ್ಮಚರ್ಯಾಶ್ರಮಕ್ರಿಯೆಯಲ್ಲಿ ತೊಡಗಿದ್ದ ಅವರಿಬ್ಬರನ್ನೂ ದೂರದಿಂದಲೇ ಕಂಡನು.

೩೧. ಆ ಈಶ್ವರಚರ್ಯೆಯನ್ನು ಕಂಡಮಾತ್ರಕ್ಕೇ ಆತನಿಗೆ ಕುತೂಹಲ ವುಂಟಾಯಿತು: "ಆಹಾ! ಇವರು ಜಗತ್ಪೂಜ್ಯರು; ಸರ್ವದೇಹಿಗಳಿಗೂ ಒಡೆಯರು; ಪರಬ್ರಹ್ಮಸ್ವರೂಪರು; ಇವರಿಗೆ ಆಹ್ನಿಕಕ್ರಿಯೆಯೇಕೆ?

೩೨. ಇವರು ಸರ್ವಭೂತಗಳಿಗೂ ಪಿತೃಗಳು; ದೇವತೆಗಳಿಗೂ ದೇವತೆಗಳು. ಮಹಾಮತಿಗಳಾದ ಇವರಿಬ್ಬರೂ ಯಾವ ದೇವತೆಯನ್ನು ಪೂಜಿಸುವರೋ! ಯಾವ ಪಿತೃಗಳನ್ನು ಪೂಜಿಸುವರೋ!"

೩೩. ಎಂಬೀಪ್ರಕಾರವಾಗಿ ಮನಸ್ಸಿನಲ್ಲಿಯೆ ಆಲೋಚಿಸಿಕೊಂಡು ನಾರಾಯಣನ ಭಕ್ತನಾದ ಆ ನಾರದನು ಅವರ ಸಮೀಪಕ್ಕೆ ಹೋಗಿ ನಮಸ್ಕಾರಮಾಡಿ ಕೈಮುಗಿದು ನಿಂತನು.

೩೪. ಆ ಸಮಯದಲ್ಲಿ ನರ ನಾರಾಯಣರೀರ್ವರೂ ದೇವಪಿತೃಕಾರ್ಯಗಳನ್ನು ಮುಗಿಸಿದ ಬಳಿಕ ನಾರದಮುನಿಯನ್ನು ಕಂಡರು. ಎಲೈ ಅನಘನೇ! ಬಳಿಕ ಅವರು ಅವನನ್ನು ವಿಧಿಗನುಗುಣವಾಗಿ ಪೂಜಿಸಿದರು.

ತದ್ದೃಷ್ಟ್ವಾ ಮಹದಾಶ್ಚರ್ಯಮಪೂರ್ವಂ ವಿಧಿವಿಸ್ತರಂ ।
ಉಪೋಪವಿಷ್ಟಃ ಸುಪ್ರೀತೋ ನಾರದೋಽಭೂಚ್ಚ ವಿಸ್ಮಿತಃ ॥ ೩೫ ॥
ನಾರಾಯಣಂ ಸಂನಿರೀಕ್ಷ್ಯ ಪ್ರಯತೇನಾಂತರಾತ್ಮನಾ ।
ನಮಸ್ಕೃತ್ಯ ಚ ತಂ ದೇವಮಿದಂ ವಚನಮಬ್ರವೀತ್ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಆತ್ಯಂತಿಕಶ್ರೇಯಃ ಸಾಧನನಿರೂಪಣೇ ನಾರದನಾರಾಯಣಸಮಾಗಮೋ" ನಾಮ ದ್ವಿತೀಯೋಽಧ್ಯಾಯಃ

---

೩೫. ಅಪೂರ್ವವಾದ ಆ ಮಹದಾಶ್ಚರ್ಯವನ್ನು ಕಂಡು ನಾರದನು ವಿಸ್ಮಿತನಾದನು; ಸುಪ್ರೀತನಾಗಿ ಅವರ ಬಳಿ ಕುಳಿತನು.

೩೬. ಇಂದ್ರಿಯನಿಗ್ರಹದಿಂದ ಪವಿತ್ರವಾದ ಅಂತರಾತ್ಮವುಳ್ಳವನಾಗಿ ನಾರಾಯಣನನ್ನು ನೋಡಿ, ಆ ಸ್ವಾಮಿಯನ್ನು ನಮಸ್ಕರಿಸಿ ಈ ಮಾತನ್ನಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವಮಾಹಾತ್ಮ್ಯದಲ್ಲಿ "ನಾರದ ನಾರಾಯಣ ಸಮಾಗಮವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಶ್ರೀ ವಾಸುದೇವಸರ್ವೋಽಪಾಸ್ಯತ್ವನಿರೂಪಣಂ

ನಾರದ ಉವಾಚ:—

ವೇದೇಷು ಚ ಪುರಾಣೇಷು ಸಾಂಗೋಽಪಾಂಗೇಷು ಗೀಯಸೇ ।
ತ್ವಮೇವ ಶಾಶ್ವತೋ ಧಾತಾ ನಿಯಂತಾಮೃತಮಚ್ಯುತ ।
ತ್ವಂ ವಿಧಾತಾ ಚ ಸತತಂ ತ್ವಯಿ ಸರ್ವಮಿದಂ ಜಗತ್ ॥ ೧ ॥
ಚತ್ವಾರೋ ಹ್ಯಾಶ್ರಮಾ ದೇವ ಸರ್ವೇ ವರ್ಣಾಶ್ಚ ಕರ್ಮಭಿಃ ।
ಯಜಂತೇ ತ್ವಾಮಹರಹರ್ನಾನಾಮೂರ್ತಿಸಮಾಸ್ಥಿತಂ ॥ ೨ ॥
ಪಿತಾ ಮಾತಾ ಚ ಸರ್ವಸ್ಯ ದೈವತಂ ತ್ವಂ ಹಿ ಶಾಶ್ವತಂ ।
ಕಂ ತ್ವಂ ಚ ಯಜಸೇ ದೇವಂ ಪಿತರಂ ವಾ ನ ವಿದ್ಮಹೇ ॥ ೩ ॥

ಶ್ರೀ ನಾರಾಯಣ ಉವಾಚ:—

ನೈತದ್ರಹಸ್ಯಂ ವಕ್ತವ್ಯಂ ಆತ್ಮಗುಹ್ಯಮಥಾಪಿ ತೇ ।
ಮಯಿ ಭಕ್ತಿಮತೇ ಬ್ರಹ್ಮನ್ ಪ್ರವಕ್ಷ್ಯಾಮಿ ಯಥಾಯಥಂ ॥ ೪ ॥

---

## ಕನ್ನಡದ ಅನುವಾದ

### ಶ್ರೀವಾಸುದೇವ ಸರ್ವೋಽಪಾಸ್ಯತ್ವವರ್ಣನ

೧. ನಾರದನು ಕೇಳುತ್ತಾನೆ:—"ಎಲೈ ಪರಮಾತ್ಮನೇ! ಸಾಂಗೋಽಪಾಂಗಗಳಾದ ವೇದಗಳಲ್ಲಿಯೂ, ಪುರಾಣಗಳಲ್ಲಿಯೂ ನೀನೇ ಹೊಗಳಲ್ಪಡುತ್ತಿರುವೆ. ಎಲೈ ಅಚ್ಯುತನೇ! ನೀನೇ ಶಾಶ್ವತನು, ಧಾತೃವು, ನಿಯಾಮಕನು, ಅಮೃತನು. ನೀನೇ ವಿಧಾತೃವು. ನಿನ್ನಲ್ಲಿಯೆ ಈ ಜಗತ್ತು ಸದಾಕಾಲದಲ್ಲಿಯೂ ನೆಲಸಿರುವುದು.

೨. ದೇವಾ! ನಾಲ್ಕು ಆಶ್ರಮಗಳವರೂ, ಸರ್ವವರ್ಣಗಳವರೂ ನಾನಾ ಮೂರ್ತಿಗಳಲ್ಲಿ ನೆಲಸಿರುವ ನಿನ್ನನ್ನು ಬಗೆಬಗೆಯ ಕರ್ಮಗಳಿಂದ ದಿನದಿನವೂ ಪೂಜಿಸುತ್ತಾರೆ.

೩. ಸರ್ವಕ್ಕೂ ತಂದೆಯೂ, ತಾಯಿಯೂ, ಶಾಶ್ವತವಾದ ದೇವತೆಯೂ ಎಲ್ಲವೂ ನೀನೇ! ಅಂತಹ ನೀನು ಯಾವ ದೇವನನ್ನಾಗಲಿ ಪಿತೃವನ್ನಾಗಲಿ ಪೂಜಿಸುವೆಯೋ ನನಗೆ ತಿಳಿಯದಾಗಿದೆ.

೪. ಶ್ರೀನಾರಾಯಣನು ಹೇಳುತ್ತಾನೆ:—"ಎಲೈ ಬ್ರಾಹ್ಮಣನೇ! ಆತ್ಮಗುಹ್ಯವಾದ ಈ ರಹಸ್ಯವನ್ನು ಹೇಳಲಾಗದು. ಆದರೂ ನನ್ನಲ್ಲಿ ಭಕ್ತಿಯುಳ್ಳವನಾದ ನಿನಗೆ ಎಷ್ಟೋ ಅಷ್ಟನ್ನುಮಾತ್ರ ವಿವರಿಸುತ್ತೇನೆ.

ಸತ್ಯಂ ಜ್ಞಾನಮನಂತಂ ಯೋ ಬ್ರಹ್ಮೇತಿ ಶ್ರುತಿವರ್ಣಿತಃ ।
ತ್ರಿಗುಣವ್ಯತಿರಿಕ್ತಶ್ಚ ಪುರುಷೋ ದಿವ್ಯವಿಗ್ರಹಃ ॥ ೫ ॥
ಮಹಾಪುರುಷ ಇತ್ಯುಕ್ತೋ ವಾಸುದೇವಶ್ಚ ಯಃ ಪ್ರಭುಃ ।
ನಾರಾಯಣಋಷಿರ್ವಿಷ್ಣುಃ ಕೃಷ್ಣಶ್ಚ ಭಗವಾನಿತಿ ॥ ೬ ॥
ಏಕಃ ಸ ಏವ ದೇವೋ ನೌ ಪಿತರೌ ಚೇತಿ ವಿದ್ಧಿ ಭೋಃ ।
ಆವಾಭ್ಯಾಂ ಪೂಜ್ಯತೇಽಸೌ ಹಿ ದೈವೇ ಪಿತ್ರ್ಯೇ ಚ ಕಲ್ಪಿತೇ ॥ ೭ ॥
ನಾಸ್ತಿ ತಸ್ಮಾತ್ಪರತರಃ ಪಿತಾ ದೇವೋಽಥ ವಾ ದ್ವಿಜ ।
ಆತ್ಮಾ ಹಿ ನೌ ಸ ವಿಜ್ಞೇಯಃ ಕೃಷ್ಣೋ ಬ್ರಹ್ಮಪುರೇಶ್ವರಃ ॥ ೮ ॥
ತೇನೈಷಾ ಪ್ರಥಿತಾ ಬ್ರಹ್ಮನ್ಮರ್ಯಾದಾ ಲೋಕಭಾವನೀ ।
ದೈವಂ ಪಿತ್ರ್ಯಂ ಚ ಕರ್ತವ್ಯಮಿತಿ ಲೋಕಹಿತೈಷಿಣಾ ॥ ೯ ॥
ಪ್ರವೃತ್ತಂ ಚ ನಿವೃತ್ತಂ ಚ ದ್ವೇಧಾ ಕರ್ಮಾಸ್ತಿ ವೈದಿಕಂ ।
ಯಥಾಧಿಕಾರಂ ವಿಹಿತಂ ಪುರುಷಾರ್ಥೋಪಲಬ್ಧಯೇ ॥ ೧೦ ॥

---

೫–೭. ಸತ್ಯಜ್ಞಾನಸ್ವರೂಪವೂ, ಅನಂತವೂ ಆದ ಬ್ರಹ್ಮವೆಂದು ಯಾರನ್ನು ವೇದಗಳಲ್ಲಿ ವರ್ಣಿಸಿದೆಯೋ, ತ್ರಿಗುಣಗಳಿಂದ ಬೇರೆಯಾದವನೆಂದೂ, ದಿವ್ಯ ವಿಗ್ರಹವುಳ್ಳ ಪುರುಷನೆಂದೂ ಮಹಾಪುರುಷನೆಂದೂ ವಾಸುದೇವನೆಂದೂ ಯಾವ ಪ್ರಭುವು ಹೇಳಲ್ಪಟ್ಟಿರುವನೋ, ಯಾವನು ನಾರಾಯಣಋಷಿಯೆಂದೂ, ವಿಷ್ಣುವೆಂದೂ, ಕೃಷ್ಣನೆಂದೂ, ಭಗವಂತನೆಂದೂ, ವರ್ಣಿತನಾಗಿರುವನೋ ಅವನೊಬ್ಬನೇ ನಮಗೆ ದೇವತೆ; ನಮಗೆ ತಾಯಿತಂದೆಗಳು ಕೂಡ ಅವನೇ—ಹೀಗೆಂದು ನಾವು ತಿಳಿದುಕೊಂಡಿದ್ದೇವೆ. ದೇವಕಾರ್ಯದಲ್ಲಿಯೂ ಪಿತೃಕಾರ್ಯಗಳಲ್ಲಿಯೂ ನಾವು ಅವನನ್ನೇ ಪೂಜಿಸುತ್ತೇವೆ.

೮. ಎಲೈ ದ್ವಿಜನೇ! ಅವನಿಗಿಂತಲೂ ಶ್ರೇಷ್ಠನಾದ ಪಿತೃವಾಗಲಿ ದೇವತೆಯಾಗಲಿ ಇರುವುದಿಲ್ಲವು. ಬ್ರಹ್ಮಪುರೇಶ್ವರನಾದ ಆ ಕೃಷ್ಣನೇ ನಮ್ಮ ಆತ್ಮವೆಂದರಿಯಬೇಕು.

೯. ಎಲೈ ಬ್ರಾಹ್ಮಣನೇ! ಲೋಕದಲ್ಲಿ ಕಾಣಬರುತ್ತಿರುವ ಮರ್ಯಾದೆಯು—ದೇವಸಂಬಂಧವಾದ ಮತ್ತು ಪಿತೃಸಂಬಂಧವಾದ ಕರ್ತವ್ಯಗಳನ್ನು ನಡೆಸಬೇಕೆಂಬ ಈ ನಿಯಮವು—ಲೋಕಹಿತೈಷಿಯಾದ ಅವನಿಂದಲೇ ಪ್ರಸಿದ್ಧವಾಯಿತು.

೧೦. ಪ್ರವೃತ್ತಿಕರ್ಮವೆಂದೂ, ನಿವೃತ್ತಿಕರ್ಮವೆಂದೂ ವೈದಿಕಕರ್ಮವು ಎರಡು ಬಗೆಯಾಗಿರುವುದು. ಪುರುಷಾರ್ಥಗಳನ್ನು ಪಡೆದುಕೊಳ್ಳುವುದಕ್ಕೆ ಅವರವರ ಅಧಿಕಾರಕ್ಕೆ ತಕ್ಕಂತೆ ಅವುಗಳನ್ನು ವಿಧಿಸಲಾಗಿದೆ.

ತಂತ್ರವೇದೋಕ್ತವಿಧಿನಾ ಸ್ವೋಚಿತಸ್ತ್ರೀಪರಿಗ್ರಹಃ ।
ವಿತ್ತಾರ್ಜನಂ ಚ ನ್ಯಾಯೇನ ದ್ರವ್ಯಯಜ್ಞಾಃ ಸಕಾಮನಾಃ ॥ ೧೧ ॥
ವಾಸೋ ಗ್ರಾಮೇ ಚ ನಗರೇ ಪೂರ್ತಮಿಷ್ಟಂ ಚ ಕರ್ಮ ಯತ್ ।
ಪ್ರವೃತ್ತಂ ತತ್ತು ಸಕಲಮಶಾಂತಿಕೃದುದೀರಿತಂ ॥ ೧೨ ॥
ಸ್ತ್ರೀದ್ರವ್ಯಯೋಃ ಪರಿತ್ಯಾಗಃ ಕಾಮಲೋಭಕ್ರುಧಾಂ ತಥಾ ।
ವನವಾಸಶ್ಚ ವೈರಾಗ್ಯಂ ತಪಃ ಕ್ಷಾಂತಿಃ ಶಮೋ ದಮಃ ॥ ೧೩ ॥
ಬ್ರಹ್ಮಯಜ್ಞಾ ಯೋಗಯಜ್ಞಾ ಜ್ಞಾನಯಜ್ಞಾಶ್ಚ ಸರ್ವಶಃ ।
ಜಪಯಜ್ಞಾಶ್ಚೇತಿ ಮುನೇ ನಿವೃತ್ತಂ ಕರ್ಮ ಕೀರ್ತಿತಂ ॥ ೧೪ ॥
ತ್ರಿಲೋಕ್ಯಾಂ ಗತಯೋ ಧರ್ಮಂ ಪ್ರವೃತ್ತಮನುತಿಷ್ಠತಾಂ ।
ಸ್ವರ್ಗಲೋಕಾವಧಿ ಮುನೇ ಮನುಷ್ಯಾಣಾಂ ಭವಂತಿ ವೈ ॥ ೧೫ ॥
ಇಂದ್ರಚಂದ್ರಾಗ್ನಿಲೋಕಾದೌ ಸ್ವಸ್ವಪುಣ್ಯಫಲಂ ಚ ತೇ ।
ಭೋಗೈಶ್ವರ್ಯಂ ಬಹುವಿಧಮಭೀಷ್ಟಂ ಭುಂಜತೇ ಖಲು ॥ ೧೬ ॥
ಯಾವತ್ಪುಣ್ಯಂ ತಾವದೇವ ಭುಕ್ತ್ವಾ ತತ್ತೇ ಸುರಾಸ್ತತಃ ।
ಕ್ಷೀಣೇ ತು ಸುಕೃತೇ ಭೂಯಃ ಪತಂತಿ ವಿವಶಾ ಭುವಿ ॥ ೧೭ ॥

---

೧೧–೧೨. ತಂತ್ರಗಳಲ್ಲಿಯೂ, ವೇದಗಳಲ್ಲಿಯೂ ಹೇಳಿರುವ ವಿಧಿಯನ್ನು ಅನುಸರಿಸಿ ತನಗೆ ಅನುರೂಪಳಾದ ಸ್ತ್ರೀಯನ್ನು ಪರಿಗ್ರಹಿಸುವುದು, ನ್ಯಾಯ ರೀತಿಯಿಂದ ಹಣವನ್ನು ಸಂಪಾದಿಸುವುದು, ಅಪೇಕ್ಷೆಗಳನ್ನು ನೆರವೇರಿಸಿಕೊಳ್ಳುವುದಕ್ಕಾಗಿ ದ್ರವ್ಯದಿಂದ ಮಾತ್ರವೇ ಸಾಧ್ಯವಾಗುವ ಯಜ್ಞಗಳನ್ನು ನಡೆಸುವುದು, ಗ್ರಾಮದಲ್ಲಿಯೂ ನಗರದಲ್ಲಿಯೂ ವಾಸಮಾಡುವುದು, ವ್ರತಾದಿಗಳನ್ನು ಆಚರಿಸುವುದು, ಇತರ ಯಜ್ಞಾದಿಕರ್ಮಗಳನ್ನು ಮಾಡುವುದು—ಇವೆಲ್ಲವೂ ಪ್ರವೃತ್ತಿಕರ್ಮಗಳು. ಈ ಪ್ರವೃತ್ತಿಕರ್ಮವು ಅಶಾಂತಿಕರವೆಂದು ಹೇಳಲಾಗಿದೆ.

೧೩–೧೪. ಸ್ತ್ರೀಪರಿತ್ಯಾಗ, ದ್ರವ್ಯತ್ಯಾಗ, ಕಾಮಲೋಭಗಳನ್ನೂ, ಕ್ರೋಧವನ್ನೂ ಪರಿತ್ಯಾಗಮಾಡುವುದು, ವನವಾಸ, ವೈರಾಗ್ಯ, ತಪಸ್ಸು, ಕ್ಷಾಂತಿ (ತಾಳ್ಮೆ), ಶಮ (ಮನಸ್ಸಮಾಧಾನದಿಂದಿರುವುದು), ದಮ (ಇಂದ್ರಿಯ ವಿಕಾರಗಳನ್ನು ಹಿಡಿತದಲ್ಲಿಡುವುದು), ಬ್ರಹ್ಮಯಜ್ಞ, ಯೋಗಯಜ್ಞ, ಜ್ಞಾನ ಯಜ್ಞ, ಜಪಯಜ್ಞ—ಇವೆಲ್ಲವೂ ನಿವೃತ್ತಿಕರ್ಮವೆಂದು ಹೇಳಿದೆ.

೧೫. ಅಯ್ಯಾ ಮುನಿಯೇ! ಪ್ರವೃತ್ತಿಧರ್ಮವನ್ನನುಸರಿಸುವ ಮನುಷ್ಯರಿಗೆ ಮೂರುಲೋಕಗಳಲ್ಲಿಯೂ ಸ್ವರ್ಗಲೋಕಾವಧಿಯಾದ ಗತಿಗಳುಂಟಾಗುತ್ತವೆ.

೧೬. ಅವರು ಇಂದ್ರ, ಚಂದ್ರ, ಅಗ್ನಿ ಮೊದಲಾದವರ ಲೋಕಗಳಲ್ಲಿ ತಮ್ಮ ತಮ್ಮ ಪುಣ್ಯದ ಫಲವನ್ನೂ, ಬಹುವಿಧ ಅಭೀಷ್ಟ ಭೋಗೈಶ್ವರ್ಯಗಳನ್ನೂ ಅನುಭವಿಸುತ್ತಾರೆ.

೧೭. ಎಲ್ಲಿಯವರೆಗೆ ಪುಣ್ಯವಿರುವುದೊ, ಅಲ್ಲಿಯವರೆಗೆ ಮಾತ್ರ ಅವರು

ಭೋಗೈಶ್ವರ್ಯಾದಿ ನಾಶೋ ಹಿ ಕಾಲವೇಗೇನ ಜಾಯತೇ ।
ಅನಿಚ್ಛಿತಾಮಪಿ ಮುನೇ ತೇಷಾಂ ಪುಣ್ಯಕ್ಷಯೇ ಸತಿ ॥ ೧೮ ॥
ಆಧಿಕಾರಿಕದೇವಾನಾಮಪಿ ಬ್ರಹ್ಮದಿನೇ ಮುಹುಃ ।
ಇಷ್ಟಭೋಗೈಶ್ವರ್ಯನಾಶೋ ಜಾಯತೇ ಕಾಲರಂಹಸಾ ॥ ೧೯ ॥
ನಿವೃತ್ತಿಧರ್ಮನಿಷ್ಠಾ ಯೇ ಯೋಗಿನಶ್ಚ ತಪಸ್ವಿನಃ ।
ಜನಾದೀನ್ಯಾಂತಿ ಲೋಕಾನ್ ತ್ರೀಂಸ್ತೇ ತು ತ್ರೈಲೋಕ್ಯತೋ ಬಹಿಃ ॥
ತತ್ತಲ್ಲೋಕೈಶ್ವರ್ಯಭೋಗಾನ್ ಭುಂಜತೇ ತೇ ನಿಜೇಪ್ಸಿತಾನ್ ।
ದೈನಂದಿನೇಽಪಿ ಪ್ರಲಯೇ ವರ್ತಂತೇ ತೇ ಯಥಾಸುಖಂ ॥ ೨೧ ॥
ಬ್ರಹ್ಮಣೋ ದ್ವಿಪರಾರ್ಧಾಂತೇ ತದ್ಭೋಗೈಶ್ವರ್ಯಸಂಪದಃ ।
ನಶ್ಯಂತಿ ಕಾಲಶಕ್ತ್ಯೈವ ಲೋಕಾಸ್ತೇಷಾಂ ಚ ನಾರದ ॥ ೨೨ ॥
ಅಥೈತದ್ದ್ವಿವಿಧಂ ಕರ್ಮ ಗುಣಾತ್ಮಕಮಪಿ ದ್ವಿಜ ।
ಕೃತಂ ಚೇದ್ವಿಷ್ಣುಸಂಬದ್ಧಂ ನಿರ್ಗುಣಂ ಸ್ಯಾತ್ತದಾ ತು ತತ್ ॥ ೨೩ ॥

---

ಸುರರಾಗಿ ಆ ಪುಣ್ಯಫಲವನ್ನನುಭವಿಸಿ. ಪುಣ್ಯವು ಕ್ಷಯವಾಗಲಾಗಿ ಆಮೇಲೆ ಅವರು ವಿವಶರಾಗಿ ಮತ್ತೆ ಭೂಮಿಗೆ ಬೀಳುತ್ತಾರೆ.

೧೮–೧೯. ಎಲೈ ಮುನಿಯೆ! ಪುಣ್ಯವು ಕ್ಷಯವಾದರೆ ಅಂತಹವರಿಗೆ ಇಚ್ಛೆಯಿಲ್ಲವಾದರೂ ಕಾಲವೇಗದಿಂದ ಭೋಗ, ಐಶ್ವರ್ಯ ಮೊದಲಾದುವುಗಳ ನಾಶವು ಉಂಟಾಗುತ್ತವೆ. ಅಧಿಕಾರಸ್ಥಾನದಲ್ಲಿರುವ ದೇವತೆಗಳಿಗೂ ಕೂಡ ಬ್ರಹ್ಮದಿನದಲ್ಲಿ ಕಾಲವೇಗದಿಂದ ಮತ್ತೆಮತ್ತೆ ಇಷ್ಟಭೋಗೈಶ್ವರ್ಯಗಳ ನಾಶವೂ ಉಂಟಾಗುತ್ತದೆ.

೨೦–೨೧. ನಿವೃತ್ತಿಧರ್ಮವನ್ನವಲಂಬಿಸಿರುವ ಯೋಗಿಗಳೂ, ತಪಸ್ವಿಗಳೂ ತ್ರೈಲೋಕ್ಯಕ್ಕೆ ಹೊರಗಿರುವುವಾದ ಜನಾದಿ ಮೂರು ಲೋಕಗಳನ್ನೂ ಹೋಗಿ ಸೇರುತ್ತಾರೆ. ಅವರು ತಾವು ಬಯಸಿದಂತೆ ಆಯಾ ಲೋಕಗಳ ಐಶ್ವರ್ಯವನ್ನೂ ಭೋಗಗಳನ್ನೂ ಅನುಭವಿಸುತ್ತಾರೆ. ದೈನಂದಿನ ಪ್ರಳಯದಲ್ಲಿಯೂ ಅವರು ಸುಖವಾಗಿರುತ್ತಾರೆ.

೨೨. ಎಲೈ ನಾರದನೇ! ಬ್ರಹ್ಮನ ಎರಡುಪರಾರ್ಧಗಳ ಕೊನೆಯಲ್ಲಿ ಅವರ ಭೋಗ, ಐಶ್ವರ್ಯ, ಸಂಪತ್ತುಗಳೆಲ್ಲವೂ ಕಾಲಶಕ್ತಿಯಿಂದಲೇ ನಾಶವಾಗಿಹೋಗುತ್ತವೆ. ಅವರ ಆ ಲೋಕಗಳೂ ಅವುಗಳೊಡನೆಯೆ ನಾಶವಾಗುತ್ತವೆ.

೨೩. ಓ ಬ್ರಾಹ್ಮಣಾ! ಈ ಎರಡುಬಗೆಯ ಕರ್ಮಗಳೂ ಗುಣಾತ್ಮಕವಾಗಿರುವುವಾದರೂ ವಿಷ್ಣುಸಂಬಂಧವುಂಟಾಗುವಂತೆ ಮಾಡಿದರೆ (ಕೇವಲ ವಿಷ್ಣುಪ್ರೀತ್ಯರ್ಥವಾಗಿಯೇ ಆಚರಿಸಲ್ಪಟ್ಟರೆ) ಅವು ನಿರ್ಗುಣವೇ (ನಿಷ್ಕಾಮವೇ) ಆಗುತ್ತವೆ.

ತತ್ಫಲಂ ಚಾಕ್ಷಯಂ ಸ್ಯಾದ್ಧಿ ಸ್ವೇಷ್ಟಾದಪ್ಯಧಿಕಂ ನೃಣಾಂ ।
ಭಕ್ತಾಸ್ತೇ ಭಗವದ್ಧಾಮ ಯಾಂತ್ಯಷ್ಟಾವೃತ್ತಿತಃ ಪರಂ ॥ ೨೪ ॥
ಅತೋ ವಿವೇಕಿನೋ ನಿತ್ಯಂ ವಿಷ್ಣುಭಕ್ತ್ಯನ್ವಿತಾಃ ಕ್ರಿಯಾಃ ।
ಪ್ರವೃತ್ತಾ ವಾ ನಿವೃತ್ತಾ ವಾ ಕುರ್ವತೇ ಸಕಲಾ ಅಪಿ ॥ ೨೫ ॥
ಬ್ರಹ್ಮಾ ಸ್ಥಾಣುರ್ಮನುರ್ದಕ್ಷೋ ಭೃಗುರ್ಧರ್ಮಸ್ತಥಾ ಯಮಃ ।
ಮರೀಚಿರಂಗಿರಾಶ್ಚಾತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ॥ ೨೬ ॥
ವೈಭ್ರಾಜಶ್ಚ ವಸಿಷ್ಠಶ್ಚ ವಿವಸ್ವಾನ್ ಸೋಮ ಏವ ಚ ।
ಕಶ್ಯಪಃ ಕರ್ದಮಾದ್ಯಾಶ್ಚ ಪ್ರಜಾನಾಂ ಪತಯೋ ಮುನೇ ॥ ೨೭ ॥
ದೇವಾಶ್ಚ ಋಷಯಃ ಸರ್ವೇ ಸರ್ವೇ ವರ್ಣಾಸ್ತಥಾಶ್ರಮಾಃ ।
ಪೂಜಯಂತಿ ತಮೇವೇಶಂ ಪ್ರವೃತ್ತಂ ಧರ್ಮಮಾಸ್ಥಿತಾಃ ॥ ೨೮ ॥
ಸನಃ ಸನತ್ಸುಜಾತಶ್ಚ ಸನಕಃ ಸ ಸನಂದನಃ ।
ಸನತ್ಕುಮಾರಃ ಕಪಿಲ ಆರುಣಿಶ್ಚ ಸನಾತನಃ ॥ ೨೯ ॥
ಋಭುರ್ಯತಿಶ್ಚ ಹಂಸಾದ್ಯಾ ಮುನಯೋ ನೈಷ್ಠಿಕವ್ರತಾಃ ।
ತಮೇವ ಪೂಜಯಂತೇ ತಂ ನಿವೃತ್ತಂ ಧರ್ಮಮಾಸ್ಥಿತಾಃ ॥ ೩೦ ॥
ವಾಸುದೇವಸ್ಯಾಂಗತಯಾ ಭಾವಯಿತ್ವಾ ಸುರಾನ್ ಪಿತೄನ್ ।
ಅಹಿಂಸಾಪೂಜಾವಿಧಿನಾ ಯಜಂತೇ ಚಾನ್ವಹಂ ಹಿ ತೇ ॥ ೩೧ ॥

---

೨೪. ಆದುದರಿಂದಲೇ ಆ ಕರ್ಮಫಲವು ಕೂಡ ಅಕ್ಷಯವಾಗುತ್ತದೆ; ನರರ ಇಷ್ಟವೆಷ್ಟಿದೆಯೋ ಅದಕ್ಕಿಂತಲೂ ಅಧಿಕವಾಗುತ್ತದೆ. ಆ ಭಕ್ತರು ಅಷ್ಟಾವೃತ್ತಿಗಳಿಗಿಂತ ಶ್ರೇಷ್ಠವೆನಿಸಿರುವ ಭಗವಂತನ ನೆಲೆಯನ್ನೈದುತ್ತಾರೆ.

೨೫. ಆದುದರಿಂದ ವಿವೇಕಿಗಳಾದವರು ನಿವೃತ್ತಿಧರ್ಮವನ್ನನುಸರಿಸಿದವರೇ ಆಗಲಿ ಪ್ರವೃತ್ತಿ ಧರ್ಮವನ್ನನುಸರಿಸಿದವರೇ ಆಗಲಿ ಸದಾ ವಿಷ್ಣುಭಕ್ತಿಯಿಂದ ಕೂಡಿದವರಾಗಿ ಸಕಲ ಕ್ರಿಯೆಗಳನ್ನೂ ಮಾಡುತ್ತಾರೆ.

೨೬–೨೮. ಬ್ರಹ್ಮ, ಸ್ಥಾಣು (ಶಿವ), ಮನು, ದಕ್ಷ, ಭೃಗು, ಧರ್ಮ, ಯಮ, ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವೈಭ್ರಾಜ, ವಸಿಷ್ಠ, ವಿವಸ್ವಂತ (ಸೂರ್ಯ), ಸೋಮ (ಎಂದರೆ ಚಂದ್ರ), ಕಶ್ಯಪ, ಕರ್ದಮಾದಿಗಳು, ಪ್ರಜಾಪತಿಗಳು, ದೇವತೆಗಳು, ಸಮಸ್ತ ಋಷಿಗಳು, ಸರ್ವ ವರ್ಣಗಳೂ, ಹಾಗೆಯೇ ಸಮಸ್ತ ಆಶ್ರಮಗಳೂ ಪ್ರವೃತ್ತಿಧರ್ಮದಲ್ಲಿ ತೊಡಗಿ ಆ ಪರಮೇಶ್ವರನನ್ನೇ ಪೂಜಿಸುತ್ತಾರೆ.

೨೯–೩೧. ಸನ, ಸನತ್ಸುಜಾತ, ಸನಕ, ಸನಂದನ, ಸನತ್ಕುಮಾರ, ಕಪಿಲ, ಆರುಣಿ, ಸನಾತನ, ಋಭು, ಯತಿ, ಹಂಸ— ಇವರೇ ಮೊದಲಾದ ಮಹಾಮುನಿಗಳೆಲ್ಲರೂ ನೈಷ್ಠಿಕವ್ರತವನ್ನು ಧರಿಸಿ ನಿವೃತ್ತಿಧರ್ಮವನ್ನವಲಂಬಿಸಿ

ಯಥಾಧಿಕಾರಮೇತೇ ಹಿ ತೇನ ಯತ್ರ ನಿಯೋಜಿತಾಃ ।
ಪ್ರವೃತ್ತೇ ವಾ ನಿವೃತ್ತೇ ವಾ ಧರ್ಮೇ ತೇ ಪಾಲಯಂತಿ ತಂ ।
ತಸ್ಯ ದೇವಸ್ಯ ಮರ್ಯಾದಾಂ ನ ಕ್ರಾಮಂತ್ಯುಭಯೇಽಪಿ ತೇ ॥ ೩೨ ॥
ಚತುರ್ವರ್ಗೇ ತೇಷು ಯಸ್ಯ ಯದ್ಯದಿಷ್ಟತಮಂ ಭವೇತ್ ।
ತತ್ತತ್ಸಂಪೂರಯತ್ಯೇವ ಸರ್ವಶಕ್ತಿಪತಿಃ ಪ್ರಭುಃ ॥ ೩೩ ॥
ಭಕ್ತ್ಯಾ ಕೃತಸ್ಯಾಪ್ಯಲ್ಪಸ್ಯ ಭಗವಾನ್ಪುಣ್ಯಕರ್ಮಣಃ ।
ಪ್ರೀತೋ ದದಾತ್ಯೇವ ಫಲಂ ಮಹದಕ್ಷಯಮೀಪ್ಸಿತಂ ॥ ೩೪ ॥
ತೇಷು ತದ್ಭಕ್ತಿತೋ ಲೋಕೇ ಯೇ ತ್ವೇಕಾಂತಿತ್ವಮಾಸ್ಥಿತಾಃ ।
ವಾಸುದೇವಂ ವಿನಾನ್ಯತ್ರ ಸಂಕ್ಷೀಣಾಶೇಷವಾಸನಾಃ ॥ ೩೫ ॥
ದೇಹಾಂತೇ ತೇ ತು ಸಂಪ್ರಾಪ್ಯ ತಸ್ಯ ಧಾಮ ತಮಃಪರಂ ।
ದೇಹೈರಪ್ರಾಕೃತೈರೇವ ಪ್ರೇಮ್ಣಾ ಪರಿಚರಂತಿ ತಂ ॥ ೩೬ ॥
ಅನ್ಯೇ ತು ಭಕ್ತಾಃ ಕಾಲೇನ ತದುಪಾಸನದಾರ್ಢ್ಯತಃ ।
ವಾಸನಾನಾಂ ಕ್ಷಯೇ ಜಾತೇ ಯಾಂತ್ಯೇಕಾಂತಿಕವದ್ಧಿ ತಂ ॥ ೩೭ ॥

---

ದವರಾಗಿ ಆತನನ್ನೇ ಪೂಜಿಸುತ್ತಾರೆ. ಅವರು ದೇವತೆಗಳನ್ನೂ, ಪಿತೃಗಳನ್ನೂ ವಾಸುದೇವನ ಅಂಗವೆಂದೇ ಭಾವಿಸಿ ದಿನ ದಿನವೂ ಅಹಿಂಸಾವಿಧಿಯಿಂದ ಅವರನ್ನು ಪೂಜಿಸುತ್ತಾರೆ.

೩೨. ಪ್ರವೃತ್ತಿಧರ್ಮದಲ್ಲಿಯೋ, ನಿವೃತ್ತಿಧರ್ಮದಲ್ಲಿಯೋ ಎಲ್ಲಿಯೇ ಆಗಲಿ ಆ ವಾಸುದೇವನು ತಮ್ಮನ್ನು ಎಲ್ಲಿ ನಿಯೋಜಿಸಿರುವನೋ ಅಲ್ಲಿ ಅವರು ತಮ್ಮತಮ್ಮ ಅಧಿಕಾರಕ್ಕೆ ತಕ್ಕಂತೆ ಆ ಧರ್ಮವನ್ನು ಪಾಲಿಸುತ್ತಾರೆ. ಆ ಇಬ್ಬರೂ ಆ ದೇವನು ಕಲ್ಪಿಸಿರುವ ಮರ್ಯಾದೆ (ಎಲ್ಲೆ)ಯನ್ನು ಮೀರುವುದಿಲ್ಲವು.

೩೩. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವರ್ಗದಲ್ಲಿ ಅವರಲ್ಲಿ ಯಾರಿಗೆ ಯಾವಯಾವುದು ಇಷ್ಟತಮವಾಗಿರುವುದೋ ಅದನ್ನು ಸರ್ವಶಕ್ತಿಪತಿಯಾದ ಆ ಪ್ರಭುವು ಸಂಪೂರ್ಣಗೊಳಿಸುತ್ತಾನೆ.

೩೪. ಭಕ್ತಿಯಿಂದ ಮಾಡಿದ ಪುಣ್ಯಕರ್ಮವು ಅಲ್ಪವೇ ಆದರೂ ಅದಕ್ಕೆ ಭಗವಂತನು ಪ್ರೀತನಾಗಿ ಮಹತ್ತಾದ ಮತ್ತು ಅಕ್ಷಯವಾದ ಇಷ್ಟಾರ್ಥಗಳನ್ನು ಕೊಟ್ಟೇಕೊಡುತ್ತಾನೆ.

೩೫–೩೭. ಅವರಲ್ಲಿ ಯಾರು ಭಕ್ತಿಯಿಂದ ವಾಸುದೇವನಲ್ಲಿ ಹೊರತು ಲೋಕದಲ್ಲಿ ಬೇರೆಲ್ಲಿಯೂ ಯಾವ ವಾಸನೆಯನ್ನೂ ಇಟ್ಟುಕೊಳ್ಳದೆ ಏಕಾಂತಿತ್ವವನ್ನು ಅವಲಂಬಿಸಿರುವರೊ ಅವರು ಮಾತ್ರ ದೇಹವನ್ನು ತೊರೆದಬಳಿಕ ತಮಸ್ಸಿಗೆ ಹೊರಗಾಗಿರುವ ಆ ವಾಸುದೇವನ ಪರಂಧಾಮವನ್ನೇ ಸೇರಿ, ಅಪ್ರಾಕೃತ ಶರೀರಗಳನ್ನು ಪಡೆದು ಪ್ರೇಮದಿಂದ ಆ ವಾಸುದೇವನ ಪರಿಚರ್ಯೆ (ಸೇವೆ)ಯನ್ನೇ ಮಾಡಿಕೊಂಡಿರುತ್ತಾರೆ. ಉಳಿದ ಭಕ್ತರಾದರೋ ಕಾಲಕ್ರಮದಲ್ಲಿ ಅವನ

ಯೇನ ಕೇನಾಪಿ ಭಾವೇನ ತೇನ ಸಂಬಧ್ಯತೇ ತು ಯಃ ।
ಸಂಸೃತಿಂ ನ ಪ್ರಯಾತ್ಯೇವ ಸ ತು ಕ್ವಾಪ್ಯನ್ಯಜೀವವತ್ ॥ ೩೮ ॥
ಕರ್ಮಯೋಗಸ್ಯ ಸಂಸಿದ್ಧಿರ್ಜ್ಞಾನಯೋಗಸ್ಯ ಚೇಪ್ಸಿತಾ ।
ತಸ್ಯಾಶ್ರಯಾದೇವ ನೃಣಾಂ ನಿರ್ವಿಘ್ನಂ ಭವತಿ ದ್ರುತಂ ॥ ೩೯ ॥
ತಸ್ಮಾತ್ಸ ಏವ ಭಗವಾನ್ ಸರ್ವೈರಪಿ ಜನೈರಿಹ ।
ಸ್ವಾಭೀಷ್ಟಫಲಸಿದ್ಧ್ಯರ್ಥಂ ಪ್ರೀತ್ಯೋಪಾಸ್ಯೋ ಯಥಾವಿಧಿ ॥ ೪೦ ॥
ಬ್ರಹ್ಮೈಕ್ಯಮಾಪ್ತಾ ನಿರ್ವಿಘ್ನಾ ಅಪಿ ಬ್ರಹ್ಮಶಿವಾದಯಃ ।
ಶ್ರೀವಿಷ್ಣೋಃ ಕುರ್ವತೇ ಭಕ್ತಿಂ ಸಂತೀತ್ಥಂ ತನ್ಮಹಾಗುಣಾಃ ॥ ೪೧ ॥
ಇತಿ ಗುಹ್ಯಸಮುದ್ದೇಶಸ್ತವ ನಾರದ ಕೀರ್ತಿತಃ ।
ಅತಿಪ್ರೇಮ್ಣಾ ಹಿ ಸತತಂ ಮಯಿ ಭಕ್ತಿಮತೋಽಖಿಲಃ ॥ ೪೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಶ್ರೀವಾಸುದೇವಸರ್ವೋಪಾಸ್ಯತ್ವನಿರೂಪಣಂ" ನಾಮ ತೃತೀಯೋಽಧ್ಯಾಯಃ

---

ಉಪಾಸನೆಯ ಬಲದಿಂದ ವಾಸನೆಗಳ ಕ್ಷಯವುಂಟಾಗಲು ಆ ಬಳಿಕ ಏಕಾಂತ ಯೋಗಿಗಳಂತೆಯೇ ಅವನಲ್ಲಿಗೆ ಹೋಗಿ ಸೇರುತ್ತಾರೆ.

೩೮–೩೯. ಯಾವುದೇ ಭಾವದಿಂದಲಾದರೂ ಯಾವನು ಆ ವಾಸುದೇವನೊಡನೆ ಸಂಬಂಧವನ್ನುಂಟುಮಾಡಿಕೊಳ್ಳುವನೋ ಅವನು ಬೇರೆ ಜೀವರಹಾಗೆ ಎಲ್ಲಿಯೂ ಸಂಸಾರವನ್ನು ಸೇರುವುದೇ ಇಲ್ಲವು. ಕರ್ಮಯೋಗದ ಸಿದ್ಧಿಯೂ, ಜ್ಞಾನಯೋಗದ ಇಷ್ಟಾರ್ಥವೂ ಅವನ ಆಶ್ರಯದಿಂದಲೇ ಮಾನವರಿಗೆ ನಿರ್ವಿಘ್ನವಾಗಿ ಬೇಗ ಬೇಗನೆ ಉಂಟಾಗುತ್ತದೆ.

೪೦–೪೧. ಆದುದರಿಂದ ಆ ಭಗವಂತನನ್ನೇ ಸಮಸ್ತಜನರೂ ತಮ್ಮ ತಮ್ಮ ಇಷ್ಟಾರ್ಥಫಲಪ್ರಾಪ್ತಿಗಾಗಿ ಪ್ರೀತಿಯಿಂದ ಯಥಾವಿಧಿಯಾಗಿ ಉಪಾಸನೆ ಮಾಡಬೇಕು. ಬ್ರಹ್ಮೈಕ್ಯವನ್ನು ಪಡೆದವರಾದರೂ, ವಿಘ್ನವಿಲ್ಲದವರಾದರೂ ಸಹ ಬ್ರಹ್ಮ, ಶಿವ ಮೊದಲಾದವರೂ ಶ್ರೀಮಹಾವಿಷ್ಣುವಿನಲ್ಲಿ ಭಕ್ತಿಯನ್ನು ಮಾಡುತ್ತಾರೆ. ಆತನ ಮಹಾಗುಣಗಳು ಹೀಗಿವೆ.

೪೨. ಅಯ್ಯಾ ನಾರದನೇ! ಯಾವಾಗಲೂ ನನ್ನಲ್ಲಿ ಭಕ್ತಿಯುಳ್ಳವನಾದ ನಿನಗೆ ಅತಿ ಪ್ರೇಮದಿಂದ ಈ ಗೂಢವಿಷಯವೆಲ್ಲವನ್ನೂ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವಮಾಹಾತ್ಮ್ಯದಲ್ಲಿ "ಶ್ರೀವಾಸುದೇವ ಸರ್ವೋಪಾಸ್ಯತ್ವನಿರೂಪಣವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಶ್ವೇತದ್ವೀಪಮುಕ್ತವರ್ಣನಂ

ಸ್ಕಂದ ಉವಾಚ :—

ಸ ಏವಮುಕ್ತೋಽಽತ್ಮವಿದಾಂ ವರಿಷ್ಠೋ
ನಾರಾಯಣೇನೋತ್ತಮಪೂರುಷೇಣ ।
ಜಗಾದ ವಾಕ್ಯಂ ಜಗತಾಂ ಗರಿಷ್ಠಂ
ತಮಚ್ಯುತಂ ಲೋಕಹಿತಾಧಿವಾಸಂ ॥ ೧ ॥

ನಾರದ ಉವಾಚ :—

ಶ್ರುತಂ ಮಯಾ ದೇವ ಸಮಂ ತ್ವಯೋಕ್ತಂ
ಮನುಷ್ಯಾಕೃತಿಚ್ಛಾದಿತಭೂರಿಧಾಮ್ನಾ ।
ತವೈವ ಲೀಲಾ ಸಕಲೇಯಮೀಶ
ಸರ್ವೇಶ್ವರಸ್ಯೇತಿ ವಿದಾಮಿ ಚಿತ್ತೇ ॥ ೨ ॥
ತ್ವದ್ದರ್ಶನೇನೈವ ಹಿ ಪೂರ್ಣಕಾಮೋ
ಭವಾಮಿ ಭೂಮನ್ಸ್ವಹೃದೀಪ್ಸಿತೇನ ।
ತಥಾಪ್ಯಹಂ ತತ್ತವ ಪೂರ್ವರೂಪಂ
ಪ್ರಭೋ ದಿದೃಕ್ಷಾಮಿ ಹಿ ಕೌತುಕಂ ಮೇ ॥ ೩ ॥

---

## ಕನ್ನಡದ ಅನುವಾದ

### ಶ್ವೇತದ್ವೀಪಮುಕ್ತವರ್ಣನ

೧. ಸ್ಕಂದನು ಹೇಳುತ್ತಾನೆ:— ಪುರುಷೋತ್ತಮನಾದ ಶ್ರೀಮನ್ನಾರಾಯಣನು ಈ ರೀತಿ ಹೇಳಲು ಆತ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಆ ನಾರದನು ಲೋಕಹಿತಕ್ಕೆ ನೆಲೆಯಾದವನೂ, ಜಗತ್ತಿಗೆಲ್ಲ ಗುರುವೂ ಆದ ಆ ಅಚ್ಯುತನನ್ನು ಕುರಿತು ಈ ರೀತಿ ಕೇಳಿದನು.

೨. ನಾರದನು ಕೇಳುತ್ತಾನೆ:— "ದೇವಾ! ಮನುಷ್ಯಾಕೃತಿಯಿಂದ ಒಳಗೇ ಅಡಗಿರುವ ಪರಮೈಶ್ವರ್ಯವುಳ್ಳ ನೀನು ಹೇಳಿದುದನ್ನೆಲ್ಲ ಕೇಳಿದೆನು. ಪರಮೇಶ್ವರಾ! ದೃಗ್ಗೋಚರವಾದ ಈ ಸಕಲವೂ ಸರ್ವೇಶ್ವರನಾದ ನಿನ್ನ ಲೀಲೆಯೇ ಸರಿ ಎಂದು ನಾನು ಮನಸ್ಸಿನಲ್ಲಿಯೆ ಭಾವಿಸಿಕೊಳ್ಳುತ್ತಿದ್ದೇನೆ.

೩. ಎಲೈ ಮಹಾತ್ಮನೇ! ನಿನ್ನ ದರ್ಶನದಿಂದಲೇ ನನ್ನ ಹೃದಯದ ಬಯಕೆಗಳೆಲ್ಲವೂ ಈಡೇರಿ ಇದೀಗ ನಾನು ಪೂರ್ಣಕಾಮನಾದೆ. ಎಲೈ ಪ್ರಭುವೇ! ಆದರೂ ನಿನ್ನ ಮೊದಲಿನ ಆ ರೂಪವನ್ನೇ ನೋಡಬಯಸುತ್ತೇನೆ. ಇದು ನನಗೆ ಬಹು ಕುತೂಹಲವಾಗಿದೆ" ಎಂದನು.

ಶ್ರೀ ನಾರಾಯಣ ಉವಾಚ :—

ನ ತತ್ಸ್ವರೂಪಂ ಮಮ ದಾನಯಜ್ಞ
ಯೋಗೈಶ್ಚ ವೇದೈಸ್ತಪಸಾಪಿ ದೃಶ್ಯಂ ।
ಏಕಾಂತಿಕೈರ್ಭಕ್ತವರೈಸ್ತು ಭಕ್ತ್ಯಾ
ಹ್ಯನನ್ಯಯಾ ನಾರದ ದೃಶ್ಯತೇ ಹಿ ತತ್ ॥ ೪ ॥
ಭಕ್ತಿಸ್ತವ ತ್ವಸ್ತಿ ಮಯಿ ಹ್ಯನನ್ಯಾ
ಜ್ಞಾನಂ ಚ ವೈರಾಗ್ಯಯುತಂ ಸ್ವಧರ್ಮಃ ।
ಅತಶ್ಚ ತದ್ದರ್ಶನಮಾಪ್ಸ್ಯಸಿ ತ್ವಂ
ಸುರೇಶ್ವರಾದ್ಯೈರಪಿ ಯದ್ದುರಾಪಂ ॥ ೫ ॥
ತ್ವದೀಯಭಕ್ತ್ಯಾಽತಿತರಾಂ ಪ್ರಸನ್ನ
ಸ್ತ್ವಾಽಜ್ಞಾಪಯಾಮ್ಯದ್ಯ ತದೀಕ್ಷಣಾಯ ।
ಸಿತಾಂತರೀಪಂ ವ್ರಜ ತತ್ರ ತೇಽಯಂ
ಮನೋರಥಃ ಸೇತ್ಸ್ಯತಿ ವಿಪ್ರವರ್ಯ ॥ ೬ ॥

ಸ್ಕಂದ ಉವಾಚ :—

ಶ್ರುತ್ವೇತಿ ವಾಚಂ ಪರಮೇಷ್ಠಿಪುತ್ರಃ
ಸೋಽಪ್ಯರ್ಚಯಿತ್ವಾ ತಮೃಷಿಂ ಪುರಾಣಂ ।

---

೪. ಶ್ರೀನಾರಾಯಣನು ಹೇಳುತ್ತಾನೆ :— "ದಾನದಿಂದಾಗಲಿ, ಯಜ್ಞ ಯೋಗಗಳಿಂದಾಗಲಿ, ವೇದಗಳಿಂದಾಗಲಿ, ತಪಸ್ಸಿನಿಂದಲೇ ಆಗಲಿ ಆ ನನ್ನ ಸ್ವರೂಪವನ್ನು ಕಾಣಲಾಗುವುದಿಲ್ಲ. ಎಲೈ ನಾರದನೇ! ಏಕಾಂತರಾದ ಭಕ್ತ ಶ್ರೇಷ್ಠರಿಗೆ ಮಾತ್ರ ಅನನ್ಯವಾದ ಭಕ್ತಿಯಿಂದ ಅದನ್ನು ನೋಡಲು ಸಾಧ್ಯವಾಗುತ್ತದೆ.

೫. ನಿನಗೆ ನನ್ನಲ್ಲಿ ಅನನ್ಯವಾದ ಭಕ್ತಿಯಿದೆ; ವೈರಾಗ್ಯದಿಂದ ಕೂಡಿದ ಜ್ಞಾನವು ನಿನಗೆ ಸ್ವಧರ್ಮವಾಗಿದೆ. ಆದುದರಿಂದ ಸುರೇಶ್ವರಾದಿಗಳಿಗೆ ಕೂಡ ಪಡೆಯಲು ಬಹುಕಷ್ಟವಾದ ಆ ಸ್ವರೂಪದ ದರ್ಶನವನ್ನು ನೀನು ಪಡೆಯುತ್ತೀಯೆ.

೬. ನಿನ್ನ ಭಕ್ತಿಯಿಂದ ನಾನು ಸುಪ್ರಸನ್ನನಾಗಿದ್ದೇನೆ. ಆ ಸ್ವರೂಪವನ್ನು ದರ್ಶನಮಾಡುವುದಕ್ಕಾಗಿ ನಿನಗೀಗ ಅಪ್ಪಣೆಕೊಡುತ್ತೇನೆ. ಶ್ವೇತದ್ವೀಪಕ್ಕೆ ಹೋಗು. ಓ ವಿಪ್ರವರ್ಯಾ! ಅಲ್ಲಿ ನಿನ್ನ ಈ ಮನೋರಥವು ಸಿದ್ಧಿಯಾಗುತ್ತದೆ."

೭. ಸ್ಕಂದನು ಹೇಳುತ್ತಾನೆ:— ಬ್ರಹ್ಮಪುತ್ರನಾದ ನಾರದನು ಈ ಮಾತನ್ನು ಕೇಳಿ ಆ ಪುರಾಣಋಷಿಯನ್ನು ಪೂಜಿಸಿದನು. ಬಳಿಕ ಉತ್ತಮ

ಖಮುತ್ಪಪಾತೋತ್ತಮಯೋಗಯುಕ್ತ
ಸ್ತತೋಽಧಿಮೇರೌ ಸಹಸಾ ನಿಪೇತೇ ॥ ೭ ॥
ತಸ್ಯಾವತಸ್ಥೇ ಚ ಮುನಿರ್ಮುಹೂರ್ತ
ಮೇಕಂ ತಮಾಸಾದ್ಯ ಗಿರೇಃ ಸ ಶೃಂಗೇ ।
ಆಲೋಕಯನ್ನುತ್ತರಪಶ್ಚಿಮೇನ
ದದರ್ಶ ಚಾಪ್ಯದ್ಭುತಮಂತರೀಪಂ ॥ ೮ ॥
ಕ್ಷೀರೋದಧೇರುತ್ತರತೋ ಹಿ ದ್ವೀಪಃ
ಶ್ವೇತಃ ಸ ನಾಮ್ನಾ ಪ್ರಥಿತೋ ವಿಶಾಲಃ ।
ದೇದೀಪ್ಯಮಾನೋ ವಿತತೇನ ಸರ್ವತೋ
ಜ್ಯೋತಿಶ್ಚಯೇನಾತಿಸಿತೇನ ನಿತ್ಯಂ ॥ ೯ ॥
ಆಮ್ರೈರನೇಕೈರಸನೈರಶೋಕೈ
ರಾಮ್ರಾತಕೈರ್ನಿಂಬಕದಂಬನೀಪೈಃ ।
ಬಿಲ್ವೈರ್ಮಧೂಕೈಃ ಸುರದಾರುಭಿಶ್ಚ
ಪ್ಲಕ್ಷೈರ್ವಟೈಃ ಕಿಂಶುಕಚಂದನೈಶ್ಚ ॥ ೧೦ ॥
ಸರ್ಜೈಶ್ಚ ಶಾಲೈಃ ಪನಸೈಸ್ತಮಾಲೈ
ರ್ಮುನಿದ್ರುಮೈಃ ಕೇತಕಚಮ್ಪಕೈಶ್ಚ ।
ಕುಂದೈಶ್ಚ ಜಾತೀಸುರಮಲ್ಲಿಕಾಭಿ
ರ್ದ್ರುಮೈರ್ವೃತಃ ಪುಷ್ಪಫಲಾವನಮ್ರೈಃ ॥ ೧೧ ॥

---

ಯೋಗಯುಕ್ತನಾದ ಆತನು ಆಕಾಶವನ್ನು ಸಾರಿ ಮೇರುಪರ್ವತದಲ್ಲಿ ತಟ್ಟನೆ ಕೆಳಗಿಳಿದನು.

೮. ಆ ಪರ್ವತದ ಶಿಖರದಲ್ಲಿ ಆ ಮುನಿಯು ಏಕಾಂತವನ್ನೈದಿ ಮುಹೂರ್ತಕಾಲ ನಿಂತನು. ನಿಂತು ನೋಡುತ್ತಿರುವಾಗ ಅದರ ಪಶ್ಚಿಮೋತ್ತರ ದಿಕ್ಕಿನಲ್ಲಿ ಅತ್ಯದ್ಭುತವಾದ ದ್ವೀಪವೊಂದನ್ನು ಕಂಡನು.

೯. ಕ್ಷೀರಸಮುದ್ರದ ಉತ್ತರದಲ್ಲಿ ಆ ದ್ವೀಪವಿದ್ದಿತು. ಅದು ಶ್ವೇತ ವೆಂಬ ಹೆಸರಿನಿಂದ ಪ್ರಸಿದ್ಧವಾಗಿದ್ದಿತು; ವಿಶಾಲವಾಗಿದ್ದಿತು. ಬಿಳಿಯದಾದ ಜ್ಯೋತಿಸ್ಸಮೂಹದಿಂದ ಸುತ್ತಮುತ್ತಲೂ ಅತ್ಯಂತ ದೇದೀಪ್ಯಮಾನವಾಗಿ ಬೆಳಗುತ್ತಿದ್ದಿತು.

೧೦–೧೧. ಮಾವು, ಅಸನ, ಅಶೋಕ, ಆಮ್ರಾತಕ, ನಿಂಬ, ಕದಂಬ, ನೀಪ, ಬಿಲ್ವ, ಮಧೂಕ, ದೇವದಾರು, ಪ್ಲಕ್ಷ, ವಟ, ಕಿಂಶುಕ, ಚಂದನ, ಸರ್ಜ, ಸಾಲ, ಹಲಸು, ಹೊಂಗೆ, ಕೇದಗೆ, ಸಂಪಿಗೆ ಮುಂತಾದ ಫಲಪುಷ್ಪ ವೃಕ್ಷಗಳಿಂದಲೂ ಕುಂದ, ಜಾತಿ, ಸುರಮಲ್ಲಿಕೆ— ಈ ಮೊದಲಾದ ಪುಷ್ಪಲತಾ

ಕಲ್ಪದ್ರುಮಾಣಾಂ ಬಹುಭಿಶ್ಚ ವೃಂದೈಃ
ಸುವರ್ಣರಂಭಾಕ್ರಮುಕೈಃ ಸುರಮ್ಯೈಃ ।
ಮಹದ್ಭಿರುದ್ಯಾನವರೈರನೇಕೈಃ
ಸರಿತ್ಸರೋಭಿರ್ವಿಕಚಾಂಬುಜೈಶ್ಚ ॥ ೧೨ ॥
ಹಂಸಾದಿಭಿಃ ಪಕ್ಷಿವರೈಃ ಸುಶಬ್ದೈ
ರ್ಗಣೈರ್ಮೃಗಾಣಾಂ ರುಚಿರೈಶ್ಚಲದ್ಭಿಃ ।
ಸರ್ವೇಽಪಿ ಜೀವಾಃ ಕಿಲ ಯತ್ರ ಮುಕ್ತಾ
ವಸಂತಿ ಚ ಸ್ಥಾವರಜಂಗಮಾಶ್ಚ ।
ತಂ ವೀಕ್ಷಮಾಣೇನ ಚ ತೇನ ದೃಷ್ಟಾ
ಭಕ್ತೋತ್ತಮಾಃ ಶ್ರೀ ಪುರುಷೋತ್ತಮಸ್ಯ ॥ ೧೩ ॥
ಅತೀಂದ್ರಿಯಾ ನಿರ್ಗತಸರ್ವಪಾಪಾ
ನಿಷ್ಯಂದಹೀನಾಶ್ಚ ಸುಗಂಧಿನಶ್ಚ ।
ದ್ವಿಬಾಹವಃ ಕೇಽಪಿ ಚತುರ್ಭುಜಾಶ್ಚ
ಶ್ವೇತಾಶ್ಚ ಕೇಚಿನ್ನವನೀರದಾಭಾಃ ॥ ೧೪ ॥

---

ವಿತಾನಗಳಿಂದಲೂ, ಹೂವು ಹಣ್ಣುಗಳಿಂದ ಜೋಲುಬೀಳುತ್ತಿರುವ ಇತರ ವೃಕ್ಷಗಳಿಂದಲೂ ಆ ದ್ವೀಪವು ಆವರಿಸಲ್ಪಟ್ಟು ಕಂಗೊಳಿಸುತ್ತಿದ್ದಿತು.

೧೨–೧೩. ಆ ಶ್ವೇತದ್ವೀಪದಲ್ಲಿ ಕಲ್ಪವೃಕ್ಷಗಳ ಅನೇಕ ತೋಪುಗಳು ತುಂಬಿ ಕಂಗೊಳಿಸುತ್ತಿದ್ದುವಲ್ಲದೆ, ಅದು ಚಿನ್ನದ ಬಾಳೆ, ಅಡಕೆ ಮರಗಳಿಂದೊಪ್ಪಿ ಮೆರೆಯುತ್ತಿದ್ದಿತು. ಅನೇಕ ದೊಡ್ಡ ದೊಡ್ಡ ರಮ್ಯೋದ್ಯಾನಗಳಿಂದಲೂ, ಚೆನ್ನಾಗಿ ಅರಳಿದ ತಾವರೆಗಳಿಂದ ಕಂಗೊಳಿಸುವ ನದಿ ಮತ್ತು ಸರೋವರ ಗಳಿಂದಲೂ ಮನೋಹರವಾಗಿದ್ದಿತು. ಹಂಸವೇ ಮೊದಲಾದ ಪಕ್ಷಿಶ್ರೇಷ್ಠ ಗಳಿಂದಲೂ ಅಲ್ಲಲ್ಲೆ ಓಡಾಡುತ್ತಿದ್ದ ಮನೋಹರವಾದ ಮೃಗಸಮೂಹ ಗಳಿಂದಲೂ, ಅವುಗಳ ಇಂಪಾದ ಧ್ವನಿಗಳಿಂದಲೂ ಆ ಶ್ವೇತದ್ವೀಪವು ಸೊಬ ಗೆರಚುತ್ತಿದ್ದಿತು. ಅಲ್ಲಿ ಸ್ಥಾವರಜಂಗಮ ಜೀವಿಗಳೆಲ್ಲವೂ ಮುಕ್ತಿಯನ್ನು ಪಡೆದು ವಾಸಮಾಡುತ್ತಿದ್ದುವು. ಅಂತಹ ದ್ವೀಪವನ್ನು ನೋಡುತ್ತಿರುವಂತೆಯೆ ಆ ನಾರದ ಮುನಿಗೆ ಶ್ರೀಪುರುಷೋತ್ತಮನ ಭಕ್ತೋತ್ತಮರು ದೃಷ್ಟಿಗೋಚರರಾದರು.

೧೪. ಅವರೆಲ್ಲರೂ ಅತೀಂದ್ರಿಯ ಶಕ್ತಿಯುಳ್ಳವರು; ಸಮಸ್ತಪಾಪಗಳೂ ಪರಿಹಾರವಾಗಿಹೋಗಿರುವವರು; ಬೆವರು ಮೊದಲಾದ ಸ್ರಾವವಿಲ್ಲದವರು; ಸುಗಂಧವನ್ನು ಬೀರುತ್ತಿರುವವರು. ಅವರಲ್ಲಿ ಕೆಲವರು ಎರಡು ತೋಳು ಗಳುಳ್ಳವರು; ಕೆಲವರು ಚತುರ್ಭುಜರು. ಕೆಲವರು ಬೆಳ್ಳಗೆ ಬೆಳಗುವವರು; ಮತ್ತೆ ಕೆಲವರು ಹೊಸ ಮುಗಿಲಿನಂತೆ ಹೊಳೆಯುತ್ತಿರುವವರು.

ಪದ್ಮಚ್ಛದಾಕ್ಷಾಃ ಸಮಮಾನಗಾತ್ರಾಃ
ಸುರೂಪದಿವ್ಯಾವಯವಾಃ ಸುಸಾರಾಃ ।
ವಿಕೀರ್ಣಕೇಶಾಶ್ಚ ಸದಾ ಕಿಶೋರಾಃ
ಸದ್ಭಿಶ್ಚ ಚಿಹ್ನೈರ್ನಿಖಿಲೈರುಪೇತಾಃ ॥ ೧೫ ॥
ಸರೋಜರೇಖಾಂಕಿತಪಾಣಿಪಾದಾಃ
ಷಡೂರ್ಮಿಹೀನಾಃ ಮಿಹಿರಾತಿತೇಜಸಃ ।
ಸಿತಾಂಶುಕಾ ಧ್ಯಾನಪರಾಶ್ಚ ಸೌಮ್ಯಾಃ
ಕಾಲೋಽಪಿ ಯೇಭ್ಯೋ ಭಯಮೇತಿ ನಿತ್ಯಂ ॥ ೧೬ ॥

ಸಾವರ್ಣಿರುವಾಚ :—

ಅತೀಂದ್ರಿಯಾ ನಿರಾತಂಕಾ ಅನಿಷ್ಯಂದಾಃ ಸುಗಂಧಿನಃ ।
ತೇ ತೇ ನರಾಃ ಕಥಂ ಜಾತಾಃ ತಾದೃಶಾಃ ಕಾ ಚ ತದ್ಗತಿಃ ॥ ೧೭ ॥
ಶ್ವೇತದ್ವೀಪಃ ಪಯೋಽಂಭೋಧೌ ವರ್ತತೇ ಹಿ ಧರಾತಲೇ ।
ತದ್ವಾಸಿನಾಮಪಿ ಕಥಂ ಪ್ರೋಕ್ತಾಽತೀಂದ್ರಿಯತಾ ತ್ವಯಾ ॥ ೧೮ ॥
ಯೇ ಬ್ರಹ್ಮಣ್ಯಕ್ಷರೇ ಧಾಮ್ನಿ ಸಚ್ಚಿದಾನಂದರೂಪಿಣಿ ।
ಸ್ಥಿತಾಃ ಸ್ಯುಶ್ಚಿನ್ಮಯಾ ಮುಕ್ತಾಸ್ತೇ ತಥಾ ಸ್ಯುರ್ನಹೀತರೇ ॥ ೧೯ ॥

---

೧೫. ತಾವರೆಯ ಎಸಳಿನಂತೆ ಕಂಗೊಳಿಸುತ್ತಿರುವ ಕಣ್ಣುಳ್ಳವರು; ಸಮವಾದ ಅಳತೆಯುಳ್ಳ ಶರೀರದಿಂದ ಕೂಡಿದವರು; ಮಹಾರೂಪವಂತರು; ದಿವ್ಯವಾದ ಅವಯವಗಳುಳ್ಳವರು; ಮಹಾಬಲಶಾಲಿಗಳು; ಚೆದರಿ ಹಾರಾಡುವ ತಲೆಗೂದಲುಗಳುಳ್ಳವರು; ಯಾವಾಗಲೂ ಕಿಶೋರಾವಸ್ಥೆಯಲ್ಲಿಯೆ (ಇಪ್ಪತ್ತೈದು ವರ್ಷದವರಾಗಿಯೆ) ಇರುವವರು; ಸಮಸ್ತ ಶುಭಚಿಹ್ನೆಗಳಿಂದೊಪ್ಪುತ್ತಿರುವರು.

೧೬. ಅವರ ಕೈಕಾಲುಗಳಲ್ಲಿ ಪದ್ಮರೇಖೆಗಳು ಶೋಭಿಸುತ್ತಿದ್ದುವು. ಎಲ್ಲರೂ ಶೋಕ–ಮೋಹ, ಮುಪ್ಪು–ಸಾವು, ಹಸಿವು–ಬಾಯಾರಿಕೆ, ಎಂಬ ಆರು ಬಗೆಯ ವಿಕಾರಗಳೂ ಇಲ್ಲದವರು; ಸೂರ್ಯನಂತೆ ಅಪಾರವಾದ ತೇಜಸ್ಸುಳ್ಳವರು; ಬಿಳಿಯ ಬಟ್ಟೆಗಳನ್ನು ಧರಿಸಿ ಧ್ಯಾನಪರರಾಗಿ ಎಲ್ಲರೂ ಸೌಮ್ಯರಾಗಿದ್ದರು. ಅವರನ್ನು ಕಂಡರೆ ಯಮನೂ ಅಂಜುತ್ತಿದ್ದನು.

೧೭–೧೮. ಸಾವರ್ಣಿಯು ಕೇಳುತ್ತಾನೆ:—"ಅತೀಂದ್ರಿಯರೂ, ಆತಂಕರಹಿತರೂ, ಬೆವರು ಮುಂತಾದ ಸ್ರಾವಗಳಿಲ್ಲದವರೂ, ಸುಗಂಧವನ್ನು ಬೀರುವವರೂ ಆದ ಆ ಮಾನವರು ಯಾರು? ಅಂತಹವರು ಹುಟ್ಟಿದುದೆಂತು? ಅವರ ಅಂತಹ ಸ್ಥಿತಿಗೆ ಕಾರಣವೇನು? ಶ್ವೇತದ್ವೀಪವು ಕ್ಷೀರಸಮುದ್ರದ ಮಧ್ಯಭೂಮಿಯಲ್ಲಿ ನೆಲೆಗೊಂಡಿರುವುದಷ್ಟೆ? ಅಲ್ಲಿ ವಾಸಮಾಡುವವರಿಗೂ ಕೂಡ ಅತೀಂದ್ರಿಯತ್ವವಿರುವುದೆಂದು ನೀನು ಅಪ್ಪಣೆಕೊಡಿಸಿದುದೆಂತು?

೧೯. ಯಾರು ಸಚ್ಚಿದಾನಂದರೂಪವೂ, ಅಕ್ಷಯಧಾಮವೂ ಆದ ಬ್ರಹ್ಮ

ಏತಂ ಮೇ ಸಂಶಯಂ ಛಿಂಧಿ ಪರಂ ಕೌತೂಹಲಂ ಹಿ ಮೇ ।
ತ್ವಂ ಹಿ ಸರ್ವಕಥಾಭಿಜ್ಞಸ್ತತಸ್ತ್ವಾಮಾಶ್ರಿತೋಽಸ್ಮ್ಯಹಂ ॥ ೨೦ ॥
ಸ್ಕಂದ ಉವಾಚ :—
ಏಕಾಂತೋಪಾಸನೇ ನೈವ ಪ್ರಾಕ್ಕಲ್ಪೇಷು ರಮಾಪತೇಃ ।
ಯೇ ಬ್ರಹ್ಮಭಾವಂ ಸಂಪ್ರಾಪ್ತಾ ಅಜರಾಮರತಾಂ ಗತಾಃ ॥ ೨೧ ॥
ಅಕ್ಷರಾಖ್ಯಾಃ ಪುಮಾಂಸಸ್ತೇ ಶ್ವೇತದ್ವೀಪೇಽತ್ರ ಧಾಮನಿ ।
ಸೇವಿತುಂ ವಾಸುದೇವಂ ತಂ ಸ್ಥಿತಾ ದೇವರ್ಷಿಣೇಕ್ಷಿತಾಃ ॥ ೨೨ ॥
ಪ್ರಾಪ್ತೇ ಪ್ರಲಯಕಾಲೇ ತು ಪುನಶ್ಚಾಕ್ಷರಧಾಮನಿ ।
ಸ್ಥಾಸ್ಯಂತಿ ತೇ ಸ್ವತಂತ್ರಾಶ್ಚ ಕಾಲಮಾಯಾಭಯೋಜ್ಝಿತಾಃ ॥ ೨೩ ॥
ಅತ್ರಾಪಿ ಪುರುಷಾ ಯೇ ತು ಮಾಯಯಾ ಜಾತಾ ಅತಃ ಕ್ಷರಾಃ ।
ತೇಽಪಿ ಸದ್ಭಿಃ ಸಾಧನೈರ್ವೈ ಜಾಯಂತೇ ತಾದೃಶಾಃ ಕಿಲ ॥ ೨೪ ॥
ಅಹಿಂಸಯಾ ಚ ತಪಸಾ ಸ್ವಧರ್ಮೇಣ ವಿರಾಗತಃ ।
ವಾಸುದೇವಸ್ಯ ಮಾಹಾತ್ಮ್ಯಜ್ಞಾನೇನೈವಾತ್ಮನಿಷ್ಠಯಾ ॥ ೨೫ ॥

---

ವಸ್ತುವಿನಲ್ಲಿ ನೆಲಸಿ, ಚಿನ್ಮಯರೂ, ಮುಕ್ತರೂ ಆಗಿರುವರೋ ಅವರು ಮಾತ್ರ ಹಾಗಿರುತ್ತಾರೆ. ಅವರ ಹೊರತು ಬೇರೆಯವರು ಹಾಗಿರುವುದಿಲ್ಲವಷ್ಟೆ!

೨೦. ಎಲೈ ಮುನಿಯೇ! ನನ್ನ ಈ ಸಂಶಯವನ್ನು ಪರಿಹರಿಸಬೇಕು. ಇದನ್ನು ಕೇಳಲು ನನಗೆ ತುಂಬ ಕುತೂಹಲವಾಗಿದೆ. ನೀವು ಎಲ್ಲ ವೃತ್ತಾಂತಗಳನ್ನೂ ಚೆನ್ನಾಗಿ ಬಲ್ಲವರು. ಆದುದರಿಂದ ನಿಮ್ಮನ್ನು ಆಶ್ರಯಿಸಿದ್ದೇನೆ'' ಅಪ್ಪಣೆಯಾಗಬೇಕು.

೨೧–೨೨. ಸ್ಕಂದನು ಹೇಳುತ್ತಾನೆ:—ಎಲೈ ಸಾವರ್ಣಿಯೆ! ಪೂರ್ವಕಲ್ಪಗಳಲ್ಲಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಏಕಾಂತೋಪಾಸನೆಯಿಂದಲೇ ಬ್ರಹ್ಮಭಾವವನ್ನೈದಿ ಅಜರಾಮರತೆಯನ್ನು ಪಡೆದವರೂ, ಅಕ್ಷರರೆನಿಸಿದವರೂ ಆದ ಪುರುಷರು ಶ್ವೇತದ್ವೀಪವೆಂಬ ಈ ಪ್ರದೇಶದಲ್ಲಿ ವಾಸುದೇವನನ್ನು ಸೇವಿಸಲೋಸುಗ ನಿಂತರು. ಅವರನ್ನೇ ದೇವರ್ಷಿಯಾದ ನಾರದನು ಕಂಡುದು.

೨೩–೨೪. ಪ್ರಳಯಕಾಲವು ಬಂದಾಗ ಅವರು ಅಕ್ಷರಧಾಮದಲ್ಲಿ ಪುನಃ ನೆಲಸುತ್ತಾರೆ. ಅವರು ಸ್ವತಂತ್ರರು; ಕಾಲ ಮತ್ತು ಮಾಯೆಗಳ ಭಯವಿಲ್ಲದವರು. ಇಲ್ಲಿಯೂ ಯಾವ ಪುರುಷರು ಮಾಯೆಯ ತೊಡಕಿಗೆ ಸಿಕ್ಕಿ ಕ್ಷರ (ನಶ್ವರ)ರಾಗಿರುವರೋ ಅವರು ಕೂಡ ಒಳ್ಳೆಯ ಸಾಧನೆಗಳಿಂದ ಅವರಂತೆಯೇ ಅಕ್ಷರರಾಗುತ್ತಾರೆ.

೨೫–೨೭. ಎಲೈ ಮುನಿಶ್ರೇಷ್ಠನೇ! ಅಹಿಂಸೆ, ತಪಸ್ಸು, ಸ್ವಧರ್ಮಾಚರಣೆ, ವೈರಾಗ್ಯ, ವಾಸುದೇವನ ಮಾಹಾತ್ಮೆಯನ್ನು ತಿಳಿದುಕೊಳ್ಳುವುದು,

ಭಕ್ತ್ಯಾ ಪರಮಯಾ ನಿತ್ಯಂ ಪ್ರಸಂಗೇನ ಮಹಾತ್ಮನಾಂ ।
ಹರಿಸೇವಾವಿಹೀನಾನಾಂ ಮುಕ್ತಾನಾಮಪ್ಯನಿಚ್ಛಯಾ ॥ ೨೬ ॥
ಸಿದ್ಧೀನಾಮಣಿಮಾದೀನಾಂ ಸರ್ವಾಸಾಂ ಚಾಪ್ಯಕಾಂಕ್ಷಯಾ ।
ಅನ್ಯೋನ್ಯಂ ಶ್ರುತಿಕೀರ್ತಿಭ್ಯಾಂ ಶ್ರೀಹರೇರ್ಜನ್ಮಕರ್ಮಣಾಂ ।
ಭವಂತಿ ತಾದೃಶಾ ನೂನಂ ಪುರುಷಾ ಮುನಿಸತ್ತಮ ॥ ೨೭ ॥
ಜಗತ್ಸರ್ಗೇ ಜಾಯಮಾನೇಽಪ್ಯೇತೇ ಕಾಲವಶಾತ್ಕ್ವಚಿತ್ ।
ನ ಜಾಯಂತೇ ಸ್ವತಂತ್ರತ್ವಾನ್ನ ನಶ್ಯಂತಿ ಲಯೇಽನ್ಯವತ್ ॥ ೨೮ ॥
ಅತ್ರ ತೇ ಕಥಯಿಷ್ಯಾಮಿ ಕಥಾಂ ಪೌರಾಣಿಕೀಂ ಮುನೇ ।
ಯಥಾತ್ರತ್ಯೋಽಪಿ ಮನುಜಸ್ತಥಾಭಾವಮುಪೇಯಿವಾನ್ ॥ ೨೯ ॥
ವಿಸ್ತೀರ್ಣೈಷಾ ಕಥಾ ಬ್ರಹ್ಮನ್ ಶ್ರುತಾ ಮೇ ಪಿತೃಸನ್ನಿಧೌ ।
ಸೈಷಾದ್ಯ ತವ ವಕ್ತವ್ಯಾ ಕಥಾಸಾರೋ ಹಿ ಸ ಸ್ಮೃತಃ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಶ್ವೇತದ್ವೀಪಮುಕ್ತವರ್ಣನಂ" ನಾಮ ಚತುರ್ಥೋಽಧ್ಯಾಯಃ

---

ಆತ್ಮನಿಷ್ಠೆ, ಪರಮಭಕ್ತಿ, ನಿತ್ಯವೂ ಮಹಾತ್ಮರ ಸಂಗವನ್ನು ಮಾಡುವುದು, ಹರಿಸೇವೆಯಿಲ್ಲದಿರುವ ಮುಕ್ತಿಯಲ್ಲಿ ಕೂಡ ಇಚ್ಛೆಯಿಲ್ಲದಿರುವುದು, ಅಣಿಮಾದಿ ಸಿದ್ಧಿಗಳೆಲ್ಲವುಗಳಲ್ಲಿಯೂ ಸ್ವಲ್ಪವೂ ಬಯಕೆಯಿಲ್ಲದಿರುವುದು, ಶ್ರೀಹರಿಯ ಜನ್ಮಕರ್ಮಗಳನ್ನು ನಿರಂತರವೂ ಕೇಳುತ್ತಿರುವುದು — ಇವುಗಳಿಂದ ಜನರು ನಿಜವಾಗಿಯೂ ಆ ಶ್ವೇತದ್ವೀಪನಿವಾಸಿಗಳಿಗೆ ಸಮಾನರಾಗುತ್ತಾರೆ.

೨೮. ಕಾಲವಶದಿಂದ ಜಗತ್ತು ಸೃಷ್ಟಿಯಾಗುವಾಗ ಹುಟ್ಟುವವರಾದರೂ ಇವರು ಸ್ವತಂತ್ರರಾದುದರಿಂದ ಆಗಲೂ ಒಮ್ಮೊಮ್ಮೆ ಹುಟ್ಟುವುದಿಲ್ಲವು. ಪ್ರಳಯಕಾಲದಲ್ಲಿ ಬೇರೆಯವರಂತೆ ನಾಶವಾಗುವುದೂ ಇಲ್ಲವು.

೨೯. ಎಲೈ ಮುನಿಯೇ! ಇಲ್ಲಿನ ಮನುಷ್ಯರೂ ಕೂಡ ಆ ಬಗೆಯ ಭಾವವನ್ನು ಹೇಗೆ ಪಡೆದರೆಂಬ ಈ ವಿಷಯದಲ್ಲಿ ಹಿಂದಿನ ಒಂದು ಕಥೆಯನ್ನು ನಿನಗೆ ಹೇಳುತ್ತೇನೆ, ಕೇಳು.

೩೦. ಅಯ್ಯಾ ಬ್ರಾಹ್ಮಣನೇ! ಈ ಕಥೆಯು ಬಹು ದೊಡ್ಡದು. ನಮ್ಮ ತಂದೆಯಾದ ಪರಶಿವನ ಸನ್ನಿಧಿಯಲ್ಲಿ ನಾನಿದನ್ನು ಕೇಳಿದೆನು. ಅದನ್ನು ಈಗ ನಿನಗೆ ಹೇಳುತ್ತೇನೆ. ಅದು ಕೇವಲ ಕಥಾಸಾರವೆನ್ನಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವಮಾಹಾತ್ಮ್ಯದಲ್ಲಿ "ಶ್ವೇತದ್ವೀಪಮುಕ್ತವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

### ಉಪರಿಚರವಸುಸದ್ಗುಣವರ್ಣನಂ

ಸ್ಕಂದ ಉವಾಚ :—

**ಆಸೀದ್ರಾಜೋಪರಿಚರೋ ವಸುನಾಮಾ ಪುರಾ ಮುನೇ ।**
**ಭೂಭರ್ತುರಾಯೋಸ್ತನಯಃ ಖ್ಯಾತಶ್ಚಾಸಾವಮಾವಸುಃ ।**
**ಆಖಂಡಲಸಖೋ ಭಕ್ತಿಂ ಪ್ರಾಪ್ತೋ ನಾರಾಯಣೇ ಪ್ರಭೌ ॥ ೧ ॥**
**ಧಾರ್ಮಿಕಃ ಪಿತೃಭಕ್ತಶ್ಚ ಪಿತೄನ್ ದೇವಾಂಶ್ಚ ತರ್ಪಯನ್ ।**
**ಸದಾಚಾರರತೋ ದಕ್ಷಃ ಕ್ಷಮಾವಾನನಸೂಯಕಃ ॥ ೨ ॥**
**ಸರ್ವೋಪಕಾರಕಃ ಶಾಂತೋ ಬ್ರಹ್ಮಚರ್ಯರತಃ ಶುಚಿಃ ।**
**ಅಕ್ರೋಧನಶ್ಚ ಮಿತಭುಕ್ ಮೃದುರ್ನಿರ್ವ್ಯಸನೋ ಮುನಿಃ ॥ ೩ ॥**
**ನಿರ್ದ್ವಂದ್ವೋ ನಿರ್ವಿಕಾರಶ್ಚ ನಿರ್ಮಾನೋ ಧೀರ ಆತ್ಮವಿತ್ ।**
**ನಿರ್ದಂಭೋ ಮಾನದೋ ಯೋಗೀ ತಪಸ್ವೀ ವಿಜಿತೇಂದ್ರಿಯಃ ॥ ೪ ॥**

---

## ಕನ್ನಡದ ಅನುವಾದ

### ಉಪರಿಚರವಸುಸದ್ಗುಣವರ್ಣನ

೧. ಸ್ಕಂದನು ಹೇಳುತ್ತಾನೆ:—"ಎಲೈ ಮುನಿಯೇ! ಪೂರ್ವದಲ್ಲಿ ಉಪರಿಚರವಸುವೆಂಬ ರಾಜನೊಬ್ಬನಿದ್ದನು. ಅವನು ಆಯುಮಹಾರಾಜನ ಮಗನು. ಅವನು ಅಮಾವಸುವೆಂದೂ ಪ್ರಸಿದ್ಧನಾಗಿದ್ದನು; ಇಂದ್ರನಿಗೆ ಸಖನಾಗಿ, ಪ್ರಭುವಾದ ನಾರಾಯಣನಲ್ಲಿ ಭಕ್ತಿಯುಳ್ಳವನಾಗಿದ್ದನು.

೨. ಅವನು ಧಾರ್ಮಿಕನೂ ಪಿತೃಭಕ್ತನೂ ಆಗಿ ಪಿತೃಗಳನ್ನೂ ದೇವತೆಗಳನ್ನೂ ನಿರಂತರವೂ ತೃಪ್ತಿಪಡಿಸುತ್ತಿದ್ದನು; ಸದಾಚಾರನಿರತನಾಗಿದ್ದನು; ದಕ್ಷನು; ಕ್ಷಮಾವಂತನು; ಅಸೂಯೆಯಿಲ್ಲದವನು.

೩. ಅವನು ಸರ್ವರಿಗೂ ಉಪಕಾರಮಾಡತಕ್ಕವನು; ಶಾಂತನು; ಬ್ರಹ್ಮಚರ್ಯವ್ರತದಲ್ಲಿಯೆ ಯಾವಾಗಲೂ ನಿರತನಾಗಿದ್ದನು; ಶುಚಿಯೂ, ಕ್ರೋಧವನ್ನು ತೊರೆದವನೂ, ಮಿತವಾಗಿ ಆಹಾರ ತೆಗೆದುಕೊಳ್ಳುವವನೂ, ಮೃದುಸ್ವಭಾವವುಳ್ಳವನೂ, ವ್ಯಸನಗಳೊಂದೂ ಇಲ್ಲದವನೂ, ಮನನಶೀಲನೂ ಆಗಿದ್ದನು.

೪. ದ್ವಂದ್ವರಹಿತನಾಗಿ, ಯಾವ ಬಗೆಯ ವಿಕಾರಗಳೂ ಇಲ್ಲದೆ ಅಹಂಕಾರವನ್ನು ತೊರೆದು, ಧೀರನೂ, ಆತ್ಮನನ್ನು ತಿಳಿದವನೂ, ದಂಭವಿಲ್ಲದವನೂ, ಗುರುಹಿರಿಯರಿಗೆ ಸನ್ಮಾನವನ್ನು ಸಲ್ಲಿಸುವವನೂ, ಯೋಗಿಯೂ, ತಪಸ್ವಿಯೂ, ಜಿತೇಂದ್ರಿಯನೂ ಆಗಿದ್ದನು.

ಧನಪುತ್ರಕಲತ್ರೇಷು ವಿರಕ್ತಃ ಸ್ವಜನಾದಿಷು ।
ನಾರಾಯಣಮನುಂ ಭಕ್ತ್ಯಾ ಸ ಜಜಾಪಾನ್ವಹಂ ನೃಪಃ ॥ ೫ ॥
ತಸ್ಮೈ ತುಷ್ಟೋಽಥ ಭಗವಾನ್ವಾಸುದೇವಃ ಸ್ವಯಂ ದದೌ ।
ಸಾಮ್ರಾಜ್ಯಂ ಸೋಽಥ ನಾಸಕ್ತಃ ತತ್ರ ಭೇಜೇ ತಮಾದರಾತ್ ॥ ೬ ॥
ತಂತ್ರೋಕ್ತೇನ ವಿಧಾನೇನ ಪಂಚಕಾಲಂ ಸಮಾಹಿತಃ ।
ಪೂಜಯಾಮಾಸ ದೇವೇಶಂ ತಚ್ಛೇಷೇಣ ಸುರಾನ್ಪಿತೄನ್ ॥ ೭ ॥
ತೇಷಾಂ ಶೇಷೇಣ ವಿಪ್ರಾಂಶ್ಚ ಸಂವಿಭಜ್ಯಾಶ್ರಿತಾಂಶ್ಚ ಸಃ ।
ಶೇಷಾನ್ನಭುಕ್ಸತ್ಯಪರಃ ಸರ್ವಭೂತೇಷ್ವಹಿಂಸಕಃ ॥ ೮ ॥
ಭಕ್ಷಣೇ ದೋಷಮವಿದತ್ ಪ್ರಾಣಿಮಾತ್ರಾಮಿಷಸ್ಯ ತು ।
ಮಹಾಪಾತಕವದ್ರಾಜಾ ಸ್ವಪ್ರಜಾಶ್ಚ ತಥಾಽವದತ್ ॥ ೯ ॥
ಸರ್ವಭಾವೇನ ಭೇಜೇಽಸೌ ದೇವದೇವಂ ಜನಾರ್ದನಂ ।
ಅನಾದಿಮಧ್ಯನಿಧನಂ ಲೋಕಕರ್ತಾರಮವ್ಯಯಂ ॥ ೧೦ ॥

---

೫. ಅವನು ಹಣ, ಹೆಂಡತಿ, ಮಕ್ಕಳು, ಸ್ವಜನ— ಮೊದಲಾದವರಲ್ಲಿ ವಿರಕ್ತನಾಗಿದ್ದನು. ಆ ರಾಜನು ದಿನದಿನವೂ ನಾರಾಯಣನ ದಿವ್ಯನಾಮವನ್ನೇ ಜಪಿಸುತ್ತಿದ್ದನು.

೬. ಭಗವಂತನಾದ ವಾಸುದೇವನು ಸಂತುಷ್ಟನಾಗಿ ತಾನಾಗಿಯೇ ಅವನಿಗೆ ಸಾಮ್ರಾಜ್ಯವನ್ನು ದಯಪಾಲಿಸಿದನು. ಅವನಾದರೋ ಆ ಸಾಮ್ರಾಜ್ಯದಲ್ಲಿ ಆಸಕ್ತಿಯಿಲ್ಲದೆ ಆ ವಾಸುದೇವನನ್ನೇ ಆದರದಿಂದ ಭಜಿಸಿದನು.

೭. ಪಂಚಕಾಲಗಳಲ್ಲಿಯೂ ಮನಸ್ಸಮಾಧಾನವನ್ನು ಹೊಂದಿ ತಂತ್ರದಲ್ಲಿ ಹೇಳಿರುವ ವಿಧಾನದಿಂದ ದೇವೇಶನನ್ನು ಪೂಜಿಸುತ್ತಿದ್ದನು. ಉಳಿದ ಕಾಲದಲ್ಲಿ ದೇವತೆಗಳನ್ನೂ, ಪಿತೃಗಳನ್ನೂ ಪೂಜಿಸುತ್ತಿದ್ದನು.

೮. ಮಿಕ್ಕ ಸಮಯವನ್ನು ಸಮವಾಗಿ ವಿಭಾಗಿಸಿಕೊಂಡು ವಿಪ್ರರನ್ನೂ, ಆಶ್ರಿತರನ್ನೂ ಸೇವಿಸುತ್ತಿದ್ದನು. ಅತಿಥಿಗಳ ಭೋಜನವಾದ ಬಳಿಕ ಶೇಷಾನ್ನವನ್ನು ಭೋಜನಮಾಡುತ್ತಿದ್ದನು; ಸತ್ಯಪರನಾಗಿ ಸರ್ವಪ್ರಾಣಿಗಳಲ್ಲಿಯೂ ಅಹಿಂಸೆಯನ್ನಾಚರಿಸುತ್ತಿದ್ದನು.

೯. ಆತನು ಯಾವ ಪ್ರಾಣಿಯದೇ ಆದರೂ ಮಾಂಸವನ್ನು ಭಕ್ಷಿಸುವುದು ದೋಷವೆಂದು ತಿಳಿದಿದ್ದನು. ಮಾಂಸಭಕ್ಷಣವು ಮಹಾಪಾತಕವೆಂದು ಆ ರಾಜನು ಭಾವಿಸಿದ್ದನು. ತನ್ನ ಪ್ರಜೆಗಳಿಗೂ ಅದೇ ರೀತಿ ಬೋಧಿಸುತ್ತಿದ್ದನು.

೧೦. ಅವನು ಆದಿ ಮಧ್ಯ ಅಂತಗಳಿಲ್ಲದವನೂ, ಲೋಕಕರ್ತನೂ, ಅವ್ಯಯನೂ ದೇವದೇವನೂ ಆದ ಜನಾರ್ದನನನ್ನು ಸರ್ವಭಾವಗಳಿಂದಲೂ ಭಜಿಸಿ ಆಶ್ರಯಿಸಿದನು.

ಶ್ರೀವಾಸುದೇವಪದಯೋಃ ಸ ಚಕಾರ ಮನಃ ಸ್ಥಿರಂ ।
ಶ್ರೋತ್ರೇ ಚ ನಿತ್ಯಂ ಭಗವತ್ ಕಥಾಯಾಃ ಶ್ರವಣೇ ನೃಪಃ ॥ ೧೧ ॥
ನಯನೇ ಸ್ವೇ ಮುಕುಂದಸ್ಯ ತದ್ಭಕ್ತಾನಾಂ ಚ ದರ್ಶನೇ ।
ಗುಣಗಾನೇ ಹರೇರ್ವಾಣೀಂ ಚಕ್ರೇ ಭೂಮಿಪತಿಃ ಸ ತು ॥ ೧೨ ॥
ನಾರಾಯಣಾಂಘ್ರಿಸಂಸ್ಪೃಷ್ಟತುಲಸೀಪುಷ್ಪಸೌರಭೇ ।
ಘ್ರಾಣಂ ಚಕಾರ ಚ ನೃಪೋ ನಾನ್ಯಗಂಧೇಷು ಕರ್ಹಿಚಿತ್ ॥ ೧೩ ॥
ಶ್ರೀಶೋಪಭುಕ್ತವಸ್ತ್ರಾದಿಸ್ಪರ್ಶನೇ ಚ ತ್ವಚಂ ನಿಜಾಂ ।
ಚಕಾರ ರಸನಾಮನ್ನೇ ನಾರಾಯಣನಿವೇದಿತೇ ॥ ೧೪ ॥
ಭಗವನ್ಮಂದಿರಕ್ಷೇತ್ರಸದಂತಿಕಗತೌ ತಥಾ ।
ಚಕಾರ ಚರಣೌ ರಾಜಾ ಸೇವಾಯಾಂ ಚ ಕರೌ ಹರೇಃ ॥ ೧೫ ॥
ಉತ್ತಮಾಂಗಂ ಚ ಚಕ್ರೇಽಸೌ ವಿಷ್ಣುಪಾದಾಭಿವಂದನೇ ।
ಸಖ್ಯಂ ಚಕಾರ ಪರಮಂ ಮಹಾಭಾಗವತೇಷು ಸಃ ॥ ೧೬ ॥

---

೧೧. ಅವನು ಶ್ರೀವಾಸುದೇವನ ಪಾದಕಮಲಗಳಲ್ಲಿ ಮನಸ್ಸನ್ನು ಸ್ಥಿರವಾಗಿ ನೆಲೆಗೊಳಿಸಿದನು. ನಿತ್ಯವೂ ಭಗವತ್ಕಥೆಯನ್ನು ಕೇಳುವುದರಲ್ಲಿ ಕಿವಿಗಳನ್ನು ಸ್ಥಿರಗೊಳಿಸಿದನು.

೧೨. ಆ ಭೂಪತಿಯು ಮುಕುಂದನ ಮತ್ತು ಅವನ ಭಕ್ತರ ದರ್ಶನದಲ್ಲಿ ತನ್ನ ಕಣ್ಣುಗಳನ್ನೂ, ಹರಿಯ ಗುಣಗಾನದಲ್ಲಿ ತನ್ನ ವಾಣಿಯನ್ನೂ ಸ್ಥಿರಮಾಡಿದನು.

೧೩. ನಾರಾಯಣನ ಪಾದಗಳನ್ನು ಸೋಕಿದ ತುಲಸಿ ಮತ್ತು ಹೂವುಗಳ ಪರಿಮಳದಲ್ಲಿ ಆ ನೃಪತಿಯು ತನ್ನ ಮೂಗನ್ನು ನೆಲೆನಿಲ್ಲಿಸಿದನು. ಬೇರೆ ವಾಸನೆಗಳಲ್ಲಿ ಎಂದೂ ಅದನ್ನು ತೊಡಗಿಸಲಿಲ್ಲವು.

೧೪. ತನ್ನ ಚರ್ಮವನ್ನು ಶ್ರೀಶನಿಂದ ಉಪಭೋಗಿಸಲ್ಪಟ್ಟ ವಸ್ತ್ರ ಮೊದಲಾದವುಗಳ ಸ್ಪರ್ಶದಲ್ಲಿಯೂ, ತನ್ನ ನಾಲಿಗೆಯನ್ನು ನಾರಾಯಣನಿಗೆ ನಿವೇದಿಸಿದ ಅನ್ನದಲ್ಲಿಯೂ ತೊಡಗಿಸಿದನು.

೧೫. ಆ ರಾಜನು ಭಗವಂತನ ಮಂದಿರ, ಕ್ಷೇತ್ರ ಮತ್ತು ಸತ್ಪುರುಷರ ಸಮೀಪಕ್ಕೆ ಹೋಗುವುದರಲ್ಲಿ ತನ್ನ ಕಾಲುಗಳನ್ನೂ, ಹಾಗೆಯೇ ತನ್ನ ಕೈಗಳನ್ನು ಹರಿಯ ಸೇವೆಯಲ್ಲಿಯೂ ತೊಡಗಿಸಿದನು.

೧೬. ಅವನು ತನ್ನ ಶಿರಸ್ಸನ್ನು ವಿಷ್ಣುಪಾದಗಳಿಗೆ ಅಭಿವಂದನ ಮಾಡುವುದರಲ್ಲಿ ನೆಲೆಗೊಳಿಸಿದನು. ಮಹಾಭಾಗವತರೊಡನೆ ಅವನು ಪರಮಸಖ್ಯವನ್ನು ಮಾಡಿದನು.

ಏಕೋಽಪಿ ನ ಕ್ಷಣಸ್ತಸ್ಯ ವಿನಾ ಭಕ್ತಿಂ ರಮಾಪತೇಃ ।
ಜಗಾಮ ಕಿಲ ರಾಜರ್ಷೇಸ್ತದೀಯವ್ರತಚಾರಿಣಃ ॥ ೧೭ ॥
ಮಹದ್ಭಿರೇವ ಸಂಭಾರೈರ್ವಿಷ್ಣೋರ್ಜನ್ಮದಿನೋತ್ಸವಾನ್ ।
ಚಕ್ರೇ ತದರ್ಥಮುದ್ಯಾನಮಂದಿರೋಪವನಾನಿ ಚ ॥ ೧೮ ॥
ಇತ್ಥಂ ನಾರಾಯಣೇ ಭಕ್ತಿಂ ವಹತೋ ಬ್ರಾಹ್ಮಣೋತ್ತಮ ।
ಏಕಶಯ್ಯಾಸನಂ ತಸ್ಯ ದತ್ತವಾನ್ ದೇವರಾಟ್ ಸ್ವಯಂ ॥ ೧೯ ॥
ವೈಜಯಂತೀಂ ದದೌ ಮಾಲಾಂ ತಸ್ಮಾ ಇಂದ್ರೋಽತಿಶೋಭನಾಂ ।
ಅಮ್ಲಾನಪಂಕಜಮಯೀಂ ತಥಾ ರತ್ನಾನಿ ಭೂರಿಶಃ ॥ ೨೦ ॥
ಆತ್ಮರಾಜ್ಯಂ ಧನಂ ಚೈವ ಕಲತ್ರಂ ವಾಹನಾದಿ ಚ ।
ಯತ್ತದ್ಭಗವತಃ ಸರ್ವಮಿತಿ ತತ್ಪ್ರೇಕ್ಷಿತಂ ಸದಾ ॥ ೨೧ ॥
ಕಾಮ್ಯಾ ನೈಮಿತ್ತಿಕಾಜಸ್ರಂ ಯಜ್ಞೀಯಾಃ ಪರಮಾಃ ಕ್ರಿಯಾಃ ।
ಸರ್ವಾಃ ಸಾತ್ವತಮಾಸ್ಥಾಯ ವಿಧಿಂ ಚಕ್ರೇ ಸಮಾಹಿತಃ ॥ ೨೨ ॥
ಪಂಚರಾತ್ರವಿದೋ ಮುಖ್ಯಾಸ್ತಸ್ಯ ಗೇಹೇ ಮಹಾತ್ಮನಃ ।
ಪ್ರಾಯಣಂ ಭಗವತ್ಪ್ರತ್ತಂ ಭುಂಜತೇಸ್ಮಾಗ್ರತೋ ದ್ವಿಜಾಃ ॥ ೨೩ ॥

---

೧೭–೧೮. ಶ್ರೀಲಕ್ಷ್ಮೀಪತಿಗೆ ಸಂಬಂಧಿಸಿದ ವ್ರತಗಳನ್ನು ನಡೆಸುತ್ತಿದ್ದ ಆ ರಾಜರ್ಷಿಗೆ ಆ ಸ್ವಾಮಿಯ ಭಕ್ತಿಯಿಲ್ಲದೆ ಒಂದು ಕ್ಷಣವೂ ಕೂಡ ಕಳೆಯುತ್ತಿರಲಿಲ್ಲ. ಅವನು ವಿಷ್ಣುವಿನ ಜನ್ಮದಿನೋತ್ಸವಗಳನ್ನು ಅಮೂಲ್ಯವಾದ ಸಾಮಗ್ರಿಗಳಿಂದಲೇ ನೆರವೇರಿಸುತ್ತಿದ್ದನು. ವಿಷ್ಣುವಿಗಾಗಿ ಉದ್ಯಾನ, ಮಂದಿರ, ಉಪವನ ಮೊದಲಾದುವನ್ನು ನಿರ್ಮಿಸಿದನು.

೧೯. ಓ ಬ್ರಾಹ್ಮಣೋತ್ತಮಾ! ಹೀಗೆ ನಾರಾಯಣನಲ್ಲಿ ಭಕ್ತಿಯನ್ನಿಟ್ಟಿದ್ದ ಅವನಿಗೆ ದೇವರಾಜನು ತಾನಾಗಿಯೇ ಏಕಶಯ್ಯೆ ಮತ್ತು ಏಕಾಸನಗಳನ್ನು ಉದಾರವಾಗಿ ಕಲ್ಪಿಸಿಕೊಟ್ಟನು.

೨೦. ಇಷ್ಟೆಯಲ್ಲದೆ ಬಾಡದಿರುವ ತಾವರೆಗಳ ಮಂಗಳಕರವಾದ ವೈಜಯಂತೀ ಮಾಲೆಯನ್ನೂ, ಬೇಕುಬೇಕಾದಷ್ಟು ರತ್ನಗಳನ್ನೂ ಕೊಟ್ಟನು.

೨೧. ಆ ಉಪರಿಚರವಸುವಾದರೋ ತನ್ನ ರಾಜ್ಯ, ಧನ, ಕಲತ್ರ(ಹೆಂಡತಿ), ವಾಹನ ಮೊದಲಾದುವೆಲ್ಲವೂ ಭಗವಂತನದೆಂದೇ ಸದಾ ಭಾವಿಸುತ್ತಿದ್ದನು.

೨೨. ಕಾಮ್ಯಕರ್ಮಗಳು, ನೈಮಿತ್ತಿಕಕರ್ಮಗಳು, ಯಜ್ಞಕರ್ಮಗಳು— ಈ ಪರಮ ಕರ್ಮಗಳನ್ನೆಲ್ಲ ಅವನು ಸಾತ್ವಿಕವಿಧಿಯನ್ನನುಸರಿಸಿ ಮನಸ್ಸಮಾಧಾನದಿಂದಲೇ ಮಾಡುತ್ತಿದ್ದನು.

೨೩. ಆ ಮಹಾತ್ಮನ ಮನೆಯಲ್ಲಿ ಪಂಚರಾತ್ರವನ್ನು ಬಲ್ಲ ಮುಖ್ಯಮುಖ್ಯರಾದ ಬ್ರಾಹ್ಮಣೋತ್ತಮರು ಭಗವಂತನಿಗೆ ನಿವೇದಿಸಿದ ಪ್ರಸಾದವನ್ನು ಮೊದಲು ಭೋಜನಮಾಡುತ್ತಿದ್ದರು.

ತಸ್ಯ ಪ್ರಶಾಸತೋ ರಾಜ್ಯಂ ಧರ್ಮೇಣಾಽಮಿತ್ರಘಾತಿನಃ ।
ನಾನೃತಂ ವಾಕ್ಯಮಭವನ್ ಮನೋ ದುಷ್ಟಂ ನ ಚಾಽಭವತ್ ।
ನ ಚ ಕಾಯೇನ ಕೃತವಾನ್ ಸ ಪಾಪಂ ಪರಮಣ್ವಪಿ ॥ ೨೪ ॥
ಪಂಚರಾತ್ರಂ ಮಹಾತಂತ್ರಂ ಭಗವದ್ಭಕ್ತಿಪುಷ್ಟಯೇ ।
ಶುಶ್ರಾವಾನುದಿನಂ ರಾಜಾ ಭಗವದ್ಭಕ್ತವಕ್ತ್ರತಃ ॥ ೨೫ ॥
ಧರ್ಮಂ ಸಂಸ್ಥಾಪಯನ್ ಶುದ್ಧಂ ರಂಜಯನ್ ಸಕಲಾಃ ಪ್ರಜಾಃ ।
ಪಾಲಯಾಮಾಸ ಪೃಥಿವೀಂ ದಿವಮಾಖಂಡಲೋ ಯಥಾ ॥ ೨೬ ॥
ಅಪಿ ಸಪ್ತವಿಧಸ್ತಸ್ಯ ರಾಜ್ಯೇ ಪಲಲಭಕ್ಷಕಃ ।
ಪುಮಾನ್ ಕೋಽಪ್ಯಭವನ್ನೈವ ನ ಚ ಪಾಷಂಡವೇಷಿಣಃ ॥ ೨೭ ॥
ಅಸಾಧ್ವ್ಯೋ ಯೋಷಿತಶ್ಚೈವ ಪುರುಷಾಃ ಪಾರದಾರಿಕಾಃ ।
ನ ಶ್ರುತಾಸ್ತಸ್ಯ ರಾಜ್ಯೇ ಚ ಧರ್ಮಸಂಕರಕಾರಿಣಃ ॥ ೨೮ ॥
ಏಕಾದಶವಿಧಂ ಮದ್ಯಂ ತ್ರಿವಿಧಾಂ ಚ ಸುರಾಮಪಿ ।
ನಾಜಿಘ್ರದಪಿ ಕೋಽಪೀಹ ತಸ್ಮಿನ್ ರಾಜ್ಯಂ ಪ್ರಶಾಸತಿ ॥ ೨೯ ॥

---

೨೪–೨೫. ಶತ್ರುಗಳನ್ನು ಜಯಿಸಿ ಅಮಿತ್ರರನ್ನು ಘಾತಿಸಿ ಧರ್ಮದಿಂದ ರಾಜ್ಯವನ್ನು ರಕ್ಷಿಸುತ್ತ ಆಳುತ್ತಿದ್ದ ಅವನ ಮಾತು ಅನೃತವಲ್ಲದ್ದಾಯಿತು; ಮನಸ್ಸೂ ದುಷ್ಟವಾಗಲಿಲ್ಲ. ಶರೀರದಿಂದ ಅವನು ಪರಮಾಣುವಿನಷ್ಟು ಕೂಡ ಪಾಪವನ್ನು ಮಾಡಲಿಲ್ಲ. ತನ್ನ ಭಗವದ್ಭಕ್ತಿಯು ಪುಷ್ಟಿಹೊಂದಲೆಂದು ಆ ರಾಜನು ಭಗವದ್ಭಕ್ತರ ಮುಖದಿಂದ ಪಂಚರಾತ್ರ ಮಹಾತಂತ್ರವನ್ನು ದಿನ ದಿನವೂ ಶ್ರವಣಮಾಡುತ್ತಿದ್ದನು.

೨೬. ರಾಜ್ಯದಲ್ಲಿ ಶುದ್ಧವಾದ ಧರ್ಮವನ್ನು ನೆಲೆಗೊಳಿಸುತ್ತಲೂ ಸಕಲ ಪ್ರಜೆಗಳನ್ನು ರಂಜಿಸುತ್ತಲೂ, ದೇವೇಂದ್ರನು ಸ್ವರ್ಗವನ್ನು ಪಾಲಿಸುವಂತೆ ಆ ರಾಜನು ಪೃಥ್ವಿಯನ್ನು ಪರಿಪಾಲಿಸಿದನು.

೨೭. ಅವನ ರಾಜ್ಯದಲ್ಲಿ ಯಾವೊಬ್ಬ ಮನುಷ್ಯನೂ ಮಾಂಸಭಕ್ಷಕನಾಗಿರ ಲಿಲ್ಲ. ಏಳುಬಗೆಯ ಮಾಂಸಗಳನ್ನು ಭಕ್ಷಿಸುವವನೊಬ್ಬನೂ ಇರಲಿಲ್ಲ. ಪಾಷಂಡ ವೇಷಿಗಳಂತೂ ಇರಲೇ ಇಲ್ಲವು.

೨೮. ಅಸಾಧ್ವಿಯರಾದ ಹೆಂಗಸರಾಗಲಿ, ಪರದಾರನಿರತರಾದ ಗಂಡಸ ರಾಗಲಿ, ಧರ್ಮಸಂಕರಕಾರಿಗಳಾದ ಸ್ತ್ರೀಪುರುಷರೇ ಆಗಲಿ ಅವನ ರಾಜ್ಯದಲ್ಲಿ ಕೇಳಬರುತ್ತಿರಲಿಲ್ಲ.

೨೯. ಅವನು ರಾಜ್ಯವನ್ನಾಳುವ ಕಾಲದಲ್ಲಿ ಹನ್ನೊಂದುಬಗೆಯ ಮದ್ಯ ವನ್ನೂ, ಮೂರುಬಗೆಯ ಸುರೆಯನ್ನೂ ಯಾವನೊಬ್ಬನೂ ಮೂಸುತ್ತಲೂ ಇರಲಿಲ್ಲ.

ಏವಂಗುಣಃ ಸ ತು ಕ್ವಾಪಿ ಪಕ್ಷಪಾತಾದ್ದಿವೌಕಸಾಂ ।
ಮಿಥ್ಯಾಲಾಪಾದ್ದಿವೋ ಭ್ರಷ್ಟಃ ಪ್ರವಿವೇಶ ಮಹೀತಲಂ ॥ ೩೦ ॥
ಅಂತರ್ಭೂಮಿಗತಶ್ಚಾಸೌ ಸತತಂ ಧರ್ಮವತ್ಸಲಃ ।
ನಾರಾಯಣಪರೋ ಭೂತ್ವಾ ತನ್ಮಂತ್ರಮಜಪತ್ಸ್ಥಿರಃ ॥ ೩೧ ॥
ತಸ್ಯೈವ ಚ ಪ್ರಸಾದೇನ ಪುನರೇವೋತ್ಥಿತಸ್ತು ಸಃ ।
ದಿವಂ ಪ್ರಾಪ್ಯ ಸುಖಂ ತತ್ರ ಮನೋಽಭೀಷ್ಟಂ ಸಮನ್ವಭೂತ್ ॥ ೩೨ ॥
ಪುನಶ್ಚೇದಿಪತಿರ್ಭೂತ್ವಾ ಭುವ್ಯಸೌ ಪಿತೃಶಾಪತಃ ।
ಪಂಚರಾತ್ರೋಕ್ತವಿಧಿನಾ ಭೇಜೇ ಹರಿಮತಂದ್ರಿತಃ ॥ ೩೩ ॥
ಸ್ವರ್ಗಲೋಕಂ ತತಃ ಪ್ರಾಪದ್ದಿವ್ಯದೇಹೇನ ಭೂಪತಿಃ ।
ಉಪಾಸನಾಂ ಚ ತತ್ರತ್ಯೈಃ ಪರಮರ್ಷಿಗಣೈಃ ಸಹ ॥ ೩೪ ॥
ದೃಢೀಕುರ್ವನ್ ಭಗವತಃ ಕಂಚಿತ್ಕಾಲಮುವಾಸ ತತ್ ।
ಪರಂ ಪದಮಥ ಪ್ರಾಪದ್ವಾಸುದೇವಸ್ಯ ನಿರ್ಭಯಂ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವಾಸುದೇವಮಾಹಾತ್ಮ್ಯೇ "ಉಪರಿಚರವಸುಸದ್ಗುಣವರ್ಣನಂ"ನಾಮ ಪಂಚಮೋಽಧ್ಯಾಯಃ

---

೩೦. ಈ ರೀತಿಯುವನಾದ ಅವನು ಕೂಡ ಯಾವಾಗಲೋ ಒಂದು ಸಲ ಸ್ವರ್ಗವಾಸಿ (ದೇವತೆ)ಗಳ ಪಕ್ಷಪಾತದಿಂದ ಸುಳ್ಳುಹೇಳಿದುದರಿಂದ ಸ್ವರ್ಗಚ್ಯುತನಾಗಿ ಭೂತಲವನ್ನು ಪ್ರವೇಶಿಸಿದನು.

೩೧. ಧರ್ಮವತ್ಸಲನಾದ ಅವನು ಭೂಮಿಗೆ ಬಂದಮೇಲೆ ನಾರಾಯಣನಲ್ಲಿಯೇ ಮನಸ್ಸಿಟ್ಟು ಸ್ಥಿರನಾಗಿ ನಾರಾಯಣಮಂತ್ರವನ್ನು ಜಪಿಸಿದನು.

೩೨. ಕಡೆಗೆ ಆ ನಾರಾಯಣನ ಪ್ರಸಾದದಿಂದಲೇ ಅವನು ಮತ್ತೆ ಸ್ವರ್ಗವನ್ನೈದಿ ಅಲ್ಲಿ ತನ್ನ ಮನಸ್ಸಿಗೆ ಮೆಚ್ಚಾದ ಸುಖವನ್ನನುಭವಿಸಿದನು.

೩೩–೩೫. ಪಿತೃಶಾಪದಿಂದ ಅವನೇ ಮತ್ತೆ ಭೂಮಿಯಲ್ಲಿ ಚೇದಿರಾಜನಾಗಿ ಹುಟ್ಟಿ ಆಲಸ್ಯವನ್ನು ತೊರೆದು ಪಂಚರಾತ್ರೋಕ್ತವಿಧಿಯಿಂದ ಶ್ರೀಹರಿಯನ್ನು ಭಜಿಸಿದನು. ಬಳಿಕ ಆ ಭೂಮಿಪತಿಯು ದಿವ್ಯದೇಹದಿಂದ ಸ್ವರ್ಗಲೋಕವನ್ನು ಪಡೆದನು. ಅಲ್ಲಿರುವ ಪರಮರ್ಷಿಸಮೂಹಗಳಿಂದೊಡಗೂಡಿ ಭಗವಂತನ ಉಪಾಸನೆಯನ್ನು ದೃಢಮಾಡಿಕೊಳ್ಳುತ್ತ ಅಲ್ಲಿ ಕೆಲವು ಕಾಲ ವಾಸಮಾಡಿದನು. ಬಳಿಕ ಭಯರಹಿತವಾದ ಶ್ರೀವಾಸುದೇವನ ಪರಮಪದವನ್ನೇ ಹೋಗಿ ಸೇರಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವಮಾಹಾತ್ಮ್ಯದಲ್ಲಿ "ಉಪರಿಚರವಸುಸದ್ಗುಣವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ವೇದಸ್ಯ ಹಿಂಸಾಪರತ್ವೋಕ್ತ್ಯಾ ಉಪರಿಚರವಸೋರಧಃಪತನವರ್ಣನಂ

**ಸಾವರ್ಣಿರುವಾಚ :—**

**ಸ ಹಿ ಭಕ್ತೋ ಭಗವತ ಆಸೀದ್ರಾಜಾ ಮಹಾನ್ವಸುಃ ।**
**ಕಿಂ ಮಿಥ್ಯಾಽಭ್ಯವದದ್ಯೇನ ದಿವೋ ಭೂವಿವರಂ ಗತಃ ॥ ೧ ॥**
**ಕೇನೋದ್ಧೃತಃ ಪುನರ್ಭೂಮೇಃ ಶಪ್ತೋಽಸೌ ಪಿತೃಭಿಃ ಕುತಃ ।**
**ಕಥಂ ಮುಕ್ತಸ್ತತೋ ಭೂಪ ಇತ್ಯೇತತ್ ಸ್ಕಂದ ಮೇ ವದ ॥ ೨ ॥**

**ಸ್ಕಂದ ಉವಾಚ :—**

**ಶೃಣು ಬ್ರಹ್ಮನ್ ಕಥಾಮೇತಾಂ ವಸೋರ್ವಾಸವರೋಚಿಷಃ ।**
**ಯಸ್ಯಾಃ ಶ್ರವಣತಃ ಸದ್ಯಃ ಸರ್ವಪಾಪಕ್ಷಯೋ ಭವೇತ್ ॥ ೩ ॥**
**ಸ್ವಾಯಂಭುವಾಂತರೇ ಪೂರ್ವಮಿಂದ್ರೋ ವಿಶ್ವಜಿದಾಹ್ವಯಂ ।**
**ಆರರಂಭೇ ಮಹಾಯಜ್ಞಮಶ್ವಮೇಧಾಭಿದಂ ಮುನೇ ॥ ೪ ॥**

---

### ಕನ್ನಡದ ಅನುವಾದ

#### ಉಪರಿಚರವಸುವಿನ ಅಧಃಪತನವೃತ್ತಾಂತವರ್ಣನ

೧. ಸಾವರ್ಣಿಯು ಕೇಳುತ್ತಾನೆ:—"ಆ ವಸುರಾಜನು ಭಗವಂತನಿಗೆ ಮಹಾ ಭಕ್ತನಾಗಿದ್ದನಷ್ಟೆ! ಅಂತಹವನು ಯಾವ ಸುಳ್ಳನ್ನಾಡಿ ಅದರ ಪರಿಣಾಮವಾಗಿ ಸ್ವರ್ಗದಿಂದುರುಳಿ ಭೂಲೋಕವನ್ನು ಪ್ರವೇಶಿಸಿದನು ?

೨. ಮತ್ತೆ ಭೂಮಿಯಿಂದ ಅವನನ್ನು ಉದ್ಧಾರಮಾಡಿದವರಾರು ? ಪಿತೃಗಳಿಂದ ಅವನೇಕೆ ಶಾಪವನ್ನು ಹೊಂದಿದನು ? ಆ ಭೂಪತಿಯು ಆ ಶಾಪದಿಂದ ಬಿಡುಗಡೆಹೊಂದಿದುದೆಂತು ? ಓ ಸ್ಕಂದಸ್ವಾಮಿಯೇ ! ಈ ವೃತ್ತಾಂತವೆಲ್ಲವನ್ನೂ ನನಗೆ ತಿಳಿಸಬೇಕು."

೩. ಸ್ಕಂದನು ಹೇಳುತ್ತಾನೆ:—"ಅಯ್ಯಾ ಬ್ರಾಹ್ಮಣನೇ ! ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದೊಪ್ಪುತ್ತಿದ್ದ ಆ ಉಪರಿಚರವಸುವಿನ ಈ ಕಥೆಯನ್ನಾಲಿಸು. ಇದನ್ನು ಕೇಳುವವನಿಗೆ ಸರ್ವಪಾಪಗಳೂ ಕ್ಷಣಮಾತ್ರದಲ್ಲಿಯೆ ಕ್ಷಯಿಸಿಹೋಗುತ್ತವೆ.

೪. ಎಲೈ ಮುನಿಯೇ ! ಸ್ವಾಯಂಭುವಮನ್ವಂತರದಲ್ಲಿ ಪೂರ್ವದಲ್ಲಿ ಇಂದ್ರನು ವಿಶ್ವಜಿತ್ತೆಂಬ ಹೆಸರಿನ ಅಶ್ವಮೇಧ ಮಹಾಯಜ್ಞವನ್ನು ಆರಂಭ ಮಾಡಿದನು.

ನಿಬದ್ಧಾಃ ಪಶವೋಽಜಾದ್ಯಾಃ ಕ್ರೋಶಂತಸ್ತತ್ರ ಭೂರಿಶಃ ।
ಸರ್ವೇ ದೇವಗಣಾಶ್ಚಾಪಿ ರಸಲುಬ್ಧಾಸ್ತದಾಸತ ॥ ೫ ॥
ಕ್ಷೇಮಾಯ ಸರ್ವಲೋಕಾನಾಂ ವಿಚರಂತೋ ಯದೃಚ್ಛಯಾ ।
ಮಹರ್ಷಯ ಉಪಾಜಗ್ಮುಸ್ತತ್ರ ಭಾಸ್ಕರವರ್ಚಸಃ ॥ ೬ ॥
ಸಂಮಾನಿತಾಃ ಸುರಗಣೈಃ ಪಾದ್ಯಾರ್ಘ್ಯಸ್ವಾಗತಾದಿಭಿಃ ।
ತೇ ಬೃಹನ್ಮುನಯೋಽಪಶ್ಯನ್ ಮೇಧ್ಯಾಂಸ್ತಾನ್ ಕ್ರೋಶತಃ ಪಶೂನ್ ॥
ಸಾತ್ತ್ವಿಕಾನಾಮಪಿ ಚ ತಂ ದೇವಾನಾಂ ಯಜ್ಞವಿಸ್ತರಂ ।
ಹಿಂಸಾಮಯಂ ಸಮಾಲೋಕ್ಯ ತೇಽತ್ಯಾಶ್ಚರ್ಯಂ ಹಿ ಲೇಭಿರೇ ॥ ೮ ॥
ಧರ್ಮವ್ಯತಿಕ್ರಮಂ ದೃಷ್ಟ್ವಾ ಕೃಪಯಾ ತೇ ದ್ವಿಜೋತ್ತಮಾಃ ।
ಮಹೇಂದ್ರಪ್ರಮುಖಾನೂಚುರ್ದೇವಾನ್ಧರ್ಮಧಿಯಸ್ತತಃ ॥ ೯ ॥

ಮಹರ್ಷಯ ಊಚುಃ:—

ದೇವೈಶ್ಚ ಋಷಿಭಿಃ ಸಾಕಂ ಮಹೇಂದ್ರಾಸ್ಮದ್ವಚಃ ಶೃಣು ।
ಯಥಾಸ್ಥಿತಂ ಧರ್ಮತತ್ತ್ವಂ ವದಾಮೋ ಹಿ ಸನಾತನಂ ॥ ೧೦ ॥

---

೫. ಅಲ್ಲಿ ಅಜ ಮೊದಲಾದ ಪಶುಗಳು ಅಸಂಖ್ಯವಾಗಿ ಯೂಪಸ್ತಂಭಗಳಿಗೆ ಕಟ್ಟಲ್ಪಟ್ಟು ಅರಚುತ್ತಿದ್ದವು. ಸಮಸ್ತ ದೇವತಾಗಣಗಳೂ ರಸಲುಬ್ಧರಾಗಿ ಅಲ್ಲಿ ಕುಳಿತಿದ್ದರು.

೬. ಸರ್ವಲೋಕಗಳ ಕ್ಷೇಮಕ್ಕಾಗಿ ತಮಗೆ ತೋರಿದತ್ತ ಸಂಚಾರ ಮಾಡುತ್ತ ಸೂರ್ಯತೇಜಸ್ಸಿನಿಂದ ಬೆಳಗುತ್ತಿದ್ದ ದಿವ್ಯಮಹರ್ಷಿಗಳೂ ಅಲ್ಲಿಗೆ ಬಂದರು.

೭. ಪಾದ್ಯ, ಅರ್ಘ್ಯ, ಸ್ವಾಗತವೇ ಮೊದಲಾದ ಸತ್ಕಾರಗಳಿಂದ ಸುರಸಮೂಹದಿಂದ ಸತ್ಕೃತರಾದ ಆ ಮಹಾಮುನಿಗಳು ಯಜ್ಞಕ್ಕೆ ಮೀಸಲಾಗಿ ಅರಚುತ್ತಿರುವ ಆ ಪಶುಗಳನ್ನು ಕಂಡರು.

೮. ಸಾತ್ವಿಕರೇ ಆದರೂ ಆ ದೇವತೆಗಳ ಯಜ್ಞವಿಸ್ತಾರವು ಈ ರೀತಿ ಹಿಂಸಾಮಯವಾಗಿರುವುದನ್ನು ಕಂಡು ಅವರೆಲ್ಲರೂ ಅತ್ಯಾಶ್ಚರ್ಯಗೊಂಡರು.

೯. ಧರ್ಮಬುದ್ಧಿಯವರಾದ ಆ ದ್ವಿಜೋತ್ತಮರು ಅಲ್ಲಿ ನಡೆಯಲಿರುವ ಧರ್ಮವ್ಯತಿಕ್ರಮವನ್ನು ಕಂಡು ಕೃಪೆಯಿಂದ ಕೂಡಿದವರಾಗಿ ಮಹೇಂದ್ರನೇ ಮೊದಲಾದವರನ್ನು ಕುರಿತು ಹೀಗೆ ಹೇಳಿದರು.

೧೦. ಮಹರ್ಷಿಗಳು ಹೇಳುತ್ತಾರೆ:—"ಎಲೈ ಮಹೇಂದ್ರನೇ! ದೇವತೆಗಳಿಂದಲೂ, ಋಷಿಗಳಿಂದಲೂ ಕೂಡಿರುವ ನೀನು ನಮ್ಮ ಮಾತನ್ನು ಕೇಳಬೇಕು. ಸನಾತನವಾದ ಧರ್ಮತತ್ತ್ವವನ್ನು ಇದ್ದುದನ್ನಿದ್ದಂತೆಯೆ ತಿಳಿಸುತ್ತೇವೆ.

**ಯೂಯಂ ಜಗತ್ಸರ್ಗಕಾಲೇ ಬ್ರಹ್ಮಣಾ ಪರಮೇಷ್ಠಿನಾ ।**
**ಸತ್ತ್ವೇನ ನಿರ್ಮಿತಾಃ ಸ್ಥೋ ವೈ ಚತುಷ್ಪಾದ್ಧರ್ಮಧಾರಕಾಃ ॥ ೧೧ ॥**
**ರಜಸಾ ತಮಸಾ ಚಾಸೌ ಮನೂಂಶ್ಚೈವ ನರಾಧಿಪಾನ್ ।**
**ಅಸುರಾಣಾಂ ಚಾಧಿಪತೀನಸೃಜದ್ಧರ್ಮಧಾರಿಣಃ ॥ ೧೨ ॥**
**ಸರ್ವೇಷಾಮಥ ಯುಷ್ಮಾಕಂ ಯಜ್ಞಾದಿವಿಧಿಬೋಧಕಂ ।**
**ಸಸರ್ಜ ಶ್ರೇಯಸೇ ವೇದಂ ಸರ್ವಾಭೀಷ್ಟಫಲಪ್ರದಂ ॥ ೧೩ ॥**
**ಅಹಿಂಸೈವ ಪರೋ ಧರ್ಮಸ್ತತ್ರ ವೇದೇಽಸ್ತಿ ಕೀರ್ತಿತಃ ।**
**ಸಾಕ್ಷಾತ್ಪಶುವಧೋ ಯಜ್ಞೇ ನ ಹಿ ವೇದಸ್ಯ ಸಂಮತಃ ॥ ೧೪ ॥**
**ಚತುಷ್ಪಾದಸ್ಯ ಧರ್ಮಸ್ಯ ಸ್ಥಾಪನೇ ಹ್ಯೇವ ಸರ್ವಥಾ ।**
**ತಾತ್ಪರ್ಯಮಸ್ತಿ ವೇದಸ್ಯ ನ ತು ನಾಶೇಽಸ್ಯ ಹಿಂಸಯಾ ॥ ೧೫ ॥**
**ರಜಸ್ತಮೋದೋಷವಶಾಸ್ತಥಾಪ್ಯಸುರಪಾ ನೃಪಾಃ ।**
**ಮೇಧ್ಯೇನಾಜೇನ ಯಷ್ಟವ್ಯಮಿತ್ಯಾದೌ ಮತಿಜಾಡ್ಯತಃ ।**
**ಛಾಗಾದಿಮರ್ಥಂ ಬುಬುಧುರ್ವ್ರೀಹ್ಯಾದಿಂ ತು ನ ತೇ ವಿದುಃ ॥ ೧೬ ॥**

---

೧೧. ಪರಮೇಷ್ಠಿಯಾದ ಬ್ರಹ್ಮನಿಂದ ಪ್ರಪಂಚದ ಸೃಷ್ಟಿಯಾದ ಸಮಯದಲ್ಲಿ ನಾಲ್ಕುಪಾದಗಳುಳ್ಳುದಾದ ಅನಾದಿಧರ್ಮವನ್ನು ಧರಿಸಿದವರಾದ ನೀವು ಸತ್ತ್ವಗುಣದಿಂದಲೇ ನಿರ್ಮಿತರಾಗಿರುವಿರಿ.

೧೨–೧೩. ಆ ಬ್ರಹ್ಮನು ತನ್ನ ರಜೋಗುಣದಿಂದಲೂ, ತಮೋಗುಣದಿಂದಲೂ ನರಾಧಿಪರಾದ ಮನುಗಳನ್ನೂ ಅಸುರಾಧಿಪತಿಗಳನ್ನೂ ಧರ್ಮಧರರನ್ನಾಗಿ ಸೃಷ್ಟಿಮಾಡಿದನು. ಆ ಬಳಿಕ ನಿಮ್ಮೆಲ್ಲರ ಶ್ರೇಯಸ್ಸಿಗೋಸುಗವೇ ಯಜ್ಞ ಮೊದಲಾದವುಗಳ ವಿಧಿಯನ್ನು ಬೋಧಿಸುವುದೂ, ಸರ್ವಾಭೀಷ್ಟಫಲಗಳನ್ನು ಕೊಡುವುದೂ ಆದ ವೇದಗಳನ್ನು ಸೃಜಿಸಿದನು.

೧೪. ಪರಮಧರ್ಮವಾದ ಅಹಿಂಸೆಯೇ ಆ ವೇದಗಳಲ್ಲಿ ಹೇಳಲ್ಪಟ್ಟಿದೆ. ಯಜ್ಞದಲ್ಲಿ ಸಾಕ್ಷಾತ್ತಾಗಿ ಪಶುವಧೆಯನ್ನು ಮಾಡುವುದು ವೇದಕ್ಕೆ ಸಮ್ಮತವಲ್ಲ.

೧೫. ನಾಲ್ಕುಪಾದಗಳುಳ್ಳ ಧರ್ಮವನ್ನು ಸರ್ವವಿಧದಿಂದಲೂ ಸ್ಥಾಪನೆ ಮಾಡುವುದೇ ವೇದದ ತಾತ್ಪರ್ಯವು. ಹಿಂಸೆಯಿಂದ ಆ ಧರ್ಮವನ್ನು ನಾಶ ಮಾಡುವುದು ಎಂದಿಗೂ ಅದರ ತಾತ್ಪರ್ಯವಲ್ಲವು.

೧೬. ರಜೋಗುಣ ತಮೋಗುಣಗಳಿಗೆ ವಶರಾದುದರಿಂದಲೂ, ಮತಿಜಾಡ್ಯದಿಂದಲೂ ಅಸುರಾಧಿಪತಿಗಳೂ, ನರಪತಿಗಳೂ 'ಮೇಧ್ಯವಾದ ಅಜದಿಂದ ಯಜ್ಞಮಾಡಬೇಕು' ಎಂಬಿವೇ ಮೊದಲಾದ ಕಡೆಗಳಲ್ಲಿ ('ಅಜ' ಶಬ್ದಕ್ಕೆ) 'ಆಡು' ಎಂಬ ಅರ್ಥವನ್ನೇ ತಿಳಿದುಕೊಂಡರು; 'ಬತ್ತ' ಮೊದಲಾದ ಅರ್ಥವನ್ನು ಅವರರಿಯಲಿಲ್ಲ.

ಸಾತ್ವಿಕಾನಾಂ ತು ಯುಷ್ಮಾಕಂ ವೇದಸ್ಯಾರ್ಥೋ ಯಥಾಸ್ಥಿತಃ ।
ಗ್ರಹೀತವ್ಯೋಽನ್ಯಥಾ ನೈವ ತಾದೃಶೀ ಚ ಕ್ರಿಯೋಚಿತಾ ॥ ೧೭ ॥
ಯಾದೃಶೋ ಹಿ ಗುಣೋ ಯಸ್ಯ ಸ್ವಭಾವಸ್ತಸ್ಯ ತಾದೃಶಃ ।
ಸ್ವಸ್ವಭಾವಾನುಸಾರೇಣ ಪ್ರವೃತ್ತಿಃ ಸ್ಯಾಚ್ಚ ಕರ್ಮಣಿ ॥ ೧೮ ॥
ಸಾತ್ವಿಕಾನಾಂ ಹಿ ವೋ ದೇವಃ ಸಾಕ್ಷಾದ್ವಿಷ್ಣೂ ರಮಾಪತಿಃ ।
ಅಹಿಂಸಾಯಜ್ಞೇಽಸ್ತಿ ತತೋಽಧಿಕಾರಸ್ತಸ್ಯ ತುಷ್ಟಯೇ ॥ ೧೯ ॥
ಪ್ರತ್ಯಕ್ಷಪಶುಮಾಲಭ್ಯ ಯಜ್ಞಸ್ಯಾಚರಣಂ ತು ಯತ್ ।
ಧರ್ಮಃ ಸ ವಿಪರೀತೋ ವೈ ಯುಷ್ಮಾಕಂ ಸುರಸತ್ತಮಾಃ ॥ ೨೦ ॥
ರಜಸ್ತಮೋಗುಣವಶಾದಾಸುರೀಂ ಸಂಪದಂ ಶ್ರಿತಾಃ ।
ಯುಷ್ಮಾಕಂ ಯಾಜಕಾ ಹ್ಯೇತೇ ಸಂತ್ಯವೇದವಿದೋ ಯಥಾ ॥ ೨೧ ॥
ತತ್ಸಂಗಾದೇವ ಯುಷ್ಮಾಕಂ ಸಾಂಪ್ರತಂ ವ್ಯತ್ಯಯೋ ಮತೇಃ ।
ಜಾತಸ್ತೇನೇದೃಶಂ ಕರ್ಮ ಪ್ರಾರಬ್ಧಮಿತಿ ನಿಶ್ಚಿತಂ ॥ ೨೨ ॥
ರಾಜಸಾನಾಂ ತಾಮಸಾನಾಮಾಸುರಾಣಾಂ ತಥಾ ನೃಣಾಂ ।
ಯಥಾಗುಣಂ ಭೈರವಾದ್ಯಾ ಉಪಾಸ್ಯಾಃ ಸಂತಿ ದೇವತಾಃ ॥ ೨೩ ॥

---

೧೭. ಸಾತ್ವಿಕರಾದ ನಿಮಗೆ ವೇದದ ಅರ್ಥವು ಹೇಗಿದೆಯೋ ಹಾಗೆಯೇ ಗ್ರಹಿಸುವುದು ತಕ್ಕುದು. ಬೇರೊಂದು ರೀತಿಯಲ್ಲಿ ಗ್ರಹಿಸುವುದು ಯುಕ್ತವಲ್ಲವೇ ಅಲ್ಲ. ಅಂತಹ ಕ್ರಿಯೆಯು ಉಚಿತವೂ ಅಲ್ಲವು.

೧೮. ಯಾವನಿಗೆ ಯಾವ ಗುಣವಿರುತ್ತದೆಯೋ ಅವನ ಸ್ವಭಾವವೂ ಅದಕ್ಕೆ ಅನುಗುಣವಾಗಿಯೇ ಇರುತ್ತದೆ. ಅವರವರ ಸ್ವಭಾವಕ್ಕೆ ಅನುಸಾರವಾಗಿ ಕರ್ಮದಲ್ಲಿ ಪ್ರವೃತ್ತಿಯುಂಟಾಗುತ್ತದೆ.

೧೯. ಸಾತ್ವಿಕರಾದ ನಿಮಗೆ ರಮಾಪತಿಯಾದ ಸಾಕ್ಷಾದ್ವಿಷ್ಣುವೇ ದೇವರು. ಅವನಿಗೆ ಸಂತುಷ್ಟಿಯನ್ನುಂಟುಮಾಡುವುದಕ್ಕೆ ಅಹಿಂಸೆಯಿಂದ ಯಜ್ಞಮಾಡುವುದರಲ್ಲಿ ನಿಮಗೆ ಅಧಿಕಾರವುಂಟು.

೨೦. ಎಲೈ ಸುರಶ್ರೇಷ್ಠರೇ! ಪ್ರತ್ಯಕ್ಷವಾಗಿ ಪಶುವನ್ನು ಕೊಂದು ಯಜ್ಞವನ್ನು ಆಚರಿಸುವ ಧರ್ಮವು ನಿಮಗೆ ವಿಪರೀತ ಧರ್ಮವಾಗುವುದು.

೨೧. ನಿಮಗೆ ಯಾಜಕರಾಗಿರುವ ಇವರು ರಜೋಗುಣ ತಮೋಗುಣಗಳಿಗೆ ವಶರಾಗಿ ಆಸುರೀಸಂಪತ್ತನ್ನು ಆಶ್ರಯಿಸಿ ವೇದಗಳನ್ನರಿಯದವರಂತೆ ಆಗಿದ್ದಾರೆ.

೨೨. ಇವರ ಸಹವಾಸದಿಂದಲೇ ನಿಮಗೀಗ ಬುದ್ಧಿವ್ಯತ್ಯಾಸವುಂಟಾಗಿದೆ. ಆದುದರಿಂದ ಈ ರೀತಿಯ ಕರ್ಮವನ್ನು ಪ್ರಾರಂಭಿಸಿರುವಿರೆಂಬುದು ನಿಶ್ಚಯ.

೨೩. ರಜೋಗುಣಯುಕ್ತರೂ, ತಮೋಗುಣಯುಕ್ತರೂ ಆದ ಅಸುರ

ಸ್ವಗುಣಾನುಗುಣಾತ್ಮೀಯದೇವತಾತುಷ್ಟಯೇ ಭುವಿ ।
ಹಿಂಸ್ರಯಜ್ಞವಿಧಾನಂ ಯತ್ತೇಷಾಮೇವೋಚಿತಂ ಹಿ ತತ್ ॥ ೨೪ ॥
ತತ್ರಾಪಿ ವಿಷ್ಣುಭಕ್ತಾ ಯೇ ದೈತ್ಯರಕ್ಷೋನರಾದಯಃ ।
ತೇಷಾಮಪ್ಯುಚಿತೋ ನಾಸ್ತಿ ಹಿಂಸ್ರಯಜ್ಞಃ ಕುತಸ್ತು ವಃ ॥ ೨೫ ॥
ಯಜ್ಞಶೇಷೋ ಹಿ ಸರ್ವೇಷಾಂ ಯಜ್ಞಕರ್ಮಾನುತಿಷ್ಠತಾಂ ।
ಅನುಜ್ಞಾತೋ ಭಕ್ಷಣಾರ್ಥಂ ನಿಗಮೇನೈವ ವರ್ತತೇ ॥ ೨೬ ॥
ಸಾತ್ವಿಕಾನಾಂ ದೇವತಾನಾಂ ಸುರಾಮಾಂಸಾಶನಂ ಕ್ವಚಿತ್ ।
ಅಸ್ಮಾಭಿಸ್ತ್ವೀಕ್ಷಿತಂ ನೈವ ನ ಶ್ರುತಂ ಚ ಸತಾಂ ಮುಖಾತ್ ॥ ೨೭ ॥
ತಸ್ಮಾದ್ವ್ರೀಹಿಭಿರೇವಾಸೌ ಯಜ್ಞಃ ಕ್ಷೀರೇಣ ಸರ್ಪಿಷಾ ।
ಮೇಧ್ಯೈರನ್ನರಸೈಶ್ಚಾನ್ಯೈಃ ಕಾರ್ಯೋ ನ ಪಶುಹಿಂಸಯಾ ॥ ೨೮ ॥
ತತ್ರಾಪಿ ಬೀಜೈರ್ಯರ್ಷ್ಟವ್ಯಮಜಸಂಜ್ಞಾನುಪಾಗತೈಃ ।
ತ್ರಿವರ್ಷಕಾಲಮುಷಿತೈರ್ನ ಯೇಷಾಂ ಪುನರುದ್ಗಮಃ ॥ ೨೯ ॥

---

ರಿಗೂ, ನರರಿಗೂ ಅವರವರ ಗುಣಕ್ಕೆ ಅನುಸಾರವಾಗಿ ಉಪಾಸನೆ ಮಾಡಲು ಭೈರವಾದಿ ದೇವತೆಗಳಿದ್ದಾರೆ.

೨೪. ತಮ್ಮ ಗುಣಕ್ಕೆ ಅನುಗುಣವಾದ ದೇವತೆಗಳ ಸಂತುಷ್ಟಿಗಾಗಿ ಭೂಮಿಯಲ್ಲಿ ಹಿಂಸೆಯಿಂದ ಕೂಡಿದ ಯಜ್ಞವಿಧಾನವಾವುದಿದೆಯೋ ಅದು ಅವರಿಗೇ ಉಚಿತವಾದುದು.

೨೫. ಅಲ್ಲಿ ಕೂಡ ದೈತ್ಯ, ರಾಕ್ಷಸ, ನರರೇ ಮೊದಲಾದವರಲ್ಲಿ ಯಾರು ವಿಷ್ಣುಭಕ್ತರಾಗಿರುವರೋ ಅವರಿಗೆ ಹಿಂಸಾಯಜ್ಞವು ಉಚಿತವಲ್ಲ. ಹಾಗಿರುವಲ್ಲಿ ಸಾತ್ವಿಕರಾದ ನಿಮಗೆ ಹೇಗೆತಾನೆ ಇದು ಉಚಿತವಾದೀತು ?

೨೬. ಯಜ್ಞಕರ್ಮವನ್ನು ಮಾಡುವ ಸರ್ವರಿಗೂ ಯಜ್ಞಶೇಷವನ್ನು ಭಕ್ಷಣೆಮಾಡಬೇಕೆಂಬ ಅನುಜ್ಞೆಯಿರುವುದು. ವೇದದಿಂದಲೇ ಈ ಅನುಜ್ಞೆಯಾಗಿರುವುದು.

೨೭. ಸಾತ್ವಿಕರಾದ ದೇವತೆಗಳಿಗೆ ಸುರಾಪಾನವನ್ನೂ, ಮಾಂಸಾಹಾರವನ್ನೂ ನಾವು ಒಮ್ಮೆಯಾದರೂ ಸತ್ಪುರುಷರಿಂದ ಕಂಡು ಕೇಳಿಲ್ಲವು.

೨೮. ಆದುದರಿಂದ ಬತ್ತ, ಹಾಲು, ತುಪ್ಪ, ಪವಿತ್ರವಾದ ಅನ್ನ, ಇತರ ರಸಗಳು ಇವುಗಳಿಂದಲೇ ಯಜ್ಞವನ್ನು ಮಾಡಬೇಕು. ಪಶುಹಿಂಸೆಯಿಂದ ಮಾಡತಕ್ಕದಲ್ಲವು.

೨೯. ಅಲ್ಲಿಯೂ ಮೂರು ವರ್ಷಗಳಕಾಲ ಕೂಡಿಟ್ಟದ್ದು ಮೊಳಕೆ ಹುಟ್ಟದಂತಾಗಿ 'ಅಜ' ಎಂದು ಹೆಸರುಹೊಂದಿರುವ ಧಾನ್ಯಗಳಿಂದಲೇ ಯಜ್ಞ ಮಾಡಬೇಕು.

ಅದ್ರೋಹಶ್ಚಾಪ್ಯಲೋಭಶ್ಚ ದಮೋ ಭೂತದಯಾ ತಪಃ ।
ಬ್ರಹ್ಮಚರ್ಯಂ ತಥಾ ಸತ್ಯಮದಂಭಶ್ಚ ಕ್ಷಮಾ ಧೃತಿಃ ॥ ೩೦ ॥
ಸನಾತನಸ್ಯ ಧರ್ಮಸ್ಯ ರೂಪಮೇತದುದೀರಿತಂ ।
ತದತಿಕ್ರಮ್ಯ ಯೋ ವರ್ತೇದ್ಧರ್ಮಘ್ನಃ ಸ ಪತತ್ಯಧಃ ॥ ೩೧ ॥

ಸ್ಕಂದ ಉವಾಚ :—

ಇತ್ಥಂ ವೇದರಹಸ್ಯಜ್ಞೈರ್ಮಹಾಮುನಿಭಿರಾದರಾತ್ ।
ಬೋಧಿತಾ ಅಪಿ ಸನ್ನೀತ್ಯಾ ಸ್ವಪ್ರತಿಜ್ಞಾವಿಘಾತತಃ ।
ತದ್ವಾಕ್ಯಂ ಜಗೃಹುರ್ನೈವ ತತ್ಪ್ರಾಮಾಣ್ಯವಿದೋಽಪಿ ತೇ ॥ ೩೨ ॥
ಮಹದ್ವ್ಯತಿಕ್ರಮಾತ್ತರ್ಹಿ ಮಾನಕ್ರೋಧಮದಾದಯಃ ।
ವಿವಿಶುಸ್ತೇಷ್ವಧರ್ಮಸ್ಯ ವಂಶಾಚ್ಛಿದ್ರಗವೇಷಣಃ ॥ ೩೩ ॥
ಅಜಶ್ಛಾಗೋ ನ ಬೀಜಾನೀತ್ಯಾದಿವಾದಿಷು ತೇಷ್ವಥ ।
ವಿಮನಸ್ಸ್ವೃಷಿವರ್ಯೇಷು ಪುನಸ್ತಾನ್ ಬೋಧಯತ್ಸು ಚ ॥ ೩೪ ॥
ರಾಜೋಪರಿಚರಃ ಶ್ರೀಮಾನ್ ತತ್ರೈವಾಗಾದ್ಯದೃಚ್ಛಯಾ ।
ತೇಜಸಾ ದ್ಯೋತಯನ್ನಾಶಾ ಇಂದ್ರಸ್ಯ ಪರಮಃ ಸಖಾ ॥ ೩೫ ॥

---

೩೦–೩೧. ದ್ರೋಹಮಾಡದಿರುವುದು, ಲೋಭವಿಲ್ಲದಿರುವುದು, ದಮ, ಭೂತದಯೆ, ತಪಸ್ಸು, ಬ್ರಹ್ಮಚರ್ಯ, ಸತ್ಯ, ದಂಭವಿಲ್ಲದಿರುವುದು, ಕ್ಷಮೆ, ಧೃತಿ (ಧೈರ್ಯ) ಇವು ಸನಾತನವಾದ ಧರ್ಮದ ರೂಪವೆಂದು ಹೇಳಲಾಗಿದೆ. ಅದನ್ನು ಅತಿಕ್ರಮಿಸಿ ಯಾವನು ವರ್ತಿಸುವನೋ ಅವನು ಧರ್ಮಘ್ನನಾಗಿ ಅಧಃಪತನವನ್ನು ಪಡೆಯುತ್ತಾನೆ.''

೩೨. ಸ್ಕಂದನು ಹೇಳುತ್ತಾನೆ:— '' ಈ ರೀತಿಯಾಗಿ ವೇದರಹಸ್ಯಗಳನ್ನು ಬಲ್ಲವರಾದ ಆ ಮಹಾಮುನಿಗಳು ಆದರದಿಂದ ಬೋಧಿಸಿದರೂ, ಅವರು ಸನ್ನೀತಿಯಿಂದ ತಮ್ಮ ಪ್ರತಿಜ್ಞೆಗೆ ವಿಘಾತವುಂಟಾಗುವುದೆಂದೆಣಿಸಿ ಆ ಋಷಿವಾಕ್ಯಗಳ ಪ್ರಾಮಾಣ್ಯವನ್ನು ಬಲ್ಲವರಾಗಿದ್ದರೂ ಅವರ ಮಾತನ್ನು ಗ್ರಹಿಸಲೇ ಇಲ್ಲವು.

೩೩. ಮಹತ್ತರವಾದ ಆ ವ್ಯತಿಕ್ರಮದಿಂದ ಅಧರ್ಮದ ವಂಶದಲ್ಲಿ ಹುಟ್ಟಿ ಛಿದ್ರವನ್ನೇ ಹುಡುಕುತ್ತಿರುವುವೂ ಆದ ಗರ್ವ, ಕ್ರೋಧ, ಮದ ಮೊದಲಾದವು ಅವರಲ್ಲಿ ಪ್ರವೇಶಮಾಡಿದುವು.

೩೪–೩೫. 'ಅಜ' ಎಂದರೆ ಆಡು, (ಹುಟ್ಟಿದ) ಬೀಜಗಳಲ್ಲ ಎಂದು ಮೊದಲಾಗಿ ಅವರು ವಾದಿಸುತ್ತಿರಲು, ಋಷಿವರ್ಯರು ಮತ್ತೆ ಅವರನ್ನು ಬೋಧಿಸುತ್ತಿರಲಾಗಿ, ಶ್ರೀಮಂತನಾದ ಉಪರಿಚರರಾಜನು ಮನಬಂದತ್ತ ಸುತ್ತುತ್ತ ಅಲ್ಲಿಗೆ ಬಂದನು. ಇಂದ್ರನಿಗೆ ಪರಮಸ್ನೇಹಿತನಾದ ಆತನು ತನ್ನ ತೇಜಸ್ಸಿನಿಂದ ದಿಕ್ಕುಗಳೆಲ್ಲವನ್ನೂ ಬೆಳಗುತ್ತಲಿದ್ದನು.

**ತಂ ದೃಷ್ಟ್ವಾ ಸಹಸಾಯಾಂತಂ ವಸುಂ ತೇ ತ್ವಂತರಿಕ್ಷಗಂ ।**
**ಊಚುರ್ದ್ವಿಜಾತಯೋ ದೇವಾನೇಷ ಚ್ಛೇತ್ಸ್ಯತಿ ಸಂಶಯಂ ॥ ೩೬ ॥**
**ಏಷ ಭೂಮಿಪತಿಃ ಪೂರ್ವಂ ಮಹಾಯಜ್ಞಾನ್ಸಹಸ್ರಶಃ ।**
**ಚಕ್ರೇ ಸಾತ್ವತತಂತ್ರೋಕ್ತವಿಧಿನಾರಣ್ಯಕೇನ ಚ ॥ ೩೭ ॥**
**ಯೇಷು ಸಾಕ್ಷಾತ್ಪಶುವಧಃ ಕಸ್ಮಿಂಶ್ಚಿದಪಿ ನಾಽಭವತ್ ।**
**ನ ದಕ್ಷಿಣಾನುಕಲ್ಪಶ್ಚ ನಾಪ್ರತ್ಯಕ್ಷಸುರಾರ್ಚನಂ ॥ ೩೮ ॥**
**ಅಹಿಂಸಾಧರ್ಮರಕ್ಷಾಭ್ಯಾಂ ಖ್ಯಾತೋಽಸೌ ಸರ್ವತೋ ನೃಪಃ ।**
**ಅಗ್ರಣೀರ್ವಿಷ್ಣುಭಕ್ತಾನಾಂ ಏಕಪತ್ನೀವ್ರತಃ ॥ ೩೯ ॥**
**ಈದೃಶೋ ಧಾರ್ಮಿಕವರಃ ಸತ್ಯಸಂಧಶ್ಚ ವೇದವಿತ್ ।**
**ಕಥಂಚಿತ್ ನಾನ್ಯಥಾ ಬ್ರೂಯಾತ್ ವಾಕ್ಯಮೇಷ ಮಹಾನ್ವಸುಃ ॥ ೪೦ ॥**
**ಏವಂ ತೇ ಸಂವಿದಂ ಕೃತ್ವಾ ವಿಬುಧಾ ಋಷಯಸ್ತಥಾ ।**
**ಅಪೃಚ್ಛನ್ ಸಹಸಾಽಭ್ಯೇತ್ಯ ವಸುಂ ರಾಜಾನಮುತ್ಸುಕಾಃ ॥ ೪೧ ॥**

---

೩೬. ಅಂತರಿಕ್ಷಮಾರ್ಗವಾಗಿ ಇದ್ದಕ್ಕಿದ್ದಂತೆ ಅಲ್ಲಿಗೆ ಬರುತ್ತಿರುವ ಆ ವಸುವನ್ನು ಕಂಡು ಆ ಬ್ರಾಹ್ಮಣರು ದೇವತೆಗಳನ್ನು ಕುರಿತು, 'ಈ ದೊರೆಯು ನಮ್ಮ ಸಂಶಯವನ್ನು ಪರಿಹರಿಸುತ್ತಾನೆ' ಎಂದು ನುಡಿದರು.

೩೭. ಈ ಭೂಪತಿಯು ಪೂರ್ವದಲ್ಲಿ ಸಹಸ್ರಾರು ಮಹಾಯಜ್ಞಗಳನ್ನು ಸಾತ್ವತತಂತ್ರದಲ್ಲಿ ಹೇಳಿರುವ ವಿಧಿಯಿಂದಲೂ, ಆರಣ್ಯಕವಿಧಾನದಿಂದಲೂ ಮಾಡಿದ್ದಾನೆ.

೩೮. ಅವುಗಳಲ್ಲಿ ಯಾವುದೊಂದರಲ್ಲೇ ಆದರೂ ಸಾಕ್ಷಾತ್ತಾಗಿ ಪಶುವಧೆಯಾಗಲಿಲ್ಲ. ಅದಕ್ಕೆ ಪ್ರತ್ಯಾಮ್ನಾಯವಾಗಿ ದಕ್ಷಿಣಾನುಕಲ್ಪನೆಯೂ ಆಗಲಿಲ್ಲ. ಅಪ್ರತ್ಯಕ್ಷವಾಗಿ ಸುರಾರ್ಚನೆಯೂ ನಡೆಯಲಿಲ್ಲ.

೩೯. ಅಹಿಂಸೆ ಮತ್ತು ಧರ್ಮರಕ್ಷಣೆ ಇವೆರಡರಿಂದಲೂ ಈ ರಾಜನು ಎಲ್ಲ ಕಡೆಯಲ್ಲಿಯೂ ವಿಖ್ಯಾತನಾಗಿದ್ದಾನೆ. ಇವನು ವಿಷ್ಣುಭಕ್ತರಲ್ಲಿ ಅಗ್ರಗಣ್ಯನು. ಏಕಪತ್ನೀವ್ರತವನ್ನು ನಡೆಸುವವನು.

೪೦. ಇವನು ಧಾರ್ಮಿಕಶ್ರೇಷ್ಠನೂ, ಸತ್ಯಸಂಧನೂ, ವೇದಜ್ಞನೂ ಆಗಿದ್ದಾನೆ. ಈ ರೀತಿ ಇರುವ ಮಹಾತ್ಮನಾದ ಈ ವಸುರಾಜನು ಸತ್ಯವನ್ನು ಮೀರಿದ ಮಾತನ್ನೆಂದಿಗೂ ಆಡನು.

೪೧. ದೇವತೆಗಳೂ ಋಷಿಗಳೂ ಹೀಗೆಂದು ಗೊತ್ತುಮಾಡಿಕೊಂಡು ಸರಸರನೆ ವಸುರಾಜನ ಎದುರಿಗೆ ಬಂದು ಉತ್ಸುಕರಾಗಿ ಪ್ರಶ್ನೆಮಾಡಿದರು.

ದೇವಾ ಮಹರ್ಷಯ ಊಚುಃ:—
ಭೋ ರಾಜನ್ಕೇನ ಯಷ್ಟವ್ಯಂ ಪಶುನಾಹೋಸ್ವಿದೌಷಧೈಃ ।
ಏತಂ ನಃ ಸಂಶಯಂ ಛಿಂದಿ ಪ್ರಮಾಣಂ ನೋ ಭವಾನ್ಮತಃ ॥ ೪೨ ॥
ಸ್ಕಂದ ಉವಾಚ:—
ಸ ತಾನ್ ಕೃತಾಂಜಲಿರ್ಭೂತ್ವಾ ಪರಿಪಪ್ರಚ್ಛ ವೈ ವಸುಃ ।
ಕಸ್ಯ ವಃ ಕೋ ಮತಃ ಪಕ್ಷೋ ಬ್ರೂತ ಸತ್ಯಂ ಸಮಾಹಿತಾಃ ॥ ೪೩ ॥
ಮಹರ್ಷಯ ಊಚುಃ:—
ಧಾನ್ಯೈರ್ಯಷ್ಟವ್ಯಮಿತ್ಯೇವ ಪಕ್ಷೋಽಸ್ಮಾಕಂ ನರಾಧಿಪ ।
ದೇವಾನಾಂ ತು ಪಶುಃ ಪಕ್ಷೋ ಮತಂ ರಾಜನ್ವದಾತ್ಮನಃ ॥ ೪೪ ॥
ಸ್ಕಂದ ಉವಾಚ:—
ದೇವಾನಾಂ ತು ಮತಂ ಜ್ಞಾತ್ವಾ ವಸುಸ್ತತ್ಪಕ್ಷಸಂಶ್ರಯಾತ್ ।
ಛಾಗಾದಿಪಶುನೈವೇಜ್ಯಮಿತ್ಯುವಾಚ ವಚಸ್ತದಾ ॥ ೪೫ ॥
ಏವಂ ಹಿ ಮಾನಿನಾಂ ಪಕ್ಷಮಸಂತಂ ಸ ಉಪಾಶ್ರಿತಃ ।
ಧರ್ಮಜ್ಞೋಽಪ್ಯವದನ್ಮಿಥ್ಯಾ ವೇದಂ ಹಿಂಸಾಪರಂ ನೃಪಃ ॥ ೪೬ ॥

---

೪೨. ದೇವತೆಗಳೂ ಮಹರ್ಷಿಗಳೂ ಕೇಳುತ್ತಾರೆ:—"ಅಯ್ಯಾ ರಾಜನೆ! ಯಾವುದರಿಂದ ಯಜ್ಞಮಾಡಬೇಕು? ಪಶುವಿನಿಂದಲೋ ಅಥವಾ ಓಷಧಿಗಳಿಂದಲೋ? ಈ ನಮ್ಮ ಸಂಶಯವನ್ನು ಪರಿಹರಿಸು. ಈ ವಿಷಯದಲ್ಲಿ ನೀನೇ ಪ್ರಮಾಣವೆಂದು ನಮ್ಮ ಅಭಿಪ್ರಾಯವಾಗಿದೆ" ಎಂದರು.

೪೩. ಸ್ಕಂದನು ಹೇಳುತ್ತಾನೆ:–ಆ ವಸುವು ಅಂಜಲಿಬದ್ಧನಾಗಿ ಅವರನ್ನು ಪ್ರಶ್ನೆಮಾಡಿದನು. 'ನಿಮ್ಮ ಪಕ್ಷಗಳು ಯಾವುವು? ನಿಮ್ಮಲ್ಲಿ ಯಾರ ಮತವು ಯಾವುದು? ಸಮಾಧಾನದಿಂದ ಸತ್ಯವನ್ನು ಹೇಳಿರಿ' ಎಂದು ಕೇಳಿದನು.

೪೪. ಮಹರ್ಷಿಗಳು ಹೇಳುತ್ತಾರೆ:—"ಅಯ್ಯಾ ನರಪತಿಯೇ! ಧಾನ್ಯಗಳಿಂದ ಮಾತ್ರವೇ ಯಜ್ಞಮಾಡಬೇಕೆಂದು ನಮ್ಮ ಪಕ್ಷವು. ಪಶುವನ್ನು ಯಜ್ಞಮಾಡಬೇಕೆಂದು ದೇವತೆಗಳ ಪಕ್ಷವು. ಓ ಮಹಾರಾಜಾ! ನಿನ್ನ ಅಭಿಪ್ರಾಯವೇನು, ಹೇಳು?"

೪೫. ಸ್ಕಂದನು ಹೇಳುತ್ತಾನೆ:—ದೇವತೆಗಳ ಅಭಿಪ್ರಾಯವನ್ನರಿತು ವಸುಮಹಾರಾಜನು ಅವರ ಪಕ್ಷವನ್ನಾಶ್ರಯಿಸಿದ್ದುದರಿಂದ 'ಆಡು ಮೊದಲಾದ ಪಶುಗಳಿಂದಲೇ ಯಜ್ಞಮಾಡಬೇಕು' ಎಂದು ನುಡಿದನು.

೪೬. ಹೀಗೆ ಆ ನೃಪತಿಯು ಧರ್ಮಜ್ಞನಾದರೂ ಗರ್ವಿಗಳಾದ ಆ ದೇವತೆಗಳ ಅಸತ್ಪಕ್ಷವನ್ನು ಆಶ್ರಯಿಸಿ ವೇದವು ಹಿಂಸಾಪರವೆಂದು ಸುಳ್ಳು ನುಡಿದನು.

**ತಸ್ಮಿನ್ನೇವ ಕ್ಷಣೇ ರಾಜಾ ವಾಗ್ದೋಷಾದಂತರಿಕ್ಷತಃ ।**
**ಅಧಃ ಪಪಾತ ಸಹಸಾ ಭೂಮಿಂ ಚ ಪ್ರವಿವೇಶ ಸಃ ॥ ೪೭ ॥**
**ಮಹತೀಂ ವಿಪದಂ ಪ್ರಾಪ ಭೂಮಿಮಧ್ಯಗತೋ ನೃಪಃ ।**
**ಸ್ಮೃತಿಸ್ತ್ವೇನಂ ನ ಪ್ರಜಹೌ ತದಾ ನಾರಾಯಣಾಶ್ರಯಾತ್ ॥ ೪೮ ॥**
**ಮೋಚಯಿತ್ವಾ ಪಶೂನ್ ಸರ್ವಾನ್ ತತಸ್ತೇ ತ್ರಿದಿವೌಕಸಃ ।**
**ಹಿಂಸಾಭೀತಾ ದಿವಂ ಜಗ್ಮುಃ ಸ್ವಾಶ್ರಮಾಂಶ್ಚ ಮಹರ್ಷಯಃ ॥ ೪೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಉಪರಿಚರವಸೋಃ ಅಧಃಪತನವರ್ಣನಂ" ನಾಮ ಷಷ್ಠೋಽಧ್ಯಾಯಃ**

---

೪೭. ಆ ಕ್ಷಣವೇ ಅವನು ಆ ವಾಗ್ದೋಷದಿಂದ ಅಂತರಿಕ್ಷದಿಂದ ಕೆಳಕ್ಕೆ ಬಿದ್ದು ಭೂಮಿಯನ್ನು ಪ್ರವೇಶಮಾಡಿದನು.

೪೮. ಭೂಮಧ್ಯವನ್ನು ಸೇರಿದ ರಾಜನು ಮಹತ್ತಾದ ವಿಪತ್ತನ್ನು ಹೊಂದಿದನು. ಆದರೆ ಅವನಿಗೆ ಶ್ರೀಮನ್ನಾರಾಯಣನ ಆಶ್ರಯವಿದ್ದುದರಿಂದ ಪೂರ್ವಜನ್ಮದ ಸ್ಮೃತಿಯುಮಾತ್ರ ಹೋಗಿರಲಿಲ್ಲ.

೪೯. ಬಳಿಕ ದೇವತೆಗಳು ಹಿಂಸೆಗೆ ಹೆದರಿ ಪಶುಗಳನ್ನೆಲ್ಲ ಕಟ್ಟುಕಳಚಿ ಬಿಟ್ಟು ಸ್ವರ್ಗಕ್ಕೆ ಹೊರಟುಹೋದರು. ಮಹರ್ಷಿಗಳೂ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಉಪರಿಚರವಸುವಿನ ಅಧಃಪತನವೃತ್ತಾಂತವರ್ಣನ" ವೆಂಬ ಆರನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಉಪರಿಚರವಸುಮೋಕ್ಷನಿರೂಪಣಂ

ಸ್ಕಂದ ಉವಾಚ :—

ಭೂಮಧ್ಯಗಃ ಸ ರಾಜಾಽಥ ಸ್ವಕೃತಂ ಕರ್ಮ ಗರ್ಹಯನ್ ।
ಅನುತಪ್ಯಮಾನಶ್ಚ ಭೃಶಂ ಮಾನಯಂಸ್ತಾನ್ ಬೃಹನ್ಮುನೀನ್ ।
ಜಜಾಪ ಭಗವನ್ಮಂತ್ರಂ ತ್ರ್ಯಕ್ಷರಂ ಮನಸಾ ಸದಾ ॥ ೧ ॥
ತತ್ರಾಪಿ ಪರಯಾ ಭಕ್ತ್ಯಾ ಪಂಚಕಾಲಂ ಸ್ವಚೇತಸಾ ।
ಅಯಜದ್ಧರಿಂ ಸುರಪತಿಂ ಭೂಮೇರ್ವಿವರ ಆದರಾತ್ ॥ ೨ ॥
ತತೋಽಸ್ಯ ತುಷ್ಟೋ ಭಗವಾನ್ ವಾಸುದೇವೋ ಜಗತ್ಪತಿಃ ।
ಆಪದ್ಯಪಿ ಯಥಾಕಾಲಂ ಯಥಾಶಾಸ್ತ್ರಂ ಸ್ವಮರ್ಚತಃ ॥ ೩ ॥
ವರದೋ ಭಗವಾನ್ವಿಷ್ಣುಃ ಸಮೀಪಸ್ಥಂ ದ್ವಿಜೋತ್ತಮಂ ।
ಗರುತ್ಮಂತಂ ಮಹಾವೇಗಮಾಬಭಾಷೇ ಸ್ವಯಂ ತತಃ ॥ ೪ ॥

ಶ್ರೀ ಭಗವಾನುವಾಚ :—

ದ್ವಿಜೋತ್ತಮ ಮಹಾಭಾಗ ಗಮ್ಯತಾಂ ವಚನಾನ್ಮಮ ।
ಸಮ್ರಾಡ್ರಾಜಾ ವಸುರ್ನಾಮ ಧರ್ಮಾತ್ಮಾ ಮಾಂ ಸಮಾಶ್ರಿತಃ ॥ ೫ ॥

---

### ಕನ್ನಡದ ಅನುವಾದ

### ಉಪರಿಚರವಸುಮೋಕ್ಷನಿರೂಪಣ

೧. ಸ್ಕಂದನು ಹೇಳುತ್ತಾನೆ :—ಬಳಿಕ ಭೂಮಧ್ಯವನ್ನು ಸೇರಿ ಆ ವಸುರಾಜನು ತಾನು ಮಾಡಿದ ಕರ್ಮವನ್ನು ನಿಂದಿಸುತ್ತಲೂ, ಅದಕ್ಕಾಗಿ ಬಹಳವಾಗಿ ಅನುತಾಪಪಡುತ್ತಲೂ ಮಹಾತ್ಮರಾದ ಆ ಮಹಾಮುನಿಗಳನ್ನು ಮನ್ನಿಸುತ್ತ ತ್ರ್ಯಕ್ಷರರೂಪವಾದ ಅಚ್ಯುತಮಂತ್ರವನ್ನು ಯಾವಾಗಲೂ ಮನಸ್ಸಿನಲ್ಲಿಯೇ ಜಪಿಸುತ್ತಿದ್ದನು.

೨. ಅಲ್ಲಿಯೂ ಪರಮಭಕ್ತಿಯಿಂದ ಪಂಚಕಾಲಗಳಲ್ಲಿಯೂ ಮನಃಪೂರ್ವಕವಾಗಿ ಸುರಪತಿಯಾದ ಶ್ರೀಹರಿಯನ್ನು ಆ ಭೂಮಿಯ ಬಿಲದಲ್ಲಿಯೇ ಆದರದಿಂದ ಆರಾಧಿಸುತ್ತಿದ್ದನು.

೩. ಆಪತ್ತಿನಲ್ಲಿಯೂ ವಿಹಿತಕಾಲದಲ್ಲಿ ಶಾಸ್ತ್ರಕ್ಕೆ ಅನುಸಾರವಾಗಿ ತನ್ನನ್ನು ಅರ್ಚಿಸುತ್ತಿದ್ದ ಅವನಲ್ಲಿ ಜಗತ್ಪತಿಯಾದ ಶ್ರೀವಾಸುದೇವನು ಸಂತುಷ್ಟನಾದನು.

೪. ಭಗವಂತನಾದ ಆ ವಿಷ್ಣುವು ವರದನಾಗಿ ಸಮೀಪದಲ್ಲಿದ್ದ ಮಹಾವೇಗವಂತನಾದ ಪಕ್ಷಿರಾಜ ಗರುಡನನ್ನು ಕರೆದು ತಾನಾಗಿಯೇ ಇಂತೆಂದನು.

೫–೬. ಶ್ರೀಭಗವಂತನು ಹೇಳುತ್ತಾನೆ:— "ಪಕ್ಷಿಶ್ರೇಷ್ಠಾ! ಮಹಾಭಾಗನಾದ ನೀನು ನನ್ನ ಮಾತಿನಂತೆ ಈಗ ಸಾಮ್ರಾಜ್ಯದೊಡೆಯನೂ,

ಬ್ರಹ್ಮಾತಿಕ್ರಮದೋಷೇಣ ಪ್ರವಿಷ್ಟೋ ವಸುಧಾತಲಂ ।
ತನ್ಮಾನನಾ ಕೃತಾ ತೇನ ತದ್ಗಚ್ಛಾಪ್ಯ ತದಂತಿಕಂ ॥ ೬ ॥
ಭೂಮೇರ್ವಿವರಸಂಗುಪ್ತಂ ಗರುಡೈನಂ ಮಮಾಜ್ಞಯಾ ।
ಅಧಶ್ಚರಂ ನೃಪಶ್ರೇಷ್ಠಂ ಖೇಚರಂ ಕುರು ಮಾ ಚಿರಂ ॥ ೭ ॥

ಸ್ಕಂದ ಉವಾಚ:—

ಗರುತ್ಮಾನಥ ವಿಕ್ಷಿಪ್ಯ ಪಕ್ಷೌ ಮಾರುತವೇಗವಾನ್ ।
ವಿವೇಶ ವಿವರಂ ಭೂಮ್ಯಾ ಯತ್ರಾಸ್ತೇ ವಾಗ್ಯತೋ ವಸುಃ ॥ ೮ ॥
ತತ ಏನಂ ಸಮುತ್ಕ್ಷಿಪ್ಯ ಸ್ವಚಂಚ್ವಾ ವಿನತಾಸುತಃ ।
ಉತ್ಪಪಾತ ನಭಸ್ತೂರ್ಣಂ ತತ್ರ ಚೈನಮಮುಂಚತ ॥ ೯ ॥
ತಸ್ಮಿನ್ಮುಹೂರ್ತೇ ಸಂಜಜ್ಞೇ ರಾಜೋಪರಿಚರಃ ಪುನಃ ।
ಸಶರೀರೋ ಗತಃ ಸ್ವರ್ಗಂ ಪರಮಂ ಸುಖಮಾಪ್ತವಾನ್ ॥ ೧೦ ॥
ಏವಂ ತೇನಾಪಿ ಬ್ರಹ್ಮರ್ಷೇ ವಾಗ್ದೋಷಾತ್ಸದವಜ್ಞಯಾ ।
ಪ್ರಾಪ್ತಾ ಗತಿರಯಜ್ವಾಹಾರ್ ಧರ್ಮಜ್ಞೇನ ಮಹಾತ್ಮನಾ ॥ ೧೧ ॥

---

ಧರ್ಮಾತ್ಮನೂ, ನನ್ನನ್ನು ಆಶ್ರಯಿಸಿರುವವನೂ, ಬ್ರಾಹ್ಮಣರನ್ನು ಅತಿಕ್ರಮಿಸಿದ ದೋಷದಿಂದ ಭೂಮಿತಲವನ್ನು ಪ್ರವೇಶಿಸಿದವನೂ, ಈಗ ಆ ಬ್ರಾಹ್ಮಣರನ್ನು ಮನ್ನಿಸುತ್ತಿರುವವನೂ ಆದ ವಸುಮಹಾರಾಜನ ಬಳಿಗೆ ಹೋಗು.

೭. ಎಲೈ ಗರುಡನೇ! ಭೂಮಿಯ ಬಿಲದಲ್ಲಿ ಅಡಗಿ ಅಧೋಗತಿಯಲ್ಲಿರುವ ಈ ನೃಪಶೇಷ್ಠನನ್ನು ನನ್ನ ಆಜ್ಞೆಯಿಂದ ಖೇಚರನನ್ನಾಗಿ ಮಾಡು; ತಡಮಾಡ ಬೇಡ."

೮. ಸ್ಕಂದನು ಹೇಳುತ್ತಾನೆ:—ಬಳಿಕ ಆ ಗರುಡನು ರೆಕ್ಕೆಗಳನ್ನು ಬಿಚ್ಚಿ ವಾಯುವೇಗದಿಂದ ಹಾರಿಬರುತ್ತ ಮೌನವನ್ನವಲಂಬಿಸಿದ ವಸುರಾಜನು ನೆಲಸಿದ್ದ ಭೂಮಿಯ ಬಿಲವನ್ನು ಪ್ರವೇಶಿಸಿದನು.

೯. ಆಮೇಲೆ ವಿನತಾನಂದನನಾದ ಗರುಡನು ಅವನನ್ನು ತನ್ನ ಕೊಕ್ಕಿನಿಂದ ಹಿಡಿದೆತ್ತಿಕೊಂಡು ಬಹುಬೇಗ ಆಕಾಶಕ್ಕೆ ನೆಗೆದು ಅವನನ್ನು ಅಲ್ಲಿ ಬಿಟ್ಟುಬಿಟ್ಟನು.

೧೦. ಆ ಕ್ಷಣವೇ ಉಪರಿಚರವಸುರಾಜನು ಪುನಃ ಜನಿಸಿದವನಾಗಿ ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಿ ಪರಮಸುಖವನ್ನು ಪಡೆದನು.

೧೧. ಎಲೈ ಬ್ರಹ್ಮರ್ಷಿಯೇ! ಹೀಗೆ ಸತ್ಪುರುಷರನ್ನು ಕಡೆಗಣಿಸಿದ್ದರಿಂದಲೂ, ವಾಗ್ದೋಷದಿಂದಲೂ ಧರ್ಮಜ್ಞನೂ, ಮಹಾತ್ಮನೂ ಆದ ಅವನಿಗೂ ಕೂಡ ಯಜ್ಞಮಾಡಿದವರಿಗೂ ಅಲಭ್ಯವಾದ ಗತಿಯುಂಟಾಯಿತು.

ಕೇವಲಂ ಪುರುಷಸ್ತೇನ ಸೇವಿತೋ ಹರಿರೀಶ್ವರಃ ।
ತತಃ ಶೀಘ್ರಂ ಜಹೌ ಪಾಪಂ ಸ್ವರ್ಗಲೋಕಮವಾಪ ಚ ॥ ೧೨ ॥
ಭುಂಜಾನೋ ವಿವಿಧಂ ಸೌಖ್ಯಂ ಮನೋಽಭೀಷ್ಟಂ ಚ ತತ್ರ ಸಃ ।
ಉವಾಸಾನ್ಯೋ ಯಥಾ ಶಕ್ರೋ ಗೀಯಮಾನಯಶಾಃ ಸುರೈಃ ॥ ೧೩ ॥
ತಮೇಕದಾ ವಿಮಾನೇನ ಚರಂತಂ ಸೂರ್ಯಸನ್ನಿಭಂ ।
ಅದ್ರಿಕಾಪ್ಸರಸಾಯುಕ್ತಮಚ್ಛೋದಾ ಸಮವೈಕ್ಷತ ॥ ೧೪ ॥
ಸಾ ಹಿ ಸೋಮಪದಸ್ಥಾನಾಂ ಪಿತೄಣಾಂ ಮಾನಸೀ ಸುತಾ ।
ಅಗ್ನಿಷ್ವಾತ್ತಾಭಿಧಾನಾನಾಮಮೂರ್ತಾನಾಂ ಮಹಾತ್ಮನಾಂ ॥ ೧೫ ॥
ಅಮೂರ್ತತ್ವಾತ್ ಪಿತೄನ್ ಸ್ವಾನ್ ಸಾ ನ ಜಾನಂತೀ ಶುಚಿಸ್ಮಿತಾ ।
ತಂ ವಸುಂ ಪಿತರಂ ಮೇನೇ ಸ ಚ ತಾಮಾತ್ಮಜಾಮಿವ ॥ ೧೬ ॥
ತೌ ತತಃ ಪಿತರಃ ಶೇಪುರ್ಭಾವಂ ದೃಷ್ಟ್ವೇದೃಶಂ ತಯೋಃ ।
ಕನ್ಯೇ ತ್ವಮಸ್ಯ ನೃಪತೇರ್ಭುವಿ ಕನ್ಯಾ ಭವಿಷ್ಯಸಿ ॥ ೧೭ ॥

---

೧೨. ಕೇವಲ ಪರಮಪುರುಷನೂ, ಈಶ್ವರನೂ ಆದ ಶ್ರೀಹರಿಯೊಬ್ಬನನ್ನೇ ಅವನು ಸೇವಿಸಿದನು. ಅದರಿಂದ ತನ್ನ ಪಾಪವನ್ನು ಬೇಗನೆ ಪರಿಹರಿಸಿಕೊಂಡ ನಲ್ಲದೆ ಸ್ವರ್ಗಲೋಕವನ್ನೂ ಪಡೆದನು.

೧೩. ಅಲ್ಲಿ ಆತನು ತನ್ನ ಮನಸ್ಸು ಬಯಸಿದ ವಿವಿಧ ಸೌಖ್ಯಗಳನ್ನು ಭೋಗಿಸುತ್ತ, ಸುರರಿಂದ ಗಾನಮಾಡಲ್ಪಟ್ಟ ಯಶಸ್ಸುಳ್ಳವನಾಗಿ ಎರಡನೆಯ ಇಂದ್ರನಂತೆ ವಾಸಮಾಡುತ್ತಿದ್ದನು.

೧೪. ಒಮ್ಮೆ ಅದ್ರಿಕೆಯೆಂಬ ಅಪ್ಸರೆಯಿಂದೊಡಗೂಡಿ ವಿಮಾನವನ್ನೇರಿ ಸಂಚರಿಸುತ್ತಿದ್ದ ಸೂರ್ಯಸಮಾನನಾದ ಆ ಉಪರಿಚರವಸುವನ್ನು ಅಚ್ಛೋದೆ ಯೆಂಬುವಳು ಕಂಡಳು.

೧೫. ಅವಳಾದರೋ ಚಂದ್ರಲೋಕವನ್ನು ಸೇರಿದ ಅಮೂರ್ತರೂ ಮಹಾತ್ಮರೂ ಆದ ಅಗ್ನಿಷ್ವಾತ್ತರೆಂಬ ಹೆಸರುಳ್ಳ ಪಿತೃದೇವತೆಗಳ ಮಾನಸ ಪುತ್ರಿಯು.

೧೬. ಶುಚಿಸ್ಮಿತೆಯಾದ ಅವಳು ಅಮೂರ್ತರಾದ ಕಾರಣದಿಂದ ತನ್ನ ಸ್ವಂತ ಪಿತೃಗಳನ್ನೇ ಅರಿಯದವಳಾಗಿದ್ದಳು. ಆ ವಸುವನ್ನೇ ತನ್ನ ತಂದೆ ಯೆಂದು ತಿಳಿದಳು. ಅವನೂ ಅವಳನ್ನು ಮಗಳಂತೆಯೇ ಭಾವಿಸಿದನು.

೧೭–೧೮. ಅವರಿಬ್ಬರಲ್ಲಿಯೂ ಉಂಟಾದ ಆ ಭಾವವನ್ನು ಕಂಡು ಪಿತೃಗಳು ಅವರಿಗೆ ಶಾಪವಿತ್ತರು. 'ಎಲೆ ಮಗಳೇ! ನೀನು ಈ ರಾಜನಿಗೆ ಭೂಲೋಕದಲ್ಲಿ ಮಗಳಾಗಿ ಹುಟ್ಟುತ್ತೀಯೆ. ಎಲೈ ವಸುವೇ! ನೀನು ಮಾನವನಾಗಿ ನಿನ್ನ

ವಸೋ ತ್ವಂ ಮಾನಸೋ ಭೂತ್ವಾ ಸುತಾಮೇನಾಂ ಸ್ವಯೋಕ್ಷಿತಿ ।
ಅಸ್ಯಾಮೇವಾಪ್ಸರಾಯಾಂ ತ್ವಂ ಜನಯಿಷ್ಯಸಿ ನಿಶ್ಚಿತಂ ॥ ೧೮ ॥
ಇತ್ಥಂ ತೌ ಪಿತೃಭಿಃ ಶಪ್ತೌ ಶಾಪಮೋಕ್ಷಾಯ ತಾಂಸ್ತತಃ ।
ಪ್ರಾರ್ಥಯಾಮಾಸತುರ್ನತ್ವಾ ತದೋಚುಸ್ತೇ ಕೃಪಾಲವಃ ॥ ೧೯ ॥
ಅವಶ್ಯಮಿತ್ಥಂ ಭಾವಿತ್ವಾದ್ಯುವಾಭ್ಯಾಮುಪಲಂಭಿತಃ ।
ಶಾಪೋಽಯಂ ತತ್ರ ಯುವಯೋಃ ಶ್ರೇಯ ಏವ ಭವಿಷ್ಯತಿ ॥ ೨೦ ॥
ಅಷ್ಟಾವಿಂಶೇ ದ್ವಾಪರೇ ತು ವಸೋ ತ್ವಂ ಭುವಿ ಭೂಪತೇಃ ।
ಕೃತಯಜ್ಞಸ್ಯ ತನಯೋ ಭವಿತಾಽಸಿ ಮಹಾತ್ಮನಃ ॥ ೨೧ ॥
ತತ್ರಾಪಿ ಚ ಯಥೇದಾನೀಂ ತಥಾ ತ್ವಂ ಸಕಲೈರ್ಗುಣೈಃ ।
ಜುಷ್ಟಶ್ಚ ಖಚರೋ ಭಾವ್ಯೋ ಮಹಾಭಾಗವತಾಗ್ರಣೀಃ ॥ ೨೨ ॥
ಪಂಚರಾತ್ರೋಕ್ತವಿಧಿನಾ ವಿಷ್ಣುಮಭ್ಯರ್ಚ್ಯ ಭಕ್ತಿತಃ ।
ತಚ್ಛೇಷೇಣ ಸುರಾಂಶ್ಚಾಸ್ಮಾನರ್ಚಯಿಷ್ಯಸಿ ಸಪ್ರಜಃ ॥ ೨೩ ॥
ತತಸ್ತ್ವಂ ದಿವ್ಯದೇಹೇನ ಸ್ವರ್ಗಲೋಕಮವಾಪ್ಸ್ಯಸಿ ।
ದಿವ್ಯಾನ್ ಭೋಗಾನ್ ತತ್ರ ಭುಕ್ತ್ವಾ ಪ್ರಾಪ್ಸ್ಯಸೇ ವೈಷ್ಣವಂ ಪದಂ ॥

---

ಹೆಂಡತಿಯಾದ ಈ ಅಪ್ಸರಸೆಯಲ್ಲಿಯೇ ಇವಳನ್ನು ಮಗಳಾಗಿ ಪಡೆಯುತ್ತೀಯೆ. ಇದು ನಿಶ್ಚಯವು.'

೧೯. ಈ ರೀತಿಯಾಗಿ ಅವರಿಬ್ಬರೂ ಪಿತೃಗಳಿಂದ ಶಾಪಹೊಂದಿದವರಾಗಿ ಅವರಿಗೆ ನಮಸ್ಕಾರ ಮಾಡಿ ಶಾಪದ ಬಿಡುಗಡೆಗೋಸ್ಕರ ಅವರನ್ನು ಪ್ರಾರ್ಥಿಸಿ ಕೊಂಡರು. ಆಗ ಕೃಪಾಳುಗಳಾದ ಅವರು ಹೀಗೆ ಹೇಳಿದರು :—

೨೦. "ನಿಮಗಿಬ್ಬರಿಗೂ ಹೀಗೆ ತಂದೆ ಮತ್ತು ಮಗಳ ಸಂಬಂಧವು ಅವಶ್ಯವಾಗಿ ಆಗಿಯೇತೀರಬೇಕಾಗಿದ್ದುದರಿಂದ ಈ ಶಾಪವು ಬಂದಿತು. ಇದರಿಂದ ನಿಮಗೆ ಶ್ರೇಯಸ್ಸೇ ಉಂಟಾಗುವುದು.

೨೧. ಅಯ್ಯಾ ವಸುವೇ! ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಭೂಮಿ ಯಲ್ಲಿ ಮಹಾತ್ಮನಾದ ಕೃತಯಜ್ಞಮಹಾರಾಜನಿಗೆ ನೀನು ಮಗನಾಗುವೆ.

೨೨. ಆಗಲೂ ಕೂಡ ನೀನು ಈಗಿನಂತೆಯೇ ಸಕಲಗುಣಗಳಿಂದಲೂ ಕೂಡಿದವನಾಗಿ ಖೇಚರನಾಗುವೆ; ಮತ್ತು ಮಹಾಭಾಗವತಾಗ್ರಣಿಯಾಗುವೆ.

೨೩–೨೪. ನೀನು ಪ್ರಜೆಗಳೊಡಗೂಡಿ ಪಂಚರಾತ್ರೋಕ್ತವಿಧಿಯಿಂದ ವಿಷ್ಣುವನ್ನು ಭಕ್ತಿಯಿಂದರ್ಚಿಸಿ ಆ ಪ್ರಸಾದಶೇಷದಿಂದ ದೇವತೆಗಳನ್ನೂ ನಮ್ಮನ್ನೂ ಪೂಜಿಸುವೆ. ಆ ಬಳಿಕ ನೀನು ದಿವ್ಯದೇಹವನ್ನು ತಳೆದು ಸ್ವರ್ಗ ಲೋಕವನ್ನು ಹೋಗಿ ಸೇರುವೆ. ಅಲ್ಲಿ ದಿವ್ಯಭೋಗಗಳನ್ನನುಭವಿಸಿ ವೈಷ್ಣವ ಪದವನ್ನೂ ಪಡೆಯುವೆ.

ಅಚ್ಛೋದೇ ತ್ವಮಪಿ ಕ್ಷೋಣ್ಯಾಂ ನಾಮ್ನಾ ಕಾಲೀತಿ ವಿಶ್ರುತಾ ।
ಸ್ವಾಂಶೇನ ಮತ್ಸ್ಯದೇಹಾಯಾಮದ್ರಿಕಾಯಾಂ ಜನಿಷ್ಯಸೇ ॥ ೨೫ ॥
ಪರಾಶರಾತ್ತತ್ರ ಸುತಂ ಕನ್ಯೈವ ಪ್ರಾಪ್ಸ್ಯಸೇ ಹರಿಂ ।
ಪ್ರಸಾದಾದೇವ ತಸ್ಯ ತ್ವಂ ಭುಕ್ತಿಂ ಮುಕ್ತಿಂ ಚ ಲಪ್ಸ್ಯಸೇ ॥ ೨೬ ॥

ಸ್ಕಂದ ಉವಾಚ:—

ಇತ್ಥಂ ಸ ಪಿತೃಭಿಃ ಶಪ್ತೋಽನುಗೃಹೀತಶ್ಚ ಭೂಪತಿಃ ।
ಕೃತಯಜ್ಞಾದಿಹ ಜನಿಂ ಪ್ರಾಪ್ಯಾಽಭೂತ್ ವಿಶ್ರುತೋ ಗುಣೈಃ ॥ ೨೭ ॥
ಯಥಾ ಪೂರ್ವಂ ಕೃಷ್ಣಭಕ್ತೋ ದೈವಪಿತ್ರ್ಯವಿಧಾನವಿತ್ ।
ಸಖ್ಯೇ ತಸ್ಮೈ ಮಹೇಂದ್ರಶ್ಚ ಪ್ರಾದಾತ್ಪ್ರಚುರಸಂಪದಃ ॥ ೨೮ ॥
ಶ್ವೇತದ್ವೀಪೇ ವಾಸುದೇವಾತ್ಪ್ರಾಪ್ತೋ ಯೋ ವಿಜಯಧ್ವಜಃ ।
ಪುರಾ ಸ್ವೇನಾರಿನಾಶಾರ್ಥಂ ತಸ್ಮಾ ಇಂದ್ರಸ್ತಮಪ್ಯದಾತ್ ॥ ೨೯ ॥
ಅಂತರಿಕ್ಷಗತೀ ರಾಜಾ ಭೌಮಾನ್ ಭೋಗಾನ್ ಸುದುರ್ಲಭಾನ್ ।
ಭುಕ್ತ್ವಾಂತೇ ಸ್ವರ್ಗಲೋಕಂ ಚ ದಿವ್ಯದೇಹೇನ ಲಬ್ಧವಾನ್ ॥ ೩೦ ॥

---

೨೫. ಎಲೌ ಅಚ್ಛೋದೇ! ನೀನು ಕೂಡ ಭೂಮಿಯಲ್ಲಿ ಮತ್ಸ್ಯದೇಹವನ್ನು ತಾಳಿದ ಅದ್ರಿಕೆಯಲ್ಲಿ ನಿನ್ನ ಅಂಶದಿಂದ ಕಾಲಿಯೆಂಬ ಹೆಸರುಹೊಂದಿ ಜನಿಸುವೆ.

೨೬. ನೀನು ಕನ್ಯೆಯಾಗಿರುವಾಗಲೇ ಪರಾಶರನಿಂದ ಶ್ರೀಹರಿಯನ್ನು ಮಗನನ್ನಾಗಿ ಪಡೆಯುವೆ. ಅವನ ಪ್ರಸಾದದಿಂದಲೇ ನೀನು ಭುಕ್ತಿಯನ್ನೂ ಮುಕ್ತಿಯನ್ನೂ ಪಡೆಯುವೆ.''

೨೭. ಸ್ಕಂದನು ಹೇಳುತ್ತಾನೆ:—ಪಿತೃಗಳಿಂದ ಹೀಗೆ ಶಾಪವನ್ನೂ, ಅನುಗ್ರಹವನ್ನೂ ಪಡೆದ ಬಳಿಕ ಆ ರಾಜನು ಯಜ್ಞಮಾಡಿದುದರಿಂದ ಇಲ್ಲಿ ಜನ್ಮವನ್ನು ಪಡೆದು ತನ್ನ ಸದ್ಗುಣಗಳಿಂದ ಬಹಳ ಪ್ರಸಿದ್ಧನಾದನು.

೨೮. ಪೂರ್ವದಂತೆಯೆ ಅವನು ಕೃಷ್ಣಭಕ್ತನೂ, ದೇವಪಿತೃಕಾರ್ಯಗಳ ವಿಧಾನಗಳನ್ನು ಬಲ್ಲವನೂ ಆದನು. ಮಹೇಂದ್ರನೂ ಅವನಿಗೆ ಮಹಾ ಸಂಪತ್ತುಗಳನ್ನು ಕೊಡುತ್ತಿದ್ದನು.

೨೯. ಹಿಂದೆ ಶ್ವೇತದ್ವೀಪದಲ್ಲಿ ವಾಸುದೇವನಿಂದ ಶತ್ರುಗಳ ವಿನಾಶಕ್ಕಾಗಿ ಯಾವ ವಿಜಯಧ್ವಜವನ್ನು ಪಡೆದಿದ್ದನೋ ಅದನ್ನೂ ಆ ಮಹೇಂದ್ರನು ಅವನಿಗೆ ಕೊಟ್ಟನು.

೩೦. ಆ ರಾಜನು ಅಂತರಿಕ್ಷದಲ್ಲಿ ಹೋಗುವ ಶಕ್ತಿಯುಳ್ಳವನಾಗಿ ಬಹು ದುರ್ಲಭಗಳಾದ ಭೂಲೋಕದ ಭೋಗಗಳನ್ನು ಭೋಗಿಸಿ ಕಡೆಯಲ್ಲಿ ದಿವ್ಯ ದೇಹವನ್ನು ಧರಿಸಿದವನಾಗಿ ಸ್ವರ್ಗಲೋಕವನ್ನೈದಿದನು.

ಪ್ರಾಕ್ಪುಣ್ಯಶೇಷಸ್ಯ ಫಲಂ ಭುಂಜನ್ ಸ್ವಮನಸೇಪ್ಸಿತಾನ್ ।
ತತ್ರ ಭೋಗಾನ್ ಬಹುವಿಧಾನ್ ತೀವ್ರಂ ವೈರಾಗ್ಯಮಾಪ್ತವಾನ್ ॥೩೧॥
ಮೇರೋಃ ಶೃಂಗೇಽಥ ವಿಜನೇ ಶುಚಿಃ ಕೃತದೃಢಾಸನಃ ।
ದಧ್ಯೌ ಸ್ವಹೃದಯಾಂಭೋಜೇ ಸ್ವೇಷ್ಟದೇವಂ ರಮಾಪತಿಂ ॥ ೩೨ ॥
ತ್ಯಕ್ತ್ವಾ ದೇವವಪುಃ ಸೋಽಥ ಯೋಗಧಾರಣಯಾ ಮುನಿಃ ।
ತತಃ ಸೂಕ್ಷ್ಮಶರೀರೇಣ ಪ್ರಾಪ ಭಾಸ್ಕರಮಂಡಲಂ ॥ ೩೩ ॥
ಯದಾಹುರ್ನೈಷ್ಠಿಕಾನಾಂ ಚ ಮುಕ್ತಿದ್ವಾರಂ ಹಿ ಯೋಗಿನಾಂ ।
ತತ್ತೇಜೋದಗ್ಧಸೂಕ್ಷ್ಮಾಂಗಃ ಸಚ್ಚಿದ್ರೂಪೋಽತಿನಿರ್ಮಲಃ ।
ಸ ಬಭೂವ ಮಹಾಭಾಗಃ ಸಂಕ್ಷೀಣಾಶೇಷವಾಸನಃ ॥ ೩೪ ॥
ತತಸ್ತನ್ಮಂಡಲಗತೈರಾತಿವಾಹಕದೈವತೈಃ ।
ಸ ನಿನ್ಯೇ ವೈಷ್ಣವಂ ಧಾಮ ಶ್ವೇತದ್ವೀಪಾಖ್ಯಮದ್ಭುತಂ ॥ ೩೫ ॥
ಸ ಹಿ ದ್ವೀಪೋ ಭುವಿಸ್ಥೋಽಪಿ ಭವತ್ಯಪ್ರಾಕೃತೋ ಮುನೇ ।
ಹರಿಭಕ್ತಜನಾವಾಸಃ ಪ್ರಾಪ್ಯ ಏಕಾಂತಭಕ್ತಿಭಿಃ ॥ ೩೬ ॥

---

೩೧. ಹಿಂದೆ ಆ ಮಹಾರಾಜನು ಮಾಡಿದ ಪುಣ್ಯದಲ್ಲಿ ಉಳಿದಿದ್ದುದರ ಫಲವಾಗಿ ಅಲ್ಲಿ ತನ್ನ ಮನಸ್ಸು ಬಯಸಬಹುದಾದ ಬಹು ವಿಧ ಭೋಗಗಳನ್ನನುಭವಿಸುತ್ತ ತೀವ್ರವಾದ ವೈರಾಗ್ಯವನ್ನು ಪಡೆದನು.

೩೨. ಆ ಬಳಿಕ ಮೇರುಪರ್ವತದ ಶಿಖರದ ವಿಜನವಾದ ಸ್ಥಳದಲ್ಲಿ ಶುಚಿಯಾಗಿ ದೃಢವಾದ ಆಸನದಲ್ಲಿ ಕುಳಿತು ತನ್ನ ಹೃದಯಕಮಲದಲ್ಲಿ ಇಷ್ಟ ದೇವನಾದ ರಮಾಪತಿಯನ್ನು ನೆಲೆಗೊಳಿಸಿದನು.

೩೩. ಆಮೇಲೆ ಅವನು ಮುನಿಯಾಗಿ ಯೋಗಧಾರಣೆಯಿಂದ ದೇವ ಶರೀರವನ್ನು ತ್ಯಜಿಸಿ, ಬಳಿಕ ಸೂಕ್ಷ್ಮಶರೀರದಿಂದ ಸೂರ್ಯಮಂಡಲ ವನ್ನೈದಿದನು.

೩೪–೩೫. ನೈಷ್ಠಿಕರಿಗೂ ಯೋಗಿಗಳಿಗೂ ಸೂರ್ಯಮಂಡಲವು ಮುಕ್ತಿ ದ್ವಾರವೆಂದು ಹೇಳುತ್ತಾರೆ. ಆ ತೇಜಸ್ಸಿನಿಂದ ಸೂಕ್ಷ್ಮಾಂಗವೂ ಸುಟ್ಟುಹೋಗಿ ಆ ಮಹಾಭಾಗನು ಸಚ್ಚಿದ್ರೂಪನೂ, ಅತಿನಿರ್ಮಲನೂ, ಸಮಸ್ತವಾಸನೆಗಳೂ ನಾಶವಾದವನೂ ಆದನು. ಬಳಿಕ ಅವನು ಆ ರವಿಮಂಡಲದಲ್ಲಿರುವವರಾದ ಆತಿವಾಹಿಕ ದೇವತೆಗಳಿಂದ ಶ್ವೇತದ್ವೀಪವೆಂಬ ಅದ್ಭುತವಾದ ವೈಷ್ಣವಧಾಮಕ್ಕೆ ಕರೆದೊಯ್ಯಲ್ಪಟ್ಟನು.

೩೬. ಎಲೈ ಮುನಿಯೇ! ಆ ಶ್ವೇತದ್ವೀಪವು ಭೂಮಿಯಮೇಲಿರುವುದಾದರೂ ಅಪ್ರಾಕೃತವೆನಿಸಿರುವುದು; ಹರಿಭಕ್ತರಾದ ಜನರಿಗೆ ಆವಾಸವಾಗಿರುವುದು. ಏಕಾಂತಭಕ್ತಿಯುಳ್ಳವರಿಗೆಮಾತ್ರ ಪಡೆಯಲು ಸಾಧ್ಯವಾಗಿರುವುದು.

ಸ ಗೋಲೋಕಬ್ರಹ್ಮಪುರವೈಕುಂಠಾನಾಂ ಚ ಸುವ್ರತ ।
ದ್ವಾರಭೂತೋಽಸ್ತಿ ಭಕ್ತಾನಾಂ ತಲ್ಲಿಪ್ಸೂನಾಂ ಮಹಾತ್ಮನಾಂ ॥ ೩೭ ॥
ಯಸ್ಯ ಯದ್ಧಾಮ್ನಿ ಇಚ್ಛಾ ಸ್ಯಾದ್ವ್ರಜತಸ್ತಂ ತದೇವ ಹಿ ।
ಪ್ರಾಪಯಂತಿ ಶ್ವೇತಮುಕ್ತಾ ಮುನೇ ಪ್ರಾಗುಕ್ತಲಕ್ಷಣಾಃ ॥ ೩೮ ॥
ದಿವ್ಯದೇಹೋಽಭವತ್ತತ್ರ ಧಾಮ್ನ್ಯಸೌ ಶ್ವೇತಮುಕ್ತವತ್ ।
ಪ್ರಾಪ್ಯ ಗೋಲೋಕಧಾಮಾಽಥ ಪರಮಾನಂದಮಾಪ್ತವಾನ್ ॥ ೩೯ ॥
ಇತ್ಥಮೇಕಾಂತಿಕೇನೈವ ಧರ್ಮೇಣಾರಾಧಯಂತಿ ಯೇ ।
ನಾರಾಯಣಂ ಪರಂ ಬ್ರಹ್ಮ ಶ್ವೇತಮುಕ್ತಾ ಭವಂತಿ ತೇ ॥ ೪೦ ॥
ಏತತ್ತೇ ಸರ್ವಮಾಖ್ಯಾತಂ ಪೃಷ್ಟವಾನ್ಯದ್ಭವಾನ್ಮುನೇ ।
ಸ್ಥಿತಿರೇಕಾಂತಭಕ್ತಾನಾಂ ಶ್ವೇತಧಾಮ್ನಶ್ಚ ಲಕ್ಷಣಂ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಉಪರಿಚರ ವಸುಮೋಕ್ಷನಿರೂಪಣಂ" ನಾಮ ಸಪ್ತಮೋಽಧ್ಯಾಯಃ

---

೩೭. ಗೋಲೋಕ, ಬ್ರಹ್ಮಪುರ, ವೈಕುಂಠಗಳಿಗೆ ಹೋಗಬೇಕೆಂದು ಬಯಸುವ ಮಹಾತ್ಮರಾದ ಭಕ್ತರಿಗೆ ಆ ದ್ವೀಪವು ಆಯಾ ಲೋಕಗಳಿಗೆ ಬಾಗಿಲಿನಂತಿರುವುದು.

೩೮. ಯಾರಿಗೆ ಯಾವ ಲೋಕಕ್ಕೆ ಹೋಗಲು ಇಚ್ಛೆಯಾಗುವುದೋ ಅವನನ್ನು ಮೇಲೆ ಹೇಳಿದ ಲಕ್ಷಣಗಳುಳ್ಳ ಶ್ವೇತದ್ವೀಪದಲ್ಲಿ ನೆಲಸಿರುವ ಮುಕ್ತರು ಆ ಲೋಕಕ್ಕೆ ಹೋಗಿ ಸೇರುವಂತೆ ಮಾಡುವರು.

೩೯. ಆ ರಾಜನಾದರೋ ಆ ಶ್ವೇತದ್ವೀಪದಲ್ಲಿ ದಿವ್ಯದೇಹವುಳ್ಳವನಾಗಿದ್ದನು. ಶ್ವೇತದ್ವೀಪದಲ್ಲಿಯ ಮುಕ್ತನಂತೆಯೇ ಗೋಲೋಕಧಾಮವನ್ನೈದಿ ಪರಮಾನಂದವನ್ನು ಪಡೆದನು.

೪೦. ಈ ರೀತಿಯಲ್ಲಿ ಏಕಾಂತಿಕಧರ್ಮದಿಂದಲೇ ಪರಬ್ರಹ್ಮಸ್ವರೂಪನಾದ ನಾರಾಯಣನನ್ನು ಯಾರು ಆರಾಧಿಸುವರೋ ಅವರು ಶ್ವೇತದ್ವೀಪವನ್ನು ಸೇರಿ ಮುಕ್ತರಾಗುತ್ತಾರೆ.

೪೧. ಎಲೈ ಮುನಿಯೇ! ನೀನು ಕೇಳಿದ ಏಕಾಂತಭಕ್ತರ ಸ್ಥಿತಿಯನ್ನೂ ಶ್ವೇತಧಾಮದ ಲಕ್ಷಣವನ್ನೂ ಸಮಗ್ರವಾಗಿ ನಿನಗೆ ಹೇಳಲಾಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಉಪರಿಚರವಸುಮೋಕ್ಷನಿರೂಪಣ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ದೇವೇಂದ್ರಶಾಪಃ

**ಸಾವರ್ಣಿರುವಾಚ :—**

**ಮಹರ್ಷಿವಾರಿತೈರ್ದೇವೈಸ್ತ್ಯಕ್ತೇ ಹಿಂಸಾಮಯೇ ಮಖೇ ।**
**ಪುನಃ ಕಥಂ ಸಂಪ್ರವೃತ್ತಾ ಮಖಾಃ ಸರ್ವತ್ರ ತಾದೃಶಾಃ ॥ ೧ ॥**
**ದೇವೇಷ್ವೃಷಿಷು ಭೂಪೇಷು ಪ್ರಾಚೀನಾಧುನಿಕೇಷು ಚ ।**
**ಸನಾತನಃ ಶುದ್ಧಧರ್ಮೋ ವಿಪರ್ಯಾಸಂ ಕಥಂ ಗತಃ ॥ ೨ ॥**
**ಅತ್ರ ಮೇ ಸಂಶಯೋ ಭೂಯಾನ್ಸಂಜಾತೋಽದ್ಯ ಷಡಾನನ ।**
**ತ್ವಂ ಸರ್ವಶಾಸ್ತ್ರತತ್ತ್ವಜ್ಞಸ್ತಮಪಾಕರ್ತುಮರ್ಹಸಿ ॥ ೩ ॥**

**ಸ್ಕಂದ ಉವಾಚ :—**

**ಕಾಲೋ ಬಲೀಯಾನ್ ಬಲಿನಾಂ ಭಿದ್ಯಂತೇ ತೇನ ಬುದ್ಧಯಃ ।**
**ಕಾಮಕ್ರೋಧರಸಾಸ್ವಾದಲೋಭಮಾನವತಾಂ ಮುನೇ ॥ ೪ ॥**

---

## ಕನ್ನಡದ ಅನುವಾದ

### ದೇವೇಂದ್ರಶಾಪವರ್ಣನ

೧. ಸಾವರ್ಣಿಯು ಕೇಳುತ್ತಾನೆ :—“ ಎಲೈ ಸ್ಕಂದನೇ ! ಮಹರ್ಷಿಗಳಿಂದ ತಡೆಯಲ್ಪಟ್ಟವರಾಗಿ ದೇವತೆಗಳು ಹಿಂಸಾಮಯವಾದ ಯಜ್ಞವನ್ನು ತೊರೆದರಷ್ಟೆ ! ಹಾಗಿದ್ದರೂ ಎಲ್ಲ ಕಡೆಯೂ ಅದೇ ರೀತಿಯ ಹಿಂಸಾಯಜ್ಞಗಳು ಮತ್ತೆಯೂ ನಡೆಯತೊಡಗಿದುದೆಂತು ?

೨. ದೇವತೆಗಳಲ್ಲಿ, ಋಷಿಗಳಲ್ಲಿ, ರಾಜರಲ್ಲಿ, ಪ್ರಾಚೀನರಲ್ಲಿ, ಆಧುನಿಕರಲ್ಲಿ ಎಲ್ಲರಲ್ಲಿಯೂ ಸನಾತನವಾದ ಶುದ್ಧ ಧರ್ಮವು ವಿಪರ್ಯಾಸ (ಮಾರ್ಪಾಟು) ವಾದುದು ಹೇಗೆ ?

೩. ಎಲೈ ಷಣ್ಮುಖಸ್ವಾಮಿಯೇ ! ಈ ವಿಷಯದಲ್ಲಿ ನನಗೆ ಬಹು ದೊಡ್ಡ ಸಂಶಯವು ಹುಟ್ಟಿದೆ. ಸರ್ವಶಾಸ್ತ್ರಗಳ ತತ್ತ್ವವನ್ನೂ ಬಲ್ಲ ನೀನು ಈ ಸಂಶಯವನ್ನು ಪರಿಹರಿಸಬೇಕು.”

೪. ಸ್ಕಂದನು ಹೇಳುತ್ತಾನೆ :—“ ಎಲೈ ಮುನಿಯೇ ! ಕಾಲವು ಬಲವತ್ತರವಾದುದು. ಕಾಮ, ಕ್ರೋಧ, ಅಭಿರುಚಿ, ಲೋಭ, ಅಹಂಕಾರ ಇವುಗಳಿಂದ **ಕೂಡಿದ ಬಲಿಷ್ಠರಾದವರ ಬುದ್ಧಿಗಳು ಕೂಡ ಈ ಕಾಲದಿಂದಲೇ ಭೇದಿಸಲ್ಪಡುತ್ತವೆ.**

ಅತಿಕ್ರಮೇಣ ಮಹತಾಂ ಯಥಾರ್ಥಹಿತಭಾಷಿಣಾಂ ।
ಕ್ರೋಧಮಾನವಶಾತ್ಪುಂಸಾಂ ನಶ್ಯಂತ್ಯೇವ ಚ ಸಿದ್ಧಯಃ ॥ ೫ ॥
ಅಕಾರ್ಯಮಪಿ ತೇ ಕರ್ತುಂ ತದಾನೀಂ ತು ಬುಧಾ ಅಪಿ ।
ಪ್ರವರ್ತಂತೇಽನುತಪ್ಯಂತೇ ಬಂಭ್ರಮ್ಯಂತೇಽಥ ಸಂಸೃತೌ ॥ ೬ ॥
ಕಾಮಾದಿಭಿರ್ವಿಹೀನಾ ಯೇ ಸಾತ್ವತಾಃ ಕ್ಷೀಣವಾಸನಾಃ ।
ತೇಷಾಂ ತು ಬುದ್ಧಿಭೇದಾಯ ಕ್ವಾಪಿ ಕಾಲೋ ನ ಶಕ್ನುತೇ ॥ ೭ ॥
ಅನಾಶ್ರಿತಸ್ತು ಸದ್ಧರ್ಮಂ ಪುಮಾನ್ ಕಶ್ಚನ ಕರ್ಹಿಚಿತ್ ।
ಸಂಸೃತೇರ್ಮುಚ್ಯತೇ ನೈವ ಸತ್ಯಮೇತದ್ವಚೋ ಮಮ ॥ ೮ ॥
ಪ್ರವೃತ್ತಿಂ ಹಿಂಸ್ರಯಜ್ಞಾದೇರಥ ತೇ ದ್ವಿಜಸತ್ತಮ ।
ಕಥಯಾಮಿ ಯಥಾಪೂರ್ವಂ ಮಯಾಽಶ್ರಾವಿ ಪಿತುರ್ಮುಖಾತ್ ॥ ೯ ॥
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ನಾರಾಯಣಸ್ಯ ಮಾಹಾತ್ಮ್ಯಂ ಯತ್ರ ಲಕ್ಷ್ಮ್ಯಾಶ್ಚ ಕೀರ್ತಿತಂ ॥ ೧೦ ॥
ಮುನೀನಾಂ ಬೃಹತಾಂ ತೇಷಾಮತಿಕ್ರಮಣದೋಷತಃ ।
ಇಂದ್ರಸ್ಯಾಸೀದ್ವಿಶ್ವಜಿತಃ ಸದ್ಬುದ್ಧಿವಿಲಯೋ ಮುನೇ ॥ ೧೧ ॥

---

೫. ಯಥಾರ್ಥವಾಗಿಯೂ, ಹಿತವಾಗಿಯೂ ಮಾತನಾಡುವ ಮಹಾಪುರುಷರನ್ನು ಅತಿಕ್ರಮಿಸುವುದರಿಂದ ಕ್ರೋಧ ಮತ್ತು ಅಹಂಕಾರಗಳ ಸಲುವಾಗಿ ಒಳ್ಳೆಯ ಬುದ್ಧಿಗಳು ಕೂಡ ನಾಶವಾಗಿಯೇ ಹೋಗುತ್ತವೆ.

೬–೭. ಅವರು ಪಂಡಿತರೇ ಆದರೂ ಆ ಕಾಲದಲ್ಲಿ ಅಕಾರ್ಯವನ್ನು ಕೂಡ ಮಾಡುವುದಕ್ಕೆ ತೊಡಗುತ್ತಾರೆ. ಸಂಸಾರದಲ್ಲಿ ತೊಳಲಿ ಕಡೆಗೆ ಅನುತಾಪಪಡುತ್ತಾರೆ. ಯಾರು ಕಾಮಾದಿಗಳಿಲ್ಲದವರಾಗಿ ಸಾತ್ವಿಕರಾಗಿರುವರೋ, ಯಾರ ವಾಸನೆಗಳೆಲ್ಲ ನಾಶವಾಗಿಹೋಗಿರುವುವೋ ಅವರಿಗೆ ಬುದ್ಧಿಭೇದವನ್ನುಂಟುಮಾಡಲು ಎಂದಿಗೂ ಕಾಲಕ್ಕೆ ಶಕ್ತಿಯಿಲ್ಲವು.

೮. ಸದ್ಧರ್ಮವನ್ನು ಆಶ್ರಯಿಸದಿರುವ ಯಾವ ಪುರುಷನೂ ಎಲ್ಲಿಯೂ ಸಂಸಾರದಿಂದ ಬಿಡುಗಡೆ ಹೊಂದುವುದೇ ಇಲ್ಲವು. ಈ ಮಾತು ಸತ್ಯವಾದುದು.

೯. ಎಲೈ ಬ್ರಾಹ್ಮಣಶ್ರೇಷ್ಠನೇ! ಇನ್ನುಮುಂದೆ ಹಿಂಸ್ರಯಜ್ಞಾದಿಗಳು ಪ್ರಾರಂಭವಾದ ಬಗೆಯನ್ನು ಪೂರ್ವದಲ್ಲಿ ನಮ್ಮ ತಂದೆಯ ಮುಖದಿಂದ ಕೇಳಿದ್ದ ಪ್ರಕಾರವಾಗಿಯೇ ನಿನಗೆ ತಿಳಿಯಹೇಳುತ್ತೇನೆ.

೧೦–೧೧. ಈ ವಿಷಯದಲ್ಲಿ ಪುರಾತನವಾದ ಈ ಇತಿಹಾಸವನ್ನು ಉದಾಹರಿಸುತ್ತಾರೆ. ಇದರಲ್ಲಿ ನಾರಾಯಣನ ಮತ್ತು ಲಕ್ಷ್ಮಿಯ ಮಾಹಾತ್ಮ್ಯವು ಹೇಳಲ್ಪಟ್ಟಿದೆ. ಅಯ್ಯಾ ಮುನಿಯೇ! ಮಹಾಮುನಿಗಳ ಮಾತನ್ನು ಮೀರಿದ ದೋಷದಿಂದ ವಿಶ್ವಜಿತ್ತೆಂಬ ಯಜ್ಞವನ್ನು ಮಾಡಿದ ದೇವೇಂದ್ರನಿಗೂ ಸುದ್ಬುದ್ಧಿಯ ವಿನಾಶವಾಯಿತು.

ದುರ್ವಾಸಾಃ ಶಂಕರಸ್ಯಾಂಶಸ್ತಪಸ್ವೀ ಮುನಿರೇಕದಾ ।
ಚರನ್ಯದೃಚ್ಛಯಾ ಲೋಕಾನ್ ಪುಷ್ಪಭದ್ರಾಂ ನದೀಂ ಯಯೌ ॥ ೧೨ ॥
ಜಲಕ್ರೀಡಾರ್ಥಮಾಯಾಂತೀಂ ಸ್ವರ್ಗಾತ್ತತ್ರ ಸಖೀವೃತಾಂ ।
ವಿದ್ಯಾಧರಸ್ಯ ಸುಮತೇರಂಗನಾಂ ಸ ಸಮೈಕ್ಷತ ॥ ೧೩ ॥
ಸ್ವರ್ಗಂಗಾಹೇಮಕಮಲೈರ್ಗ್ರಥಿತಾಮತಿಸೌರಭಾಂ ।
ದಧತೀಂ ದಕ್ಷಿಣೇ ಪಾಣೌ ಸ್ರಜಂ ಮದಕಲಾಭಿಧಾಂ ॥ ೧೪ ॥
ತಾಮವೇಕ್ಷ್ಯ ಮುನಿಸ್ತಸ್ಯಾಃ ಸಮೀಪಮುಪಗಮ್ಯ ಸಃ ।
ಉನ್ಮತ್ತವದ್ಯಯಾಚೇ ತಾಂ ಸ್ರಜಂ ವಿದ್ಯಾಧರೀಧೃತಾಂ ॥ ೧೫ ॥
ಸಾಪಿ ಪ್ರಣಮ್ಯ ತಂ ಸದ್ಯೋ ಮಹಾತ್ಮ್ಯಂ ತಸ್ಯ ಜಾನತೀ ।
ತತ್ಕಂಠೇ ಧಾರಯಾಮಾಸ ಮಾಲಾಂ ತಾಂ ಪರಮಾದರಾತ್ ॥ ೧೬ ॥
ತತಃ ಪ್ರೀತಮನಾಗಚ್ಛತ್ ಗಾಯನ್ನುನ್ಮತ್ತವನ್ಮುನಿಃ ।
ದದರ್ಶ ಪಥಿ ದೇವೇಂದ್ರಮಾಯಾಂತಂ ತಾಂ ಮಹಾನದೀಂ ॥ ೧೭ ॥
ಅಪ್ಸರೋಭಿಶ್ಚ ಗಂಧರ್ವೈಃ ಸತಾಲಂ ಮಧುರಸ್ವರಂ ।
ಉಪಗೀಯಮಾನವಿಜಯಮಧಿರೂಢಂ ಗಜಾಧಿಪಂ ॥ ೧೮ ॥

---

೧೨. ಶಂಕರನ ಅಂಶಾವತಾರಿಯೂ, ಮಹಾ ತಪಸ್ವಿಯೂ ಆದ ದುರ್ವಾಸ ಮುನಿಯು ಒಂದಾನೊಂದು ಕಾಲದಲ್ಲಿ ತನ್ನ ಇಷ್ಟಬಂದಂತೆ ಲೋಕಸಂಚಾರ ಮಾಡುತ್ತ ಪುಷ್ಪಭದ್ರಾನದಿಯನ್ನೈದಿದನು.

೧೩. ಆಗಲಾತನು ಸಖಿಯರೊಡಗೂಡಿ ಜಲಕ್ರೀಡೆಗಾಗಿ ಸ್ವರ್ಗದಿಂದ ಅಲ್ಲಿಗೈತರುತ್ತಿದ್ದ ಸುಮತಿಯೆಂಬ ವಿದ್ಯಾಧರನ ಮಡದಿಯನ್ನು ಕಂಡನು.

೧೪. ಅವಳು ಸ್ವರ್ಗಂಗೆಯಲ್ಲರಳಿದ ಚಿನ್ನದ ಕಮಲಗಳಿಂದ ಕಟ್ಟಿ ಬಹು ಪರಿಮಳವುಳ್ಳದುದಾದ ಮದಕಲೆಯೆಂಬ ಹೆಸರಿನ ಮಾಲೆಯನ್ನು ತನ್ನ ಬಲಗೈಯಲ್ಲಿ ಹಿಡಿದಿದ್ದಳು.

೧೫–೧೬. ಅವಳನ್ನು ಕಂಡು ಆ ಮುನಿಯು ಅವಳ ಸಮೀಪಕ್ಕೆ ಹೋಗಿ ಉನ್ಮತ್ತನಂತೆ ಆ ವಿಧ್ಯಾಧರಿಯು ಧರಿಸಿದ್ದ ಮಾಲೆಯನ್ನು ತನಗೆ ಕೊಡುವಂತೆ ಅವಳನ್ನು ಕೇಳಿಕೊಂಡನು. ಅವಳು ಕೂಡ ಅವನ ಮಾಹಾತ್ಮ್ಯವನ್ನು ಬಲ್ಲವಳಾದುದರಿಂದ ಕೂಡಲೆ ಆವನಿಗೆ ಪ್ರಣಾಮಮಾಡಿ ಪರಮಾದರದಿಂದ ಆ ಮಾಲೆಯನ್ನು ಅವನ ಕೊರಳಿಗೆ ಹಾಕಿದಳು.

೧೭. ಬಳಿಕ ಮನಸ್ತೃಪ್ತಿಯನ್ನು ಹೊಂದಿದ ಆ ಮುನಿಯು ಉನ್ಮತ್ತನಂತೆ ಹಾಡಿಕೊಂಡು ಮುಂದೆ ಹೊರಟನು. ದಾರಿಯಲ್ಲಿ ಆ ಮಹಾನದಿಯ ಬಳಿಗೆ ಬರುತ್ತಿದ್ದ ಇಂದ್ರನನ್ನು ಕಂಡನು.

೧೮. ಅಪ್ಸರೆಯರೂ, ಗಂಧರ್ವರೂ, ಹತ್ತಿರದಲ್ಲಿಯೇ ತಾಳಕ್ಕೆ ಸರಿಯಾಗಿ

ರಂಭಾಮಧುರಸಂಗೀತಶ್ರವಣಾನಂದನಿರ್ವೃತಂ ।
ತನ್ಮುಖಾಬ್ಜಸ್ಥಿರದೃಶಂ ಛತ್ರಚಾಮರಶೋಭಿತಂ ॥ ೧೯ ॥
ಅನವೇಕ್ಷಮಾಣಮಾತ್ಮಾನಂ ತಂ ದೃಷ್ಟ್ವಾ ಸೋಽತ್ರಿನಂದನಃ ।
ಸ್ವಕಂಠಸ್ಥಾಂ ಸ್ರಜಂ ತಸ್ಮಿನ್ ಚಿಕ್ಷೇಪೋನ್ಮತ್ತವದ್ಧಸನ್ ॥ ೨೦ ॥
ಇಂದ್ರೋಽಪ್ಯಥರ್ಮಸರ್ಗೇಣ ಸಮಾವಿಷ್ಟಃ ಪುರೈವ ಯತ್ ।
ತತಸ್ತದಾ ಕಾಮವಶಸ್ತಾಂ ನ್ಯಧಾದ್ಗಜಕುಂಭಯೋಃ ।
ತತ್ಸೌರಭಾಕೃಷ್ಟಚೇತಾಃ ಕರೀಂದ್ರಃ ಶುಂಡಯಾಽಕೃಷತ್ ॥ ೨೧ ॥
ಕರಾತ್ಸಾ ಪತಿತಾ ಭೂಮೌ ತಾಂ ಚ ಗಚ್ಛನ್ ಕರೀ ಪದಾ ।
ಮಮರ್ದ ಪಶ್ಯತಸ್ತಸ್ಯ ಮಹರ್ಷೇಸ್ತಪಸಾಂ ನಿಧೇಃ ॥ ೨೨ ॥
ತತಃ ಕೃದ್ಧಃ ಸ ದುರ್ವಾಸಾಃ ಪ್ರಲಯಾಗ್ನ್ಯರುಣೇಕ್ಷಣಃ ।
ಪ್ರಾಹೇಂದ್ರಂ ಮತ್ತ ದುಷ್ಟಾತ್ಮನ್ ಸ್ತಬ್ಧೋಽಸಿ ಕಾಮಲಂಪಟ ॥೨೩॥

---

ಮಧುರಸ್ವರದಿಂದ ಗಾನಮಾಡುತ್ತಿದ್ದರು. ಹಾಗೆ ಹಾಡುತ್ತಿರಲು ಇಂದ್ರನು ವಿಜಯವೆಂಬ ರಾಜಗಜವನ್ನೇರಿ ಬರುತ್ತಿದ್ದನು.

೧೯. ರಂಭೆಯ ಮಧುರವಾದ ಸಂಗೀತವನ್ನು ಕೇಳಿ ಅವನು ಆ ಆನಂದದಿಂದ ಪರಮಸುಖವನ್ನು ಅನುಭವಿಸುತ್ತ ಅವಳ ಮುಖಕಮಲದಲ್ಲಿಯೆ ದೃಷ್ಟಿಯನ್ನು ಸ್ಥಿರವಾಗಿ ನೆಲೆಗೊಳಿಸಿ, ಛತ್ರಚಾಮರಗಳಿಂದ ಶೋಭಿಸುತ್ತಿದ್ದನು.

೨೦. ಹೀಗೆ ತನ್ನನ್ನು ತಾನೇ ತಿಳಿಯದಷ್ಟು ಮೈಮರೆತಿದ್ದ ಅವನನ್ನು ಕಂಡು ಆ ಅತ್ರಿಪುತ್ರನು ಉನ್ಮತ್ತನಂತೆ ನಗುತ್ತ ತನ್ನ ಕೊರಳಿನಲ್ಲಿದ್ದ ಮಾಲೆಯನ್ನು ತೆಗೆದು ಅವನಮೇಲೆ ಎಸೆದನು.

೨೧. ಇಂದ್ರನು ಕೂಡ ಆ ಮೊದಲೇ ಅಧರ್ಮದಿಂದ ಆವಿಷ್ಟನಾಗಿದ್ದುದರಿಂದ ಕಾಮವಶನಾಗಿ ಆ ಮಾಲೆಯನ್ನು ಆನೆಯ ಕುಂಭಸ್ಥಳದಲ್ಲಿ ಹಾಕಿದನು. ಆ ಗಜರಾಜವಾದರೊ ಅದರ ಪರಿಮಳವು ತನ್ನ ಮನಸ್ಸನ್ನೆಳೆಯಲು ಸೊಂಡಿಲಿನಿಂದ ಅದನ್ನು ಸೆಳೆದುಕೊಂಡಿತು.

೨೨. ತರುವಾಯ ಆ ಮಾಲೆಯು ಆನೆಯ ಸೊಂಡಿಲಿನಿಂದ ಜಾರಿ ನೆಲದ ಮೇಲೆ ಬಿದ್ದಿತು. ಮುಂದೆ ಹೋಗುತ್ತ ಅದು ತಪೋನಿಧಿಯಾದ ಆ ಮಹರ್ಷಿಯು ನೋಡುತ್ತಿದ್ದಹಾಗೆಯೇ ಅದನ್ನು ಕಾಲಿನಿಂದ ತುಳಿದು ಉಜ್ಜಿಹಾಕಿತು.

೨೩. ಅದನ್ನು ಕಂಡು ದುರ್ವಾಸಮುನಿಯು ಒಡನೆಯೆ ಬಹಳವಾಗಿ ಮುನಿದು, ಪ್ರಳಯಾಗ್ನಿಯಂತೆ ಕೆಂಗಣ್ಣುಗಳುಳ್ಳವನಾಗಿ ಇಂದ್ರನನ್ನು ಕುರಿತು ಇಂತೆಂದನು :—" ಎಲೆವೊ ದುರಹಂಕಾರಿಯೆ, ದುರಾತ್ಮ! ಕಾಮಲಂಪಟಾ !! ನೀನು ಈ ಬಗೆಯ ಅವಿನಯವನ್ನು ಕಂಡೂ ಸ್ತಬ್ಧನಾಗಿದ್ದೀಯಲ್ಲವೆ?

ಶ್ರಿಯೋ ಧಾಮ ಸ್ರಜಂ ಪ್ರೀತ್ಯಾ ಮದ್ದತ್ತಾಂ ನಾಭಿನಂದಸಿ ।
ಪ್ರಣಾಮಮಪಿ ರೇ ಮೂಢ ನ ಕರೋಷಿ ತ್ವಮುನ್ಮದಃ ॥ ೨೪ ॥
ನ ವೀಕ್ಷಸೇ ಮಾಮಪಿ ತ್ವಂ ತ್ವಾದೃಙ್ಮತ್ತೈಕಶಿಕ್ಷಕಂ ।
ತ್ರೈಲೋಕ್ಯರಾಜಪ್ರಾಪ್ತ್ಯಾನ್ಧ್ಯಂ ಸಮ್ಯಕ್ತ್ವಾಂ ಶಿಕ್ಷಯೇಽಧುನಾ ॥ ೨೫ ॥
ಯಸ್ಯಾಃ ಪ್ರಸಾದಾತ್ತ್ರೈಲೋಕ್ಯರಾಜ್ಯಸೌಖ್ಯಂ ತ್ವಮಾಪ್ತವಾನ್ ।
ಸೈವಶ್ರೀಃ ಸತ್ರಿಲೋಕಂ ತ್ವಾಂ ಹಿತ್ವಾ ಲೀನಾಽಸ್ತು ಸಾಗರೇ ॥ ೨೬ ॥
ವಜ್ರಪಾತೋಪಮಂ ವಾಕ್ಯಂ ತನ್ನಿಶಮ್ಯೈತತ್ಕ್ಷಣಂ ಸಃ ।
ಗಜಾದುತ್ಪ್ಲುತ್ಯ ವಿಮದಸ್ತದಂಘ್ರ್ಯೋಃಪತದ್ಧರಿಃ ॥ ೨೭ ॥
ಪ್ರಾರ್ಥಯಾಮಾಸ ಚ ಮುಹುಃ ಪ್ರಣಮಂಸ್ತಂ ಸವೇಪಥುಃ ।
ಪ್ರಸಾದಂ ಮಯಿ ದಾಸೇ ತ್ವಂ ಕೃಪಾಲೋ ಕರ್ತುಮರ್ಹಸಿ ॥ ೨೮ ॥
ತಂ ಪ್ರಾಹಾಽಥ ಸ ರೇ ಶಕ್ರ ನಾಹಂ ವೈ ಗೌತಮೋ ಮುನಿಃ ।
ಅಕ್ಷಮಾಸಾರಸರ್ವಸ್ವಂ ದುರ್ವಾಸಸಮವೇಹಿ ಮಾಂ ॥ ೨೯ ॥

---

೨೪. ನಾನು ಅನುಗ್ರಹಿಸಿಕೊಟ್ಟ ಸಂಪತ್ತಿಗೆ ನೆಲೆಯಾದ ಈ ಮಾಲೆಯನ್ನೂ ಅಭಿನಂದಿಸದೆಹೋದೆಯಲ್ಲವೆ! ಎಲಾ ಮೂಢಾ! ನೀನು ಮದಿಸಿ ನನಗೆ ಪ್ರಣಾಮವನ್ನು ಕೂಡ ಮಾಡಲಿಲ್ಲ.

೨೫. ನಿನ್ನಂಥ ಮತ್ತರಿಗೆ ಮತ್ತಷ್ಟು ಮತ್ತೇರಿಸುವ ತ್ರೈಲೋಕರಾಜ್ಯವು ದೊರೆತುದರಿಂದ ಕುರುಡಾಗಿರುವ ನೀನು ನನ್ನಕಡೆ ನೋಡುವುದೂ ಸಹ ಇಲ್ಲವೆ? ಈಗ ಇಂತಹ ನಿನಗೆ ಚೆನ್ನಾಗಿ ಶಿಕ್ಷೆಯನ್ನು ವಿಧಿಸುತ್ತೇನೆ.

೨೬. ಯಾರ ಪ್ರಸಾದದಿಂದ ನೀನು ತ್ರೈಲೋಕ್ಯರಾಜ್ಯದ ಸೌಖ್ಯವನ್ನು ಪಡೆದೆಯೋ ಆ ಶ್ರೀಯು ನಿನ್ನನ್ನೇ ಅಲ್ಲದೆ, ಮೂರು ಲೋಕವನ್ನೂ ತೊರೆದು ಸಾಗರದಲ್ಲಿ ಲೀನಳಾಗಲಿ."

೨೭. ವಜ್ರಪಾತಕ್ಕೆ ಸಮಾನವಾದ ಆ ವಾಕ್ಯವನ್ನು ಕೇಳಿದ ಕೂಡಲೆ ಇಂದ್ರನು ಆ ಕ್ಷಣವೆ ಆನೆಯಿಂದ ಕೆಳಕ್ಕೆ ಧುಮುಕಿ ಮದವನ್ನು ತೊರೆದು ಅವನ ಪಾದಗಳಿಗೆ ಬಿದ್ದನು.

೨೮. ಗಡಗಡನೆ ನಡುಗುತ್ತ ಆತನಿಗೆ ಪ್ರಣಾಮಮಾಡುತ್ತ "ಎಲೈ ಕೃಪಾಳುವೇ! ದಾಸನಾದ ನನ್ನಲ್ಲಿ ಅನುಗ್ರಹಮಾಡಬೇಕು" ಎಂದು ಮತ್ತೆ ಮತ್ತೆ ಪ್ರಾರ್ಥಿಸಿಕೊಂಡನು.

೨೯. ಆ ಮುನಿಯಾದರೋ ಇಂದ್ರನನ್ನು ಕುರಿತು ಇಂತೆಂದನು:— "ಎಲಾ ಶಕ್ರ! ನಾನು ಗೌತಮಮುನಿಯಲ್ಲ. ನಾನು ಅಕ್ಷಮೆಯ ಸಾರ ಸರ್ವಸ್ವನಾದ ದುರ್ವಾಸನೆಂದು ತಿಳಿ.

**ಅನ್ಯೇ ತೇ ಮುನಯೋ ದುಷ್ಟಾಸ್ತ್ವಕಾಸ್ತೇಽನುವರ್ತಿನಃ ।**
**ಅಹಂ ತು ತ್ವಾದೃಶಾನ್ ಕೀಟಾನ್ ಗಣಯೇ ನೈವ ನಿಃಸ್ಪೃಹಃ ॥ ೩೦ ॥**
**ಜ್ವಲಜ್ಜಟಾಕಲಾಪಾಚ್ಚ ಭೃಕುಟೀ ಕುಟಿಲೇಕ್ಷಣಾತ್ ।**
**ಕೋ ವಾ ನ ಬಿಭಿಯಾನ್ಮತ್ತೋ ಬ್ರಹ್ಮಾಂಡೇ ಪಾಪಕರ್ಮಕೃತ್॥ ೩೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ದೇವೇಂದ್ರಶಾಪೋ" ನಾಮಾಷ್ಟಮೋಽಧ್ಯಾಯಃ**

---

೩೦. ಇತರ ಮುನಿಗಳಾದರೋ ದುಷ್ಟರು; ಅವರು ನಿನ್ನ ಅನುವರ್ತಿಗಳು. ನಾನು ಯಾವ ಆಸೆಯೂ ಇಲ್ಲದವನು; ನಿನ್ನಂಥವರನ್ನು ಕೀಟಗಳಂತೆಯೂ ಗಣಿಸುವವನಲ್ಲ."

೩೧. ಎಲೈ ಮಹರ್ಷಿಯೇ! ದೂರ್ವಾಸಮಹಾಮುನಿಯ ಪ್ರಜ್ವಲಿಸುವ ಆ ಜಟಾಕಲಾಪಕ್ಕೂ, ಹುಬ್ಬುಗಂಟಿಕ್ಕಿರುವ ಕುಟಿಲವಾದ ಆ ಕಣ್ಣನೋಟಕ್ಕೂ ಬ್ರಹ್ಮಾಂಡದಲ್ಲಿ ಮತ್ತನಾಗಿ ಪಾಪಕರ್ಮಮಾಡಿದ ಯಾವನುತಾನೆ ಹೆದರುವುದಿಲ್ಲವು?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ದೇವೇಂದ್ರಶಾಪವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವಮೋಽಧ್ಯಾಯಃ

## ಹಿಂಸ್ರಯಜ್ಞಪ್ರವೃತ್ತಿಹೇತುನಿರೂಪಣಂ

ಸ್ಕಂದ ಉವಾಚ :—

ಭಾವಿಧರ್ಮವಿಪರ್ಯಾಸಕಾಲವೇಗವಶೋಽಥ ಸಃ ।
ನಾಹಂ ಕ್ಷಮಿಷ್ಯ ಇತ್ಯುಕ್ತ್ವಾ ಕೈಲಾಸಂ ಪ್ರಯಯೌ ಮುನಿಃ ॥ ೧ ॥
ತ್ರೈಲೋಕ್ಯಾಚ್ಛ್ರೀರಪಿ ತದಾ ಸಮುದ್ರೇಂತರ್ಧಿಮಾಯಯೌ ।
ಇಂದ್ರಂ ವಿಹಾಯಾಪ್ಸರಸಃ ಸರ್ವಶಃ ಶ್ರಿಯಮನ್ವಯುಃ ॥ ೨ ॥
ತಪಃ ಶೌಚಂ ದಯಾ ಸತ್ಯಂ ಪಾದಃ ಸದ್ಧರ್ಮಬುದ್ಧಯಃ ।
ಸಿದ್ಧಯಶ್ಚ ಬಲಂ ಸತ್ತ್ವಂ ಸರ್ವತಃ ಶ್ರಿಯಮನ್ವಯುಃ ॥ ೩ ॥
ಗಜಾದೀನಿ ಚ ಯಾನಾನಿ ಸ್ವರ್ಣಾದ್ಯಾ ಭೂಷಣಾನಿ ಚ ।
ಚಿಕ್ಷಿಯುರ್ಮಣಿರತ್ನಾನಿ ಧಾತೂಪಕರಣಾನಿ ಚ ॥ ೪ ॥
ಅನ್ನಾನ್ಯೌಷಧಯಃ ಸ್ನೇಹಾಃ ಕಾಲೇನಾಲ್ಪೇನ ಚಿಕ್ಷಿಯುಃ ।
ನ ಕ್ಷೀರಂ ಧೇನುಮಹಿಷೀ ಪ್ರಮುಖಾನಾಂ ಸ್ತನೇಷ್ವಭೂತ್ ॥ ೫ ॥

---

## ಕನ್ನಡದ ಅನುವಾದ

### ಹಿಂಸಾಯಜ್ಞಪ್ರವೃತ್ತಿಹೇತುನಿರೂಪಣ

೧. ಸ್ಕಂದನು ಹೇಳುತ್ತಾನೆ:—ಮುಂದೆ ಸಂಭವಿಸುವುದಾದ ಧರ್ಮವಿಪರ್ಯಾಸಕಾಲದ ವೇಗದ ಸೆಳವಿಗೆ ಸಿಕ್ಕಿದವನಾಗಿ ಆ ಮುನಿಯು 'ನಾನು ನಿನ್ನನ್ನು ಕ್ಷಮಿಸುವುದಿಲ್ಲ' ಎಂದು ನುಡಿದು ಕೈಲಾಸಕ್ಕೆ ಹೊರಟುಹೋದನು.

೨. ತ್ರೈಲೋಕ್ಯದ ಶ್ರೀಯು ಕೂಡ ಆ ಕೂಡಲೆ ಸಮುದ್ರದಲ್ಲಿ ಅಂತರ್ಧಾನವನ್ನು ಹೊಂದಿದಳು. ಅಪ್ಸರೆಯರೆಲ್ಲರೂ ಇಂದ್ರನನ್ನು ತೊರೆದು ಶ್ರೀಯನ್ನೆ ಅನುಸರಿಸಿ ಹೊರಟುಹೋದರು.

೩. ತಪಸ್ಸು, ಶೌಚ, ದಯೆ, ಸತ್ಯ, ದಾನ, ಸದ್ಧರ್ಮ ಮತ್ತು ಬುದ್ಧಿ ಸಿದ್ಧಿಗಳು, ಬಲ, ಸತ್ತ್ವ—ಎಲ್ಲವೂ ಲಕ್ಷ್ಮಿಯನ್ನೇ ಬೆಂಬತ್ತಿದವು.

೪. ಆನೆ ಮೊದಲಾದ ಯಾನಗಳೂ, ಸ್ವರ್ಣ ಮೊದಲಾದ ಭೂಷಣಗಳೂ, ಮಣಿರತ್ನಗಳೂ, ಬಗೆಬಗೆಯ ಧಾತುಗಳ ಉಪಕರಣಗಳೂ ಕ್ಷೀಣವಾಗಿ ಹೋದವು.

೫. ಅನ್ನಗಳು, ಓಷಧಿಗಳು, ಸ್ನೇಹ (ಎಂದರೆ ಜಿಡ್ಡು)ಗಳು, ಎಲ್ಲವೂ ಅತ್ಯಲ್ಪಕಾಲದಲ್ಲಿಯೆ ಕ್ಷಯಿಸಿದವು. ಹಸು, ಎಮ್ಮೆ ಮೊದಲಾದವುಗಳ ಕೆಚ್ಚಲುಗಳೂ ಬತ್ತಿ ಹಾಲಿಲ್ಲವಾಯಿತು.

ನವಾಪಿ ನಿಧಯೋ ನಷ್ಟಾಃ ಕುಬೇರಸ್ಯಾಪಿ ಮಂದಿರಾತ್ ।
ಇಂದ್ರಃ ಸಹಾಮರಗಣೈರಾಸೀತ್ತಾಪಸಸನ್ನಿಭಃ ॥ ೬ ॥
ಸರ್ವಾಣಿ ಭೋಗದ್ರವ್ಯಾಣಿ ನಾಶಮಾಯುಸ್ತ್ರಿಲೋಕತಃ ।
ದೇವಾ ದೈತ್ಯಾ ಮನುಷ್ಯಾಶ್ಚ ಸರ್ವೇ ದಾರಿದ್ರ್ಯಪೀಡಿತಾಃ ॥ ೭ ॥
ಕಾಂತ್ಯಾ ಹೀನಸ್ತತಶ್ಚಂದ್ರಃ ಪ್ರಾಪಾಂಬುತ್ವಂ ಮಹೋದಧೌ ।
ಅನಾವೃಷ್ಟಿರ್ಮಹತ್ಯಾಸೀತ್ ಧಾನ್ಯಬೀಜಕ್ಷಯಂಕರೀ ॥ ೮ ॥
ಕ್ವಾನ್ನಂ ಕ್ವಾನ್ನೇತಿ ಜಲ್ಪಂತಃ ಕ್ಷುತ್ತ್ವಾಮಾಶ್ಚ ನಿರೋಜಸಃ ।
ತ್ಯಕ್ತ್ವಾ ಗ್ರಾಮಾನ್ ಪುರಶ್ಯೋಽಷುರ್ವನೇಷು ಚ ನಗೇಷು ಚ ॥ ೯ ॥
ಕ್ಷುಧಾರ್ತಾಸ್ತೇ ಪಶೂನ್ ಹತ್ವಾ ಗ್ರಾಮ್ಯಾನಾರಣ್ಯಕಾಂಸ್ತಥಾ ।
ಪಕ್ವಾನ್ಯಪಕ್ವಾನ್ಯಪಿ ವಾ ಕೇಚಿತ್ ತೇಷಾಂ ಮಾಂಸಾನ್ಯಭುಂಜತ ॥ ೧೦ ॥
ವಿದ್ವಾಂಸೋ ಮುನಯಶ್ಚಾಽಥ ಯೇ ವೈ ಸದ್ಧರ್ಮಚಾರಿಣಃ ।
ಮ್ರಿಯಮಾಣಾಃ ಕ್ಷುಧಾಽಥಾಪಿ ನಾಶ್ನಂತ ಪಲಲಾನಿ ತು ॥ ೧೧ ॥
ತದಾ ತು ವೃದ್ಧಾ ಋಷಯಸ್ತಾನ್ ದೃಷ್ಟ್ವಾಽನಶನಾದೃತಾನ್ ।
ಮನುಭಿಃ ಸಹವೇದೋಕ್ತಮಾಪದ್ಧರ್ಮಮಬೋಧಯನ್ ॥ ೧೨ ॥

---

೬. ಕುಬೇರನ ಮಂದಿರದಿಂದ ನವನಿಧಿಗಳೂ ಕೂಡ ನಷ್ಟವಾಗಿಹೋದವು. ಇಂದ್ರನು ಅಮರಸಮೂಹದಿಂದೊಡಗೂಡಿ ರಿಕ್ತತಾಪಸನಿಗೆ ಸಮಾನನಾದನು.

೭. ಮೂರುಲೋಕದ ಭೋಗದ್ರವ್ಯಗಳೆಲ್ಲ ನಾಶವನ್ನೈದಿದವು. ದೇವತೆಗಳು, ದೈತ್ಯರು, ಮನುಷ್ಯರು ಎಲ್ಲರೂ ದಾರಿದ್ರ್ಯಪೀಡಿತರಾದರು.

೮. ಚಂದ್ರನು ಕಾಂತಿಹೀನನಾಗಿ ಮಹೋದಧಿಯನ್ನು ಸೇರಿ ನೀರಾಗಿ ಮಾರ್ಪಟ್ಟನು. ಧಾನ್ಯಬೀಜಗಳನ್ನೆಲ್ಲ ಕ್ಷಯಗೊಳಿಸುವ ಮಹತ್ತರವಾದ ಅನಾವೃಷ್ಟಿಯುಂಟಾಯಿತು.

೯. ಎಲ್ಲರೂ, 'ಅನ್ನ ಅನ್ನ ಎಲ್ಲಿ ಎಲ್ಲಿ' ಎಂದು ಕೂಗಿಕೊಳ್ಳುತ್ತ ಹಸಿವಿನಿಂದ ಕೃಶಿಸಿ ಕಳೆಯಿಲ್ಲದವರಾಗಿ ಗ್ರಾಮಗಳನ್ನೂ, ನಗರಗಳನ್ನೂ ತೊರೆದು, ಕಾಡುಗಳಲ್ಲಿಯೂ ಬೆಟ್ಟಗಳಲ್ಲಿಯೂ ವಾಸಮಾಡತೊಡಗಿದರು.

೧೦. ಹಸಿವಿನಿಂದ ಕಂಗೆಟ್ಟ ಅವರಲ್ಲಿ ಕೆಲವರು ಗ್ರಾಮದ ಮತ್ತು ಅರಣ್ಯದ ಪಶುಗಳನ್ನು ಕೊಂದು ಅವುಗಳ ಮಾಂಸವನ್ನು ಹಸಿಬಿಸಿಯೆನ್ನದೆ ತಿಂದರು.

೧೧. ವಿದ್ವಾಂಸರೂ, ಮುನಿಗಳೂ, ಯಾರು ಯಾರು ಸದ್ಧರ್ಮಚಾರಿಗಳಾಗಿದ್ದರೋ ಅವರು ಮಾತ್ರ ಹಸಿವಿನಿಂದ ಸಾಯುತ್ತಿದ್ದರೂ ಮಾಂಸಗಳನ್ನು ತಿನ್ನಲಿಲ್ಲ.

೧೨. ಆಗ ಮಾಂಸಾಶನದಲ್ಲಿ ಆದರವಿಲ್ಲದವರಾದ ಅವರನ್ನು ಕಂಡು

ಮುನಯಃ ಪ್ರಾಯಶಸ್ತತ್ರ ಕ್ಷುಧಾ ವ್ಯಾಕುಲಿತೇಂದ್ರಿಯಾಃ ।
ಪರೋಕ್ಷವಾದವೇದಾರ್ಥಾನ್ ವಿಪರೀತಾನ್ ಪ್ರಪೇದಿರೇ ॥ ೧೩ ॥
ಅರ್ಥಂ ಚಾಜಾದಿ ಶಬ್ದಾನಾಂ ಮುಖ್ಯಂ ಛಾಗಾದಿಮೇವ ತೇ ।
ಬುಬುಧುಶ್ಚಾಥ ತೇ ಪ್ರಾಹುರ್ಯಜ್ಞಾನ್ ಕುರುತ ಭೋ ದ್ವಿಜಾಃ ॥
ಯಾ ವೇದವಿಹಿತಾ ಹಿಂಸಾ ನ ಸಾ ಹಿಂಸಾಸ್ತಿ ದೋಷದಾ ।
ಉದ್ದಿಶ್ಯ ದೇವಾನ್ಪಿತೄಂಶ್ಚ ತತೋಘ್ನತ ಪಶೂನ್ ಶುಭಾನ್ ॥ ೧೫ ॥
ಪ್ರೋಕ್ಷಿತಂ ದೇವತಾಭ್ಯಶ್ಚ ಪಿತೃಭ್ಯಶ್ಚ ನಿವೇದಿತಂ ।
ಭುಂಜತ ಸ್ವೇಪ್ಸಿತಂ ಮಾಂಸಂ ಸ್ವಾರ್ಥಂ ತು ಘ್ನತ ಮಾ ಪಶೂನ್ ॥
ತತೋ ದೇವರ್ಷಿಭೂಪಾಲಾ ನರಾಶ್ಚ ಸ್ವಸ್ವಶಕ್ತಿತಃ ।
ಚಕ್ರುಸ್ತೈರ್ಬೋಧಿತಾ ಯಜ್ಞಾನ್ ಋತೇ ಹ್ಯೇಕಾಂತಿಕಾನ್ ಹರೇಃ ॥೧೭॥
ಗೋಮೇಧಮಶ್ವಮೇಧಂ ಚ ನರಮೇಧಮುಖಾನ್ಮಖಾನ್ ।
ಚಕ್ರುರ್ಯಜ್ಞಾವಶಿಷ್ಟಾನಿ ಮಾಂಸಾನಿ ಬುಭುಜುಶ್ಚ ತೇ ॥ ೧೮ ॥

---

ವೃದ್ಧರಾದ ಋಷಿಗಳು ಮನುಗಳೊಡಗೂಡಿ ವೇದೋಕ್ತವಾದ ಆಪದ್ಧರ್ಮವನ್ನು ಬೋಧಿಸಿದರು.

೧೩. ಮುನಿಗಳು ಪ್ರಾಯಶಃ ಹಸಿವಿನಿಂದ ವ್ಯಾಕುಲಗೊಂಡ ಇಂದ್ರಿಯಗಳುಳ್ಳವರಾಗಿ, ಪರೋಕ್ಷ ವಿಷಯಗಳನ್ನು ಕುರಿತ ವೇದಾರ್ಥಗಳನ್ನು ವಿಪರೀತವಾಗಿ ತಿಳಿದುಕೊಂಡರು (ಎಂದರೆ ವೇದದ ನಿಜವಾದ ಅಭಿಪ್ರಾಯವೊಂದಾದರೆ ಅದಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಅವರು ಭಾವಿಸಿಕೊಂಡರು.)

೧೪-೧೫. 'ಅಜ' ಮೊದಲಾದ ಶಬ್ದಗಳಿಗೆ 'ಆಡು' ಮೊದಲಾದುವೇ ಮುಖ್ಯಾರ್ಥಗಳೆಂದು ತಿಳಿದುಕೊಂಡು ಅವರು 'ಎಲೈ ದ್ವಿಜರೇ! ಯಜ್ಞಗಳನ್ನು ಮಾಡಿರಿ. ವೇದದಲ್ಲಿ ದೇವತೆಗಳನ್ನೂ, ಪಿತೃಗಳನ್ನೂ ಉದ್ದೇಶಿಸಿ ಯಾವ ಹಿಂಸಾಯಜ್ಞವು ವಿಧಿಸಲ್ಪಟ್ಟಿದೆಯೋ ಅದನ್ನು ಮಾಡಿದರೆ ದೋಷವುಂಟಾಗುವುದಿಲ್ಲ. ಆದುದರಿಂದ ಶುಭಕರಗಳಾದ ಪಶುಗಳನ್ನು ಕೊಲ್ಲಿರಿ.

೧೬. ಪ್ರೋಕ್ಷಣೆಮಾಡಿದ್ದೂ, ದೇವತೆಗಳಿಗೂ, ಪಿತೃಗಳಿಗೂ ನಿವೇದನಮಾಡಿದ್ದೂ ಆಗಿ ನಿಮಗಿಷ್ಟವಾದ ಮಾಂಸವನ್ನು ಭೋಜನಮಾಡಿರಿ. ಸ್ವಾರ್ಥಕ್ಕಾಗಿ ಮಾತ್ರ ಪಶುಗಳನ್ನು ಕೊಲ್ಲಬೇಡಿರಿ' ಎಂದರು.

೧೭. ಆಮೇಲೆ, ಅವರಿಂದ ಬೋಧನೆ ಹೊಂದಿದವರಾದ ದೇವ ಋಷಿ ಭೂಪಾಲರೂ, ಇತರ ಮಾನವರೂ ತಮ್ಮ ತಮ್ಮ ಶಕ್ತಿಗನುಸಾರವಾಗಿ ಯಜ್ಞಗಳನ್ನು ಮಾಡತೊಡಗಿದರು; ಹರಿಯಲ್ಲಿ ಏಕಾಂತಭಕ್ತರಾದವರು ಮಾತ್ರ ಇದಕ್ಕೆ ಹೊರತಾದರು.

೧೮. ಗೋಮೇಧ, ಅಶ್ವಮೇಧ, ನರಮೇಧ, ಮೊದಲಾದ ಯಜ್ಞ

ವಿನಷ್ಟಾಯಾಃ ಶ್ರಿಯಃ ಪ್ರಾಪ್ತ್ಯೈ ಕೇಚಿದ್ಯಜ್ಞಾಂಶ್ಚ ಚಕ್ರಿರೇ ।
ಸ್ತ್ರೀಪುತ್ರಮಂದಿರಾದ್ಯರ್ಥಂ ಕೇಚಿಚ್ಚ ಸ್ವೀಯವೃತ್ತಯೇ ॥ ೧೯ ॥
ಮಹಾಯಜ್ಞೇಷ್ವಶಕ್ತಾಸ್ತು ಪಿತೄನುದ್ದಿಶ್ಯ ಭೂರಿಶಃ ।
ನಿಹತ್ಯ ಶ್ರಾದ್ಧೇಷು ಪಶೂನ್ ಮಾಂಸಾನ್ಯಾದೀಂಸ್ತಥಾಽಽದಯನ್ ॥ ೨೦ ॥
ಕೇಚಿತ್ಸರಿತ್ಸಮುದ್ರಾಣಾಂ ತೀರೇಷ್ವೇವಾವಸನ್ ಜನಾಃ ।
ಮತ್ಸ್ಯಾನ್ ಜಾಲೈರುಪಾದಾಯ ತದಾಹಾರಾ ಬಭೂವಿರೇ ॥ ೨೧ ॥
ಸ್ವಗೃಹಾಗತಶಿಷ್ಟೇಭ್ಯಃ ಪಶೂನೇವ ನಿಹತ್ಯ ಚ ।
ನಿವೇದಯಾಮಾಸುರೇತೇ ಗೋಛಾಗಪ್ರಮುಖಾನ್ಮುನೇ ॥ ೨೨ ॥
ಸಜಾತೀಯವಿವಾಹಾನಾಂ ನಿಯಮಶ್ಚ ತಥಾ ಕ್ವಚಿತ್ ।
ನಾಭವದ್ಧರ್ಮಸಾಂಕರ್ಯಾದ್ವಿತ್ತವೇಶ್ಮಾದ್ಯಭಾವತಃ ॥ ೨೩ ॥
ಬ್ರಾಹ್ಮಣಾಃ ಕ್ಷತ್ರಿಯಾದೀನಾಂ ಕ್ಷತ್ರಾದ್ಯಾ ಬ್ರಾಹ್ಮಣೀ ಸುತಾಃ ।
ಉಪಯೇಮಿರೇ ಕಾಲಗತ್ಯಾ ಸ್ವಸ್ವವಂಶಾದಿ ವೃದ್ಧಯೇ ॥ ೨೪ ॥

---

ಗಳನ್ನು ಅವರು ಮಾಡಿದರು. ಯಜ್ಞದಲ್ಲಿ ಅರ್ಪಿಸಿ ಉಳಿದ ಮಾಂಸಗಳನ್ನು ಭುಜಿಸಿದರು.

೧೯. ನಷ್ಟವಾದ ಸಂಪತ್ತಿನ ಪ್ರಾಪ್ತಿಗಾಗಿ ಕೆಲವರು ಯಜ್ಞಗಳನ್ನು ಮಾಡಿದರು. ಸ್ತ್ರೀ, ಪುತ್ರ, ಮಂದಿರ, ಮೊದಲಾದವುಗಳಿಗಾಗಿ ಕೆಲವರೂ, ಮತ್ತೆ ಕೆಲವರು ತಮ್ಮ ವೃತ್ತಿಗಾಗಿಯೂ ಯಜ್ಞಮಾಡಿದರು.

೨೦–೨೧. ಮಹಾಯಜ್ಞಗಳನ್ನು ಮಾಡಲು ಅಶಕ್ತರಾದವರು ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಗಳಲ್ಲಿ ಅನೇಕವಾಗಿ ಪಶುಗಳನ್ನು ಕೊಂದು ಮಾಂಸಗಳನ್ನು ತಿಂದರು. ಕೆಲವು ಜನರು ಹೊಳೆ ಮತ್ತು ಕಡಲುಗಳ ದಡದಲ್ಲಿಯೇ ವಾಸ ಮಾಡುವವರಾಗಿ ಬಲೆಗಳಿಂದ ಮೀನುಗಳನ್ನು ಹಿಡಿದುತಿಂದು 'ಮತ್ಸ್ಯಾಹಾರಿ' ಗಳಾದರು.

೨೨. ಎಲೈ ಮುನಿಯೇ! ಅವರು ತಮ್ಮ ಮನೆಗೆ ಬಂದ ಶಿಷ್ಟರಿಗೂ ಹಸು, ಆಡು ಮೊದಲಾದ ಪಶುಗಳನ್ನೇ ಕೊಂದು ಅರ್ಪಿಸುತ್ತಿದ್ದರು.

೨೩. ಆಗ ಹಣ, ಮನೆ ಮೊದಲಾದವುಗಳಿಲ್ಲದುದರಿಂದಲೂ, ಧರ್ಮ ಸಾಂಕರ್ಯದಿಂದಲೂ ಸಜಾತೀಯ ವಿವಾಹಗಳ ನಿಯಮವು ಕೂಡ ಇರಲಿಲ್ಲ; ಎಲ್ಲಿಯೋ ಒಮ್ಮೊಮ್ಮೆ ಮಾತ್ರ ಅದು ಕಂಡುಬರುತ್ತಿದ್ದಿತು.

೨೪. ಕಾಲಗತಿಯಿಂದ ತಮ್ಮ ತಮ್ಮ ವಂಶಗಳ ಅಭಿವೃದ್ಧಿಗಾಗಿ ಬ್ರಾಹ್ಮಣರು ಕ್ಷತ್ರಿಯರೇ ಮೊದಲಾದವರ ಹೆಣ್ಣುಗಳನ್ನೂ, ಕ್ಷತ್ರಿಯರೇ ಮೊದಲಾದವರು ಬ್ರಾಹ್ಮಣರ ಮಕ್ಕಳನ್ನೂ ಮದುವೆ ಮಾಡಿಕೊಂಡರು.

ಇತ್ಥಂ ಹಿಂಸಾಮಯಾ ಯಜ್ಞಾಃ ಸಂಪ್ರವೃತ್ತಾ ಮಹಾಪದಿ ।
ಧರ್ಮಸ್ತ್ವಾಭಾಸಮಾತ್ರೋಽಸ್ಥಾತ್ಸ್ವಯಂ ತು ಶ್ರಿಯಮನ್ವಗಾತ್॥ ೨೫॥
ಅಧರ್ಮಃ ಸಾನ್ವಯೋ ಲೋಕಾನ್ ತ್ರೀನಪಿ ವ್ಯಾಪ್ಯ ಸರ್ವತಃ ।
ಅವರ್ಧತಾಲ್ಪಕಾಲೇನ ದುರ್ನಿವಾರ್ಯೋ ಬುಧೈರಪಿ ॥ ೨೬ ॥
ದರಿದ್ರಾಣಾಮಥೈತೇಷಾಮಪತ್ಯಾನಿ ತು ಭೂರಿಶಃ ।
ತೇಷಾಂ ಚ ವಂಶವಿಸ್ತಾರೋ ಮಹಾಂಲ್ಲೋಕೇಷ್ವವರ್ಧತ ॥ ೨೭ ॥
ವಿದ್ವಾಂಸಸ್ತತ್ರ ಯೇ ಜಾತಾಸ್ತೇ ತು ಧರ್ಮಂ ತಮೇವ ಹಿ ।
ಮೇನಿರೇ ಮುಖ್ಯಮೇವಾಽಥ ಗ್ರಂಥಾಂಶ್ಚಕ್ರುಶ್ಚ ತಾದೃಶಾನ್ ॥ ೨೮ ॥
ತೇ ಪರಂಪರಯಾ ಗ್ರಂಥಾಃ ಪ್ರಾಮಾಣ್ಯಂ ಪ್ರತಿಪೇದಿರೇ ।
ಆದ್ಯೇ ತ್ರೇತಾಯುಗೇ ಹೀತ್ಥಮಾಸೀದ್ಧರ್ಮಸ್ಯ ವಿಪ್ಲವಃ ॥ ೨೯ ॥
ತತಃ ಪ್ರಭೃತಿ ಲೋಕೇಷು ಯಜ್ಞಾದೌ ಪಶುಹಿಂಸನಂ ।
ಬಭೂವ ಸತ್ಯೇ ತು ಯುಗೇ ಧರ್ಮ ಆಸೀತ್ಸನಾತನಃ ॥ ೩೦ ॥
ಕಾಲೇನ ಮಹತಾ ಸೋಽಪಿ ಸಹದೇವೈಃ ಸುರಾಧಿಪಃ ।
ಆರಾಧ್ಯ ಸಂಪದಂ ಪ್ರಾಪ ವಾಸುದೇವಂ ಪ್ರಭುಂ ಮುನೇ ॥ ೩೧ ॥

---

೨೫. ಈ ರೀತಿಯಾಗಿ ಆ ಮಹಾ ಆಪತ್ತಿನಲ್ಲಿ ಹಿಂಸಾಮಯವಾದ ಯಜ್ಞಗಳು ತಲೆದೋರಿದವು. ಧರ್ಮವು ಆಭಾಸವಾಗಿಮಾತ್ರ ಉಳಿದಿದ್ದಿತು. ನಿಜವಾದ ಧರ್ಮವಾದರೊ ಶ್ರೀಯನ್ನೆ ಅನುಸರಿಸಿ ಹೊರಟುಹೋಯಿತು.

೨೬. ಅಧರ್ಮವು ತನ್ನ ಕುಲಪರಂಪರೆಯೊಡನೆ ಸ್ವಲ್ಪಕಾಲದಲ್ಲಿಯೇ ಮೂರು ಲೋಕಗಳನ್ನೂ ಎಲ್ಲ ಕಡೆಯೂ ವ್ಯಾಪಿಸಿ ಬೆಳೆಯಿತು. ವಿದ್ವಾಂಸರು ಕೂಡ ಅದರ ಹಬ್ಬುಗೆಯನ್ನು ತಡೆಯಲಾರದವರಾದರು.

೨೭. ಆ ತರುವಾಯ ಆ ದರಿದ್ರರಿಗೆ ಹೆಚ್ಚುಹೆಚ್ಚಾಗಿ ಮಕ್ಕಳು ಹುಟ್ಟಿದರು. ಲೋಕಗಳಲ್ಲಿ ಅವರ ವಂಶವಿಸ್ತಾರವೂ ಮಹತ್ತಾಗಿ ಬೆಳೆಯಿತು.

೨೮. ಅವರಲ್ಲಿ ಯಾರು ವಿದ್ವಾಂಸರಾಗಿ ಹುಟ್ಟಿದರೋ ಅವರು ಪಶು ಯಜ್ಞವನ್ನೇ ಮುಖ್ಯವಾದ ಧರ್ಮವೆಂದು ತಿಳಿದುಕೊಂಡರು. ಅದೇ ಬಗೆಯಾದ ಗ್ರಂಥಗಳನ್ನೇ ರಚಿಸಿದರು.

೨೯. ಆ ಗ್ರಂಥಗಳು ಪರಂಪರೆಯಿಂದ ಪ್ರಾಮಾಣ್ಯವನ್ನು ಹೊಂದಿದವು. ಮೊದಲನೆಯ ತ್ರೇತಾಯುಗದಲ್ಲಿ ಈ ರೀತಿಯಾಗಿ ಧರ್ಮವಿಪ್ಲವವಾಯಿತು.

೩೦. ಅಲ್ಲಿಂದೀಚೆಗೆ ಲೋಕಗಳಲ್ಲಿ ಯಜ್ಞವೇ ಮೊದಲಾದುವುಗಳಲ್ಲಿ ಪಶು ಹಿಂಸೆಯು ನಡೆಯತೊಡಗಿತು. ಸತ್ಯಯುಗದಲ್ಲಾದರೋ ಸನಾತನಧರ್ಮವೇ ನೆಲೆಗೊಂಡಿದ್ದಿತು.

೩೧. ಸುರಾಧಿಪತಿಯಾದ ಇಂದ್ರನೂ ಕೂಡ ದೇವತೆಗಳೊಡನೆ ಪ್ರಭುವಾದ

ತತೋ ಧರ್ಮನಿಕೇತಸ್ಯ ಶ್ರೀಪತೇಃ ಕೃಪಯಾ ಹರೇಃ ।
ಯಥಾಪೂರ್ವಂ ಚ ಸದ್ಧರ್ಮಸ್ತ್ರಿಲೋಕ್ಯಾಂ ಸಂಪ್ರವರ್ತತ ॥ ೩೨ ॥
ತತ್ರಾಪಿ ಕೇಚಿನ್ಮುನಯೋ ನೃಪಾ ದೇವಾಶ್ಚ ಮಾನುಷಾಃ ।
ಕಾಮಕ್ರೋಧ ರಸಾಸ್ವಾದ ಲೋಭೋಪಹತಸಿದ್ಧಿಯಃ ।
ತಮಾಪದ್ಧರ್ಮಮದ್ಯಾಪಿ ಪ್ರಾಧಾನ್ಯೇನೈವ ಮನ್ವತೇ ॥ ೩೩ ॥
ಏಕಾಂತಿನೋ ಭಾಗವತಾ ಜಿತಕಾಮಾದಯಸ್ತು ಯೇ ।
ಆಪದ್ಯಪಿ ನತೇಽಗೃಹ್ಣನ್ ತಂ ತಥಾ ಕಿಮುತಾಽನ್ಯದಾ ॥ ೩೪ ॥
ಇತ್ಥಂ ಬ್ರಹ್ಮನ್ನಾದಿಕಲ್ಪೇ ಹಿಂಸ್ರಯಜ್ಞಪ್ರವರ್ತನಂ ।
ಯಥಾಸೀತ್ತನ್ಮಯಾಖ್ಯಾತಮಾಪತ್ಕಾಲವಶಾದ್ಭುವಿ ॥ ೩೫ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಹಿಂಸ್ರಯಜ್ಞಪ್ರವೃತ್ತಿ ಹೇತುನಿರೂಪಣಂ" ನಾಮ ನವಮೋಽಧ್ಯಾಯಃ**

---

ವಾಸುದೇವನನ್ನು ಆರಾಧಿಸಿ, ಬಹಳಕಾಲ ಕಳೆದಮೇಲೆ ಸಂಪತ್ತನ್ನು ಮತ್ತೆ ಪಡೆದನು.

೩೨. ಬಳಿಕ ಧರ್ಮಕ್ಕೆ ನೆಲೆಯೂ, ಶ್ರೀಪತಿಯೂ ಆದ ಶ್ರೀಹರಿಯ ಕೃಪೆಯಿಂದ ಉತ್ತಮ ಧರ್ಮವು ಮೊದಲಿನಂತೆಯೇ ಮೂರುಲೋಕಗಳಲ್ಲಿಯೂ ಹರಡಿತು.

೩೩. ಅದರಲ್ಲಿಯೂ ಕಾಮಕ್ರೋಧಗಳ ರಸವನ್ನಾಸ್ವಾದಿಸಿ ಆ ರುಚಿಯಲ್ಲಿ ಆತ್ಯಾಸೆ ಹುಟ್ಟಿ ಆದರಿಂದ ಸದ್ಬುದ್ಧಿಯು ಕೆಟ್ಟುಹೋಗಿರುವ ಕೆಲವರು ಮುನಿಗಳೂ, ನೃಪರೂ, ದೇವತೆಗಳೂ, ಮನುಷ್ಯರೂ ಆ ಆಪದ್ಧರ್ಮವನ್ನು ಈಗಲೂ ಕೂಡ ಪ್ರಧಾನಧರ್ಮವೆಂದೇ ಭಾವಿಸುತ್ತಾರೆ.

೩೪. ಯಾರು ಏಕಾಂತಿಗಳೊ, ಭಾಗವತರೋ, ಕಾಮಾದಿಗಳನ್ನು ಜಯಿಸಿರುವರೋ ಅವರು ಮಾತ್ರ ಅಂತಹ ಆಪತ್ತಿನಲ್ಲಿ ಕೂಡ ಆ ಅಧರ್ಮವನ್ನು (ಪಶುಯಜ್ಞರೂಪವಾದ ಧರ್ಮವನ್ನು) ಗ್ರಹಿಸಲಿಲ್ಲ. ಹಾಗಿರುವಲ್ಲಿ ಬೇರೆ ಕಾಲಗಳಲ್ಲಿ ಹೇಳಬೇಕಾದುದೇನು ?

೩೫. ಅಯ್ಯಾ ಬ್ರಾಹ್ಮಣನೇ ! ಮೊದಲನೆಯ ಕಲ್ಪದಲ್ಲಿ ಹಿಂಸಾಯಜ್ಞವು ಆಪತ್ಕಾಲವಶದಿಂದ ಭೂಮಿಯಲ್ಲಿ ಯಾವ ರೀತಿ ಮೊದಲಾಯಿತೆಂಬುದನ್ನು ಹೀಗೆ ವಿವರಿಸಿದ್ದೇನೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವಾಸುದೇವ ಮಾಹಾತ್ಮ್ಯದಲ್ಲಿ "ಹಿಂಸಾಯಜ್ಞಪ್ರವೃತ್ತಿಹೇತುನಿರೂಪಣ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಶ್ರೀವಾಸುದೇವಪ್ರಸಾದನಿರೂಪಣಂ

ಸಾವರ್ಣಿರುವಾಚ :—

**ಕಥಂ ಪ್ರಾಪ್ತಾ ಪುನಃ ಸ್ಕಂದ ಶ್ರೀರಿಂದ್ರೇಣ ಗತಾಂಬುಧಿಂ ।**
**ಏತಾಂ ಕಥಯ ಮೇ ಸರ್ವಾಂ ಕಥಾಂ ನಾರಾಯಣಾಶ್ರಯಾಂ ॥ ೧ ॥**

ಸ್ಕಂದ ಉವಾಚ :—

**ಶ್ರಿಯಾ ವಿಹೀನೋ ದೇವೇಂದ್ರಃ ಶ್ರೀಹೀನೈರಪಿ ದಾನವೈಃ ।**
**ಪರಾಜಿತೋದ್ಧೃತಸ್ಥಾನೋ ನಷ್ಟಾಶೇಷಪರಿಚ್ಛದಃ ॥ ೨ ॥**
**ಗಿರಿಗಹ್ವರಕುಂಜೇಷು ಕಾನನೇಷು ತತಸ್ತತಃ ।**
**ಪರಿಬಭ್ರಾಮ ಸಹಿತೋ ದಿಗೀಶೈರ್ವರುಣಾದಿಭಿಃ ॥ ೩ ॥**
**ವಲ್ಕಲಾಜಿನವಸ್ತ್ರಾಶ್ಚ ಪಶುಪಕ್ಷ್ಯಾಮಿಷಾಶನಾಃ ।**
**ದೇವಾ ದೈತ್ಯಾ ನರಾ ನಾಗಾಸ್ತುಲ್ಯಾಚಾರಪರಿಚ್ಛದಾಃ' ॥ ೪ ॥**
**ಪಾತ್ರಾಣಿ ಮೃಣ್ಮಯಾನ್ಯೇವ ಸರ್ವೇಷಾಮಪಿ ವೇಶ್ಮಸು ।**
**ಆಸನ್ವರಾಕಾಃ ಸರ್ವೇಽಪಿ ಪಿಶಾಚ್ಯ ಇವ ಚ ಸ್ತ್ರಿಯಃ ॥ ೫ ॥**

---

### ಕನ್ನಡದ ಅನುವಾದ

#### ಶ್ರೀವಾಸುದೇವ ಪ್ರಸಾದನಿರೂಣ

೧. ಸಾವರ್ಣಿಯು ಕೇಳುತ್ತಾನೆ:—ಎಲೈ ಸ್ಕಂದಸ್ವಾಮಿಯೇ! ಇಂದ್ರನು ಸಮುದ್ರಕ್ಕೆ ಹೋಗಿ ಸೇರಿದ್ದ ಸಂಪತನ್ನು ಮತ್ತೆ ಪಡೆದುದು ಹೇಗೆ? ನಾರಾಯಣನನ್ನಾಶ್ರಯಿಸಿರುವ ಈ ಕಥೆಯನ್ನೆಲ್ಲ ನನಗೆ ಹೇಳು.

೨. ಸ್ಕಂದನು ಹೇಳುತ್ತಾನೆ:— ಶ್ರೀಹೀನನಾದ ದೇವೇಂದ್ರನು ಶ್ರೀಹೀನನೇ ಆಗಿದ್ದರೂ ದಾನವರಿಂದ ಪರಾಜಿತನಾದನು. ಆ ದಾನವರು ಇಂದ್ರನ ಸ್ಥಾನವನ್ನು ಕಸಿದುಕೊಂಡುದೂ ಅಲ್ಲದೆ, ಅವನ ಸಕಲ ಸಾಮಗ್ರಿಗಳನ್ನೂ ಕಿತ್ತುಕೊಂಡರು.

೩. ಇಂದ್ರನು ಆ ಬಳಿಕ ವರುಣನೇ ಮೊದಲಾದ ದಿಕ್ಪತಿಗಳಿಂದೊಡಗೂಡಿ ಬೆಟ್ಟ, ಗವಿ, ಬಳ್ಳಿಮನೆಗಳಲ್ಲಿ ವಾಸಮಾಡುತ್ತ ಕಾಡುಗಳಲ್ಲಿ ಅಲ್ಲಿಂದಲ್ಲಿಗೆ ಅಲೆಯುತ್ತಿದ್ದರು.

೪. ವಲ್ಕಲ ಮತ್ತು ಚರ್ಮಗಳೇ ಅವರ ಉಡುಗೆ; ಪಶುಪಕ್ಷಿಗಳ ಮಾಂಸವೇ ಅವರಿಗೆ ಆಹಾರ. ಹೀಗೆ ದೇವತೆಗಳು, ದೈತ್ಯರು, ನರರು, ನಾಗರು ಎಲ್ಲರೂ ಒಂದೇ ಬಗೆಯ ಆಚಾರ ಮತ್ತು ಉಡುಪುಗಳುಳ್ಳವರಾದರು.

೫. ಎಲ್ಲರ ಮನೆಗಳಲ್ಲಿಯೂ ಪಾತ್ರೆಗಳು ಮಣ್ಣಿನವೇ ಆದವು. ದೇವತೆಗಳೆಲ್ಲರೂ ದರಿದ್ರರಾದರು. ಸ್ತ್ರೀಯರೆಲ್ಲರೂ ಪಿಶಾಚಿಗಳಂತಾದರು.

ಆದಾವಭೂದನಾವೃಷ್ಟಿರ್ಭುವಿ ದ್ವಾದಶ ವಾರ್ಷಿಕೀ ।
ತತೋ ವರ್ಷೇ ಕ್ವಚಿದ್ವೃಷ್ಟಿರಾಸೀತ್ಸ್ವಲ್ಪಾ ಕ್ವಚಿನ್ನ ಚ ॥ ೬ ॥
ಇತ್ಥಂ ದಾರಿದ್ರ್ಯದುಃಖಾನಾಂ ತೇಷಾಂ ವರ್ಷಶತಂ ಗತಂ ।
ಬಲಿಷ್ಠಾರಬ್ಧಕರ್ಮಾಣಸ್ತೇಽತಿದುಃಖೇಽಪಿ ನೋ ಮೃತಾಃ ॥ ೭ ॥
ಅಜೀವಂತ ಮೃತಪ್ರಾಯಾಃ ನರಕೇಷ್ವಿವ ನಾರಕಾಃ ।
ಯತಂತೋಽಪಿ ಶ್ರಿಯಃ ಪ್ರಾಪ್ತ್ಯೈ ಯಜ್ಞಾದ್ಯೈರ್ನಾಲಭಂತ ತಾಂ ॥ ೮ ॥
ತತಃ ಸಹಸ್ರವರ್ಷಾಂತೇ ಮೇರೌ ಶರಣಮಾಯಯುಃ ।
ಶಾಪಾದ್ದುರ್ವಾಸಸೋ ದೇವಾಃ ಸರ್ವೇ ದುರ್ವಾಸಸೋ ವಿಧಿಂ ॥ ೯ ॥
ಪ್ರಣಮ್ಯ ತಸ್ಮೈ ದುಃಖಂ ಸ್ವಂ ವಾಸವಾದ್ಯಾ ನ್ಯವೇದಯನ್ ।
ಆದಾವೇವ ಹಿ ಸೋಽಜ್ಞಾಸೀತ್ ಸರ್ವಜ್ಞತ್ವಾತ್ಸುರಾಪದಂ ॥ ೧೦ ॥
ಉಪಾಲಭ್ಯ ತತಶ್ಚೇಂದ್ರಂ ವಿರಿಂಚಃ ಸಹಶಂಕರಃ ।
ತದ್ದುಃಖವಾರಣೇ ಕಲ್ಪೋ ವಿಷ್ಣುರ್ನ್ಯೈಚ್ಛತ್ಪ್ರಸಾದಿತುಂ ॥ ೧೧ ॥

---

೬. ಅಯ್ಯಾ ಮಹರ್ಷಿಯೆ! ಮೊದಲು ಈ ಭೂಲೋಕದಲ್ಲಿ ಹನ್ನೆರಡು ವರ್ಷದವರೆಗೆ ಅನಾವೃಷ್ಟಿಯುಂಟಾಯಿತು. ಆ ಬಳಿಕ ಕೆಲಕೆಲವೆಡೆಗಳಲ್ಲಿ ಎಲ್ಲಿಯೋ ಸ್ವಲ್ಪ ಸ್ವಲ್ಪ ಮಳೆಯಾಗುತ್ತಿದ್ದಿತು; ಕೆಲಕೆಲವೆಡೆಗಳಲ್ಲಿ ಇಲ್ಲವೇ ಇಲ್ಲವಾಯಿತು.

೭. ಈ ರೀತಿಯಾಗಿ ದಾರಿದ್ರ್ಯದುಃಖಗಳಿಂದ ಕೂಡಿದ ಆ ದೇವಮಾನುಷ ದೈತ್ಯರಿಗೆ ನೂರುವರ್ಷಗಳು ಕಳೆದುವು. ಅವರ ಪ್ರಾರಬ್ಧಕರ್ಮವು ಬಹು ಬಲವಾಗಿದ್ದುದರಿಂದ ಆ ಮಹಾದುಃಖದಲ್ಲಿಯೂ ಅವರು ಮೃತರಾಗಲಿಲ್ಲ.

೮–೧೦. ಬದುಕಿದ್ದರೂ ಸತ್ತವರಹಾಗಾಗಿ ನರಕದಲ್ಲಿ ನರಳುವ ನಾರಕಿಗಳಂತೆ ಅವರು ಹೇಗೆ ಹೇಗೆಯೊ ಜೀವಿಸುತ್ತಿದ್ದರು. ಯಜ್ಞವೇ ಮೊದಲಾದುವುಗಳಿಂದ ಸಂಪತ್ತನ್ನು ಪಡೆಯಲು ಪ್ರಯತ್ನಮಾಡುತ್ತಿದ್ದರಾದರೂ ಅವರಿಗೆ ಅದು ದೊರಕಲಿಲ್ಲ. ಆಮೇಲೆ ಒಂದುಸಾವಿರವರ್ಷ ಕಳೆಯಲು ದೇವತೆಗಳೆಲ್ಲರೂ ದುರ್ವಾಸನ ಶಾಪದಿಂದ ದುರ್ವಾಸರೇ ಆಗಿ (ಎಂದರೆ, ಒಳ್ಳೆಯ ಬಟ್ಟೆಯಿಲ್ಲದೆ ಕೊಳೆಬಟ್ಟೆಯುಟ್ಟವರಾಗಿ) ಮೇರುಪರ್ವತದಲ್ಲಿ ನೆಲಸಿದ್ದ ಬ್ರಹ್ಮನನ್ನು ಶರಣು ಹೋದರು. ಇಂದ್ರಾದಿಗಳು ಅವನಿಗೆ ಪ್ರಣಾಮಮಾಡಿ ತಮ್ಮ ದುಃಖವನ್ನು ವಿಜ್ಞಾಪಿಸಿಕೊಂಡರು. ಆತನು ಸರ್ವಜ್ಞನಾದುದರಿಂದ ದೇವತೆಗಳಿಗೆ ಬಂದ ಆಪತ್ತನ್ನು ಮೊದಲೇ ಅರಿತಿದ್ದನು.

೧೧. ಬಳಿಕ ಆ ಬ್ರಹ್ಮನು ಶಂಕರನಿಂದೊಡಗೂಡಿ ಇಂದ್ರನನ್ನು ಹಿಂದಿಟ್ಟುಕೊಂಡು, ಅವನ ದುಃಖನಿವಾರಣೆ ಮಾಡಬಯಸಿ ಮಹಾವಿಷ್ಣುವನ್ನು ಪ್ರಸನ್ನನಾಗಿಸಬೇಕೆಂದು ಇಚ್ಛಿಸಿದನು.

ಆರಾಧಯಿಷ್ಯಂಸ್ತಪಸಾ ತತೋಽಸೌ ತಂ ತಪಃಪ್ರಿಯಂ ।
ಸರ್ವದೇವಗಣೋಪೇತ ಉಪಾಯಾತ್ಕ್ಷೀರಸಾಗರಂ ॥ ೧೨ ॥
ತಸ್ಯೋತ್ತರೇ ತಟೇ ರಮ್ಯೇ ಸರ್ವೇ ತೇಽನಶನವ್ರತಾಃ ।
ಏಕಪಾದಸ್ಥಿತಾ ಊರ್ಧ್ವಬಾಹವಶ್ಚಕ್ರಿರೇ ತಪಃ ॥ ೧೩ ॥
ಕೇಶವಂ ಹೃದಿ ತೇ ದಧ್ಯುಃ ಸರ್ವಕ್ಲೇಶವಿನಾಶನಂ ।
ಲಕ್ಷ್ಮೀಪತಿಂ ವಾಸುದೇವಮೇಕಾಗ್ರಕೃತಮಾನಸಾಃ ॥ ೧೪ ॥
ಶತಾಬ್ದಾಂತೇ ತತೋ ವಿಷ್ಣುಃ ಶ್ರೀಕೃಷ್ಣೋ ಭಗವಾನ್ ಸ್ವಯಂ ।
ಅತ್ಯಾಪನ್ನೇಷು ದೀನೇಷು ಕೃಪಾಂ ದೇವೇಷು ಸೋಽಕರೋತ್ ॥ ೧೫ ॥
ಅದೃಶ್ಯಮೂರ್ತಿರಾತ್ಮಜ್ಞೈರಪಿ ಭೂರಿತಪಸ್ವಿಭಿಃ ।
ತತ್ರಾವಿರಾಸೀತ್ಕೃಪಯಾ ನಿಯುತಾಹಸ್ಕರದ್ಯುತಿಃ ॥ ೧೬ ॥
ತೇಜೋ ಮಂಡಲಮೇವಾದೌ ಸಹಸಾ ಸ್ಫುರಿತಂ ಮಹತ್ ।
ದದೃಶುರ್ವಿಬುಧಾಃ ಸರ್ವೇ ಸಿತಂ ಘನಮನೌಪಮಂ ॥ ೧೭ ॥

---

೧೨. ತಪಃಪ್ರಿಯನಾದ ಆ ವಿಷ್ಣುವನ್ನು ತಪಸ್ಸಿನಿಂದಲೇ ಆರಾಧಿಸುತ್ತ ಆ ಬ್ರಹ್ಮನು ಸಮಸ್ತದೇವಗಣಗಳಿಂದಲೂ ಒಡಗೂಡಿದವನಾಗಿ ಕ್ಷೀರಸಾಗರಕ್ಕೆ ಹೋಗಿ ಸೇರಿದನು.

೧೩. ರಮ್ಯವಾದ ಆ ಕ್ಷೀರಸಮುದ್ರದ ಉತ್ತರತೀರದಲ್ಲಿ ಆ ದೇವತೆಗಳೆಲ್ಲರೂ ಅನಶನವ್ರತಧಾರಿಗಳಾಗಿ ಒಂಟಿಗಾಲಿನಲ್ಲಿ ನಿಂತು ತೋಳುಗಳನ್ನು ಮೇಲೆತ್ತಿಹಿಡಿದು ತಪಸ್ಸನ್ನು ಮಾಡುತ್ತಿದ್ದರು.

೧೪. ಅವರು ಮನಸ್ಸನ್ನು ಏಕಾಗ್ರಗೊಳಿಸಿಕೊಂಡು ಕ್ಲೇಶವಿನಾಶಕನೂ, ಲಕ್ಷ್ಮೀಪತಿಯೂ, ವಾಸುದೇವನೂ, ಕೇಶವನೂ ಆದ ಆ ಸ್ವಾಮಿಯನ್ನು ಹೃದಯದಲ್ಲಿ ಧರಿಸಿದ್ದರು.

೧೫. ನೂರುವರ್ಷಗಳಾದ ತರುವಾಯ ಶ್ರೀಕೃಷ್ಣನಾದ ಆ ವಿಷ್ಣು ಭಗವಂತನು ಅಪಾರವಾದ ಆಪತ್ತಿನಲ್ಲಿ ಸಿಲುಕಿ ದೀನರಾಗಿದ್ದ ಆ ದೇವತೆಗಳಲ್ಲಿ ಕೃಪೆಮಾಡಿದನು.

೧೬. ಮಹಾತಪಸ್ವಿಗಳಾದ ಆತ್ಮಜ್ಞರಿಗೂ ಅದೃಶ್ಯನೂ, ದಿವ್ಯವಿಗ್ರಹನೂ, ಕೋಟಿಸೂರ್ಯಪ್ರಕಾಶನೂ ಆದ ಆ ಸ್ವಾಮಿಯು ದೇವತೆಗಳಿಗೆ ಪ್ರತ್ಯಕ್ಷನಾದನು.

೧೭. ಆ ಭಗವಂತನು ಪ್ರತ್ಯಕ್ಷನಾದೊಡನೆಯೇ ಮೊದಮೊದಲು ಅನುಪಮವಾದ ಬಿಳಿಯ ಮೋಡದಂತೆಸೆಯುವ ಮಹಾತೇಜೋಮಂಡಲವು ಮಾತ್ರ ಆ ದೇವತೆಗಳಿಗೆ ಕಾಣಿಸಿತು.

ಬ್ರಹ್ಮಾ ಶಿವಶ್ಚ ತನ್ಮಧ್ಯೇ ದದೃಶಾತೇ ರಮಾಪತಿಂ ।
ಘನಶ್ಯಾಮಂ ಚತುರ್ಬಾಹುಂ ಗದಾಬ್ಜಾಬ್ಜಾರಿ ಧಾರಿಣಂ ॥ ೧೮ ॥
ಕಿರೀಟಕಾಂಚೀ ಕಟಿಕ ಕುಂಡಲಾದಿ ವಿಭೂಷಿತಂ ।
ಪೀತಕೌಶೇಯವಸನಂ ದಿವ್ಯಸುಂದರವಿಗ್ರಹಂ ॥ ೧೯ ॥
ಹರ್ಷವಿಹ್ವಲಿತಾತ್ಮಾನೌ ದಂಡವತ್ತೌ ಪ್ರಣೇಮತುಃ ।
ತದಿಚ್ಛಯಾಽಥ ದೇವಾಶ್ಚ ದೃಷ್ಟ್ವಾ ತಂ ಚ ಮುದಾಽಽನಮನ್ ॥ ೨೦ ॥
ಬಭೂವುರತಿದೃಷ್ಟಾಸ್ತೇ ನಿಧಿಂ ಪ್ರಾಪ್ಯಾಽಧನಾ ಇವ ।
ಬದ್ಧಾಂಜಲಿಪುಟಾಃ ಸರ್ವೇ ಭಕ್ತ್ಯಾ ತಂ ತುಷ್ಟುವುಃ ಸುರಾಃ ॥ ೨೧ ॥

ದೇವಾ ಊಚುಃ:—

ಓಂ ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ ।
ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥ ೨೨ ॥
ಓಂಕಾರ ಬ್ರಹ್ಮರೂಪಾಯ ತ್ರೇಧಾವಿಷ್ಕೃತ ಮೂರ್ತಯೇ ।
ಬ್ರಹ್ಮಾಂಡಸರ್ಗಸ್ಥಿತ್ಯಂತಹೇತವೇ ನಿರ್ಗುಣಾಯ ಚ ॥ ೨೩ ॥

---

೧೮. ಬ್ರಹ್ಮನೂ, ಶಿವನೂ ಆ ತೇಜೋಮಂಡಲದ ಮಧ್ಯದಲ್ಲಿ ಮೇಘಶ್ಯಾಮಳನೂ, ಚತುರ್ಭುಜಗಳುಳ್ಳವನೂ, ಗದೆ, ಪದ್ಮ, ಶಂಖ, ಚಕ್ರಗಳನ್ನು ಧರಿಸಿದವನೂ ಆದ ಶ್ರೀರಮಾಪತಿಯನ್ನು ಕಂಡರು.

೧೯. ಆ ಸ್ವಾಮಿಯು, ಕಿರೀಟ, ಒಡ್ಯಾಣ, ಕಟಕ, ಕುಂಡಲ ಮೊದಲಾದ ಭೂಷಣಗಳಿಂದ ಅಲಂಕೃತನಾಗಿ, ಪೀತಾಂಬರವನ್ನುಟ್ಟು ದಿವ್ಯಸುಂದರಶರೀರವುಳ್ಳವನಾಗಿದ್ದನು.

೨೦. ಬ್ರಹ್ಮ ಶಿವರಿಬ್ಬರೂ ಹರ್ಷದಿಂದ ವಿಹ್ವಲಗೊಂಡ ಹೃದಯವುಳ್ಳವರಾಗಿ ಆ ದೇವದೇವನಿಗೆ ಅಡ್ಡಬಿದ್ದು ಪ್ರಣಾಮಮಾಡಿದರು. ಅವರ ಇಷ್ಟ ಪ್ರಕಾರವಾಗಿ ದೇವತೆಗಳು ಕೂಡ ಆ ಭಗವಂತನನ್ನು ಕಂಡು ಸಂತೋಷದಿಂದ ನಮಸ್ಕಾರಮಾಡಿದರು.

೨೧. ನಿಧಿಯನ್ನು ಪಡೆದ ದರಿದ್ರರಂತೆ ಅವರು ಆ ಪರಮಾತ್ಮನನ್ನು ಕಂಡು ಪರಮಾನಂದಭರಿತರಾದರು. ಅವರೆಲ್ಲರೂ ಕೈಮುಗಿದುಕೊಂಡೇ ಭಕ್ತಿಭರಿತರಾಗಿ ಅವರನ್ನು ಸ್ತುತಿಸತೊಡಗಿದರು.

೨೨. ದೇವತೆಗಳು ಸ್ತುತಿಸುತ್ತಾರೆ:— "ಪ್ರಣವಸ್ವರೂಪನಾದ ಎಲೈ ಭಗವಂತನೇ! ನಿನಗೆ ನಮಸ್ಕಾರವು. ವಾಸುದೇವಾ, ಇದೋ ನಿನ್ನನ್ನು ಧ್ಯಾನಿಸುವೆವು. ಪ್ರದ್ಯುಮ್ನನೂ, ಅನಿರುದ್ಧನೂ, ಸಂಕರ್ಷಣನೂ ಆದ ನಿನಗೆ ನಮಸ್ಕಾರವು.

೨೩. ಓಂಕಾರಬ್ರಹ್ಮರೂಪನಾದ ನಿನಗೆ ನಮಸ್ಕಾರವು. ಸತ್ತ್ವ, ರಜಸ್ಸು,

ನಯನಾನಂದರೂಪಾಯ ಪ್ರಣತಕ್ಲೇಶನಾಶಿನೇ ।
ಕೇಶವಾಯ ನಮಸ್ತುಭ್ಯಂ ಸ್ವತಂತ್ರೇಶ್ವರಮೂರ್ತಯೇ ॥ ೨೪ ॥
ಮೋದಿತಾಶೇಷಭಕ್ತಾಯ ಕಾಲಮಾಯಾದಿಮೋಹಿನೇ ।
ಸದಾನಂದಾಯ ಕೃಷ್ಣಾಯ ನಮಃ ಸದ್ಧರ್ಮವರ್ತಿನೇ ॥ ೨೫ ॥
ಭವಾಂಬುಧಿನಿಮಗ್ನಾನಾಂ ಉದ್ಧೃತಿಕ್ಷಮಕೀರ್ತಯೇ ।
ದರ್ಶನೀಯಸ್ವರೂಪಾಯ ಘನಶ್ಯಾಮಾಯ ತೇ ನಮಃ ॥ ೨೬ ॥
ಗದಾಬ್ಜದರ ಚಕ್ರಾಣಿ ಬಿಭ್ರತೇ ದೀರ್ಘಬಾಹುಭಿಃ ।
ಸುರಗೋವಿಪ್ರ ಧರ್ಮಾಣಾಂ ಗೋಪ್ತ್ರೇ ತುಭ್ಯಂ ನಮೋನಮಃ ॥ ೨೭ ॥
ವರೇಣ್ಯಾಯ ಪ್ರಪನ್ನಾನಾಮಭೀಷ್ಟ ವರದಾಯಿನೇ ।
ನಿಗಮಾಗಮವೇದ್ಯಾಯ ವೇದಗರ್ಭಾಯ ತೇ ನಮಃ ॥ ೨೮ ॥

---

ತಮಸ್ಸುಗಳಿಗನುಗುಣವಾಗಿ ಬ್ರಹ್ಮ, ವಿಷ್ಣು, ಮಹೇಶ್ವರ ರೂಪಗಳಿಂದ ವಿಭಾಗಿಸಿಕೊಂಡ ಮೂರ್ತಿಯುಳ್ಳ ನಿನಗೆ ನಮಸ್ಕಾರವು. ಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಓ ಪರಮಾತ್ಮಾ! ಗುಣರಹಿತನಾಗಿರುವ ನಿನಗೆ ನಮಸ್ಕಾರವು.

೨೪. ಕಣ್ಣಿಗೆ ಆನಂದವನ್ನೆರೆಯುವ ರೂಪವುಳ್ಳವನೂ, ನಮಸ್ಕರಿಸಿದವರ ಕ್ಲೇಶಗಳನ್ನು ನಾಶಮಾಡುವವನೂ ಆದ ಓ ಸ್ವಾಮಿಯೇ! ನಿನಗೆ ನಮಸ್ಕಾರವು. ಕೇಶವ! ಸ್ವತಂತ್ರನೂ, ಈಶ್ವರಮೂರ್ತಿಯೂ ಆದ ನಿನಗೆ ನಮಸ್ಕಾರವು.

೨೫. ಸಮಸ್ತಭಕ್ತರಿಗೂ ಮುದವನ್ನುಂಟುಮಾಡುವವನೂ, ಕಾಲ, ಮಾಯೆ ಮೊದಲಾದವುಗಳಿಂದ ಎಲ್ಲರನ್ನೂ ಮೋಹಗೊಳಿಸುವವನೂ, ಸದಾನಂದನೂ, ಶ್ರೀಕೃಷ್ಣನೂ, ಸದ್ಧರ್ಮವನ್ನಾಚರಿಸುವವನೂ ಆದ ನಿನಗೆ ನಮಸ್ಕಾರವು.

೨೬. ಸಂಸಾರ ಸಮುದ್ರದಲ್ಲಿ ಮುಳುಗಿದವರನ್ನು ಉದ್ಧರಿಸಬಲ್ಲವನೆಂಬ ಕೀರ್ತಿಯನ್ನು ಹೊಂದಿರುವವನೂ, ನೋಡಬೇಕಾದ (ಸುಂದರ) ರೂಪವುಳ್ಳ ಮೇಘಶ್ಯಾಮಳನೂ ಆದ ನಿನಗೆ ನಮಸ್ಕಾರವು.

೨೭. ನೀಳಾದ ತೋಳುಗಳಲ್ಲಿ ಗದೆ, ಪದ್ಮ, ಶಂಖ, ಚಕ್ರಗಳನ್ನು ಧರಿಸಿ ಸುರರು, ಗೋವುಗಳು ಮತ್ತು ಬ್ರಾಹ್ಮಣರನ್ನು ಯಾವಾಗಲೂ ಕಾಪಾಡುವವನಾದ ನಿನಗೆ ನಮೋ ನಮೋ.

೨೮. ಸರ್ವಶ್ರೇಷ್ಠನೂ, ಶರಣಾಗತರಾಗಿ ನಂಬಿ ಬಂದವರಿಗೆ ಬಯಸಿದ ವರಗಳನ್ನು ಕೊಡುವವನೂ, ನಿಗಮಗಳಿಂದಲೂ, ಆಗಮಗಳಿಂದಲೂ ಮಾತ್ರವೇ ತಿಳಿಯಬಹುದಾದ ಸ್ವರೂಪವುಳ್ಳವನೂ ಆದ ನಿನಗೆ ನಮಸ್ಕಾರವು. ವೇದದಲ್ಲಿ ಅಡಗಿ ಅದರ ತಿರುಳಿನಂತಿರುವ ನಿನಗೆ ನಮೋ ನಮೋ.

ತೇಜೋಮಂಡಲಮಧ್ಯಸ್ಥದಿವ್ಯಸುಂದರಮೂರ್ತಯೇ ।
ನಮೋನಮೋ ವಿಷ್ಣವೇ ತುಭ್ಯಂ ಪರಾತ್ಪರತರಾಯ ಚ ॥ ೨೯ ॥
ವಾಣೀಮನೋವಿಪ್ರಕೃಷ್ಟಮಹಿಮ್ನೇಽಕ್ಷರರೂಪಿಣೇ ।
ಸರ್ವಾಂತರ್ಯಾಮಿಣೇ ತುಭ್ಯಂ ಬೃಹತೇ ಚ ನಮೋನಮಃ ॥ ೩೦ ॥
ಸುಖದೋಽಸಿ ತ್ವಮೇವೈಕಃ ಸ್ವಾಶ್ರಿತಾನಾಮತೋ ವಯಂ ।
ಮಹಾಪದಧಿಕಕ್ಲಿಷ್ಟಾಃ ಶರಣಂ ತ್ವಾಮುಪಾಗತಾಃ ॥ ೩೧ ॥
ದೇವಾಧಿದೇವ ಭಕ್ತಸ್ಯ ತವ ದುರ್ವಾಸಸೋ ವಯಂ ।
ಅತಿಕ್ರಮಾಚ್ಛ್ರಿಯಾ ಹೀನಾಃ ಪ್ರಾಪ್ತಾಃ ಸ್ಮೋ ದುರ್ದಶಾಮಿಮಾಂ ॥
ವಾಸೋನ್ನಪಾನಸ್ಥಾನಾದಿಹೀನಾನ್ಧರ್ಮೋಽಪಿ ನಃ ಪ್ರಭೋ ।
ತ್ಯಕ್ತ್ವಾ ಸಹ ಶ್ರಿಯಾ ಯಾತಸ್ತಾನ್ ಪಾತುಂ ತ್ವಮಸೀಶ್ವರಃ ॥ ೩೩ ॥
ಯತೋ ವಯಂ ಚ ಧರ್ಮಶ್ಚ ತ್ವದೀಯಾ ಇತಿ ವಿಶ್ರುತಾಃ ।
ಯಥಾಪೂರ್ವಂ ಸುಖೀಕರ್ತುಂ ತ್ವಮೇವಾರ್ಹಸ್ಯತೋ ಹಿ ನಃ ॥ ೩೪ ॥

---

೨೯. ತೇಜೋಮಂಡಲದ ಮಧ್ಯದಲ್ಲಿ ನೆಲಸಿ ದಿವ್ಯಸುಂದರಮೂರ್ತಿಯಾಗಿ ಶ್ರೇಷ್ಠವೆನಿಸಿದ ಎಲ್ಲಕ್ಕಿಂತಲೂ ಅತ್ಯಂತ ಶ್ರೇಷ್ಠನಾಗಿರುವ ಎಲೈ ವಿಷ್ಣುವೇ! ನಿನಗೆ ನಮಸ್ಕಾರವು.

೩೦. ಮಾತಿಗೂ, ಮನಸ್ಸಿಗೂ ಮೀರಿರುವಷ್ಟು ಮಹಾಮಹಿಮೆಯುಳ್ಳವನೂ, ಅಕ್ಷರರೂಪಿಯೂ ಆದ ನಿನಗೆ ನಮಸ್ಕಾರವು. ಸರ್ವಾಂತರ್ಯಾಮಿಯೂ, ಮಹಾತ್ಮನೂ, ಮಹಾಮಹಿಮನೂ ಆದ ನಿನಗೆ ನಮೋ ನಮಃ.

೩೧. ಆಶ್ರಿತರಿಗೆ ಸುಖವನ್ನು ಕೊಡತಕ್ಕವನು ನೀನೊಬ್ಬನೇ ಆಗಿರುವೆಯಾದುದರಿಂದ ಮಹಾವಿಪತ್ತಿನಲ್ಲಿ ಸಿಕ್ಕಿ ಸಂಕಟಪಡುತ್ತಿರುವ ನಾವು ನಿನ್ನನ್ನು ಶರಣುಹೊಂದಿದ್ದೇವೆ.

೩೨. ಎಲೈ ದೇವಾಧಿದೇವನೆ! ನಿನ್ನ ಭಕ್ತನಾದ ದುರ್ವಾಸನ ಅನುಗ್ರಹವನ್ನು ಅತಿಕ್ರಮಿಸಿದ ದೋಷದಿಂದ ಶ್ರೀವಿಹೀನರಾಗಿ ಈ ದುರ್ದಶೆಯನ್ನು ಪಡೆದಿದ್ದೇವೆ.

೩೩. ಬಟ್ಟೆ, ಅನ್ನ, ಪಾನ, ಸ್ಥಾನ, ಮೊದಲಾದುವೇನೂ ಇಲ್ಲದ ನಮ್ಮನ್ನು ಧರ್ಮವೂ ಕೂಡ ತೊರೆದು ಶ್ರೀಯೊಡನೆಯೇ ನಡೆದುಬಿಟ್ಟಿತು. ಅಂಥ ನಮ್ಮನ್ನು ಕಾಪಾಡಲು ನೀನೇ ಸಮರ್ಥನು.

೩೪. ಎಲೈ ಪ್ರಭುವೇ! ನಾವೂ, ಧರ್ಮವೂ ನಿನ್ನವರೆಂದು ಪ್ರಸಿದ್ಧವಾಗಿರುವುದರಿಂದ ಮೊದಲಿನಂತೆಯೇ ನಮ್ಮನ್ನು ಸುಖಿಗಳನ್ನಾಗಿಮಾಡಲು ನೀನೇ ಅರ್ಹನಾಗಿದ್ದೀಯೆ.''

ಸ್ಕಂದ ಉವಾಚ :—

ಇತಿ ಸಂಪ್ರಾರ್ಥಿತೋ ದೇವೈರ್ಭಗವಾನ್ ಸ ದಯಾನಿಧಿಃ ।
ಉವಾಚಾನಂದಯನ್‌ವಾಚಾ ಮೇಘಗಂಭೀರಯಾ ಸುರಾನ್ ॥ ೩೫ ॥

ಶ್ರೀ ಭಗವಾನುವಾಚ :—

ವಿದಿತಂ ಮೇ ಸುರಾಃ ಸರ್ವಂ ಕಷ್ಟಂ ವಃ ಸದತಿಕ್ರಮಾತ್ ।
ಉಪಾಯಂ ಕುರುತಾದ್ಯೈವ ವಚ್ಮಿ ಯತ್ತನ್ನಿವೃತ್ತಯೇ ॥ ೩೬ ॥
ಓಷಧೀರಂಬುಧೌ ಸರ್ವಾಃ ಕ್ಷಿಪ್ತ್ವಾ ಮಂದರಭೂಭೃತಾ ।
ನಾಗರಾಜವರತ್ರೇಣ ಮಂಥಧ್ವಮಸುರೈಃ ಸಹ ॥ ೩೭ ॥
ಆದೌ ಸಂಧಾಯ ದನುಜೈಃ ಕುರುತಾಂಬುಧಿಮಂಥನಂ ।
ಸಾಹಾಯಂ ವಃ ಕರಿಷ್ಯಾಮಿ ಖೇದಃ ಕಾರ್ಯೋ ನ ತತ್ರ ವಃ ॥ ೩೮ ॥
ಅಮೃತಂ ಚ ಶ್ರಿಯೋ ದೃಷ್ಟಿಂ ಪ್ರಾಪ್ಯ ಪೂರ್ವಾಧಿಕೌಜಸಃ ।
ಭವಿತಾರೋ ಮದ್ವಿಮುಖಾ ದೈತ್ಯಾಸ್ತು ಕ್ಲೇಶಭಾಗಿನಃ ॥ ೩೯ ॥

---

೩೫. ಸ್ಕಂದನು ಹೇಳುತ್ತಾನೆ:— ಈ ರೀತಿಯಾಗಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನೂ, ದಯಾನಿಧಿಯೂ ಆದ ಆ ಭಗವಂತನು ಮೇಘಧ್ವನಿಯಂತೆ ಗಂಭೀರವಾದ ನುಡಿಗಳಿಂದ ಆ ದೇವತೆಗಳನ್ನು ಆನಂದಗೊಳಿಸುತ್ತ ಹೀಗೆಂದನು.

೩೬. ಶ್ರೀಭಗವಂತನು ಹೇಳುತ್ತಾನೆ:— "ಎಲೈ ದೇವತೆಗಳಿರಾ! ಸತ್ಪುರುಷರನ್ನು ಅತಿಕ್ರಮಿಸಿದ್ದರಿಂದ ಉಂಟಾದ ನಿಮ್ಮ ಕಷ್ಟವೆಲ್ಲವೂ ನನಗೆ ತಿಳಿದಿದೆ. ಆ ಕಷ್ಟದ ನಿವಾರಣೆಗಾಗಿ ಉಪಾಯವನ್ನು ಹೇಳುತ್ತೇನೆ. ಅದನ್ನು ಈಗಲೇ ಮಾಡಿರಿ.

೩೭. ಓಷಧಿ(ಗಿಡಮೂಲಿಕೆ)ಗಳೆಲ್ಲವನ್ನೂ ಸಮುದ್ರದಲ್ಲಿ ಹಾಕಿ ನಾಗರಾಜನಾದ ಆದಿಶೇಷನನ್ನು ಕಡೆಯುವ ಹಗ್ಗವನ್ನಾಗಿ ಮಾಡಿಕೊಂಡು ಮಂದರ ಪರ್ವತದಿಂದ ಅಸುರರೊಡಗೂಡಿ ಅದನ್ನು ಕಡೆಯಿರಿ.

೩೮. ದನುಜರೊಡನೆ ಸೇರಿ ಸಮುದ್ರಮಥನವನ್ನು ಮೊದಲುಮಾಡಿರಿ. ನಾನು ನಿಮಗೆ ಸಹಾಯಮಾಡುತ್ತೇನೆ. ಈ ವಿಷಯದಲ್ಲಿ ಖೇದಪಡಬೇಡಿರಿ.

೩೯. ಈ ಸಾಗರ ಮಥನದಿಂದ ಅಮೃತವನ್ನೂ, ಶ್ರೀಯ ಕೃಪಾಕಟಾಕ್ಷವನ್ನೂ ಪಡೆದು ಮೊದಲಿಗಿಂತಲೂ ಹೆಚ್ಚು ಓಜಸ್ವಿಗಳಾಗುವಿರಿ. ನನ್ನಲ್ಲಿ ವಿಮುಖರಾಗಿರುವ ಆ ದೈತ್ಯರಾದರೋ ಕ್ಲೇಶಭಾಗಿಗಳಾಗುತ್ತಾರೆ."

ಸ್ಕಂದ ಉವಾಚ:—
ಇತ್ಯುಕ್ತ್ವಾಂತರ್ದಧೇ ವಿಷ್ಣುರ್ಭಕ್ತಸಂಕಟನಾಶನಃ ।
ದೇವಾಸ್ತಸ್ಮೈ ನಮಸ್ಕೃತ್ಯ ತದುಕ್ತಂ ಕರ್ತುಮಾರಭನ್ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಶ್ರೀ ವಾಸುದೇವ ಪ್ರಸಾದನಿರೂಪಣಂ" ನಾಮ ದಶಮೋಽಧ್ಯಾಯಃ

---

೪೦. ಸ್ಕಂದನು ಹೇಳುತ್ತಾನೆ:—ಭಕ್ತರ ಸಂಕಟಗಳನ್ನು ನಾಶಮಾಡು ವವನಾದ ವಿಷ್ಣುವು ಹೀಗೆ ನುಡಿದು ಅಂತರ್ಧಾನಹೊಂದಿದನು. ದೇವತೆಗಳಾ ದರೋ ಆ ಭಗವಂತನಿಗೆ ನಮಸ್ಕಾರಮಾಡಿ ಅವನು ಹೇಳಿದಂತೆಯೆ ಸಮುದ್ರ ಮಥನವನ್ನು ಮಾಡಲು ಆರಂಭಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಅಯೋಧ್ಯಾಮಾಹಾತ್ಮ್ಯದಲ್ಲಿ "ಶ್ರೀವಾಸುದೇವಪ್ರಸಾದನಿರೂಪಣ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋऽಧ್ಯಾಯಃ

## ಅಮೃತಮಂಥನೇ ವಿಷೋತ್ಪತ್ತಿವರ್ಣನಂ

ಸ್ಕಂದ ಉವಾಚ:—

ಬ್ರಹ್ಮರುದ್ರೌ ಮಹೇಂದ್ರಾದೀನ್ ಸಂಧಾನಾಯಾಸುರೈಃ ಸಹ ।
ಆಜ್ಞಾಪ್ಯ ಜಗ್ಮತುಃ ಸ್ವಂ ಸ್ವಂ ಧಾಮ ದೇವಾ ರಸಾಂ ಮುನೇ ॥ ೧ ॥
ಸಮಯೋಚಿತಭಾಷಾವಿದ್ವಾಸವೋ ನೀತಿಯುಕ್ತಿಭಿಃ ।
ಪ್ರಲೋಭ್ಯ ಫಲಭಾಗೇನ ಸಂಧಿಂ ಚಕ್ರೇಽಸುರೈಃ ಸಹ ॥ ೨ ॥
ತತೋ ದೇವಾ ಸುರಗಣಾ ಮಿಲಿತಾ ವಾರಿಧೇಸ್ತಟೇ ।
ಮಹೌಷಧೀರುಪಾನೀಯ ಬಹುಶೋ ನಿದಧುರ್ದೃತಂ ॥ ೩ ॥
ಮಂದರಾದ್ರಿಮುಪೇತ್ಯಾಽಥ ನಾನೌಷಧಿವಿರಾಜಿತಂ ।
ಮೂಲಾದುತ್ಪಾಟ್ಯ ತೇ ಸರ್ವೇ ನೇತುಮಬ್ಧಿಂ ಸಮುದ್ಯತಾಃ ॥ ೪ ॥
ಏಕಾದಶಸಹಸ್ರಾಣಿ ಯೋಜನಾನಾಂ ಭುವಿ ಸ್ಥಿತಂ ।
ನೋದ್ಧರ್ತುಮಶಕಂಸ್ತೇ ತಂ ತದಾನೀಂ ತುಷ್ಟುವುರ್ಹರಿಂ ॥ ೫ ॥

---

### ಕನ್ನಡದ ಅನುವಾದ

#### ಅಮೃತಮಥನ—ವಿಷೋತ್ಪತ್ತಿವರ್ಣನ

೧. ಸ್ಕಂದನು ಹೇಳುತ್ತಾನೆ:—ಎಲೈ ಮುನಿಯೇ! ಬ್ರಹ್ಮರುದ್ರರು ಮಹೇಂದ್ರನೇ ಮೊದಲಾದ ಸುರರಿಗೆ ಅಸುರರೊಡನೆ ಸಂಧಾನಮಾಡಿರೆಂದು ಆಜ್ಞಾಪಿಸಿ ತಮ್ಮತಮ್ಮ ನೆಲೆಗಳಿಗೆ ತೆರಳಿದರು. ಅಂತೆಯೆ ಆ ದೇವತೆಗಳೂ ರಸಾತಲಕ್ಕೆ ಹೋದರು.

೨. ಸಮಯೋಚಿತವಾದ ಭಾಷೆಯನ್ನರಿತವನಾದ ವಾಸವನು ನೀತಿಯುಕ್ತಿಗಳನ್ನು ಪ್ರಯೋಗಿಸಿ ಫಲಭಾಗವನ್ನು ಕೊಡುವುದಾಗಿ ಆಸೆ ಹುಟ್ಟಿಸಿ ಅಸುರರೊಡನೆ ಸಂಧಿಮಾಡಿಕೊಂಡನು.

೩. ಬಳಿಕ ದೇವಾಸುರಗಣಗಳು ಸಮುದ್ರತೀರದಲ್ಲಿ ಒಟ್ಟು ಸೇರಿ ಬಹು ಜಾಗ್ರತೆಯಾಗಿಯೇ ಮಹೌಷಧಿಗಳನ್ನು ತಂದು ಅದರಲ್ಲಿ ಹಾಕಿದರು.

೪. ಆಮೇಲೆ ಅವರೆಲ್ಲರೂ ಬಗೆ ಬಗೆಯ ಔಷಧಿಗಳಿಂದ ವಿರಾಜಿಸುತ್ತಿರುವ ಮಂದರಾದ್ರಿಯ ಬಳಿಗೆ ಹೋಗಿ ಅದನ್ನು ಬುಡಸಹಿತವಾಗಿ ಕಿತ್ತೆತ್ತಿತರುವ ಪ್ರಯತ್ನದಲ್ಲಿ ತೊಡಗಿದರು.

೫. ಹನ್ನೊಂದುಸಾವಿರ ಯೋಜನಗಳವರೆಗೆ ನೆಲದೊಳಗೆ ವ್ಯಾಪಿಸಿದ್ದ ಆ ಮಂದರಪರ್ವತವನ್ನೆತ್ತಲು ಅವರಾರೂ ಶಕ್ತರಾಗಲಿಲ್ಲವು. ಆಗ ಅವರು ಶ್ರೀಹರಿಯನ್ನು ಸ್ತುತಿಸಿದರು.

ಏತದ್ವಿದಿತ್ವಾ ಭಗವಾನ್ ಸಂಕರ್ಷಣಮಹೀಶ್ವರಂ ।
ಆಜಿಜ್ಞಾಪತ್ತಮುದ್ಧರ್ತುಂ ಬದ್ಧಮೂಲಂ ಮಹೀಧರಂ ॥ ೬ ॥
ಫೂತ್ಕಾರಮಾತ್ರೇಣೈಕೇನ ಸ ತು ಸದ್ಯಸ್ತ್ರಮೀಶ್ವರಃ ।
ಬಹಿಶ್ಚಿಕ್ಷೇಪ ತತ್ಸ್ಥಾನಾದ್ಯೋಜನದ್ವಿತಯಾಂತರೇ ॥ ೭ ॥
ಅತ್ಯಾಶ್ಚರ್ಯಂ ತದಾಲೋಕ್ಯ ಹೃಷ್ಟಾಃ ಸರ್ವೇ ಸುರಾಸುರಾಃ ।
ತದಂತಿಕಮುಪಾಜಗ್ಮುರ್ಧ್ವಾನವಂತಶ್ಚ ಕೃತಾರವಾಃ ॥ ೮ ॥
ಬಲಿನೋ ಯತ್ನವಂತೋಽಪಿ ಪರಿಘೋಪಮಬಾಹವಃ ।
ಉದ್ಧೃತ್ಯ ನೇತುಂ ನೋ ಶೇಕುರ್ವಿಷಣ್ಣಾ ವಿಫಲಶ್ರಮಾಃ ॥ ೯ ॥
ಜ್ಞಾತ್ವಾ ಸುರಗಣಾನ್ ಖಿನ್ನಾನ್ ಭಗವಾನ್ ಸರ್ವದರ್ಶನಃ ।
ತಾರ್ಕ್ಷ್ಯಮಾಜ್ಞಾಪಯಾಮಾಸ ನೇತುಂ ತಮುದಧಿಂ ದ್ರುತಂ ॥ ೧೦ ॥
ಸಹಾವರಣಮಂಡಂ ಲೀಲಯಾ ಧರ್ತುಮೀಶ್ವರಃ ।
ಮನೋವೇಗಃ ಸ ತತ್ರೇತ್ಯ ನಿಜತ್ರ್ಯೇಟ್ಯೈವ ತಂ ಗಿರಿಂ ।
ಉತ್ಪಾಟ್ಯ ಸಾಗರತಟೇ ನಿಧಾಯ ಹರಿಮಾಯಯೌ ॥ ೧೧ ॥

---

೬. ಇದನ್ನರಿತು ಭಗವಂತನು ಬದ್ಧಮೂಲವಾದ ಆ ಪರ್ವತವನ್ನು ಮೇಲೆತ್ತುವಂತೆ ಅಹೀಶ್ವರನೂ, ಸರ್ಪರಾಜನೂ ಆದ ಸಂಕರ್ಷಣನಿಗೆ ಆಜ್ಞಾಪಿಸಿದನು.

೭. ಮಹಾಸಮರ್ಥನಾದ ಆ ಸಂಕರ್ಷಣನಾದರೋ ಒಂದೇ ಒಂದು ಫೂತ್ಕಾರಮಾತ್ರದಿಂದಲೇ ಆ ಸ್ಥಾನದಿಂದ ಎರಡು ಯೋಜನಗಳ ದೂರ ಹೋಗಿ ಬೀಳುವಂತೆ ಆ ಪರ್ವತವನ್ನು ಹೊರಕ್ಕೆ ಚಿಮ್ಮಿದನು.

೮. ಅತ್ಯಾಶ್ಚರ್ಯಕರವಾದ ಈ ಕಾರ್ಯವನ್ನು ಕಂಡು ಸುರಾಸುರರೆಲ್ಲರೂ ಹರ್ಷಗೊಂಡು ಗಟ್ಟಿಯಾಗಿ ಕೋಲಾಹಲಧ್ವನಿಯನ್ನು ಮಾಡುತ್ತ ಅದರ ಸಮೀಪಕ್ಕೆ ಓಡಿಹೋದರು.

೯. ಅವರೆಲ್ಲರೂ ದೊಡ್ಡ ಅಗಳಿಗಳಂತಿರುವ ತೋಳುಗಳುಳ್ಳ ಬಲಿಷ್ಠರಾದರೂ, ಬಿಡದೆ ಪ್ರಯತ್ನಮಾಡುವವರಾದರೂ ಆ ಪರ್ವತವನ್ನೆತ್ತಿ ತೆಗೆದುಕೊಂಡುಹೋಗಲು ಶಕ್ತರಾಗದೆ ತಮ್ಮ ಪ್ರಯತ್ನವೆಲ್ಲವೂ ವ್ಯರ್ಥವಾಯಿತೆಂದು ವಿಷಣ್ಣರಾದರು.

೧೦. ಸರ್ವವನ್ನೂ ಕಾಣಬಲ್ಲ ಭಗವಂತನು ಸುರಗಣಗಳೆಲ್ಲರೂ ಖಿನ್ನರಾದುದನ್ನರಿತು ಆ ಪರ್ವತವನ್ನು ಬೇಗನೆ ಸಮುದ್ರಕ್ಕೆ ತೆಗೆದುಕೊಂಡು ಹೋಗೆಂದು ಗರುಡನಿಗೆ ಆಜ್ಞಾಪಿಸಿದನು.

೧೧. ಆವರಣಸಮೇತವಾದ ಬ್ರಹ್ಮಾಂಡವನ್ನೇ ಆದರೂ ಲೀಲೆಯಿಂದ ಧರಿಸಬಲ್ಲವನಾದ ಆ ತಾರ್ಕ್ಷ್ಯನು ಮನೋವೇಗದಿಂದ ಅಲ್ಲಿಗೆ ಹೋಗಿ ತನ್ನ

**ತತಃ ಸಂಹೃಷ್ಟಮನಸಃ ಸರ್ವೇ ಕಶ್ಯಪನಂದನಾಃ ।**
**ವಾಸುಕಿಂ ಚಾಹ್ವಯಾಮಾಸುಃ ಸುಧಾಭಾಗಪ್ರತಿಜ್ಞಯಾ ॥ ೧೨ ॥**
**ಸ ತತ್ರಾಗಾದಥೋ ಸರ್ವೇ ತೇಽಬ್ಧಿಂ ಮಂಥಿತುಮುದ್ಯತಾಃ ।**
**ತಾನಪಾನ್ನಿಧಿರಾಗತ್ಯ ಮೂರ್ತಿಮಾನಬ್ರವೀದ್ವಚಃ ॥ ೧೩ ॥**
**ಯದಿ ದಾಸ್ಯಥ ಮೇ ಯೂಯಮಮೃತಾಂಶಂ ಸುರಾಸುರಾಃ ।**
**ಸೋಢಾಸ್ಮಿ ವಿಪುಲಂ ತರ್ಹಿ ಮಂದರಭ್ರಮಣಾರ್ದನಂ ॥ ೧೪ ॥**
**ತಥೇತಿ ತೇ ಪ್ರತಿಜ್ಞಾಯ ಕ್ಷಿಪ್ತ್ವಾದಾವೋಷಧೀಲತಾಃ ।**
**ಪರಿವಿವ್ಯುರ್ನಾಗರಾಜಂ ತಸ್ಮಿನ್ ಕಾಂಚನಪರ್ವತೇ ॥ ೧೫ ॥**
**ತತೋ ದೇವಾ ಹೃದಿ ಹರಿಂ ಸಸ್ಮರುಃ ಕಾರ್ಯಸಿದ್ಧಯೇ ।**
**ಸ್ಮೃತಮಾತ್ರಃ ಸ ತತ್ರಾಽಗಾದಚ್ಯುತಃ ಸರ್ವದರ್ಶನಃ ॥ ೧೬ ॥**
**ತಮಾಲೋಕ್ಯಾಮರಗಣಾ ಮುದಿತಾಃ ಫಣಿನಾಂ ಪತೇಃ ।**
**ಪುರೋಭಾಗಂ ಗೃಹೀತ್ವೈವ ತಸ್ಥುಸ್ತೇನಾನುಮೋದಿತಾಃ ॥ ೧೭ ॥**

---

ಕೊಕ್ಕಿನಿಂದಲೇ ಆ ಗಿರಿಯನ್ನು ಎಬ್ಬಿ ಕಿತ್ತು ಸಾಗರದ ದಡದಲ್ಲಿಟ್ಟು ಶ್ರೀಹರಿಯು ಬಳಿಗೈದಿದನು.

೧೨. ಅನಂತರದಲ್ಲಿ ಕಶ್ಯಪನ ಮಕ್ಕಳಾದ ಸುರಾಸುರರೆಲ್ಲರೂ ಸಂತುಷ್ಟವಾದ ಮನಸ್ಸುಳ್ಳವರಾಗಿ ಅಮೃತದಲ್ಲಿ ಭಾಗ ಕೊಡುವುದಾಗಿ ಪ್ರತಿಜ್ಞೆಮಾಡಿ ವಾಸುಕಿಯನ್ನು ಆಹ್ವಾನಿಸಿದರು.

೧೩. ವಾಸುಕಿಯಾದರೋ ಅದಕ್ಕೆ ಒಪ್ಪಿ ಅಲ್ಲಿಗೆ ಹೋದನು. ತರುವಾಯ ಅವರೆಲ್ಲರೂ ಸಮುದ್ರವನ್ನು ಕಡೆಯಲು ಪ್ರಾರಂಭಿಸಿದರು. ಸಮುದ್ರನು ಮೂರ್ತಿವಂತನಾಗಿ ಅಲ್ಲಿಗೆ ಬಂದು ಅವರನ್ನು ಕುರಿತು ಈ ಮಾತನ್ನಾಡಿದನು :—

೧೪. "ಎಲೈ ಸುರಾಸುರರೇ! ನೀವು ನನಗೆ ಅಮೃತದಲ್ಲಿ ಒಂದು ಅಂಶವನ್ನು ಕೊಡುವಿರಾದರೆ ಮಾತ್ರ ಮಂದರಪರ್ವತದಿಂದ ಕಡೆಯುವುದರಿಂದುಂಟಾಗುವ ಮಹತ್ತರವಾದ ಸಂಕಟವನ್ನು ತಾಳಿಕೊಳ್ಳುತ್ತೇನೆ.

೧೫. ಅವರೆಲ್ಲರೂ 'ಹಾಗೆಯೆ ಆಗಲಿ' ಎಂದು ಪ್ರತಿಜ್ಞೆಮಾಡಿ, ಮೊದಲು ಓಷಧಿಯ ಲತೆಗಳನ್ನು ಸಮುದ್ರಕ್ಕೆ ಹಾಕಿ, ಕಾಂಚನಪರ್ವತವಾದ ಆ ಮಂದರ ಗಿರಿಗೆ ನಾಗರಾಜನನ್ನು ಸುತ್ತಿದರು.

೧೬. ಬಳಿಕ ದೇವತೆಗಳು ಕಾರ್ಯಸಿದ್ಧಿಗಾಗಿ ಶ್ರೀಹರಿಯನ್ನು ಮನಸ್ಸಿನಲ್ಲಿಯೆ ಸ್ಮರಿಸಿದರು. ಸರ್ವದರ್ಶನನಾದ ಆ ಅಚ್ಯುತನು ಅವರು ಸ್ಮರಿಸಿದ ಮಾತ್ರದಿಂದಲೇ ಅಲ್ಲಿಗೆ ಚಿತ್ತೈಸಿದನು.

೧೭. ಅವನನ್ನು ಕಂಡು ಅಮರ ಗಣಗಳು ಆನಂದವನ್ನುಹೊಂದಿ ಅವನಿಂದ ಅನುಮೋದಿತರಾಗಿ ಫಣಿಪತಿಯ ಮುಂಭಾಗವನ್ನು (ಮುಖಭಾಗವನ್ನು) ಹಿಡಿದುಕೊಂಡು ನಿಂತರು.

ದೇವತಾಪಕ್ಷಪಾತಿತ್ವಂ ಸೂಚಯನ್ ಸ್ವಸ್ಯ ಚ ಪ್ರಭುಃ ।
ಯತ್ರ ದೇವಾಸ್ತತ್ರ ತಸ್ಥೌ ತತೋ ದೈತ್ಯಾಸ್ತು ಚುಕ್ರುಧುಃ ॥ ೧೮ ॥
ತಪೋವಿದ್ಯಾವಯೋಜ್ಯೇಷ್ಠಾ ಅಧೋಭಾಗಮಮಂಗಳಂ ।
ಕಥಂ ತಿರಶ್ಚೋ ಗೃಹ್ಣೀಮೋ ನೇದೃಶ್ ಮೂರ್ಖಾ ವಯಂತ್ವಿತಿ ॥ ೧೯ ॥
ಸಹ ದೇವೈಸ್ತತೋ ವಿಷ್ಣುಃ ಸ್ವಯಂ ತಾನ್ಮಾನಯನ್ನಿವ ।
ಪ್ರಹಸ್ಯ ದತ್ವಾ ಪ್ರಾಗ್ಭಾಗಂ ಸುರಾನ್ ಪುಚ್ಛಮಜಿಗ್ರಹತ್ ॥ ೨೦ ॥
ಮಹಾಹಿವಿಷಫೂತ್ಕಾರದಾಹಾದಮರರಕ್ಷಣಂ ।
ಚರಿತ್ರಮೇತಚ್ಛ್ರೀಭರ್ತುರಿತಿ ದೈತ್ಯಾ ನ ತೇ ವಿದುಃ ॥ ೨೧ ॥
ತತ ಉತ್ಪೋಲಯಾಮಾಸುಃ ಸ್ವರ್ಣಸಾನ್ವತಿಭಾಸ್ವರಂ ।
ಮಂದರಂ ಕಾಶ್ಯಪೇಯಾಸ್ತೇ ಚರ್ಮಿಕಾಬದ್ಧಕಚ್ಛಕಾಃ ॥ ೨೨ ॥
ದ್ವಾವಿಂಶತಿಸಹಸ್ರಾಣಿ ಯೋಜನಾನಾಂ ತಮುಚ್ಛ್ರಿತಂ ।
ಅಂಭೋನಿಧೌ ನಿದಧಿರೇ ಕ್ರೋಶಂತೋಽತ್ಯರ್ಥಮುತ್ಸುಕಾಃ ॥ ೨೩ ॥

---

೧೮. ಪ್ರಭುವು ತನಗೆ ದೇವತೆಗಳ ಪಕ್ಷದಲ್ಲಿ ಪ್ರೀತಿಯಿರುವುದೆಂಬುದನ್ನು ಸೂಚಿಸುತ್ತ, ದೇವತೆಗಳೆಲ್ಲಿದ್ದರೋ ಅಲ್ಲಿ ನಿಂತನು. ಅದರಿಂದ ದೈತ್ಯರು ಕೋಪಗೊಂಡು ಇಂತೆಂದರು :—

೧೯. "ತಪಸ್ಸು, ವಿದ್ಯೆ, ವಯಸ್ಸುಗಳಲ್ಲಿ ಹಿರಿಯರಾದ ನಾವು ಅಮಂಗಳವಾದ ಈ ಸರ್ಪರಾಜನ ಕೆಳಭಾಗವನ್ನು (ಹಿಂಭಾಗವನ್ನು) ಹೇಗೆ ಹಿಡಿದುಕೊಳ್ಳುವುದು? ನಾವು ಇಷ್ಟು ಮೂರ್ಖರೇನೂ ಅಲ್ಲ."

೨೦. ಆಮೇಲೆ ವಿಷ್ಣುವು ದೇವತೆಗಳೊಡನೆ ತಾನೇ ಅವರನ್ನು ಮನ್ನಿಸುವವನ ಹಾಗೆ ನಟಿಸಿ ನಗುನಗುತ್ತ, ಆ ಶೇಷನ ಮುಖಭಾಗವನ್ನು ದೈತ್ಯರಿಗೇ ಬಿಟ್ಟುಕೊಟ್ಟು ದೇವತೆಗಳು ಬಾಲವನ್ನು ಹಿಡಿಯುವಂತೆ ಅಪ್ಪಣೆಮಾಡಿದನು.

೨೧. ಇದು ಮಹಾಸರ್ಪದ ವಿಷ ತುಂಬಿದ ಫೂತ್ಕಾರದಿಂದ ಸುಡದಂತೆ ಅಮರರನ್ನು ರಕ್ಷಿಸುವುದಕ್ಕಾಗಿ ಶ್ರೀಪತಿಯು ನಡಸಿದ ಒಂದು ನಡವಳಿಯೆಂದು ತಿಳಿಗೇಡಿಗಳಾದ ಆ ದೈತರು ಅರಿಯದೆಹೋದರು.

೨೨. ಬಳಿಕ ಆ ಕಶ್ಯಪಪುತ್ರರು ಚರ್ಮದಿಂದ ಕಚ್ಚೆಕಟ್ಟಿ ಚಿನ್ನದ ತಪ್ಪಲುಗಳಿಂದ ಪ್ರಕಾಶಮಾನವಾಗಿ ಬೆಳಗುತ್ತಿರುವ ಆ ಮಂದರಪರ್ವತವನ್ನು ಬಲಾತ್ಕಾರವಾಗಿ ಹಿಡಿದೆತ್ತಿದರು.

೨೩. ಇಪ್ಪತ್ತೆರಡುಸಾವಿರ ಯೋಜನಗಳ ಎತ್ತರವಾದ ಆ ಮಂದರವನ್ನು ಬಹಳ ಉತ್ಸುಕರಾಗಿ ಬಗೆಬಗೆಯಾಗಿ ಕೂಗುತ್ತ ಅಂಭೋನಿಧಿಯಾದ ಸಾಗರದಲ್ಲಿ ತಂದುಹಾಕಿದರು.

ಧಾರ್ಯಮಾಣೋಽಪ್ಯನಾಧಾರಸ್ತೈರದ್ರಿರತಿ ಗೌರವಾತ್ ।
ಯಯಾವಧಸ್ತಲಂ ಸದ್ಯಸ್ತದಾ ಸಂಸ್ತೇಽತಿವಿಹ್ವಲಾಃ ॥ ೨೪ ॥
ತದಾ ಸ ಭಗವಾನ್ ಸಾಕ್ಷಾತ್ ಸರ್ವಥಾ ಭಕ್ತಕಾರ್ಯಕೃತ್ ।
ಸ್ತೂಯಮಾನಾಮರ್ಕೈರದ್ರಿಮುದ್ದಧ್ರೇ ಕಮಠಾಕೃತಿಃ ॥ ೨೫ ॥
ಉತ್ಥಿತಂ ತಮವೇಕ್ಷ್ಯಾಶು ಸರ್ವೇ ಫುಲ್ಲಹೃದಾನನಾಃ ।
ಬಭೂವುಶ್ಚ ಸ್ಥಿರಃ ಸೋಽಭೂತ್ಕೂರ್ಮಪೃಷ್ಠೇಽತಿ ವಿಸ್ತೃತೇ ॥ ೨೬ ॥
ತತೋ ಮಮಂಥುಸ್ತರಸಾ ಯಾವದ್ಬಲಮಪಾಂ ನಿಧಿಂ ।
ಶ್ರಮಫೂತ್ಕಾರವದನಾ ದೇವಾದಯೋಽಭಯಂ ॥ ೨೭ ॥
ಭ್ರಾಮ್ಯಮಾಣಾತ್ತತಸ್ತ್ವದ್ರೇರ್ಬಹವೋಽನ್ಯಪತನ್ ದ್ರುಮಾಃ ।
ಊರ್ಧ್ವದೃಘರ್ಷಜೋ ವಹ್ನಿಸ್ತತ್ಸ್ಥಸಿಂಹಾದಿಮಾದಹತ್ ॥ ೨೮ ॥
ತತ್ರ ನಾನಾಜಲಚರಾ ವಿನಿಷ್ಪಿಷ್ಟಾ ಮಹಾದ್ರಿಣಾ ।
ವಿಲಯಂ ಸಮುಪಾಜಗ್ಮುಃ ಶತಶಃ ಕ್ಷೀರವಾರಿಧೌ ॥ ೨೯ ॥

---

೨೪. ನಿಲ್ಲಲು ಆಧಾರವಿಲ್ಲದ ಆ ಗಿರಿಯು ಆ ದೇವಾಸುರರು ಹಿಡಿದಿದ್ದರೂ ಬಹು ಭಾರವಾಗಿದ್ದುದರಿಂದ ತಟ್ಟನೆ ಕೆಳಗಿಳಿದು ಮುಳುಗಿಹೋಯಿತು. ಆಗ ಸುರಾಸುರರೆಲ್ಲರೂ ಅತಿ ವಿಹ್ವಲರಾದರು.

೨೫. ಆಗ ಸರ್ವಪ್ರಕಾರದಿಂದಲೂ ಭಕ್ತರ ಕಾರ್ಯಗಳನ್ನು ನೆರವೇರಿಸುವವನಾದ ಭಗವಂತನಾದರೊ ಅಮರರಿಂದ ಸ್ತುತಿಸಲ್ಪಡುವವನಾಗಿ ತಾನೇ ಕಮಠಾಕೃತಿಯನ್ನು (ಆಮೆಯ ಆಕಾರವನ್ನು) ತಾಳಿ ಆ ಮಹಾ ಪರ್ವತವನ್ನು ಎತ್ತಿದನು.

೨೬. ಬೇಗನೆಯೆ ಮೇಲೆದ್ದ ಆ ಬೆಟ್ಟವನ್ನು ಕಂಡು ಅವರೆಲ್ಲರಿಗೂ ಮುಖ ವರಳಿ ಹೃದಯವು ಹಿಗ್ಗಿತು. ಅತಿ ವಿಸ್ತಾರವಾದ ಆ ಆದಿಕೂರ್ಮನ ಬೆನ್ನಿನ ಮೇಲೆ ಆ ಪರ್ವತವು ಸ್ಥಿರವಾಗಿ ನೆಲಸಿತು.

೨೭. ಬಳಿಕ ದೇವಾದಿಗಳೆಲ್ಲರೂ ನಿರ್ಭಯರಾಗಿ ತಮ್ಮ ಬಲವನ್ನೆಲ್ಲ ಪ್ರಯೋಗಿಸಿ ಶ್ರಮದಿಂದ ಬಾಯುಸಿರುಬಿಟ್ಟು ಫೂತ್ಕರಿಸುತ್ತ ಬಹು ವೇಗದಿಂದ ಸಮುದ್ರವನ್ನು ಕಡೆಯತೊಡಗಿದರು.

೨೮. ಕಡೆತಕ್ಕೆ ಸಿಕ್ಕಿ ಸುತ್ತುತ್ತಿರುವ ಆ ಪರ್ವತದಿಂದ ಅನೇಕ ಮರಗಳು ಕಿತ್ತುಬಿದ್ದವು. ಘರ್ಷಣೆಯಿಂದ ಹುಟ್ಟಿದ ಬೆಂಕಿಯು ಅಲ್ಲಿದ್ದ ಸಿಂಹ ಮುಂತಾದ ಮಹಾ ಪ್ರಾಣಿಗಳೆಲ್ಲವನ್ನೂ ಸುಟ್ಟುಹಾಕಿತು.

೨೯. ಆ ಕ್ಷೀರಸಮುದ್ರದಲ್ಲಿ ನಾನಾ ಬಗೆಯ ಜಲಚರಗಳು ಆ ಮಹಾ ಪರ್ವತದಿಂದ ಅರೆಯಲ್ಪಟ್ಟು ನೂರಾರು ರೀತಿಯಲ್ಲಿ ನಾಶವಾಗಿಹೋದುವು.

ಸಾಂವರ್ತಕಮಹಾಮೇಘಸಂಘಗರ್ಜಿತವನ್ಮಹಾನ್ ।
ಆಸೀನ್ಮಂಥನನಾದಶ್ಚ ಪ್ರತಿಧ್ವನಿವಿವರ್ಧಿತಃ ॥ ೩೦ ॥
ಅತ್ಯಾಕರ್ಷಣಖಿನ್ನಾಂಗವಾಸುಕೇರ್ಮುಖಫೂತ್ಕೃತೈಃ ।
ಹತೌಜಸೋಽತಿಖಿನ್ನಾಶ್ಚ ದೈತ್ಯಾ ನಿಂಗಾಲವದ್ಬಭುಃ ॥ ೩೧ ॥
ಅವಿಷಹ್ಯಂ ವಿಷಾಗ್ನಿಂ ಚ ಮುರ್ಷಂತಿ ಬಹುಧಾ ಮುಹುಃ ।
ಲಂಬಂತೇ ಸ್ಮಾಹಿರಾಜಸ್ಯ ಸಹಸ್ರಂ ವದನಾನ್ಯಧಃ ॥ ೩೨ ॥
ದಧಾರ ಸಹಸಾ ತಾನಿ ಭಗವತ್ಪ್ರೇರಿತೋ ವಿಭುಃ ।
ಸಂಕರ್ಷಣೋ ಮಹಾತೇಜಾಃ ಸಹಮಾನೋ ವಿಷಾನಲಂ ॥ ೩೩ ॥
ಸಹಸ್ರಮೇಕಂ ವರ್ಷಾಣಾಂ ಮಥ್ಯಮಾನಾತ್ಪಯೋನಿಧೇಃ ।
ಹಾಲಾಹಲಂ ವಿಷಮಭೂತ್ ಉತ್ಸರ್ಪದ್ದಿದಿಶೋ ದಿಶಃ ॥ ೩೪ ॥
ಯದಾಹುಃ ಕಾಲಕೂಟಾಖ್ಯಂ ಸರ್ವಲೋಕಾತಿದಾಹಕಂ ।
ತೇನ ದಂದಹ್ಯಮಾನಾಂಗಾಸ್ತೇ ತು ಚಕ್ರುಃ ಪಲಾಯನಂ ॥ ೩೫ ॥
ತತೋ ಬ್ರಹ್ಮಾ ಪ್ರಜೇಶಾಶ್ಚ ದೇವಾಃ ಸರ್ವೇಽಪ್ಯುಮಾಪತಿಂ ।
ಪ್ರಾರ್ಥಯಂಸ್ತಸ್ಯ ಪಾನಾರ್ಥಂ ಸ್ತುವಂತಃ ಸ್ತುತಿಭಿರ್ಮುನೇ ॥ ೩೬ ॥

---

೩೦. ಕಡೆತದಿಂದ ಸಂವರ್ತಕ ಮಹಾಮೇಘಸಮೂಹಗಳ ಮೊಳಗಿನಂತೆ ಮಹಾನಾದವುಂಟಾಗಿ ಪ್ರತಿಧ್ವನಿಯು, ಹೆಚ್ಚುಹೆಚ್ಚಾಗಿ ಬೆಳೆಯುತ್ತಿತ್ತು.

೩೧. ಅತಿಯಾದ ಎಳೆತದಿಂದ ಖೇದಹೊಂದಿದ ಅಂಗಗಳುಳ್ಳ ವಾಸುಕಿಯ ಮುಖದಿಂದ ಹೊರಟ ಫೂತ್ಕಾರಗಳಿಂದ ಕಾಂತಿಗುಂದಿದವರೂ ಖಿನ್ನರೂ ಆಗಿ ದೈತ್ಯರು ಇಜ್ಜಲಿನಂತೆ ಕರ್ರಗೆ ಕಾಣುತ್ತಿದ್ದರು.

೩೨. ಸಹಿಸಲಸದಳವಾದ ವಿಷಾಗ್ನಿಯನ್ನು ಅನೇಕಪ್ರಕಾರವಾಗಿ ಮತ್ತೆ ಮತ್ತೆ ಹೊರಹೊಮ್ಮಿಸುತ್ತ ಸರ್ಪರಾಜನ ಸಹಸ್ರಮುಖಗಳೂ ಕೆಳಗೆ ಜೋಲು ಬಿದ್ದವು.

೩೩. ಮಹಾತೇಜಸ್ವಿಯಾದ ಸಂಕರ್ಷಣಪ್ರಭುವು ಭಗವಂತನಿಂದ ಪ್ರೇರಿಸಲ್ಪಟ್ಟವನಾಗಿ ವಿಷಾಗ್ನಿಯನ್ನು ಸಹಿಸಿಕೊಂಡು ಆ ಮುಖಗಳನ್ನು ತಟ್ಟನೆ ಎತ್ತಿ ಧರಿಸುವವನಾದನು.

೩೪. ಹೀಗೆ ಒಂದುಸಾವಿರ ವರ್ಷಗಳ ಕಾಲ ಕಡೆಯುತ್ತಿರಲಾಗಿ ಸಮುದ್ರದಲ್ಲಿ ಹಾಲಾಹಲವೆಂಬ ವಿಷವು ಹುಟ್ಟಿ ದಿಕ್ಕುವಿದಿಕ್ಕುಗಳನ್ನೆಲ್ಲ ವ್ಯಾಪಿಸಿತು.

೩೫. ಸರ್ವಲೋಕಗಳನ್ನೂ ದಹಿಸಿಬಿಡುವ ಆ ವಿಷಕ್ಕೆ ಕಾಲಕೂಟವೆಂದು ಹೇಳುತ್ತಾರೆ. ಆ ವಿಷದಿಂದ ಸುಡುತ್ತಿರುವ ಅಂಗಗಳುಳ್ಳವರಾಗಿ ದೇವಾಸುರರೆಲ್ಲರೂ ಪಲಾಯನಮಾಡಿದರು.

೩೬. ಎಲೈ ಮುನಿಯೇ! ಬಳಿಕ ಬ್ರಹ್ಮನೂ, ಪ್ರಜಾಪತಿಗಳೂ ದೇವತೆಗಳೂ

ಭಗವಾನಥ ತಂ ಪ್ರಾಹ ಸುರಾಣಾಮಗ್ರಜೋ ಭವಾನ್ ।
ಭವತೀತ್ಯಗ್ರಜಂ ವಾರ್ಧೇಃ ಗೃಹಾಣೇದಂ ವಿಷಂ ಶಿವ ॥ ೩೭ ॥
ದೇವಾನಾಂ ಸ ಭಯಂ ದೃಷ್ಟ್ವಾ ಕರುಣಶ್ಚಾಜ್ಞಯಾ ಹರೇಃ ।
ಆಕರ್ಷದ್ಯೋಗಕಲಯಾ ವಿಷಂ ಪಾಣಿತಲೇಽಖಿಲಂ ॥ ೩೮ ॥
ಪಪೌ ತತ್ಕಂಠಮಧ್ಯೇ ಚ ಶೋಷಯಾಮಾಸ ತತ್ಕ್ಷಣಂ ।
ನೀಲಕಂಠ ಇತಿಖ್ಯಾತಃ ಶಂಕರಾಖ್ಯಶ್ಚ ಸೋಽಭವತ್ ॥ ೩೯ ॥
ಪಾಸ್ಯತಸ್ತಸ್ಯ ಪಾಣೇರ್ಯೇ ಪತಿತಾ ಭುವಿ ಬಿಂದವಃ ।
ತನ್ನಾಗಾ ವೃಶ್ಚಿಕಾದ್ಯಾಶ್ಚ ಜಗೃಹುಃ ಕಾಶ್ಚನೌಷಧೀಃ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಅಮೃತಮಂಥನೇ ವಿಷೋತ್ಪತ್ತಿ"ರ್ನಾಮೈಕಾದಶೋಽಧ್ಯಾಯಃ

---

ಎಲ್ಲರೂ ಉಮಾಪತಿಯನ್ನು ಸ್ತುತಿಗಳಿಂದ ಸೋತ್ರಮಾಡುತ್ತ, ಆ ವಿಷವನ್ನು ಪಾನಮಾಡಬೇಕೆಂದು ಪ್ರಾರ್ಥಿಸಿದರು.

೩೭. ಆಗ ಭಗವಂತನಾದ ಶ್ರೀಹರಿಯು ಅವನನ್ನು ಕುರಿತು "ಎಲೈ ಶಿವನೇ! ನೀನು ದೇವತೆಗಳಿಗೆಲ್ಲ ಅಗ್ರಜನಾಗಿದ್ದೀಯೆ. ಸಮುದ್ರದಲ್ಲಿ ಮೊದಲು ಹುಟ್ಟಿರುವ ಈ ವಿಷವನ್ನು ನೀನೇ ತೆಗೆದುಕೊ" ಎಂದು ನುಡಿದನು.

೩೮–೩೯. ದೇವತೆಗಳ ಭಯವನ್ನು ಕಂಡು ಕರುಣೆಯಿಂದಲೂ, ಶ್ರೀಹರಿಯ ಆಜ್ಞೆಯಿಂದಲೂ ಆ ಶಿವನು ಯೋಗಕಲೆಯಿಂದ ಸಮಸ್ತವಿಷವನ್ನೂ ತನ್ನ ಅಂಗೈಯಲ್ಲಿ ಆಕರ್ಷಿಸಿ ಹಿಡಿದು ಕುಡಿದನು. ಅದು ಆ ಕ್ಷಣವೆ ಅವನ ಕಂಠ ಮಧ್ಯವನ್ನು ಶೋಷಿಸಿಬಿಟ್ಟಿತು. ಆದರಿಂದ ಆ ಶಿವನು ನೀಲಕಂಠನೆಂದು ಪ್ರಖ್ಯಾತನಾದನು. ಹೀಗೆ ವಿಷಪಾನ ಮಾಡಿ ಸುರಾಸುರರೆಲ್ಲರಿಗೂ ಆನಂದವನ್ನು ಉಂಟುಮಾಡಿದುದರಿಂದ ಆ ವಿಭುವು ಶಂಕರನೆಂದು ಹೆಸರುಗೊಂಡನು.

೪೦. ವಿಷವನ್ನು ಕುಡಿಯುತ್ತಿರುವ ಸಮಯದಲ್ಲಿ ಆ ಶಿವನ ಕೈಯಿಂದ ಜಾರಿ ಭೂಮಿಯಮೇಲೆ ಯಾವ ವಿಷಬಿಂದುಗಳು ಬಿದ್ದವೋ ಅವನ್ನು ನಾಗಗಳೂ, ಚೇಳು ಮೊದಲಾದವೂ, ಕೆಲವು ಓಷಧಿಗಳೂ ಗ್ರಹಿಸಿದವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಅಮೃಮಥನ–ವಿಷೋತ್ಪತ್ತಿವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ಅಮೃತಮಂಥನೇ ಚತುರ್ದಶರತ್ನೋತ್ಪತ್ತಿವರ್ಣನಂ

ಸ್ಕಂದ ಉವಾಚ :—

**ತತೋ ದೃಷ್ಟಾಃ ಕಾಶ್ಯಪೇಯಾಃ ಮಂಥಸ್ಥಾನಮುಪೇತ್ಯ ತೇ ।**
**ಪುನರ್ವರ್ಷಸಹಸ್ರಂ ಚ ಮಂಥಂತಿಸ್ಮ ಪಯೋನಿಧಿಂ ॥ ೧ ॥**
**ಮಥ್ಯಮಾನಾತ್ತಥಾ ಸಿಂಧೋಃ ಸರ್ವೈಸ್ತೈರಪಿ ಕಿಂಚನ ।**
**ನಾಸೀಚ್ಚ ಶಿಥಿಲಾ ಆಸನ್ ಮಂಥಿತಾರಃ ಶ್ವಸನ್ಮುಖಾಃ ॥ ೨ ॥**
**ವಾಸುಕಿಶ್ಚ ಮಹಾಸರ್ಪಃ ಪ್ರಾಣವೈಕಲ್ಯಮಾಪ್ತವಾನ್ ।**
**ಮಂಥಕಾಲೇ ಮಂದರೋಽಪಿ ನೈಕತ್ರಾಸೀತ್ ಸ್ಥಿರಸ್ಥಿತಿಃ ॥ ೩ ॥**
**ಸರ್ವಾನ್ ದೃಷ್ಟ್ವಾ ನಿರುತ್ಸಾಹಾನ್ಪ್ರದ್ಯುಮ್ನೋ ವಿಷ್ಣ್ವನುಜ್ಞಯಾ ।**
**ದೇವಾಸುರಾಹಿರಾಜೇಷು ಪ್ರವಿಶ್ಯ ಬಲಮಾದಧೌ ॥ ೪ ॥**
**ಅನಿರುದ್ಧೋಽಪಿ ತರ್ಹ್ಯೇವ ತಮಾಕ್ರಮ್ಯ ನಗಾಧಿಪಂ ।**
**ಸಹಸ್ರಬಾಹುಭಿಸ್ತಸ್ಥೌ ಮಹಾಚಲ ಇವಾಪರಃ ॥ ೫ ॥**

---

## ಕನ್ನಡದ ಅನುವಾದ

### ಅಮೃತಮಥನ—ಚತುರ್ದಶರತ್ನೋತ್ಪತ್ತಿವರ್ಣನ

೧. ಸ್ಕಂದನು ಹೇಳುತ್ತಾನೆ :—ಬಳಿಕ ಆ ದೈತ್ಯರು ಹರ್ಷಗೊಂಡವರಾಗಿ ಕಡೆಯುವೆಡೆಗೆ ಬಂದುನಿಂತು ಮತ್ತೆ ಒಂದು ಸಹಸ್ರ ವರ್ಷದವರೆಗೆ ಆ ಸಮುದ್ರವನ್ನು ಕಡೆದರು.

೨. ಹಾಗೆ ಅವರೆಲ್ಲರೂ ಒಟ್ಟಾಗಿ ಕಡೆಯುತ್ತಿರಲು ಆ ಸಮುದ್ರದಿಂದ ಏನೊಂದೂ ಹುಟ್ಟಿಬರಲಿಲ್ಲ. ಕಡೆಯುತ್ತಿದ್ದವರು ಮಾತ್ರ ಆಯಾಸಗೊಂಡು ನಿಟ್ಟುಸುರುಬಿಡತೊಡಗಿದರು.

೩. ಮಹಾಸರ್ಪನಾದ ವಾಸುಕಿಯೂ ಶಕ್ತಿಹೀನತೆಯನ್ನು ಪಡೆದನು. ಕಡೆಯುವ ಕಾಲದಲ್ಲಿ ಮಂದರಪರ್ವತವೂ ಒಂದು ಕಡೆಯೂ ಸ್ಥಿರವಾಗಿ ನಿಲ್ಲದೆ ಗಿರಗುಟ್ಟುತ್ತಲೇ ಇದ್ದಿತು.

೪. ಎಲ್ಲರೂ ನಿರುತ್ಸಾಹಿಗಳಾಗಿರುವುದನ್ನು ಕಂಡು ಪ್ರದ್ಯುಮ್ನನು ವಿಷ್ಣುವಿನ ಅನುಜ್ಞೆಯಿಂದ ದೇವತೆಗಳು, ಅಸುರರು, ಅಹಿರಾಜರೆಂಬ ಆ ಎಲ್ಲರಲ್ಲಿಯೂ ಪ್ರವೇಶಮಾಡಿ ಬಲವನ್ನು ತುಂಬಿದನು.

೫. ಅನಿರುದ್ಧನೂ ಅದೇರೀತಿಯಲ್ಲಿಯೇ ಆ ಮಹಾಪರ್ವತವನ್ನು ಸಹಸ್ರಬಾಹುಗಳಿಂದ ಒತ್ತಿಹಿಡಿದುಕೊಂಡು ಮತ್ತೊಂದು ಮಹಾಚಲವೋ ಎಂಬಂತೆ ನಿಂತನು.

ತತೋ ಮಮಂಥುಸ್ತ್ರಸಾ ಸಂಪ್ರಾಪ್ತಪರಮೌಜಸಃ ।
ಸವಿಸ್ಮಯಾ ಮಹಾಬ್ಧಿಂ ತೇ ಸುರಾಸುರಗಣಾ ಮುದಾ ॥ ೬ ॥
ನಾರಾಯಣಾನುಭಾವೇನ ನಾಪುರ್ದೇವಾದಯಃ ಶ್ರಮಂ ।
ಶುಶುಭೇ ಮಂಥನಂ ತಚ್ಚ ಸಮಮಾಕರ್ಷಣಾತ್ತದಾ ॥ ೭ ॥
ಮಥ್ಯಮಾನೇ ಮಹಾಂಬೋಧೌ ಸುಸ್ರುವುಃ ಪರಿತಸ್ತದಾ ।
ಮಹಾದ್ರುಮಾಣಾಂ ನಿರ್ಯಾಸಾ ಬಹವಶ್ಚೌಷಧೀರಸಾಃ ॥ ೮ ॥
ತಥಾಭೂತಾದಂಬುನಿಧೇರಾವಿರಾಸೀತ್ಕಲಾನಿಧಿಃ ।
ಕಾಂತ್ಯೌಷಧೀನಾಮಧ್ಯಕ್ಷಃ ಸರ್ವಾಸಾಂ ಯ ಉದೀರ್ಯತೇ ॥ ೯ ॥
ತತೋ ಗವಾಮಧಿಷ್ಠಾತ್ರೀ ಸರ್ವಾಸಾಮಪಿ ಕಾಮಧುಕ್ ।
ಹವಿರ್ಧಾನ್ಯಭವದ್ಧೇನುಃ ಶೀತಾಂಶುಸದೃಶದ್ಯುತಿಃ ॥ ೧೦ ॥
ಅಶ್ವಃ ಶ್ವೇತೋಥಾವಿರಾಸೀತ್ ಹಯಾನಾಮಧಿದೇವತಾ ।
ಐರಾವತಶ್ಚ ನಾಗೇಂದ್ರಶ್ಚತುರ್ದಂತಃ ಶಶಿಪ್ರಭಃ ॥ ೧೧ ॥

---

೬. ಅನಂತರದಲ್ಲಿ ಸುರಾಸುರರೆಲ್ಲರೂ ಒಡನೆಯೆ ಪರಮತೇಜಸ್ಸನ್ನು ಪಡೆದು ವಿಸ್ಮಯಹೊಂದಿ ಸಂತೋಷದಿಂದ ಸಮುದ್ರವನ್ನು ಮತ್ತೆ ಕಡೆಯತೊಡಗಿದರು.

೭. ಶ್ರೀಮನ್ನಾರಾಯಣನ ಅನುಭಾವ (ಧ್ಯಾನ)ದಿಂದ ದೇವಾದಿಗಳಿಗೆ ಶ್ರಮವೇನೂ ಉಂಟಾಗಲಿಲ್ಲವು. ಆ ಮಂಥನಕಾರ್ಯವೂ ಆಕರ್ಷಣದಿಂದ ಸಮವಾಗಿ ಶೋಭಿಸುತ್ತಿತ್ತು.

೮. ಹೀಗೆ ಆ ಮಹಾಸಾಗರವನ್ನು ಕಡೆಯುತ್ತಿರಲಾಗಿ ಮಹಾದ್ರುಮಗಳಿಂದ ಹೊರಟ ನಿರ್ಯಾಸಗಳೂ (ಅಂಟು, ಬಂಕೆ ಮೊದಲಾದವು) ಅನೇಕ ಓಷಧಿಗಳ ರಸಗಳೂ ಸುತ್ತಲೂ ಸ್ರವಿಸುತ್ತಿದ್ದವು.

೯. ಆರೀತಿಯಿದ್ದ ಸಮುದ್ರದಿಂದ ಕಾಂತಿಭರಿತಗಳಾದ ಔಷಧಿಗಳೆಲ್ಲಕ್ಕೂ ಅಧ್ಯಕ್ಷನೆಂದು ಹೇಳಲ್ಪಡುವವನೂ, ಕಲಾನಿಧಿಯೂ ಆದ ಚಂದ್ರನು ಆವಿರ್ಭವಿಸಿದನು.

೧೦. ಬಳಿಕ ಸಮಸ್ತ ಗೋವುಗಳಿಗೂ ಅಧಿಷ್ಠಾತ್ರಿಯೂ, ಹವಿಸ್ಸಿಗೆ ನಿಧಿಯೂ, ಇಷ್ಟಾರ್ಥಗಳನ್ನು ನೀಡುವವಳೂ, ಹವಿಸ್ಸನ್ನು ಕೊಡುವವಳೂ, ತಂಗದಿರನಾದ ಚಂದ್ರನಿಗೆ ಸಮಾನವಾದ ಕಾಂತಿಯುಳ್ಳವಳೂ ಆದ ಕಾಮಧೇನುವು ಮೂಡಿಬಂದಳು.

೧೧. ಆಮೇಲೆ ಕುದುರೆಗಳಿಗೆಲ್ಲ ಅಧಿದೇವತೆಯಾದ ಉಚ್ಚೈಃಶ್ರವಸ್ಸೆಂಬ ಶ್ವೇತಾಶ್ವವೊಂದು ಹುಟ್ಟಿಬಂದಿತು. ಇದಾದಬಳಿಕ ಚಂದ್ರನಂತೆ ಕಾಂತಿಯುಳ್ಳುದೂ, ನಾಲ್ಕು ದಂತಗಳನ್ನು ತಳೆದುದೂ ಆದ ಐರಾವತ ಗಜೇಂದ್ರವು ಉದ್ಭವಿಸಿತು.

ಪಾರಿಜಾತೋ ದಿವ್ಯತರುಸ್ತರುರಾಜಸ್ತತೋಽಭವತ್ ।
ಮಣಿರತ್ನಂ ಕೌಸ್ತುಭಾಖ್ಯಂ ಪದ್ಮರಾಗಮಭೂತ್ತತಃ ॥ ೧೨ ॥
ತತೋಽಭವನ್ನಪ್ಸರಸೋ ರೂಪಲಾವಣ್ಯಭೂಮಯಃ ।
ಸುರಾದೇವೀ ತತೋ ಜಜ್ಞೇ ಸರ್ವಮಾದಕದೇವತಾ ॥ ೧೩ ॥
ಆಸೀದಥ ಧನುಃ ಶಾರ್ಙ್ಗಂ ಸರ್ವಶಾಸ್ತ್ರಾಧಿದೈವತಂ ।
ವಾದ್ಯಾಧಿದೈವತಂ ಶಂಖಃ ಪಾಂಚಜನ್ಯಸ್ತತೋಽಭವತ್ ॥ ೧೪ ॥
ತತ್ರ ಚಂದ್ರಃ ಪಾರಿಜಾತಃ ತಥೈವಾಪ್ಸರಸಾಂ ಗಣಃ ।
ಆದಿತ್ಯಪಥಮಾಶ್ರಿತ್ಯ ತಸ್ಥುರೇತೇ ತು ತತ್ಕ್ಷಣಂ ॥ ೧೫ ॥
ವಾರುಣೀಮಶ್ವರಾಜಂ ಚ ದೈತ್ಯೇಶಾ ಜಗೃಹುರ್ದ್ರುತಂ ।
ಐರಾವತಂ ದೇವರಾಜೋ ಜಗ್ರಾಹಾನುಮತಾದ್ಧರೇಃ ॥ ೧೬ ॥
ಕೌಸ್ತುಭಶ್ಚ ಧನುಃ ಶಂಖೋ ವಿಷ್ಣುಮೇವ ಪ್ರಪೇದಿರೇ ।
ಹವಿರ್ಧಾನೀಂ ತು ತೇ ಸರ್ವೇ ತಾಪಸೇಭ್ಯೋ ದದುಸ್ತದಾ ॥ ೧೭ ॥

---

೧೨. ಆ ತರುವಾಯ ತರುರಾಜವೆನಿಸಿದ ದಿವ್ಯಪಾರಿಜಾತವು ತಲೆದೋರಿತು. ಆಮೇಲೆ ಪದ್ಮವರ್ಣವಾದ ಕೌಸ್ತುಭವೆಂಬ ಮಣಿರತ್ನವು ಉತ್ಪನ್ನವಾಯಿತು.

೧೩. ಆಮೇಲೆ ರೂಪಲಾವಣ್ಯಗಳಿಗೆ ನೆಲೆವನೆಯೆನಿಸಿದ ಅಪ್ಸರೆಯರು ಹುಟ್ಟಿದರು. ಬಳಿಕ, ಸರ್ವಮಾದಕ ದ್ರವ್ಯದೇವತೆಯಾದ ಸುರಾದೇವಿಯು ಹುಟ್ಟಿಬಂದಳು.

೧೪. ಆಮೇಲೆ ಸರ್ವಶಸ್ತ್ರಗಳಿಗೂ ಅಧಿದೇವತೆಯೆನಿಸಿದ ಶಾರ್ಙ್ಗವೆಂಬ ಧನುಸ್ಸು ಹುಟ್ಟಿತು. ಆಮೇಲೆ ವಾದ್ಯಾಧಿದೈವತವಾದ ಪಾಂಚಜನ್ಯವು ಮೂಡಿ ಬಂದಿತು.

೧೫. ಹಾಗೆ ಹುಟ್ಟಿದ ವಸ್ತುಗಳಲ್ಲಿ ಚಂದ್ರ, ಪಾರಿಜಾತ, ಅಪ್ಸರೆಯರ ಸಮೂಹ— ಇವು ಆಕ್ಷಣವೇ ಆದಿತ್ಯಪಥ (ಆಕಾಶಮಾರ್ಗ)ವನ್ನಾಶ್ರಯಿಸಿ ನಿಂತವು.

೧೬. ವಾರುಣಿ (ಸುರೆ)ಯನ್ನೂ, ಅಶ್ವರಾಜನನ್ನೂ ದೈತ್ಯರಾಜರು ಬೇಗನೆ ತೆಗೆದುಕೊಂಡರು. ಶ್ರೀಹರಿಯ ಅನುಮತಿಯಿಂದ ಐರಾವತವನ್ನು ದೇವರಾಜನು ತೆಗೆದುಕೊಂಡನು.

೧೭. ಕೌಸ್ತುಭ, ಶಾರ್ಙ್ಗಧನುಸ್ಸು, ಶಂಖ ಇವು ವಿಷ್ಣುವನ್ನೇ ಹೋಗಿ ಸೇರಿದವು. ಹವಿರ್ಧಾನಿಯಾದ ಕಾಮಧೇನುವನ್ನು ಎಲ್ಲರೂ ಸೇರಿ ತಾಪಸರಿಗೆ ಕೊಟ್ಟರು.

ಮಥ್ಯಮಾನಾತ್ಪುನಃ ಸಿಂಧೋಃ ಸಾಕ್ಷಾಚ್ಛ್ರೀರಭವತ್ಸ್ವಯಂ ।
ಆನಂದಯಂತೀ ಸ್ವದೃಶಾ ತ್ರಿಲೋಕೀಂ ಹತವರ್ಚಸಂ ॥ ೧೮ ॥
ತಾಂ ಗ್ರಹೀತುಂ ತು ಸರ್ವೇಪಿ ಸುರಾಸುರನರಾದಯಃ ।
ಐಚ್ಛಂಸ್ತಸ್ಯಾಃ ಪ್ರತಾಪಾತ್ತು ಶೇಕೇ ನೇತುಂ ನ ಕಶ್ಚನ ॥ ೧೯ ॥
ತತಸ್ತಾಂ ಪದ್ಮಹಸ್ತತ್ವಾಚ್ಛ್ರೀಂ ವಿದಿತ್ವೈವ ವಾಸವಃ ।
ಆನಂದಂ ಪರಮಂ ಪ್ರಾಪ ಬ್ರಹ್ಮಾದ್ಯಾ ಯೇ ಚ ತದ್ವಿದಃ ॥ ೨೦ ॥
ತಾವತ್ತತ್ರಾಂಬುಧಿಃ ಸಾಕ್ಷಾದೇತ್ಯ ತಾಂ ಹೈಮ ಆಸನೇ ।
ಕನ್ಯಾಮಮೇಯಮಿತ್ಯುಕ್ತ್ವಾ ಗೃಹೀತ್ವಾಂಕ ಉಪಾವಿಶತ್ ॥ ೨೧ ॥
ಪುನರಬ್ಧೇರ್ಮಥ್ಯಮಾನಾದಧಿಕಂ ಬಲಿಭಿಶ್ಚ ತೈಃ ।
ಸುಧಾರ್ಥಿಭಿರ್ಧೈರ್ಯವದ್ಭಿರಪಿ ನೈವಾಭವತ್ಸುಧಾ ॥ ೨೨ ॥
ತದಾ ಶಿಥಿಲಯತ್ನಾಸ್ತೇ ನಿರಾಶಾ ಅಮೃತೋದ್ಭವೇ ।
ಪ್ರಮ್ಲಾನವಕ್ತ್ರಾಃ ಖಿನ್ನಾಶ್ಚ ಬಭೂವುಃ ಕಾಶ್ಯಪಾ ಮುನೇ ॥ ೨೩ ॥

---

೧೮. ಮತ್ತೆ ಮಥನಹೊಂದುತ್ತಿದ್ದ ಆ ಸಮುದ್ರದಿಂದ ನಿಸ್ತೇಜವಾಗಿ ಹೋಗಿದ್ದ ಮೂರುಲೋಕವನ್ನೂ ತನ್ನ ಕಣ್ನೋಟದಿಂದಲೇ ಆನಂದಪಡಿಸುತ್ತ ಶ್ರೀದೇವಿಯೇ ಸಾಕ್ಷಾತ್ತಾಗಿ ಉದಿಸಿಬಂದಳು.

೧೯. ಸುರ, ಅಸುರ, ನರರೆಲ್ಲರೂ ಅವಳನ್ನು ಪರಿಗ್ರಹಿಸಬೇಕೆಂದು ಅಪೇಕ್ಷೆ ಪಟ್ಟರು. ಆದರೆ ಆಕೆಯ ಪ್ರತಾಪದಿಂದ ಯಾವೊಬ್ಬನೂ ಬಳಿ ಹೋಗಲು ಶಕ್ತನಾಗಲಿಲ್ಲ.

೨೦. ಬಳಿಕ ಪದ್ಮಹಸ್ತಳಾಗಿದ್ದುದರಿಂದ ಆಕೆಯು ಶ್ರೀಯೇ ಸರಿಯೆಂದು ತಿಳಿದು ವಾಸವನು ಪರಮಾನಂದಭರಿತನಾದನು. ಅದನ್ನು ಬಲ್ಲ ಬ್ರಹ್ಮಾದಿಗಳೆಲ್ಲರೂ ಆನಂದಿತರಾದರು.

೨೧. ಅಷ್ಟರಲ್ಲಿಯೆ ಸಾಕ್ಷಾತ್ ಸಮುದ್ರರಾಜನೇ ಅಲ್ಲಿಗೆ ಬಂದು "ಇವಳು ನನ್ನ ಮಗಳು" ಎಂದು ನುಡಿಯುತ್ತ, ಹೇಮಾಸನದಲ್ಲಿ ಕುಳಿತು ಅವಳನ್ನು ಎತ್ತಿಕೊಂಡು ತೊಡೆಯಲ್ಲಿ ಕೂಡಿಸಿಕೊಂಡನು.

೨೨. ಆ ತರುವಾಯ ಬಲಿಷ್ಠರೂ, ಧೈರ್ಯಶಾಲಿಗಳೂ ಆದ ಸುರಾಸುರರು ಸುಧೆಯನ್ನು ಬಯಸಿ ಮತ್ತೆ ಸಮುದ್ರವನ್ನು ಮತ್ತಷ್ಟು ವೇಗವಾಗಿ ಕಡೆಯುತ್ತಿದ್ದರು. ಆದರೂ ಸುಧೆಯು ಹುಟ್ಟಿಬರಲೇ ಇಲ್ಲವು.

೨೩. ಎಲೈ ಮುನಿಯೇ! ಆಗ ಆ ಕಶ್ಯಪಪುತ್ರರು ಅಮೃತ ಹುಟ್ಟುವುದೆಂಬುದರಲ್ಲಿ ನಿರಾಶರಾಗಿ ಪ್ರಯತ್ನವನ್ನು ಸಡಿಲಬಿಟ್ಟು ಮುಖಬಾಡಿ ಖಿನ್ನರಾದರು.

ದೃಷ್ಟ್ವಾ ತಥಾವಿಧಾನ್ ತಾಂಶ್ಚ ಭಗವಾನ್ ಕರುಣಾನಿಧಿಃ ।
ಉದ್ಯುಕ್ತೋಽಭೂತ್ಸ್ವಯಂ ಬ್ರಹ್ಮನ್ಮಂಥನಾಯ ಹಸನ್ವಿಭುಃ ॥ ೨೪ ॥
ರತ್ನಕಾಂಚೀದೃಢಾಬದ್ಧಕಕ್ಷಪೀತಾಂಬರದ್ಯುತಿಃ ।
ದ್ವಾಭ್ಯಾಂ ದ್ವಾಭ್ಯಾಮಹಿಂ ಮಧ್ಯೇ ದೋರ್ಭ್ಯಾಮುಭಯತೋಽಗ್ರಹೀತ್ ॥ ೨೫ ॥
ಧೃತಾಹಿವದನಾ ದೈತ್ಯಾಸ್ತಸ್ಥುರೇಕತ ಏವ ತೇ ।
ಏಕತೋ ಧೃತತತ್ಪುಚ್ಛಾ ದೇವಾಸ್ತಸ್ಥುಸ್ತದಾಖಿಲಾಃ ॥ ೨೬ ॥
ತನ್ಮಧ್ಯಗಶ್ಚ ಭಗವಾನ್ ಮಮಂಥಾಬ್ಧಿಂ ಸ ಲೀಲಯಾ ।
ದಧಾನೋ ನಯನಾನಂದಂ ಚಂಚತ್ಕರವಿಭೂಷಣಃ ॥ ೨೭ ॥
ಬ್ರಹ್ಮಾ ಸಹರ್ಷಿಪ್ರವರೈರಂತರಿಕ್ಷಸ್ಥಿತಃ ಸ್ತದಾ ।
ಅವಾಕಿರತ್ತಂ ಕುಸುಮೈಃ ಕುರ್ವನ್ ಜಯಜಯಧ್ವನಿಂ ॥ ೨೮ ॥
ಮಥ್ಯಮಾನಾತ್ತತಃ ಸಿಂಧೋರ್ಜಜ್ಞೇ ಧನ್ವಂತರಿಃ ಪುಮಾನ್ ।
ವಿಷ್ಣೋರಂಶೇನ ಗೌರಾಂಗಃ ಸುಧಾಕುಂಭಂ ಕರೇ ದಧತ್ ॥ ೨೯ ॥

---

೨೪. ಎಲೈ ಬ್ರಾಹ್ಮಣನೇ! ಆ ರೀತಿ ನಿಸ್ತೇಜರಾದ ಅವರನ್ನು ಕಂಡು ಕರುಣಾನಿಧಿಯೂ, ವಿಭುವೂ ಆದ ಆ ಭಗವಂತನು ನಗುನಗುತ್ತ ತಾನೇ ಮುಂದೆ ಬಂದು ಸಮುದ್ರವನ್ನು ಕಡೆಯಲು ಉದ್ಯುಕ್ತನಾದನು.

೨೫. ರತ್ನದ ಉಡಿದಾರದಿಂದ ಗಟ್ಟಿಯಾಗಿ ಕಟ್ಟಿದ ಕಂಕುಳು (ಕೆಳಗಿನ) ಪೀತಾಂಬರದ ಕಾಂತಿಯು ಬೆಳಗುತ್ತಿರಲು ಎರಡೆರಡು ಕೈಗಳ ಮಧ್ಯದಲ್ಲಿಯೂ ಸರ್ಪವನ್ನು ಎರಡು ಕಡೆಗಳಿಂದಲೂ ಹಿಡಿದುಕೊಂಡನು.

೨೬. ಆಗ ದೈತ್ಯರು ಹಾವಿನ ಮುಖವನ್ನು ಹಿಡಿದುಕೊಂಡು ಒಂದು ಕಡೆ ನಿಂತರು. ದೇವತೆಗಳೆಲ್ಲರೂ ಅದರ ಬಾಲವನ್ನು ಹಿಡಿದುಕೊಂಡು ಒಂದು ಕಡೆ ನಿಂತರು.

೨೭. ಅವರಿಬ್ಬರ ಮಧ್ಯದಲ್ಲಿ ನಿಂತುಕೊಂಡು ಕಳೆಯೆರಚುತ್ತಿರುವ ಕರ ವಿಭೂಷಣಗಳುಳ್ಳವನಾಗಿ ನಯನಾನಂದವನ್ನುಂಟುಮಾಡುತ್ತ ಆ ಭಗವಂತನು ಲೀಲೆಯಿಂದಲೇ ಸಮುದ್ರವನ್ನು ಕಡೆದನು.

೨೮. ಋಷಿಶ್ರೇಷ್ಠರಿಂದೊಡಗೂಡಿ ಬ್ರಹ್ಮನು ಅಂತರಿಕ್ಷದಲ್ಲಿ ನಿಂತು ಜಯಜಯಧ್ವನಿಯನ್ನು ಮಾಡುತ್ತ ಅವನಮೇಲೆ ಹೂಗಳನ್ನೆರಚಿದನು.

೨೯. ಬಳಿಕ ಕಡೆಯಲ್ಪಡುತ್ತಿರುವ ಆ ಸಮುದ್ರದಿಂದ ಕೈಯಲ್ಲಿ ಅಮೃತ ಕುಂಭವನ್ನು ಧರಿಸಿದ ಗೌರಾಂಗನಾದ ಧನ್ವಂತರಿಯೆಂಬ ಮಹಾಪುರುಷನು ವಿಷ್ಣುವಿನ ಅಂಶದಿಂದ ಉದಿಸಿದನು.

**ಘೃತಾದೀನಾಂ ಹಿ ಸರ್ವೇಷಾಂ ರಸಾನಾಂ ಸಾರಮುತ್ತಮಂ ।**
**ಅಮೃತಂ ತದ್ಗೃಹೀತ್ವಾಽಸೌ ಶ್ರಿಯೋಽಂತಿಕಮುಪಾಯಯೌ ॥ ೩೦ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಅಮೃತಮಂಥನೇ ಚತುರ್ದಶರತ್ನೋತ್ಪತ್ತಿವರ್ಣನಂ" ನಾಮ ದ್ವಾದಶೋಽಧ್ಯಾಯಃ**

---

೩೦. ಘೃತವೇ ಮೊದಲಾದ ಸರ್ವರಸಗಳಿಗೂ ಉತ್ತಮಸಾರವೆನಿಸಿರುವುದು ಅಮೃತವು. ಆ ಧನ್ವಂತರಿಯು ಅದನ್ನು ತೆಗೆದುಕೊಂಡು ಶ್ರೀದೇವಿಯ ಸಮೀಪಕ್ಕೆ ಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಅಮೃತಮಥನ — ಚತುರ್ದಶರತ್ನೋತ್ಪತ್ತಿವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ದೇವತಾಮೃತಪಾನವರ್ಣನಂ

ಸ್ಕಂದ ಉವಾಚ :—

**ಉತ್ಪ್ರೇಕ್ಷಂತೋ ಜಾಯಮಾನಂ ಮಂಥಿತಾರೋಽಥ ತೇಽಖಿಲಾಃ ।**
**ಆಯಾಂತಂ ದದೃಶುರ್ದೂರಾದಂತಿಕೇ ಧನ್ವಂತರಿಂ ಶ್ರಿಯಃ ॥ ೧ ॥**
**ಸುಧಾಭೃತಂ ಹೇಮಕುಂಭಂ ದೃಷ್ಟ್ವಾ ಚಾಸ್ಯ ಕರೇ ಧೃತಂ ।**
**ಅಸುರಾಃ ಸಹಸಾ ಬ್ರಹ್ಮನ್ನುತ್ಪ್ಲುತ್ಯ ಜಗೃಹುಶ್ಚ ತಂ ॥ ೨ ॥**
**ತತ್ರಾಪಿ ಬಲಿನೋ ಯೇ ತೇ ಗೃಹೀತ್ವಾ ದುದ್ರುವುಸ್ತತಃ ।**
**ತಾನ್ ದುರ್ಬಲಾನ್ನ್ಯಷೇಧಂತ ನೀತಿವಾಕ್ಯೈರನುದ್ರುತಾಃ ॥ ೩ ॥**
**ಅಹೋ ನೈವಮಧರ್ಮೋ ವಃ ಕಾರ್ಯೋ ಧರ್ಮಪರಾಯಣೈಃ ।**
**ಸಮಶ್ರಮೇಭ್ಯೋ ದೇವೇಭ್ಯೋ ದತ್ವಾ ಪೇಯಂ ನ ಚಾನ್ಯಥಾ ॥ ೪ ॥**
**ಅನಾದೃತ್ಯೇತಿ ತದ್ವಾಕ್ಯಂ ಯಯುರ್ದೂರಂ ತ್ವರಾನ್ವಿತಾಃ ।**
**ತತ್ರಾಪಿ ತೇಷಾಮನ್ಯೋನ್ಯಂ ಕರಾಕೃಷ್ಟಿರ್ಮಹತ್ಯಭೂತ್ ॥ ೫ ॥**

---

## ಕನ್ನಡದ ಅನುವಾದ

### ದೇವತೆಗಳ ಅಮೃತಪಾನ ವರ್ಣನ

೧. ಸ್ಕಂದನು ಹೇಳುತ್ತಾನೆ:—ಸಾಗರವನ್ನು ಕಡೆಯುತ್ತಿದ್ದ ಆ ದೇವತೆಗಳೆಲ್ಲರೂ ನೋಡುತ್ತಿರುವಂತೆಯೆ ಆ ಧನ್ವಂತರಿಯು ಉದಿಸಿಬಂದು ಶ್ರೀಯ ಸಮೀಪವನ್ನು ಸೇರಿದನು.

೨. ಅವನು ಕೈಯಲ್ಲಿ ಹಿಡಿದುಕೊಂಡಿದ್ದ ಸುಧೆಯು ತುಂಬಿದ ಸುವರ್ಣ ಕುಂಭವನ್ನು ಕಂಡು ಅಲ್ಲಿದ್ದ ಅಸುರರು ತಟ್ಟನೆ ನೆಗೆದುಬಂದು ಅದನ್ನು ಕಿತ್ತುಕೊಂಡರು.

೩. ಅದರಲ್ಲಿಯೂ ಯಾರು ಬಲಿಷ್ಠರಾಗಿದ್ದರೋ ಅವರು ಅಮೃತಕಲಶವನ್ನು ಕಸಿದುಕೊಂಡು ಓಡಿದರು. ದುರ್ಬಲರಾದವರು ಅವರ ಹಿಂದೆ ನೀತಿ ವಾಕ್ಯಗಳನ್ನಾಡಿಕೊಂಡು ಓಡುತ್ತ 'ಬೇಡ ಬೇಡ'ವೆಂದು ನಿಷೇಧಿಸುತ್ತಿದ್ದರು.

೪. "ಆಹಾ! ಧರ್ಮಪರಾಯಣರಾದ ನಾವು ಈ ರೀತಿ ಅಧರ್ಮವನ್ನಾಚರಿಸಬಹುದೇ? ಕೂಡದು. ಸಮವಾಗಿ ಶ್ರಮಪಟ್ಟಿರುವ ದೇವತೆಗಳಿಗೂ ಕೊಟ್ಟು ಈ ಅಮೃತವನ್ನು ಕುಡಿಯಬೇಕೇ ಹೊರತು ಮತ್ತೆಬೇರೆ ಅಲ್ಲ."

೫. ಈ ರೀತಿ ಅವರಾಡುತ್ತಿದ್ದ ಆ ಮಾತನ್ನು ಗಮನಿಸದೆಯೇ ಆ ಅಸುರರು ತ್ವರೆಯಿಂದ ಹೊರಟುಹೋದರು. ಅಲ್ಲಿ ಕೂಡ ಅವರಲ್ಲಿ ಪರಸ್ಪರವಾಗಿ ಕೈ ಕೈ ಯೆಳೆದಾಟ ಬಹಳವಾಯಿತು.

**ಅಹಂ ಪೂರ್ವಮಹಂ ಪೂರ್ವಂ ನ ತ್ವಂ ನ ತ್ವಂ ಪಿಬಾಮ್ಯಹಂ ।**
**ಇತ್ಥಂ ವಿವದಮಾನಾಸ್ತೇ ನಾಪುಸ್ತೇ ಪ್ರಾಶನಕ್ಷಣಂ ॥ ೬ ॥**
**ಅಥ ದೇವಾ ಮ್ಲಾನವಕ್ತ್ರಾ ದೃಷ್ಟ್ವಾ ದೈತ್ಯೈರ್ಹೃತಾಂ ಸುಧಾಂ ।**
**ಅಶಕ್ತಾಸ್ತತ್ಪ್ರತೀಕಾರೇ ಶರಣಂ ಪ್ರಾಪುರಚ್ಯುತಂ ॥ ೭ ॥**
**ಪಾಹಿ ಪಾಹಿ ಜಗನ್ನಾಥ ನಷ್ಟಂ ಸರ್ವಸ್ವಮೇವ ನಃ ।**
**ದೈತ್ಯೈರ್ಹೃತಾ ಸುಧಾ ಸರ್ವಾ ಕಾಗತಿರ್ನೋ ಭವಿಷ್ಯತಿ ॥ ೮ ॥**
**ಸುಧಾಪಾನಾದ್ವೃತೇಪ್ಯೇತೇ ಹಂತುಮಸ್ಮಾನಲಂ ಕ್ಷಮಾಃ ।**
**ಪೀತೇಽಮೃತೇ ತು ತೈರದ್ಯ ಕಿಂ ಕರಿಷ್ಯಾಮೋ ವಯಂ ಪ್ರಭೋ ॥ ೯ ॥**

**ಸ್ಕಂದ ಉವಾಚ:—**

**ನಿಶಮ್ಯ ದೈನ್ಯಂ ದೇವಾನಾಂ ಭಗವಾನ್ ಭಕ್ತಕಾರ್ಯಕೃತ್ ।**
**ಮಾ ಭೈಷ್ಟೇತಿ ಸುರಾನುಕ್ತ್ವಾ ಸುಧಾಮಾದಿತ್ಸುರಾದರಾತ್ ॥ ೧೦ ॥**
**ಸ್ತ್ರೀರೂಪಮದ್ಭುತಂ ಧೃತ್ವಾ ಸರ್ವಲೋಕವಿಮೋಹನಂ ।**
**ದೈತ್ಯಾಂತಿಕಮುಪಾಗತ್ಯ ಚಕ್ರೇ ಕಂದುಕಖೇಲನಂ ॥ ೧೧ ॥**

---

೬. 'ನಾನು ಮೊದಲು, ನಾನು ಮೊದಲು. ನೀನಲ್ಲ, ನೀನಲ್ಲ. ನಾನು ಕುಡಿಯುತ್ತೇನೆ'—ಎಂದು ವಿವಾದಮಾಡುವುದರಲ್ಲಿಯೆ ತೊಡಗಿ ಅವರು ಅದನ್ನು ಕುಡಿಯುವ ಅವಕಾಶವನ್ನೇ ಪಡೆಯಲಿಲ್ಲ.

೭. ಬಳಿಕ ದೇವತೆಗಳು, ದೈತ್ಯರು ಅಮೃತವನ್ನು ಅಪಹರಿಸಿದುದನ್ನು ಕಂಡು ಮುಖಗುಂದಿದವರಾಗಿ, ಪ್ರತೀಕಾರಮಾಡಲು ಅಶಕ್ತರಾಗಿ ಎಲ್ಲರೂ ಒಡನೆಯೆ ಅಚ್ಯುತನಲ್ಲಿಗೆ ಶರಣುಹೋದರು.

೮-೯. "ಜಗನ್ನಾಥಾ! ಕಾಪಾಡು, ಕಾಪಾಡು!! ನಮ್ಮ ಸರ್ವಸ್ವವೂ ನಾಶವಾಗಿಹೋಯಿತು. ಅಮೃತವನ್ನೆಲ್ಲ ದೈತ್ಯರು ತೆಗೆದುಕೊಂಡುಹೋದರು. ಮುಂದೆ ನಮಗೆ ಗತಿಯೇನು. ಅಮೃತಪಾನವಿಲ್ಲದಿದ್ದರೂ ನಮ್ಮನ್ನು ಕೊಲ್ಲಲು ಇವರು ಸಮರ್ಥರಾಗಿದ್ದಾರೆ. ಪ್ರಭುವೇ! ಈಗ ಅವರು ಅಮೃತವನ್ನು ಪಾನ ಮಾಡಿದರೆ ನಾವು ಮಾಡುವುದೇನು?"

೧೦. ಸ್ಕಂದನು ಹೇಳುತ್ತಾನೆ:— "ಭಕ್ತರ ಕಾರ್ಯವನ್ನು ನೆರವೇರಿಸುವವನಾದ ಆ ಭಗವಂತನು ದೇವತೆಗಳ ಈ ದೈನ್ಯವಾಕ್ಯವನ್ನು ಕೇಳಿ, "ಹೆದರಬೇಡಿ" ಎಂದು ಅವರಿಗೆ ಸಮಾಧಾನವನ್ನು ಹೇಳಿ, ಅಸುರರಿಂದ ಸುಧೆಯನ್ನು ಅವರಿಗೆ ಕೊಡಿಸಬಯಸಿದನು.

೧೧. ಆ ಸ್ವಾಮಿಯು ಸರ್ವಲೋಕವನ್ನೂ ಮೋಹಗೊಳಿಸುವಂಥ ಅದ್ಭುತವಾದ ಸ್ತ್ರೀರೂಪವನ್ನು ಧರಿಸಿ ದೈತ್ಯರ ಬಳಿಗೈದಿ ಚೆಂಡಾಟವನ್ನು ಆಡತೊಡಗಿ ವಿಲಾಸವನ್ನು ಮೆರೆದನು.

ತೇ ತು ತದ್ರೂಪಮಾಲೋಕ್ಯ ಮೋಹಿತಾಃ ಕಾಮವಿಹ್ವಲಾಃ ।
ತ್ಯಕ್ತ್ವಾ ಪರಸ್ಪರೋನ್ಮರ್ದಂ ತಾಮುಪೇತ್ಯಾಬ್ರುವನ್ವಚಃ ॥ ೧೨ ॥
ಸುಧಾಕುಂಭಮಿಮಂ ಭದ್ರೇ ಗೃಹೀತ್ವಾ ತ್ವಂ ವಿಭಜ್ಯ ನಃ ।
ಸರ್ವಾನ್ ಪಾಯಯ ಸುಶ್ರೋಣಿ ವಯಂ ಕಶ್ಯಪಸೂನವಃ ॥ ೧೩ ॥
ಇತ್ಯುಕ್ತ್ವಾ ತಂ ದದುಸ್ತಸ್ಯೈ ತೇಽನಿಚ್ಛಂತ್ಯಾ ಅಪಿ ಸ್ತ್ರಿಯೈ ।
ಸಾ ಪ್ರಾಹ ಮಮ ವಿಶ್ರಂಭೋ ನ ಕಾರ್ಯಃ ಸ್ವೈರಿಣೀ ಹ್ಯಹಂ ॥ ೧೪ ॥
ಅಕಾರ್ಯಂ ವಃ ಕೃತಂ ಹ್ಯೇತದ್ವಿಭಜಿಷ್ಯೇ ನಿಜೇಚ್ಛಯಾ ।
ಇತ್ಯುಕ್ತಾ ಅಪಿ ತೇ ಮೂಢಾ ಯಥೇಷ್ಟಂ ಕುರ್ವಿತಿ ಬ್ರುವನ್ ॥ ೧೫ ॥
ತತಸ್ತದಾಜ್ಞಯಾ ಸರ್ವೇ ದೇವಾ ದೈತ್ಯಾಶ್ಚ ವಾಸುಕಿಃ ।
ನಿಷೇದುಃ ಪಂಕ್ತಿಶಸ್ತತ್ರ ಸ್ವಸ್ವಮಂಡಲಮಾಶ್ರಿತಾಃ ॥ ೧೬ ॥
ಪಂಕ್ತಿಬಂಧೋದ್ಯತೇಷ್ವೇಷು ಮೋಹಿನೀ ಸಾ ತು ದೂರತಃ ।
ಸಮ್ಮುಖಂ ದೇವಪಂಕ್ತೀನಾಂ ಹೈಮಾಸನ ಉಪಾವಿಶತ್ ॥ ೧೭ ॥

---

೧೨. ಅಸುರರಾದರೊ ಆ ದಿವ್ಯರೂಪವನ್ನು ಕಂಡು ಮೋಹಿತರಾದರು. ಕಾಮದಿಂದ ಕಳವಳಗೊಂಡವರಾಗಿ ಪರಸ್ಪರವಾದ ತಮ್ಮ ಹೋರಾಟವನ್ನು ತೊರೆದು ಅವಳ ಬಳಿಗೆ ಹೋಗಿ ಅವರೆಲ್ಲರೂ ಅವಳನ್ನು ಕುರಿತು ಈ ಮಾತನ್ನು ಹೇಳಿದರು :—

೧೩. "ಎಲೆ ಭದ್ರೇ! ನೀನು ಈ ಅಮೃತಕುಂಭವನ್ನು ತೆಗೆದುಕೊಂಡು ನಮಗೆಲ್ಲರಿಗೂ ಅಮೃತವನ್ನು ಸಮವಾಗಿ ಹಂಚಿ ಪಾನಮಾಡಿಸು. ಎಲೆ ಸುಶ್ರೋಣಿ! ನಾವು ಕಶ್ಯಪಪುತ್ರರು."

೧೪. ಹೀಗೆ ನುಡಿದು ಅವರು ಇಚ್ಛೆಯಿಲ್ಲದಿದ್ದರೂ ಆ ದಿವ್ಯಸ್ತ್ರೀಗೆ ಅದನ್ನು ಕೊಟ್ಟರು. ಅವಳು ಹೀಗೆಂದಳು :—"ಅಯ್ಯಾ! ನನ್ನಲ್ಲಿ ನಂಬಿಕೆ ಯಿಡಬೇಡಿ. ನಾನು ಸ್ವೈರಿಣಿ; ನನ್ನ ಮನಸ್ಸುಬಂದಂತೆ ಮಾಡುವವಳು.

೧೫. ನೀವು ಈ ಕಳಶವನ್ನು ನನಗಿತ್ತು ಅಕಾರ್ಯವನ್ನು ಮಾಡಿದಿರಿ. ಇದನ್ನು ನನ್ನ ಮನಸ್ಸುಬಂದಂತೆಯೆ ಹಂಚುತ್ತೇನೆ."— ಅವಳು ಹೀಗೆ ಹೇಳಿದ ಳಾದರೂ ಆ ಮೂರ್ಖರು 'ನಿನ್ನಿಷ್ಟಬಂದಂತೆ ಮಾಡು' ಎಂದು ನುಡಿದರು.

೧೬. ಬಳಿಕ ಅವಳ ಆಜ್ಞೆಯಿಂದಲೇ ಸಮಸ್ತ ದೇವತೆಗಳೂ, ದೈತ್ಯರೂ, ವಾಸುಕಿಯೂ, ತಮ್ಮ ತಮ್ಮ ಮಂಡಲಗಳನ್ನಾಶ್ರಯಿಸಿ ಪಂಕ್ತಿಪಂಕ್ತಿಯಾಗಿ ಕುಳಿತುಕೊಂಡರು.

೧೭. ಅವರೆಲ್ಲರೂ ಪಂಕ್ತಿಪಂಕ್ತಿಯಾಗಿ ಕೂರತೊಡಗಿರುವ ಸಮಯದಲ್ಲಿ ಮೋಹಿನಿಯು ದೂರದಲ್ಲಿಯೆ ದೇವತೆಗಳ ಪಂಕ್ತಿಗಳಿಗೆ ಎದುರಾಗಿದ್ದ ಸ್ವರ್ಣ ಪೀಠದಲ್ಲಿ ಕುಳಿತುಕೊಂಡಳು.

ಸ್ವಾಂತಿಕೇ ಚಾಮೃತಘಟಂ ನಿಧಾಯ ಸ್ತ್ರೈಣಲೀಲಯಾ ।
ಇತಸ್ತತೋ ವೀಕ್ಷಮಾಣಾ ತಸ್ಥೌ ನಿಸ್ಪೃಹವತ್ ಕ್ಷಣಂ ॥ ೧೮ ॥
ವಿಪ್ರಚಿತ್ತಿಮುಖಾಸ್ತರ್ಹಿ ಯೇ ವೈ ದಾನವಯೂಥಪಾಃ ।
ಸಂದಿಗ್ಧಚಿತ್ತಾ ಮೋಹಿನ್ಯಾಮಾಸನ್ ದೇವಾಂತಿಕಸ್ಥಿತೇಃ ॥ ೧೯ ॥
ಶನೈರುಪೇತ್ಯ ತದ್ದೃಷ್ಟಿಂ ವಂಚಯಿತ್ವಾ ಸುಧಾಘಟಂ ।
ಜಹ್ರುಃ ಪುನರ್ದುರಾತ್ಮಾನೋ ರಹೋ ಗತ್ವಾ ಪಿಪಾಸವಃ ॥ ೨೦ ॥
ನರನಾರಾಯಣೌ ತತ್ರ ಮುನಿಭಿಃ ಸಹ ಚಾಗತೌ ।
ಅಸ್ತಾಂ ತೌ ದದೃಶಾತೇ ತಾನ್ ದಾನವಾನ್ ಹರತೋಽಮೃತಂ ॥ ೨೧ ॥
ನಾರಾಯಣೇನೇರಿತೋಽಥ ನರಸ್ತಾನ್ ಸಹಸಾರುಣಾತ್ ।
ಬಲಾದಾಚ್ಛಿದ್ಯ ತತ್ಕುಂಭಂ ಮೋಹಿನ್ಯೈ ಸ ದದೌ ದೃತಂ ॥ ೨೨ ॥
ತತೋ ನರಂ ಹಂತುಕಾಮಾ ಆತ್ತಶಸ್ತ್ರಾಸ್ತು ದಾನವಾಃ ।
ಅಪತನ್ ಪಂಕ್ತಿವಿಕ್ಷೇಪೋ ಹ್ಯಸುರಾಣಾಮಭೂನ್ಮಹಾನ್ ॥ ೨೩ ॥

---

೧೮. ಆಕೆಯು ತನ್ನ ಬಳಿಯಲ್ಲಿ ಅಮೃತಘಟವನ್ನಿಟ್ಟುಕೊಂಡು ಸ್ತ್ರೀಸಹಜವಾದ ಲೀಲೆಯಿಂದ ಇತ್ತಕಡೆ ಅತ್ತಕಡೆ ನೋಡುತ್ತ ನಿಃಸ್ಪೃಹಳಂತೆ ಒಂದು ಕ್ಷಣ ಸುಮ್ಮನಿದ್ದಳು.

೧೯. ಆಗ ವಿಪ್ರಚಿತ್ತಿಯೇ ಮೊದಲಾದ ದಾನವ ಸೇನಾಪತಿಗಳು ಮೋಹಿನಿಯು ದೇವತೆಗಳ ಸಮೀಪದಲ್ಲಿ ಕುಳಿತುದರಿಂದ ಅವಳಲ್ಲಿ ಸಂದೇಹಚಿತ್ತವುಳ್ಳವರಾದರು.

೨೦. ಅವರು ಮೆಲ್ಲಮೆಲ್ಲನೆ ಹತ್ತಿರಹೋಗಿ ಅವಳ ದೃಷ್ಟಿಯನ್ನು ವಂಚಿಸಿ ಅಮೃತಘಟವನ್ನು ಪುನಃ ಕಸಿದುಕೊಂಡುಹೋದರು. ಆ ದುರಾತ್ಮರು ಅದನ್ನು ತೆಗೆದುಕೊಂಡುಹೋಗಿ ಅಮೃತವನ್ನು ಗುಟ್ಟಾಗಿಯೇ ಕುಡಿಯಬೇಕೆಂದಿದ್ದರು.

೨೧. ಮುನಿಗಳೊಡನೆ ಅಲ್ಲಿಗೆ ಬಂದಿದ್ದ ನರನಾರಾಯಣರು ಆ ದಾನವರು ಅಮೃತವನ್ನು ಹರಣಮಾಡುತ್ತಿರುವುದನ್ನು ಕಂಡರು.

೨೨. ನಾರಾಯಣನಿಂದ ಪ್ರೇರಿಸಲ್ಪಟ್ಟವನಾಗಿ ನರನು ತಟ್ಟನೆ ಅವರ ಮೇಲೆರಗಿ ಬಲಪ್ರಯೋಗದಿಂದ ಆ ಕುಂಭವನ್ನು ಕಿತ್ತುಕೊಂಡು ಜಾಗ್ರತೆಯಾಗಿಯೆ ಮೋಹಿನಿಗೆ ಕೊಟ್ಟನು.

೨೩. ಬಳಿಕ ನರನನ್ನು ಹೊಡೆಯಬೇಕೆಂದು ದಾನವರು ಶಸ್ತ್ರಗಳನ್ನು ಧರಿಸಿ ಅವನಮೇಲೆ ಬಿದ್ದರು. ಆಗ ಅಸುರರಲ್ಲಿ ಬಹಳವಾಗಿ ಪಂಕ್ತಿಪಲ್ಲಟವಾಯಿತು.

ತದಾ ನರೋಽಪಿ ಭಗವಾನ್ ದೇವದೈತ್ಯನರೈರಪಿ ।
ಅಜೇಯೋ ನಿರ್ಭಯೋ ಹ್ಯೇಕಃ ಸಾಕಂ ತೈರ್ಯುಯುಧೇ ಬಲೀ ॥
ಏತಸ್ಮಿನ್ನಂತರೇ ದೇವಾನ್ ಪಂಕ್ತಿಸ್ಥಾನ್ ಮೋಹಿನೀವಪುಃ ।
ಅಪಾಯಯತ್ ಸುಧಾಂ ವಿಷ್ಣುಃ ಸರ್ವಶೋ ಲಘುಚಂಕ್ರಮಃ ॥ ೨೫ ॥
ತತ್ರಾಪಿ ದಾನವೋ ರಾಹುಃ ಸೂರ್ಯಾಚಂದ್ರಮಸಾಂತರೇ ।
ಪ್ರವಿಶ್ಯ ದೇವತಾ ಪಂಕ್ತಾವುಪಾವಿಶದಲಕ್ಷಿತಃ ॥ ೨೬ ॥
ತತ್ರಾಗತಾಯಾಂ ಮೋಹಿನ್ಯಾಂ ಸಿಂಚಂತ್ಯಾಂ ತನ್ಮುಖೇ ಸುಧಾಂ ।
ದೃಶಾಽಸೂಸುಚತಾಂ ತಸ್ಯೈ ಪುಷ್ಪವಂತಾವುಭೌ ಚ ತಂ ॥ ೨೭ ॥
ಸ್ಮೃತ್ಯಾಗತೇನ ಚಕ್ರೇಣ ತರ್ಹ್ಯೇವಾಸ್ಯ ಚ ಸಾಮೃತಂ ।
ಶಿರಶ್ಚಿಚ್ಛೇದಾತಿಮಹನ್ಮಾಯಾಯೋಷಿದ್ವಪುಃ ಪ್ರಭುಃ ॥ ೨೮ ॥
ತಚ್ಛೈಲಶೃಂಗ ಪ್ರತಿಮಂ ಗ್ರಸಲ್ಲೋಕಾನ್ನದದ್ಭೃಶಂ ।
ಗ್ರಹತ್ವೇ ಸ್ಥಾಪಯಾಮಾಸ ಲೋಕಾನಾಂ ಶಾಂತಯೇ ಹರಿಃ ॥ ೨೯ ॥
ದೇವಾನ್ ಸುಧಾಂ ಪಾಯಯಿತ್ವಾ ಜಗೃಹೇ ಪೌರುಷೀಂ ತನುಂ ।
ಭಗವಾನಥ ದೇವಾಸ್ತು ಯುಯುಧುಃ ಸಹ ದಾನವೈಃ ॥ ೩೦ ॥

---

೨೪. ಆಗ ದೇವದೈತ್ಯನರರೆಲ್ಲರಿಂದಲೂ ಅಜೇಯನೂ, ಮಹಾಬಲನೂ, ಷಡ್ಗುಣೈಶ್ವರ್ಯವಂತನೂ ಆದ ನರನು ತಾನೊಬ್ಬನೆ ನಿರ್ಭಯವಾಗಿ ನಿಂತು ಅವರೊಡನೆ ಯುದ್ಧಮಾಡಿದನು.

೨೫. ಈ ಮಧ್ಯದಲ್ಲಿ ಪಂಕ್ತಿಗಳಲ್ಲಿ ಚಲಿಸದೆ ಕುಳಿತಿದ್ದ ದೇವತೆಗಳಿಗೆ ಮೋಹಿನೀಶರೀರಧಾರಿಯಾದ ವಿಷ್ಣುವು ಎಲ್ಲ ಕಡೆಯಲ್ಲಿಯೂ ಲಘುವಾಗಿ ಸುತ್ತಾಡುತ್ತ ಅಮೃತಪಾನ ಮಾಡಿಸಿದನು.

೨೬. ಅಲ್ಲಿಯೂ ದಾನವನಾದ ರಾಹುವು ಸೂರ್ಯಚಂದ್ರರ ನಡುವೆ ನುಸುಳಿಬಂದು ಯಾರ ಲಕ್ಷ್ಯಕ್ಕೂ ಬೀಳದೆ ದೇವತೆಗಳ ಪಂಕ್ತಿಯಲ್ಲಿ ಕುಳಿತನು.

೨೭. ಮೋಹಿನಿಯು ಅಲ್ಲಿಗೆ ಬಂದು ಅವನಿಗೂ ಅಮೃತವನ್ನೆರೆಯುತ್ತಿರಲು ಪುಷ್ಪಗಳನ್ನು ಕೈಯಲ್ಲಿ ತಳೆದಿದ್ದ ಸೂರ್ಯಚಂದ್ರರಿಬ್ಬರೂ ಸನ್ನೆಯಿಂದಲೇ ಅವನನ್ನು ಮೋಹಿನಿಗೆ ಅವನು ಅಸುರನೆಂಬ ಸಂಗತಿಯನ್ನು ಸೂಚಿಸಿದರು.

೨೮. ಆಗ ಮಹಾವಿಷ್ಣುವು ನೆನೆದಮಾತ್ರಕ್ಕೆ ಒದಗಿಬಂದ ಚಕ್ರದಿಂದ ಅಮೃತಸಮೇತವಾದ ಅವನ ತಲೆಯನ್ನು ತಕ್ಷಣವೇ ಕತ್ತರಿಸಿ ಕೆಡವಿದನು.

೨೯. ಆ ಶ್ರೀಹರಿಯು ಪರ್ವತಶಿಖರಕ್ಕೆ ಸಮಾನವಾಗಿ ಲೋಕಗಳನ್ನೇ ನುಂಗುವಂತೆ ಬಹಳವಾಗಿ ಧ್ವನಿಮಾಡುತ್ತಿದ್ದ ಆ ತಲೆಯನ್ನು ಲೋಕಗಳ ಶಾಂತಿಗಾಗಿ ಗಗನದಲ್ಲಿ ಗ್ರಹವಾಗಿ ನೆಲೆಗೊಳಿಸಿದನು.

೩೦. ಹೀಗೆ ದೇವತೆಗಳಿಗೆ ಅಮೃತಪಾನಮಾಡಿಸಿದ ತರುವಾಯ

ಉದನ್ವತಸ್ತಟೇ ಯುದ್ಧಂ ದೇವಾನಾಮಸುರೈಃ ಸಹ ।
ಸುಧಾಪಾನಾತಿಬಲಿನಾಮಾಸೀದ್ವಿಷ್ಣುಸಹಾಯಿನಾಂ ॥ ೩೧ ॥
ತಸ್ಮಿಂಸ್ತು ತುಮುಲೇ ಯುದ್ಧೇ ನರೇಣೇಂದ್ರಾದಿಭಿಶ್ಚ ತೇ ।
ನಿಹನ್ಯಮಾನಾ ಅಸುರಾಃ ಪಲಾಯ್ಯ ವಿವಿಶೂ ರಸಾಂ ॥ ೩೨ ॥
ಸೂರ್ಯಶ್ಚಾಸ್ತಂ ಗತಸ್ತಾವತ್ ಸರ್ವೇ ದೇವಗಣಾಸ್ತತಃ ।
ಶ್ರಿಯೋಽಂತಿಕಮುಪಾಜಗ್ಮುಸ್ತದ್ದರ್ಶನ ಮಹೋತ್ಸವಾಃ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ದೇವತಾಮೃತಪಾನ ವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

ಆ ಭಗವಂತನು ಪುರುಷಶರೀರವನ್ನು ಸ್ವೀಕರಿದನು. ಆ ಬಳಿಕ ದೇವತೆಗಳು ದಾನವರೊಡನೆ ಯುದ್ಧಮಾಡಿದರು.

೩೧. ಅಮೃತಪಾನದಿಂದ ಅತಿಬಲರೂ, ಮಹಾವಿಷ್ಣುವಿನ ಸಹಾಯವುಳ್ಳವರೂ ಆದ ದೇವತೆಗಳಿಗೆ ಅಸುರರೊಡನೆ ಸಮುದ್ರತೀರದಲ್ಲಿ ಮಹಾ ಯುದ್ಧವು ನಡೆಯಿತು.

೩೨. ಆ ತುಮುಲಯುದ್ಧದಲ್ಲಿ ನರನಿಂದಲೂ, ಇಂದ್ರಾದಿಗಳಿಂದಲೂ ಹೊಡೆದು ಕೊಲ್ಲಲ್ಪಡುವವರಾಗಿ ಅಸುರರು ಪಲಾಯನಮಾಡಿಹೋಗಿ ರಸಾತಲ ವನ್ನು ಹೊಕ್ಕರು.

೩೩. ಅಷ್ಟರಲ್ಲಿ ಸೂರ್ಯನೂ ಅಸ್ತಮಿಸಿದನು. ಬಳಿಕ ಸಮಸ್ತ ದೇವ ಗಣಗಳೂ ಶ್ರೀದೇವಿಯ ಸಂದರ್ಶನದಲ್ಲಿ ಬಹು ಉತ್ಸುಕರಾಗಿ ಅವಳ ಸಮೀಪಕ್ಕೆ ಬಂದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ದೇವತೆಗಳ ಅಮೃತಪಾನವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಶ್ರೀಲಕ್ಷ್ಮೀನಾರಾಯಣ ವಿವಾಹೋತ್ಸವವರ್ಣನಂ

ಸ್ಕಂದ ಉವಾಚ :—

ಬ್ರಹ್ಮಾ ಪ್ರಜೇಶ್ವರಾಃ ಶಂಭುರ್ಮನವಶ್ಚ ಮಹರ್ಷಯಃ ।
ಆದಿತ್ಯವಸುರುದ್ರಾಶ್ಚ ಸಿದ್ಧಗಂಧರ್ವಚಾರಣಾಃ ॥ ೧ ॥
ಸಾಧ್ಯಾಶ್ಚ ಮರುತಶ್ಚೈವ ವಿಶ್ವೇದೇವಾ ದಿಗೀಶ್ವರಾಃ ।
ದಸ್ರೌ ವಹ್ನಿಶ್ಚಂದ್ರಮಾಶ್ಚ ಸ್ವಯಂ ಧರ್ಮಃ ಪ್ರಜಾಪತಿಃ ॥ ೨ ॥
ಸುಪರ್ಣಃ ಕಿನ್ನರಾಶ್ಚೈವ ಯೇ ಚಾನ್ಯೇ ಗಣದೇವತಾಃ ।
ಶೇಷಾದ್ಯಾ ವೈಷ್ಣವಾ ನಾಗಾ ದೇವಪತ್ನ್ಯಶ್ಚ ಸರ್ವಶಃ ॥ ೩ ॥
ಸಾವಿತ್ರೀ ಪಾರ್ವತೀ ಚೈವ ಪೃಥಿವೀ ಚ ಸರಸ್ವತೀ ।
ಶಚೀ ಗೌರೀ ಶಿವಾ ಸಂಜ್ಞಾ ಋದ್ಧಿಃ ಸ್ವಾಹಾ ಚ ರೋಹಿಣೀ ।
ಧೂಮೋರ್ಣಾ ಚಾದಿತಿರ್ಧರ್ಮಪತ್ನ್ಯೋ ಮೂರ್ತಿದಯಾದಯಃ ॥ ೪ ॥
ಅರುಂಧತೀ ಶಾಂಡಿಲೀ ಚ ಲೋಪಮುದ್ರಾ ತಥೈವ ಚ ।
ಅನಸೂಯಾದಯಃ ಸಾಧ್ವ್ಯಃ ಋಷಿಪತ್ನ್ಯಶ್ಚ ಸರ್ವಶಃ ॥ ೫ ॥
ಗಂಗಾ ಸರಸ್ವತೀ ರೇವಾ ಯಮುನಾ ತಪತೀ ತಥಾ ।
ಚಂದ್ರಭಾಗಾ ವಿಪಾಶಾ ಚ ಶತದ್ರುರ್ದೇವಿಕಾ ತಥಾ ॥ ೬ ॥

---

## ಕನ್ನಡದ ಅನುವಾದ

### ಶ್ರೀಲಕ್ಷ್ಮೀನಾರಾಯಣವಿವಾಹೋತ್ಸವವರ್ಣನ

೧–೮. ಸ್ಕಂದನು ಹೇಳುತ್ತಾನೆ:—ಬ್ರಹ್ಮನೂ, ಪ್ರಜಾಪತಿಗಳೂ, ಶಂಭುವೂ, ಮನುಗಳೂ, ಮಹರ್ಷಿಗಳೂ, ಆದಿತ್ಯರೂ, ವಸುಗಳೂ, ರುದ್ರರೂ, ಸಿದ್ಧರೂ, ಗಂಧರ್ವರೂ, ಚಾರಣರೂ, ಸಾಧ್ಯರೂ, ಮರುತರೂ, ವಿಶ್ವೇದೇವತೆಗಳೂ, ದಿಕ್ಪಾಲಕರೂ, ಅಶ್ವಿನೀದೇವತೆಗಳೂ, ಅಗ್ನಿ, ಚಂದ್ರ, ಪ್ರಜಾಪತಿಯಾದ ಸ್ವಯಂಧರ್ಮ (ಯಮ), ಗರುಡ, ಕಿನ್ನರರು, ಉಳಿದ ಎಲ್ಲ ಗಣದೇವತೆಗಳು, ಶೇಷನೇ ಮೊದಲಾದ ವೈಷ್ಣವರು, ನಾಗರು, ಎಲ್ಲ ದೇವಪತ್ನಿಯರು, ಸಾವಿತ್ರಿ, ಪಾರ್ವತಿ, ಪೃಥಿವಿ, ಸರಸ್ವತಿ, ಶಚಿ, ಗೌರಿ, ಶಿವೆ, ಸಂಜ್ಞೆ, ಋದ್ಧಿ, ಸ್ವಾಹಾ, ರೋಹಿಣಿ, ಧೂಮೋರ್ಣಾ, ಅದಿತಿ, ಧರ್ಮ(ನ) ಪತ್ನಿಯರು, ಮೂರ್ತಿ, ದಯೆ, ಮೊದಲಾದವರು, ಅರುಂಧತಿ, ಶಾಂಡಿಲಿ, ಲೋಪಾಮುದ್ರೆ, ಅನಸೂಯೆ ಮೊದಲಾದ ಸಾಧ್ವಿಯರಾದ ಸಮಸ್ತ ಋಷಿಪತ್ನಿಯರು; ಗಂಗೆ, ಸರಸ್ವತಿ, ರೇವಾ, ಯಮುನೆ, ತಪತಿ, ಚಂದ್ರಭಾಗಾ, ವಿಪಾಶಾ, ಶತದ್ರು, ದೇವಿಕಾ,

ಗೋದಾವರೀ ಚ ಸರಯೂಃ ಕಾವೇರೀ ಕೌಶಿಕೀ ತಥಾ ।
ಕೃಷ್ಣಾ ವೇಣೀ ಭೀಮರಥೀ ತಾಮ್ರಪರ್ಣೀ ಮಹಾನದೀ ॥ ೭ ॥
ಕೃತಮಾಲಾ ವಿತಸ್ತಾ ಚ ನಿರ್ವಿಂಧ್ಯಾ ಸುರಸಾ ತಥಾ ।
ಚರ್ಮಣ್ವತೀ ಪಯೋಷ್ಣೀ ಚ ವಿಶ್ವಾದ್ಯಾ ನಾದ್ಯ ಆಯಯುಃ ॥ ೮ ॥
ರಂಭಾ ಘೃತಾಚೀ ವಿಶ್ವಾಚೀ ಮೇನಕಾ ಚ ತಿಲೋತ್ತಮಾ ।
ಊರ್ವಶೀ ಪ್ರಮುಖಾಸ್ತತ್ರ ಸರ್ವಾಃಪ್ಸರಸ ಆಯಯುಃ ॥ ೯ ॥
ವೈಕುಂಠವಾಸಿನಃ ಸರ್ವೇ ತಥಾ ಗೋಲೋಕವಾಸಿನಃ ।
ಪಾರ್ಷದಪ್ರವರಾ ವಿಷ್ಣೋಸ್ತತ್ರಾಜಗ್ಮುಃ ಪ್ರಹರ್ಷಿತಾಃ ॥ ೧೦ ॥
ಅಣಿಮಾದ್ಯಾಃ ಸಿದ್ಧಯೋಽಷ್ಟೌ ಶಂಖಪದ್ಮಾದಯೋ ನವ ।
ನಿಧಯೋ ಮೂರ್ತಿಮಂತಶ್ಚ ಸಮಾಜಗ್ಮುಃ ಶ್ರಿಯೋಂತಿಕಂ ॥ ೧೧ ॥
ಪೂರ್ಣಃ ಶಾರದಚಂದ್ರೋಽಪಿ ತದಾನೀಂ ಪ್ರೀತಯೇ ಶ್ರಿಯಾಃ ।
ನೈಶಂ ತಮೋಽಹರತ್ಸರ್ವಂ ಬಭೂವುರ್ನಿರ್ಮಲಾದಿಶಃ ॥ ೧೨ ॥
ತತೋಽಭಿಷೇಕಮಾರೇಭೇ ತಸ್ಯಾ ಬ್ರಹ್ಮಾಜ್ಞಯಾ ವೃಷಾ ।
ಮಂಡಪಂ ರಚಯಾಮಾಸ ಸದ್ಯಸ್ತ್ವಷ್ಟಾತಿಶೋಭನಂ ॥ ೧೩ ॥

---

ಗೋದಾವರಿ, ಸರಯು, ಕಾವೇರಿ, ಕೌಶಿಕಿ, ಕೃಷ್ಣಾ, ವೇಣೀ, ಭೀಮರಥಿ, ತಾಮ್ರಪರ್ಣಿ, ಮಹಾನದಿ, ಕೃತಮಾಲೆ, ವಿತಸ್ತಾ, ನಿರ್ವಿಂಧ್ಯೆ, ಸುರಸೆ, ಚರ್ಮಣ್ವತಿ, ಪಯೋಷ್ಣಿ, ವಿಶ್ವೆ ಮೊದಲಾದ ನದೀ ದೇವತೆಗಳು ಎಲ್ಲರೂ ಆ ಶ್ರೀದೇವಿಯ ದರ್ಶನಕ್ಕಾಗಿ ಬಂದರು.

೯. ರಂಭೆ, ಘೃತಾಚಿ, ವಿಶ್ವಾಚಿ, ಮೇನಕೆ, ತಿಲೋತ್ತಮೆ, ಉರ್ವಶೀ, ಮೊದಲಾದ ಎಲ್ಲ ಅಪ್ಸರೆಯರೂ ಬಂದರು.

೧೦. ವೈಕುಂಠವಾಸಿಗಳೂ, ಗೋಲೋಕವಾಸಿಗಳೂ, ವಿಷ್ಣುವಿನ ಪಾರ್ಷದ ಶ್ರೇಷ್ಠರೂ ಎಲ್ಲರೂ ಅತಿ ಹರ್ಷಿತರಾಗಿ ಅಲ್ಲಿಗೈತಂದರು.

೧೧. ಅಣಿಮಾದಿ ಅಷ್ಟಸಿದ್ಧಿಗಳೂ, ಶಂಖ, ಪದ್ಮ ಮೊದಲಾದ ನವನಿಧಿಗಳೂ ಮೂರ್ತಿಮಂತಗಳಾಗಿ ಶ್ರೀದೇವಿಯ ಬಳಿಗೈತಂದರು.

೧೨. ಶರತ್ಕಾಲದ ಪೂರ್ಣಚಂದ್ರನೂ ಕೂಡ ಆಗ ಶ್ರೀದೇವಿಯ ಪ್ರೀತಿಗೋಸ್ಕರ ರಾತ್ರಿಯ ಕತ್ತಲೆಯನ್ನೆಲ್ಲ ಪರಿಹರಿಸಿದನು. ದಿಕ್ಕುಗಳೆಲ್ಲವೂ ನಿರ್ಮಲವಾದುವು.

೧೩. ಬಳಿಕ ಬ್ರಹ್ಮನ ಅಪ್ಪಣೆಯ ಪ್ರಕಾರವಾಗಿ ಇಂದ್ರನು ಆ ಶ್ರೀದೇವಿಗೆ ಅಭಿಷೇಕಮಾಡಲು ಆರಂಭಿಸಿದನು. ದೇವಶಿಲ್ಪಿಯಾದ ತ್ವಷ್ಟೃವು ತಕ್ಷಣವೇ ಅತಿ ಶೋಭನವಾದ ಮಂಟಪವನ್ನು ರಚಿಸಿದನು.

ರತ್ನಸ್ತಂಭಸಹಸ್ರಾಣಾಮಯುತಾಭಿಶ್ಚ ಪಂಕ್ತಿಭಿಃ ।
ಚಿತ್ರೈರನೇಕೈರುಲ್ಲೋಚೈಃ ಶೋಭಿತಂ ಕದಲೀದ್ರುಮೈಃ ॥ ೧೪ ॥
ಸುಗಂಧಿಪುಷ್ಪನಮ್ರಾಭಿಃ ದಿವ್ಯಕಲ್ಪದ್ರುಮಾಲಿಭಿಃ ।
ಜುಷ್ಟಂ ನಾನಾವಿಧೈರಂಗೈರ್ದರ್ಶನೀಯಂ ಮನೋಹರಂ ॥ ೧೫ ॥
ಕೋಟಿಶೋ ರತ್ನದೀಪಾನಾಂ ಪಂಕ್ತಿಭಿಃ ಶುದ್ಧರೋಚಿಷಾಂ ।
ಭ್ರಾಜಮಾನಂ ತೋರಣೈಶ್ಚ ಮುಕ್ತಾಹಾರೈಶ್ಚ ಲಂಬಿಭಿಃ ॥ ೧೬ ॥
ರತ್ನಸಿಂಹಾಸನೇ ತತ್ರ ಗೀತವಾದ್ಯಪುರಸ್ಸರಂ ।
ಉಪಾವೇಶ್ಯ ಶ್ರಿಯಂ ಚಕ್ರುರಭಿಷೇಕಂ ಮಹರ್ಷಯಃ ॥ ೧೭ ॥
ಐರಾವತಃ ಪುಂಡರೀಕೋ ವಾಮನಃ ಕುಮುದೋಽಂಜನಃ ।
ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕಶ್ಚ ದಿಗ್ಗಜಾಃ ॥ ೧೮ ॥
ಕುರ್ವಂತೋ ಬೃಂಹಿತಾನ್ಯೇತೇ ಹೇಮಕುಂಭೋದ್ಧೃತೈಃ ಶುಭೈಃ ।
ಚತುಃಸಿಂಧುಸಮಾನೀತೈರಭ್ಯಷಿಂಚಂತ ವಾರಿಭಿಃ ॥ ೧೯ ॥
ಮೂರ್ತಿಮತ್ಯೋ ಮಹಾನದ್ಯಸ್ತತ್ರಾಜಹ್ರುರ್ಜಲಾನಿ ಚ ।
ಮಂತ್ರಾನುಚ್ಚಾರಯಂತಿ ಸ್ಮ ಮೂರ್ತಾ ವೇದಾಃ ಸಹರ್ಷಿಭಿಃ ॥ ೨೦ ॥

---

೧೪–೧೫. ಆ ಮಂಟಪವು ಸಹಸ್ರ ರತ್ನಸ್ತಂಭಗಳ ಬಹು ವಿಸ್ತಾರವಾದ ಪಂಕ್ತಿಗಳಿಂದಲೂ, ವಿಚಿತ್ರವಾದ ಅನೇಕ ಮೇಲ್ಕಟ್ಟುಗಳಿಂದಲೂ, ಬಾಳೆಯ ಕಂಬಗಳಿಂದಲೂ ಮನೋಹರವಾಗಿದ್ದಿತು. ಸುಗಂಧವನ್ನು ಬೀರುವ ಪುಷ್ಪಗಳಿಂದ ಬಾಗಿದ ದಿವ್ಯಕಲ್ಪವೃಕ್ಷಗಳ ಸಾಲುಗಳಿಂದ ಕೂಡಿ ನಾನಾವಿಧಗಳಾದ ಶೃಂಗಾರಗಳಿಂದ ದರ್ಶನೀಯವಾಗಿದ್ದಿತು.

೧೬. ಶುದ್ಧವಾದ ಕಾಂತಿಯನ್ನು ಬೀರುವ ಕೋಟ್ಯಂತರ ರತ್ನದೀಪಗಳ ಪ್ರಕಾಶವಾದ ಪಂಕ್ತಿಗಳಿಂದಲೂ, ತೋರಣಗಳಿಂದಲೂ, ಜೋಲುತ್ತಿದ್ದ ಮುತ್ತಿನ ಸರಗಳಿಂದಲೂ ಹೊಳೆಯುತ್ತಿದ್ದಿತು.

೧೭. ಇಂತು ಪ್ರಕಾಶಿಸುತ್ತಿದ್ದ ಆ ದಿವ್ಯಮಂಟಪದ ರತ್ನಸಿಂಹಾಸನದಲ್ಲಿ ಗೀತವಾದ್ಯಪುರಸ್ಸರವಾಗಿ ಆ ಶ್ರೀದೇವಿಯನ್ನು ಕುಳ್ಳಿರಿಸಿ ಮಹರ್ಷಿಗಳು ಅವಳಿಗೆ ಅಭಿಷೇಕ ಮಾಡಿದರು.

೧೮–೨೦. ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಅಷ್ಟದಿಗ್ಗಜಗಳೂ ಬೃಂಹಿತಧ್ವನಿಯನ್ನು ಮಾಡುತ್ತ ಚತುಸ್ಸಮುದ್ರಗಳಿಂದಲೂ ಚಿನ್ನದ ಕಳಶಗಳಲ್ಲಿ ತುಂಬಿ ತಂದಿದ್ದ ಶುಭಕರವಾದ ಜಲದಿಂದ ಆ ದೇವಿಗೆ ಅಭಿಷೇಕ ಮಾಡಿದವು. ಮಹಾನದಿಗಳು ಮೂರ್ತಿಮಂತವಾಗಿ ಬಂದು ಅಲ್ಲಿಗೆ ಜಲಗಳನ್ನು ತಂದಿತ್ತುವು. ವೇದಗಳು ರೂಪವನ್ನು ತಾಳಿ ಬಂದು ಋಷಿಗಳೊಡನೆ ಮಂತ್ರಗಳನ್ನುಚ್ಚರಿಸಿದವು.

ಜಗುಃ ಸುಕಂಠಾ ಗಂಧರ್ವಾ ನನೃತುಶ್ಚಾಪ್ಸರೋಗಣಾಃ ।
ವಾದ್ಯಾನಿ ವಾದಯಾಮಾಸುರನ್ಯೇ ದೇವಗಣಾಸ್ತದಾ ॥ ೨೧ ॥
ಮಹಾನಭೂತ್ತದಾನಂದಸ್ತ್ರಿಲೋಕ್ಯಾಂ ಸರ್ವದೇಹಿನಾಂ ।
ಶ್ರೀಸೂಕ್ತಾದಿ ದ್ವಿಜಾಃ ಪೇಠುರ್ಜಗುರ್ಗೀತಾನಿ ಚ ಸ್ತ್ರಿಯಃ ॥ ೨೨ ॥
ಕಾಂಸ್ಯತಾಲಮೃದಂಗಾಂಶ್ಚ ಪಣವಾನಕಗೋಮುಖಾನ್ ।
ವಾದಯಾಮಾಸುರಂಭೋದಾ ದಿವಿ ದುಂದುಭಯೋಽನದನ್ ॥ ೨೩ ॥
ಆಸೀತ್ಕುಸುಮವೃಷ್ಟಿಶ್ಚ ಸಾಕಂ ಜಯರವೈಸ್ತದಾ ।
ಆಸಂಸ್ತತ್ಪರಿಚರ್ಯಾಯಾಂ ಧರ್ಮಪತ್ನ್ಯಶ್ಚ ಸಿದ್ಧಯಃ ॥ ೨೪ ॥
ಸುಸ್ನಾತಾಯೈ ತತಸ್ತಸ್ಯೈ ಕೌಶೇಯೇಪೀತವಾಸಸೀ ।
ದದಾವನರ್ಘ್ಯೇ ಜಲಧೀ ರತ್ನಭೂಷಾಶ್ಚ ಭೂರಿಶಃ ॥ ೨೫ ॥
ಉಪವೇಶೋಚಿತಂ ತಸ್ಯಾ ಇಂದ್ರ ಆಸನಮಾಹರತ್ ।
ವಿಶ್ವಕರ್ಮಾ ಕಂಕಣಾನಿ ದದೌ ಸದ್ರತ್ನಮುದ್ರಿಕಾಃ ॥ ೨೬ ॥
ಸುಧಾಕರಸ್ತು ತದ್ಭ್ರಾತಾ ನಾಸಾಭೂಷಣಮುತ್ತಮಂ ।
ದದೌ ತಸ್ಯೈ ಕೇಶಭೂಷಾಂ ಸದ್ರತ್ನನಿಚಿತಾಂ ತಥಾ ॥ ೨೭ ॥

---

೨೧. ಮಧುರಕಂಠದ ಗಂಧರ್ವರು ಗಾನಮಾಡಿದರು. ಅಪ್ಸರೆಯರು ನರ್ತನಮಾಡಿದರು. ಇತರ ದೇವತಾಗಣಗಳು ವಾದ್ಯಗಳನ್ನು ಬಾಜಿಸಿದರು.

೨೨. ಆಗ ಮೂರು ಲೋಕದಲ್ಲಿಯೂ ಸರ್ವದೇಹಿಗಳಿಗೂ ಮಹದಾನಂದ ವುಂಟಾಯಿತು. ದ್ವಿಜರು ಶ್ರೀಸೂಕ್ತಾದಿಗಳನ್ನು ಪಠಿಸಿದರು. ಸ್ತ್ರೀಯರು ಗೀತಗಳನ್ನು ಹಾಡಿದರು.

೨೩. ಕಾಂಸ್ಯ, ತಾಳ, ಮೃದಂಗ, ಪಣವ, ಆನಕ, ಗೋಮುಖ, ಮುಂತಾದ ವಾದ್ಯಗಳನ್ನು ಬಾಜಿಸಿದರು. ಮೋಡಗಳು ಮೊಳಗಿದವು. ದೇವಲೋಕದಲ್ಲಿ ದುಂದುಭಿಗಳು ಧ್ವನಿಮಾಡಿದವು.

೨೪. ಜಯ ಜಯ ಶಬ್ದಗಳಿಂದೊಡಗೂಡಿದ ಪುಷ್ಪವೃಷ್ಟಿಯಾಯಿತು. ಧರ್ಮಪತ್ನಿಯರೂ, ಸಿದ್ಧಿಗಳೂ ಆ ಶ್ರೀದೇವಿಯ ಪರಿಚರ್ಯೆಯಲ್ಲಿ ತೊಡಗಿದರು.

೨೫. ಬಳಿಕ ಮಂಗಳಸ್ನಾನವನ್ನು ಮಾಡಿದ ಆಕೆಗೆ ಸಮುದ್ರನು ಅನರ್ಘ್ಯ ವಾದ ಎರಡು ರೇಷ್ಮೆಯ ಪೀತಾಂಬರಗಳನ್ನೂ, ಅನೇಕ ರತ್ನಭೂಷಣಗಳನ್ನೂ ಮೆಚ್ಚುಕೊಟ್ಟನು.

೨೬. ಇಂದ್ರನು ರತ್ನಪೀಠವನ್ನು ತಂದೊಪ್ಪಿಸಿದನು. ವಿಶ್ವಕರ್ಮನು ಕಂಕಣಗಳನ್ನೂ, ಉತ್ತಮ ರತ್ನಮುದ್ರಿಕೆಗಳನ್ನೂ ತಂದುಕೊಟ್ಟನು.

೨೭. ಶ್ರೀದೇವಿಯ ಸೋದರನಾದ ಚಂದ್ರನು ಉತ್ತಮವಾದ ಮೂಗುತಿ ಯನ್ನೂ, ಒಳ್ಳೆಯ ರತ್ನಗಳು ಕೆತ್ತಿದ ಸೊಗಸಾದ ಚೂಡಾಮಣಿಯನ್ನೂ ಆಕೆಗೆ ಕೊಟ್ಟನು.

ಪದ್ಮಜನ್ಮಾ ದದೌ ಪದ್ಮಂ ಮುಕ್ತಾಹಾರಂ ಸರಸ್ವತೀ ।
ನಾಗಾಶ್ಚ ಶೇಷಪ್ರಮುಖಾಸ್ತಸ್ಯೈ ರತ್ನೇಂದ್ರಕುಂಡಲೇ ॥ ೨೮ ॥
ಅಂಜನಂ ಕುಂಕುಮಂ ಚಾದಾದ್ದುರ್ಗಾ ಸೌಭಾಗ್ಯಲಕ್ಷಣಂ ।
ಲಲಾಟಿಕಾಂ ಚ ಸಾವಿತ್ರೀ ಶಚೀ ತಾಂಬೂಲಪಾತ್ರಿಕಾಂ ॥ ೨೯ ॥
ವಸಂತಃ ಕೌಸುಮಾನ್ ಹಾರಾನ್ ಕಂಠಸೂತ್ರಂ ಚ ಶಂಕರಃ ।
ವೈಜಯಂತೀಂ ಸ್ರಜಂ ಪಾಶೀ ಕುಬೇರೋ ರತ್ನದರ್ಪಣಂ ॥ ೩೦ ॥
ಅನರ್ಘ್ಯಂ ಕಂಚುಕಂ ವಹ್ನಿರ್ಯಮೋಽದಾದ್ವ್ಯಜನಂ ಶುಭಂ ।
ದದುಸ್ತಸ್ಯೈ ಚಾಪರೇಽಪಿ ಭೂಷಾಸ್ತತ್ಸಮಯೋಚಿತಾಃ ॥ ೩೧ ॥
ತತಃ ಸ್ವಲಂಕೃತಾಂ ಕನ್ಯಾಂ ಕಸ್ಮೈ ದದ್ಯಾಮಿಮಾಮಿತಿ ।
ಸಿಂಧುಃ ಪಪ್ರಚ್ಛ ಬ್ರಹ್ಮಾಣಂ ತದೋವಾಚ ಸ ಸರ್ವವಿತ್ ॥ ೩೨ ॥
ಕನ್ಯಾ ತವೇಯಮಂಭೋಧೇ ಮಾತಾ ಮಮ ಶಿವಸ್ಯ ಚ ।
ದೇವಾನಾಮಥ ಸರ್ವೇಷಾಂ ಲೋಕಾನಾಮಸ್ತಿ ನಿಶ್ಚಿತಂ ॥ ೩೩ ॥

---

೨೮. ಪದ್ಮೋದ್ಭವನಾದ ಬ್ರಹ್ಮನು ಪದ್ಮವನ್ನೊಪ್ಪಿಸಿದನು; ಸರಸ್ವತಿಯು ಮುಕ್ತಾಹಾರವನ್ನಿತ್ತಳು. ಶೇಷನೇ ಮೊದಲಾದ ನಾಗರು ಶ್ರೇಷ್ಠರತ್ನಗಳಿಂದ ಮಾಡಿದ ಕರ್ಣಕುಂಡಲಗಳನ್ನು ಕೊಟ್ಟರು.

೨೯. ಸೌಭಾಗ್ಯಲಕ್ಷಣವಾದ ಅಂಜನವನ್ನೂ, ಕುಂಕುಮವನ್ನೂ ದುರ್ಗೆಯು ನೀಡಿದಳು. ಸಾವಿತ್ರಿಯು ಸೀಮಂತಮಣಿಯನ್ನು ಕೊಟ್ಟಳು. ಶಚಿಯು ತಾಂಬೂಲಕರಂಡಕವನ್ನಿತ್ತಳು.

೩೦. ವಸಂತನು ಹೂವಿನ ಹಾರಗಳನ್ನಿತ್ತನು. ಕಂಠಸೂತ್ರವನ್ನು ಶಂಕರನು ಕೊಟ್ಟನು. ಪಾಶಧಾರಿಯಾದ ವರುಣನು ವೈಜಯಂತೀಮಾಲೆಯನ್ನಿತ್ತನು. ಕುಬೇರನು ರನ್ನಗನ್ನಡಿಯನ್ನು ಕೊಟ್ಟನು.

೩೧. ಅಗ್ನಿಯು ಅನರ್ಘ್ಯವಾದ ಕಂಚುಕವನ್ನು ಕೊಟ್ಟನು. ಯಮನು ಶುಭಕರವಾದ ಬೀಸಣಿಗೆಯನ್ನು ಕೊಟ್ಟನು. ಉಳಿದವರೂ ಆ ಸಮಯಕ್ಕೆ ಉಚಿತವಾದ ಭೂಷಣಗಳನ್ನು ಅವಳಿಗೆ ಅರ್ಪಿಸಿದರು.

೩೨. ಬಳಿಕ 'ಸರ್ವಾಲಂಕೃತಳಾಗಿರುವ ಈ ಕನ್ಯೆಯನ್ನು ಯಾರಿಗೆ ಕೊಡಲಿ?' ಎಂದು ಸಮುದ್ರನು ಬ್ರಹ್ಮನನ್ನು ಪ್ರಶ್ನಿಸಿದನು. ಆಗ ಸರ್ವಜ್ಞನಾದ ಬ್ರಹ್ಮನು ಇಂತೆಂದನು :—

೩೩. "ಎಲೈ ಅಂಭೋಧಿಯೇ! ಈ ನಿನ್ನ ಕನ್ಯೆಯು ನನಗೂ ಶಿವನಿಗೂ ದೇವತೆಗಳಿಗೂ ಮತ್ತು ಸರ್ವಲೋಕಗಳಿಗೂ ಮಾತೆಯಾಗಿದ್ದಾಳೆ. ಇದು ನಿಶ್ಚಯವು.

ನಾರಾಯಣಂ ವಾಸುದೇವಂ ಪರಂ ಬ್ರಹ್ಮಾಖಿಲೇಶ್ವರಂ ।
ಪುರುಷೋತ್ತಮಮೇವೈಕಂ ವಿನಾಸ್ಯಾ ನಾಪರಃ ಪತಿಃ ॥ ೩೪ ॥
ಅತಃ ಸಾಕ್ಷಾದ್ಭಗವತೇ ತ್ರೈಲೋಕ್ಯಸುಖಹೇತವೇ ।
ಆಗತಾಯೋಪವಿಷ್ಟಾಯ ದೇಹ್ಯಸ್ಯೈ ವಿಧಿನಾಂಬುಧೇ ॥ ೩೫ ॥
ಕುರುಷ್ವ ಜನ್ಮಸಾಫಲ್ಯಂ ಪಾವಯಿತ್ವಾ ನಿಜಂ ಕುಲಂ ।
ಸಮುದ್ಧರ ಭವಾಂಬೋಧೇರ್ದತ್ತ್ವೇಮಾಂ ಪರಮಾತ್ಮನೇ ॥ ೩೬ ॥
ಏಕಸ್ತ್ವಂ ಸಪ್ತಭೀ ರೂಪೈಃ ಸಪ್ತದ್ವೀಪವಿಭಾಗತಃ ।
ವಿಶ್ರುತೋಽಥ ವಿಧಾಯೈತನ್ಮಹತೀಂ ಕೀರ್ತಿಮಾಪ್ಸ್ಯಸಿ ॥ ೩೭ ॥
ಇತ್ಯುಕ್ತೋ ಬ್ರಹ್ಮಣಾ ಹೃಷ್ಟಃ ಸಮುದ್ರಃ ಪುಲಕಾಂಚಿತಃ ।
ಮನ್ಯಮಾನೋ ನಿಜಂ ಧನ್ಯಮದಿತ್ಸದ್ವಿಷ್ಣವೇ ಸುತಾಂ ॥ ೩೮ ॥
ತತಃ ಸಹೈವ ವಿಧಿನಾ ಸ ಸಂಪ್ರಾರ್ಥ್ಯ ತಮೀಶ್ವರಂ ।
ವಾಗ್ದಾನಾದಿ ವಿಧಾಯೈವ ಚಕ್ರೇ ವೈವಾಹಿಕಂ ವಿಧಿಂ ॥ ೩೯ ॥

---

೩೪. ನಾರಾಯಣನೂ, ವಾಸುದೇವನೂ, ಪರಬ್ರಹ್ಮಸ್ವರೂಪನೂ, ಅಖಿಲೇಶ್ವರನೂ ಆದ ಪುರುಷೋತ್ತಮನೊಬ್ಬನನ್ನುಳಿದು ಬೇರೆ ಯಾವನೂ ಈಕೆಗೆ ಪತಿಯೆನಿಸಲು ಅರ್ಹನಲ್ಲವು.

೩೫. ಆದುದರಿಂದ ಎಲೈ ಅಂಬುಧಿಯೇ! ಈಗ ನಿನ್ನ ಪುಣ್ಯವಿಶೇಷದಿಂದ ತಾನಾಗಿಯೆ ಇಲ್ಲಿಗೈತಂದು ಕುಳಿತಿರುವವನೂ, ಮೂರು ಲೋಕದ ಸುಖಕ್ಕೂ ಕಾರಣನೂ ಆದ ಸಾಕ್ಷಾದ್ಭಗವಂತನಿಗೆ ವಿಧಿಪೂರ್ವಕವಾಗಿ ಇವಳನ್ನು ಧಾರೆ ಯೆರೆದುಕೊಡು.

೩೬. ಇವಳನ್ನು ಈ ಪರಮಾತ್ಮನಿಗೆ ಕೊಟ್ಟು ಜನ್ಮಸಾಫಲ್ಯವನ್ನುಂಟು ಮಾಡಿಕೊ. ನಿನ್ನ ಕುಲವನ್ನು ಪಾವನಗೊಳಿಸಿ ಅದನ್ನು ಸಂಸಾರಸಮುದ್ರ ದಿಂದ ಉದ್ಧಾರಮಾಡು.

೩೭. ನೀನು ಒಬ್ಬನೇ ಆದರೂ ಸಪ್ತದ್ವೀಪವಿಭಾಗದಿಂದ ಏಳು ರೂಪ ಗಳುಳ್ಳವನಾಗಿ ಪ್ರಖ್ಯಾತನಾಗಿದ್ದೀಯೆ. ಮಾಹಾತ್ಮ್ಯಯುಕ್ತವಾದ ಈ ಕಲ್ಯಾಣಮಹೋತ್ಸವವನ್ನು ನೆರವೇರಿಸಿ ನೀನು ಅಪಾರವಾದ ಕೀರ್ತಿಯನ್ನು ಪಡೆಯುತ್ತೀಯೆ.

೩೮. ಬ್ರಹ್ಮನಿಂದ ಹೀಗೆ ಹೇಳಲ್ಪಟ್ಟ ಆ ಸಮುದ್ರರಾಜನು ಹರ್ಷಗೊಂಡು ರೋಮಾಂಚವನ್ನು ಹೊಂದಿದನು. ತಾನೆ ಧನ್ಯನೆಂದು ಭಾವಿಸಿ ಆ ಮಹಾ ವಿಷ್ಣುವಿಗೆ ಮಗಳನ್ನು ಕೊಡಲು ಮನಸ್ಸುಮಾಡಿದನು.

೩೯. ಬಳಿಕ ಅವನು ವಿಧಿಪೂರ್ವಕವಾಗಿ ಆ ಜಗದೀಶ್ವರನನ್ನು ಪ್ರಾರ್ಥಿಸಿ ವಾಗ್ದಾನಾದಿಗಳನ್ನು ನಡೆಸಿ ವಿವಾಹವನ್ನು ನೆರವೇರಿಸಿದನು.

ಧನ್ವಂತರಿಶ್ಚಂದ್ರಮಾಶ್ಚ ವಾಸವಾದ್ಯಾಶ್ಚ ದೇವತಾಃ ।
ಆಸನ್ ಸಮುದ್ರಸ್ಯ ಪಕ್ಷೇ ತತ್ರ ವೈವಾಹಿಕೋತ್ಸವೇ ॥ ೪೦ ॥
ವಸ್ತ್ರಾಭರಣಯಾನಾದಿ ದಾನೇ ಭೋಜನಕರ್ಮಣಿ ।
ಸನ್ಮಾನನೇ ಚ ಜನ್ಯಾನಾಂ ಮುಖ್ಯಾ ಆಸಂಸ್ತ ಏವ ಹಿ ॥ ೪೧ ॥
ಲಕ್ಷ್ಮ್ಯಾಶ್ಚ ಮಾಂಗಲ್ಯವಿಧೌ ಮುಖ್ಯಾಸ್ತತ್ರ ತು ಯೋಷಿತಃ ।
ಆಸನ್ ಗಂಗಾದಯೋ ನದ್ಯಃ ಶಚ್ಯಾದ್ಯಾಶ್ಚ ಸುರಾಂಗನಾಃ ॥ ೪೨ ॥
ಮೇನಾದ್ಯಾ ನಗಪತ್ನ್ಯಶ್ಚ ಸಿದ್ಧಯಶ್ಚಾಣಿಮಾದಯಃ ।
ಚಂದ್ರಪತ್ನೀ ತಥಾ ಕಾಂತಿಃ ಸರ್ವಾಶ್ಚಾಪ್ಸರಸೋ ಮುನೇ ॥ ೪೩ ॥
ನಾರಾಯಣಸ್ಯಾಥ ವಿಭೋರ್ಲೀಲಾಂ ವೈವಾಹಿಕೀಂ ವಿಧಿಃ ।
ಶೋಭಯನ್ ಪಿತರೌ ಚಕ್ರೇ ಮೂರ್ತಿಧರ್ಮೌ ವಿಚಾರ್ಯ ಚ ॥ ೪೪ ॥
ಧರ್ಮೋಽಸೌ ಜಗದಾಧಾರಃ ಪೂಜ್ಯಶ್ಚಾಖಿಲದೇಹಿನಾಂ ।
ಪಿತಾಽಸ್ಯ ಭವಿತುಂ ಯೋಗ್ಯೋ ಹ್ಯಸ್ಮಿಂಶ್ಚ ಪ್ರೀತಿಮಾನ್ಭೃಶಂ ॥ ೪೫ ॥
ಇಯಂ ಚ ಮೂರ್ತಿಃ ಪ್ರಖ್ಯಾತಾ ಸರ್ವಸದ್ಗುಣಜನ್ಮಭೂಃ ।
ದಾಕ್ಷಾಯಣೀ ಧರ್ಮಪತ್ನೀ ಮಾತಾ ಭವಿತುಮರ್ಹತಿ ॥ ೪೬ ॥

---

೪೦. ಆ ವಿವಾಹೋತ್ಸವದಲ್ಲಿ ಧನ್ವಂತರಿ, ಚಂದ್ರ, ವಾಸವ ಇವರೇ ಮೊದಲಾದ ದೇವತೆಗಳು ಸಮುದ್ರರಾಜನ ಪಕ್ಷದಲ್ಲಿದ್ದರು.

೪೧. ವಸ್ತ್ರಾಭರಣಾದಿ ದಾನದಲ್ಲಿ, ಭೋಜನಕರ್ಮದಲ್ಲಿ, ಸನ್ಮಾನಮಾಡುವುದರಲ್ಲಿ ಎಲ್ಲದರಲ್ಲಿಯೂ ಇವರೇ ಮುಖ್ಯರಾಗಿದ್ದರು.

೪೨–೪೩. ಎಲೈ ಮುನಿಯೇ! ಗಂಗಾದಿ ನದಿಗಳು, ಶಚಿಯೆ ಮೊದಲಾದ ಸುರಾಂಗನೆಯರು, ಮೇನೆ ಮೊದಲಾದ ನಾಗಪತ್ನಿಯರು, ಅಣಿಮಾದಿ ಸಿದ್ಧಿಗಳು, ಚಂದ್ರಪತ್ನಿಯಾದ ಕಾಂತಿ ಮತ್ತು ಸಮಸ್ತ ಅಪ್ಸರಸ್ತ್ರೀಯರು—ಇವರೇ ಲಕ್ಷ್ಮಿಯ ಮಾಂಗಲ್ಯವಿಧಿಯಲ್ಲಿ ಮುಖ್ಯ ಸುಮಂಗಲಿಯರಾಗಿದ್ದವರು.

೪೪. ವಿಭುವಾದ ನಾರಾಯಣನ ವಿವಾಹಲೀಲೆಯು ಶೋಭಿಸುವಂತೆ ಎಸಗಲು ವಿಧಿಯು (ಬ್ರಹ್ಮನು) ವಿಚಾರಮಾಡಿ ಮೂರ್ತಿ ಮತ್ತು ಧರ್ಮದೇವತೆಗಳನ್ನು ಮಾತಾಪಿತೃಗಳಾಗಿ ಗೊತ್ತುಮಾಡಿದನು.

೪೫. "ಧರ್ಮನು ಜಗತ್ತಿಗೆ ಆಧಾರನಾದವನು; ಸಮಸ್ತ ದೇಹಿಗಳಿಗೂ ಪೂಜ್ಯನು. ಬಹು ಪ್ರೀತಿಯುಳ್ಳವನು. ಆದುದರಿಂದ ಇವನು ಈ ಸ್ವಾಮಿಗೆ ತಂದೆಯಾಗಲು ಯೋಗ್ಯನಾಗಿದ್ದಾನೆ.

೪೬. ದಕ್ಷಪುತ್ರಿಯೂ, ಧರ್ಮನ ಪತ್ನಿಯೂ ಆದ ಈ ಮೂರ್ತಿಯಾದರೊ ಸರ್ವಸದ್ಗುಣಗಳಿಗೂ ಜನ್ಮಸ್ಥಾನವೆಂದು ಪ್ರಖ್ಯಾತಳಾಗಿದ್ದಾಳೆ. ಇವಳು ಈತನಿಗೆ ಮಾತೃವಾಗಲು ಅರ್ಹಳಾಗಿದ್ದಾಳೆ" ಎಂದು ಹೇಳಿದನು.

**ತತೋ ಧರ್ಮಸ್ಯಾಪಿ ಪಕ್ಷೇ ಮುಖ್ಯಾಃ ಕಾರ್ಯೇಷ್ವನೇಽಭವನ್ ।**
**ನಂದೀಶ್ವರಗಣೇಶಾಭ್ಯಾಂ ಸಹಿತಃ ಶಂಕರೋ ಮುನೇ ॥ ೪೭ ॥**
**ಮಹರ್ಷಯೋ ಮರೀಚ್ಯಾದ್ಯಾಃ ಪ್ರಜೇಶಾ ನಾರದೋ ಮುನಿಃ ।**
**ವೈನತೇಯಶ್ಚ ನಂದಾದ್ಯಾಃ ಶ್ರೀದಾಮಾದ್ಯಾಶ್ಚ ಪಾರ್ಷದಾಃ ॥ ೪೮ ॥**
**ದುರ್ಗಾ ಚ ವೇದಸೂರ್ವಾಣೀ ಸ್ತ್ರೀಷು ಮುಖ್ಯಾ ಬಭೂವಿರೇ ।**
**ಋಷಿಪತ್ನ್ಯೋಽನಸೂಯಾದ್ಯಾ ಧರ್ಮಪತ್ನ್ಯಶ್ಚ ಸರ್ವಶಃ ॥ ೪೯ ॥**
**ಸಹ ವೇದಾದಿಭಿರ್ಬ್ರಹ್ಮಾತ್ವಾಸೀದುಭಯಪಕ್ಷಯೋಃ ।**
**ಬ್ರಾಹ್ಮಣಾ ವೈದಿಕಾ ಯೇ ಚ ವಿವಾಹವಿಧಿಕೋವಿದಾಃ ॥ ೫೦ ॥**
**ಅಥಾಬ್ಧಿಃ ಸರ್ವಸಂಭಾರಾನ್ ಶ್ರಿಯಾ ಏವ ಪ್ರಸಾದತಃ ।**
**ಸದ್ಯಃ ಸಂಪಾದಯಾಮಾಸ ಜನಯನ್ ದೇವವಿಸ್ಮಯಂ ॥ ೫೧ ॥**
**ಯದ್ಯತ್ಸಂಕಲ್ಪಯಾಮಾಸ ಹೃದಿ ತತ್ತದುಪಾಹೃತಂ ।**
**ಸದ್ಯಃ ಸ್ವಾಂತಿಕ ಏವೈಕ್ಷತ್ತತೋಽಭೂದತಿಹರ್ಷಿತಃ ॥ ೫೨ ॥**
**ಮಧ್ಯೇ ತು ಮಂಡಪಸ್ಯಾಸಾವಗ್ನಿಸ್ಥಾಪನವೇದಿಕಾಂ ।**
**ಕಾರಯಾಮಾಸ ವಿಧಿವದ್ಬ್ರಾಹ್ಮಣೈರ್ವೇದವೇದಿಭಿಃ ॥ ೫೩ ॥**

---

೪೭–೪೮. ಬಳಿಕ ಧರ್ಮನ ಪಕ್ಷದಲ್ಲಿ ನಂದೀಶ್ವರ ಮತ್ತು ಗಣೇಶರಿಂದೊಡಗೂಡಿದ ಶಂಕರನೂ, ಮರೀಚಿ ಮೊದಲಾದ ಮಹರ್ಷಿಗಳೂ, ಪ್ರಜೇಶ್ವರರೂ, ನಾರದಮುನಿಯೂ, ವೈನತೇಯ ನಂದಾದಿಗಳೂ, ಶ್ರೀದಾಮನೇ ಮೊದಲಾದ ಪಾರ್ಷದರೂ ವೈವಾಹಿಕ ಕಾರ್ಯಗಳಲ್ಲಿ ಮುಖ್ಯರಾಗಿದ್ದರು.

೪೯–೫೦. ದುರ್ಗೆಯೂ, ವೇದಜನನಿಯಾದ ವಾಣಿಯೂ, ಅನಸೂಯೆ ಮೊದಲಾದ ಋಷಿಪತ್ನಿಯರೂ, ಧರ್ಮಪತ್ನಿಯರೂ ಸ್ತ್ರೀಯರಲ್ಲಿ ಮುಖ್ಯರಾಗಿದ್ದರು. ವೇದಾದಿಗಳಿಂದೊಡಗೂಡಿದ ಬ್ರಹ್ಮನು ಎರಡು ಪಕ್ಷಗಳಿಗೂ ವೈದಿಕರೂ ಮತ್ತು ವಿವಾಹವಿಧಿಕೋವಿದರೂ ಆದ ಬ್ರಾಹ್ಮಣರ ಸ್ವರೂಪವನ್ನು ತಳೆದಿದ್ದನು.

೫೧. ಬಳಿಕ ಸಮುದ್ರರಾಜನು ಶ್ರೀದೇವಿಯ ಪ್ರಸಾದದಿಂದಲೇ ಸಮಸ್ತ ಸಂಭಾರಗಳನ್ನು ಕ್ಷಣಮಾತ್ರದಲ್ಲಿಯೆ ಸಂಪಾದಿಸಿಕೊಂಡು ದೇವತೆಗಳಿಗೆಲ್ಲ ವಿಸ್ಮಯವನ್ನುಂಟುಮಾಡಿದನು.

೫೨. ಅವನು ಯಾವಯಾವುದನ್ನು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡನೋ ಅದೆಲ್ಲವೂ ಆಯಾ ಕ್ಷಣವೆ ಅವನ ಹತ್ತಿರ ತಂದು ಸಿದ್ಧವಾಗಿಡಲಾಗುತ್ತಿದ್ದಿತು. ಅದರಿಂದ ಅವನ ಹರ್ಷಕ್ಕೆ ಪಾರವಿಲ್ಲವಾಯಿತು.

೫೩. ಅವನು ಮಂಟಪದ ಮಧ್ಯದಲ್ಲಿ ವೇದಗಳನ್ನು ಬಲ್ಲವರಾದ ಬ್ರಾಹ್ಮಣರಿಂದ ಅಗ್ನಿಸ್ಥಾಪನವೇದಿಕೆಯನ್ನು ವಿಧಿವತ್ತಾಗಿ ಮಾಡಿಸಿದನು.

ಅಲಂಚಕಾರ ತಾಂ ವೇದಿಂ ಗಂಧಪುಷ್ಪಾಕ್ಷತಾದಿಭಿಃ ।
ನಾನಾವಿಧೈಃ ಶುಭೈರಂಗೈಃ ಸಾಂಕುರೈಃ ಕರಕೈಸ್ತಥಾ ॥ ೫೪ ॥
ತತೋ ಮಹಾಮಂಗಲವಾದ್ಯಘೋಷೈಃ
ಸಮಂತ್ರಕಂ ಸಂಸ್ನಪಿತೋ ಮುನೀಂದ್ರೈಃ ।
ಅನರ್ಘ್ಯವಾಸಾಂಸಿ ಚ ರತ್ನಭೂಷಾ
ದಧಾರ ವಿಷ್ಣುರ್ಮುಕುಟಂ ಚ ದಿವ್ಯಂ ॥ ೫೫ ॥
ವಾದಿತ್ರನಿರ್ಧ್ವಾನನಿನಾದಿತಾಶಂ
ನೃತ್ಯತ್ಸುರಸ್ತ್ರೀಕಲಗೀತಶೋಭನಂ ।
ತಂ ಮಂಡಪಂ ಸೋಽಥ ಸುರೈಃ ಸ್ತುವದ್ಭಿಃ
ಸಹೇತ್ಯ ಹೈಮೇ ನಿಷಸಾದ ಪೀಠೇ ॥ ೫೬ ॥
ಪ್ರಕ್ಷಾಲಯಾಮಾಸ ತದಂಘ್ರಿಪಂಕಜಂ
ಸ್ವಪ್ರೇಷ್ಠಪತ್ನ್ಯಾ ಜಲಧಿಃ ಸಗಂಗಯಾ ।
ಭೃಂಗಾರಸಿಕ್ತೋತ್ತಮವಾರಿಧಾರಯಾ
ತದಂಬುಶೀರ್ಷ್ಣಾ ಚ ದಧಾರ ಸಾನ್ವಯಃ ॥ ೫೭ ॥
ತತಃ ಪಠನ್ಮಂಗಲಮುಚ್ಚಕೈಃ ಶ್ರಿಯಂ
ಪ್ರಾದಾಪಯಚ್ಚಾಂಬುಧಿನಾಽಚ್ಯುತಾಯ ।

---

೫೪. ಆ ವೇದಿಕೆಯನ್ನು ಗಂಧ, ಪುಷ್ಪ ಅಕ್ಷತೆ ಮೊದಲಾದವುಗಳಿಂದಲೂ, ಶುಭಕರಗಳಾದ ನಾನಾ ವಿಧ ಶೃಂಗಾರಗಳಿಂದಲೂ, ಚಿಗುರಿನಿಂದ ಕೂಡಿದ ಪೂರ್ಣ ಕಲಶಗಳಿಂದಲೂ ಅಲಂಕರಿಸಿದನು.

೫೫. ಮಹಾಮಂಗಳವಾದ್ಯ ಘೋಷಗಳು ಮೊಳಗುತ್ತಿರಲು ಮುನೀಂದ್ರರು ಮಂತ್ರಪೂರ್ವಕವಾಗಿ ವಿಷ್ಣುವಿಗೆ ಮಂಗಳಸ್ನಾನವನ್ನು ಮಾಡಿಸಿದರು. ಆಗ ಅನರ್ಘ್ಯ ವಸ್ತ್ರಗಳನ್ನೂ, ರತ್ನಭೂಷಣಗಳನ್ನೂ, ದಿವ್ಯಕಿರೀಟವನ್ನೂ ವಿಷ್ಣುವು ಧರಿಸಿದನು.

೫೬. ಬಳಿಕ ಆ ಮಹಾವಿಷ್ಣುವು ದಿಕ್ಕುದಿಕ್ಕುಗಳಿಗೂ ದನಿಬೀರುತ್ತಿರುವ ವಾದ್ಯಗಳಿಂದ ಕೂಡಿ, ನರ್ತಿಸುತ್ತಿರುವ ದೇವಸ್ತ್ರೀಯರ ಇಂಪಾದ ಗೀತದಿಂದ ಮನೋಹರವಾದ ಆ ಮಂಟಪವನ್ನು ಸುರರೆಲ್ಲರೂ ತನ್ನನ್ನು ಸ್ತುತಿಸುತ್ತಿರಲು ಪ್ರವೇಶಮಾಡಿ ಸ್ವರ್ಣಪೀಠದಮೇಲೆ ಮಂಡಿಸಿದನು.

೫೭. ಆಗ, ತನ್ನ ಮೆಚ್ಚಿನ ಮಡದಿಯಾದ ಗಂಗೆಯು ಬಂಗಾರದ ಕಲಶದಿಂದ ಎರೆಯುತ್ತಿದ್ದ ಉತ್ತಮ ವಾರಿಧಾರೆಯಿಂದ ಜಲಧಿಯು ಆ ಮಹಾ ವಿಷ್ಣುವಿನ ಪಾದಕಮಲವನ್ನು ತೊಳೆದನು. ಪಾದಪ್ರಕ್ಷಾಳನೆಯ ಆ ನೀರನ್ನು ತನ್ನ ಕುಲಕೋಟಿಗಳೊಡನೆ ತಲೆಯಲ್ಲಿ ತಳೆದುಕೊಂಡನು.

೫೮. ಬಳಿಕ ಬ್ರಹ್ಮನು ಗಟ್ಟಿಯಾಗಿ ಮಂಗಳಗೀತವನ್ನು ಪಠಿಸುತ್ತ

ಪ್ರಜ್ವಾಲ್ಯ ವಹ್ನಿಂ ವಿಧಿನಾ ವಿಧಿಃ
ಸಾಕಂ ಬೃಹದ್ಭಿರ್ಮುನಿಭಿರ್ಜುಹಾವ ॥ ೫೮ ॥
ಪ್ರದಾಯ ತಸ್ಮೈ ತನಯಾಂ ಮನೋಜ್ಞಾಂ
ತತ್ಪಾದಪದ್ಮೈಕನಿಬದ್ಧದೃಷ್ಟಿಂ ।
ವಾಸಾಂಸಿ ರತ್ನಾಭರಣಾನಿ ಚಾದಾತ್
ಭೂಯಾಂಸಿ ಭೂಮ್ನೇ ಸಸಮಂ ದುಹಿತ್ರಾ ॥ ೫೯ ॥
ಹುತಸ್ಯ ತಸ್ಯಾಥ ಹುತಾಶನಸ್ಯ
ಪ್ರದಕ್ಷಿಣಂ ಚಾಪಿ ಸಹ ಶ್ರಿಯೈವ ।
ಚಕಾರ ಚೇತಾಂಸಿ ನಿಜೇಕ್ಷಕಾಣಾಂ
ಸ್ತ್ರೀಣಾಂ ಚ ಪುಂಸಾಂ ಚ ಹರನ್ ಹರಿಃ ಸಃ ॥ ೬೦ ॥
ಏಕಾಸನೇ ತೌ ಸಹ ಸನ್ನಿವಿಷ್ಟೌ
ಬ್ರಹ್ಮಾಂಡಮಾತಾಪಿತರೌ ಮನೋಜ್ಞೌ ।
ಸಂಪೂಜಯಾಮಾಸುರನರ್ಘ್ಯವಸ್ತ್ರ
ವಿಭೂಷಣೈರ್ದೇವಗಣಾಃ ಸಯೋಷಾಃ ॥ ೬೧ ॥
ತದಾ ಚ ಗೀತಾನಿ ಸುಮಂಗಲಾನಿ
ಶ್ರಿಯಶ್ಚ ವಿಷ್ಣೋರ್ಗುಣವರ್ಣನಾನಿ ।
ದುರ್ಗಾದಯಶ್ಚಾಥ ಪುಲೋಮಜಾದ್ಯಾ
ದೇವ್ಯೋ ಜಗುಃ ಸಸ್ಮಿತಚಾರುವಕ್ತ್ರಾಃ ॥ ೬೨ ॥

---

ಅಂಬುಧಿಯಿಂದ ಅಚ್ಯುತನಿಗೆ ವಿಧಿಪ್ರಕಾರವಾಗಿ ಶ್ರೀದೇವಿಯನ್ನು ಪ್ರದಾನ ಮಾಡಿಸಿದನು. ಅಗ್ನಿಯನ್ನು ಪ್ರಜ್ವಲನಗೊಳಿಸಿ ಮಹರ್ಷಿಗಳೊಡನೆ ಆ ಅಗ್ನಿಯಲ್ಲಿ ಹೋಮಮಾಡಿದನು.

೫೯. ಆ ಸಮುದ್ರರಾಜನು ಶ್ರೀಮಹಾವಿಷ್ಣುವಿನ ಪಾದಪದ್ಮಗಳಲ್ಲಿಯೆ ನೆಟ್ಟದೃಷ್ಟಿಯುಳ್ಳವಳೂ, ಮನೋಹರೆಯೂ ಆದ ತನ್ನ ಮಗಳನ್ನು ಅವನಿಗೆ ದಾನಮಾಡಿ, ಬಗೆಬಗೆಯ ವಸ್ತ್ರಗಳನ್ನೂ, ಆಭರಣಗಳನ್ನೂ ಅನೇಕವಾಗಿ ತರಿಸಿ ಮಗಳೊಡನೆಯೆ ಆ ಮಹಾಮಹಿಮನಿಗೆ ಅರ್ಪಿಸಿದನು.

೬೦. ಆ ಬಳಿಕ ಶ್ರೀಹರಿಯು ತನ್ನನ್ನು ನೋಡುತ್ತಿರುವ ಸ್ತ್ರೀಯರ ಮತ್ತು ಪುರುಷರ ಎಲ್ಲರ ಮನಸ್ಸನ್ನೂ ತನ್ನೆಡೆಗೆ ಸೆಳೆದುಕೊಳ್ಳುತ್ತ, ಶ್ರೀಸಮೇತನಾಗಿ ಹೋಮವನ್ನು ಸ್ವೀಕರಿಸಿದ ಅಗ್ನಿಗೆ ಪ್ರದಕ್ಷಿಣೆಮಾಡಿದನು.

೬೧. ಒಂದೇ ಪೀಠದಮೇಲೆ ಜೊತೆಗೂಡಿ ಕುಳಿತು ಕಂಗೊಳಿಸುತ್ತಿದ್ದ ಆ ಬ್ರಹ್ಮಾಂಡ ಮಾತಾಪಿತರನ್ನು ದೇವಗಣಗಳು ಪತ್ನೀಸಮೇತರಾಗಿ ಅನರ್ಘ್ಯಗಳಾದ ವಸ್ತ್ರಭೂಷಣಗಳಿಂದ ಪೂಜೆಮಾಡಿದರು.

೬೨. ಬಳಿಕ ದುರ್ಗೆಯೇ ಮೊದಲಾದವರೂ, ಶಚೀದೇವಿಯೇ ಮೊದಲಾದ

ದ್ವಿಧಾ ವಿಭಕ್ತಾನಿ ಸುರಂಗನಾನಾಂ
ವೃಂದಾನ್ಯುಪಾವಿಶ್ಯ ಚ ಸನ್ಮುಖಾನಿ ।
ತದ್ದಂಪತಿಪ್ರೇಕ್ಷಣಕೌತುಕಾನಿ
ತಥಾ ಜಗುಃ ಪ್ರೇಮಭರೇಣ ತಾನಿ ॥ ೬೩ ॥
ಯಥಾ ತದಾಕರ್ಣ್ಯ ಸುರಾಃ ಸಮಸ್ತಾ
ಮಹರ್ಷಯಶ್ಚಾಽಖಿಲಯೋಷಿತೋಽಪಿ ।
ಸ್ವಾಂತಸ್ತ್ವಮೈಕ್ಷಂತ ಸಹ ಶ್ರಿಯೇಶಂ
ಸ್ಫುರಂತಮಾಸನ್ನನು ಚಿತ್ರವಚ್ಚ ॥ ೬೪ ॥
ಪ್ರಣಮ್ಯ ಭಕ್ತ್ಯಾ ಚ ವರಾಕ್ಷತಾದಿ
ಸಮರ್ಪ್ಯ ತಾಭ್ಯಾಂ ವಿಬುಧಾ ಮುದೈವ ।
ಪೃಥಕ್ ಪೃಥಕ್ ತುಷ್ಟುವುರೂರ್ಜಿತಾಭಿ
ರ್ವಾಗ್ಭಿಶ್ಚ ತೌ ಪ್ರಾಂಜಲಯೋ ವಿನೀತಾಃ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಶ್ರೀಲಕ್ಷ್ಮೀನಾರಾಯಣ ವಿವಾಹೋತ್ಸವವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

ದಿವ್ಯದೇವಿಯರೂ ಎಳೆನಗೆಯಿಂದ ಮನೋಹರವಾದ ಮುಖಕಮಲವುಳ್ಳವರಾಗಿ ಶ್ರೀಯ ಮತ್ತು ವಿಷ್ಣುವಿನ ಗುಣವರ್ಣನರೂಪವಾದ ಮಂಗಳಗೀತಗಳನ್ನು ಗಾನಮಾಡಿದರು.

೬೩–೬೪. ದೇವಾಂಗನೆಯರು ಎರಡು ಗುಂಪುಗಳಾಗಿ ಪರಸ್ಪರ ಅಭಿಮುಖವಾಗಿ ಕುಳಿತುಕೊಂಡರು. ಆ ದಂಪತಿಗಳನ್ನು ನೋಡಬೇಕೆಂಬ ಕುತೂಹಲವುಳ್ಳವರಾಗಿ ಅವರು ಎದುರುಬದರಿಗೆ ಕುಳಿತು ಪ್ರೇಮಭರದಿಂದ ಗೀತಗಳನ್ನು ಹಾಡುತ್ತಿದ್ದರು. ಅದನ್ನಾಲಿಸಿದ ಸಮಸ್ತ ಸುರರೂ, ಮಹರ್ಷಿಗಳೂ, ಉಳಿದ ಸ್ತ್ರೀಯರೂ ಎಲ್ಲರೂ ಶ್ರೀದೇವೀಸಮೇತನಾದ ಆ ಜಗದೊಡೆಯನನ್ನು ತಮ್ಮ ತಮ್ಮ ಅಂತರಂಗದಲ್ಲಿಯೆ ಬೆಳಗುತ್ತಿರುವವನನ್ನಾಗಿ ಕಂಡು ಚಿತ್ರದಂತೆ ಕಟ್ಟ ಕದಲದೆ ಕುಳಿತುಬಿಟ್ಟರು.

೬೫. ದೇವತೆಗಳು ಭಕ್ತಿಯಿಂದ ಪ್ರಣಾಮಮಾಡಿ ಅವರಿಬ್ಬರಿಗೂ ಶ್ರೇಷ್ಠವಾದ ಅಕ್ಷತೆ ಮೊದಲಾದುವನ್ನು ಸಮರ್ಪಿಸಿ ಸಂತೋಷಗೊಂಡು, ವಿನೀತರಾಗಿ ಕೈಮುಗಿದು ನಿಂತು ಶ್ರೇಷ್ಠವಾದ ಸ್ತುತಿವಾಕ್ಯಗಳಿಂದ ಅವರನ್ನು ಒಬ್ಬೊಬ್ಬರೂ ಬೇರೆ ಬೇರೆಯಾಗಿ ಸ್ತೋತ್ರಮಾಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಶ್ರೀಲಕ್ಷ್ಮೀನಾರಾಯಣರ ವಿವಾಹೋತ್ಸವವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಲಕ್ಷ್ಮೀನಾರಾಯಣಸ್ತುತಿನಿರೂಪಣಂ

ಬ್ರಹ್ಮೋವಾಚ :—

ವಿಚಾರ್ಯಾಽಹಂ ವೇದಾನ್ಮುಹುರುಪಗತೋ ನಿಶ್ಚಯಮಿಮಂ
ರಮಾರಾಮೇ ಭಕ್ತಿಸ್ತ್ವಯಿ ದೃಢತರಾ ಯರ್ಹ್ಯಸುಭೃತಾಂ ।
ಭವೇತ್ತರ್ಹ್ಯೇವೈಷಾಂ ಕ್ಷಯವಿರಹಿತಾ ಭೋಗನಿಕರಾ
ಸ್ತಥಾಸ್ಯುರ್ಲೋಕಾ ವೈ ಪರಮಪುರುಷಾತ್ಯಂತಿಕಗತಿಃ ॥ ೧ ॥
ಅಜಾನಂತಸ್ತ್ವಿತ್ಥಂ ಭೃತರಜತಮಸ್ಕಾನಪಿ ಹರೇ
ಭಜಂತ್ಯಸ್ಮಾನ್ ದೇವಾನ್ ಬಹುವಿಧತಪೋಽರ್ಚಾಸರಣಿಭಿಃ ।
ತ ಏವೋಕ್ತಾ ಮೂಢಾಃ ಕ್ಷಯರಹಿತಸೌಖ್ಯಂ ನ ಕುಹಚಿತ್
ಲಭಂತೇಽತಸ್ತ್ವಾಂ ವೈ ನಿಜಹೃದಿ ದಧೇ ಕೇಶವಮಹಂ ॥ ೨ ॥

ಶಂಕರ ಉವಾಚ :—

ತ್ರಯೀ ಸಾಂಖ್ಯ ವೇದಾಂತಯೋಗಾಃ ಪುರಾಣಂ
ತಥಾ ಪಂಚರಾತ್ರಂ ಪ್ರಭೋ ಧರ್ಮಶಾಸ್ತ್ರಂ ।

---

### ಕನ್ನಡದ ಅನುವಾದ

#### ಶ್ರೀ ಲಕ್ಷ್ಮೀನಾರಾಯಣಸ್ತೋತ್ರನಿರೂಪಣ

೧. ಬ್ರಹ್ಮನು ಸ್ತುತಿಸುತ್ತಾನೆ:—"ನಾನು ಮತ್ತೆ ಮತ್ತೆ ಅನೇಕವೇಳೆ ವೇದಗಳನ್ನು ವಿಚಾರಮಾಡಿ ನೋಡಿ ಈ ನಿಶ್ಚಯಕ್ಕೆ ಬಂದಿದ್ದೇನೆ:—ದೇವ! ರಮಾಮನೋಹರನಾದ ನಿನ್ನಲ್ಲಿ ಪ್ರಾಣಿಗಳಿಗೆ ಎಲ್ಲಿಯವರೆಗೆ ಭಕ್ತಿಯು ದೃಢತರವಾಗಿರುವುದೋ ಅಲ್ಲಿಯವರೆಗೆ ಮಾತ್ರ ಅವರಿಗೆ ಭೋಗಸಮೂಹಗಳು ನಾಶರಹಿತವಾಗಿರುವುವು; ಹಾಗೆಯೇ ಲೋಕಗಳೂ ಸ್ಥಿರವಾಗಿರುವುವು; ಪರಮಪುರುಷನಾದ ನಿನ್ನಲ್ಲಿಯೇ ಹೋಗಿ ನೆಲಸುವ ಉತ್ತಮಗತಿಯೂ ಮಾನವರಿಗೆ ಉಂಟಾಗುವುದು.

೨. ಎಲೈ ಹರಿಯೇ! ಈ ರೀತಿ ಅರಿಯದಿರುವವರಾದರೋ, ರಜೋಗುಣ ತಮೋಗುಣಗಳಿಂದ ಕೂಡಿದವರಾದ ನಮ್ಮಂಥ ದೇವತೆಗಳನ್ನು ಕೂಡ ಬಗೆ ಬಗೆಯ ತಪಸ್ಸುಗಳಿಂದಲೂ, ಪುಜಾವಿಧಾನಗಳಿಂದಲೂ ಭಜಿಸುತ್ತಾರೆ. ಅವರನ್ನೇ ಮೂಢರೆಂದು ಕರೆಯಬೇಕು. ಅವರು ಕ್ಷಯರಹಿತವಾದ ಸೌಖ್ಯವನ್ನೆಂದಿಗೂ ಪಡೆಯಲಾರರು. ಆದುದರಿಂದ ಓ ಕೇಶವಾ! ನಾನು ನಿನ್ನನ್ನೇ ಹೃದಯದಲ್ಲಿ ಧರಿಸಿರುತ್ತೇನೆ."

೩. ಶಂಕರನು ಸ್ತುತಿಸುತ್ತಾನೆ:—"ಎಲೈ ಪ್ರಭುವೇ! ವೇದಗಳು, ಸಾಂಖ್ಯ, ವೇದಾಂತ, ಯೋಗ, ಪುರಾಣ, ಪಂಚರಾತ್ರ, ಧರ್ಮಶಾಸ್ತ್ರ—

ತನ್ವೈವಾತಿಮಾಹಾತ್ಮ್ಯಮೇಕಸ್ಯ ನಿತ್ಯಂ
ಪ್ರಕಾರ್ರೈರನೇಕೈರ್ಹಿ ಗಾಯಂತಿ ಭಕ್ತ್ಯಾ ॥ ೩ ॥
ತ್ವದೇವೇಶ ಶಾಸ್ತ್ರಾಣಿ ಚೈತಾನಿ ಭೂಮ್ನೋ
ಬಭೂವುಸ್ತ್ವದೇಕಾಶ್ರಯಾಣ್ಯಾದಿಕಲ್ಪೇ ।
ರಮಾಸೇವ್ಯಪಾದಾಂಬುಜಂ ಶಾಸ್ತ್ರಯೋನಿಂ
ತಮಾದ್ಯಂ ಭವಂತಂ ಭಜೇ ವಾಸುದೇವಂ ॥ ೪ ॥

ಧರ್ಮ ಉವಾಚ :—

ಕಥಾ ತ್ವದೀಯಾ ಭವಪಾಶಮೋಚನೀ
ಸುಧೈವ ತಾಪತ್ರಯತಪ್ತದೇಹಿನಾಂ ।
ಅನೇಕಜನ್ಮಾಘಚಯಾಪಹಾರಿಣೀ
ತನೋತಿ ಭಕ್ತಿಂ ಮಯಿ ನಂ ತವಾಂಜಸಾ ॥ ೫ ॥
ಸದೈವ ಸಾ ಕರ್ಣಪಥೇನ ಹೃದ್ದರೀಂ
ವಿಶತ್ವನಂತಾಭಿಧಸಂಮುಖೋದ್ಗತಾ ।
ಮಮ ತ್ವದನ್ಯಾ ಹರತಾಚ್ಚ ವಾಸನಾ
ದಯಾಬ್ಧಯೇ ತೇ ಪ್ರಭವಿಷ್ಣವೇ ನಮಃ ॥ ೬ ॥

---

ಇವೆಲ್ಲವೂ ನಿನ್ನೊಬ್ಬನ ಅತಿಶಯವಾದ ಮಹಿಮೆಯನ್ನೇ ಅನೇಕ ಪ್ರಕಾರಗಳಿಂದ ಭಕ್ತಿಯಿಂದ ಗಾನಮಾಡುತ್ತವೆ.

೪. ಎಲೈ ಈಶನೇ! ಈ ಶಾಸ್ತ್ರಗಳೆಲ್ಲವೂ ಮಹಾತ್ಮನಾದ ನಿನ್ನಿಂದಲೇ ಉಂಟಾದವು. ಆದಿಕಲ್ಪದಲ್ಲಿ ಇವೆಲ್ಲವೂ ನಿನ್ನೊಬ್ಬನಲ್ಲಿಯೆ ಆಶ್ರಯಹೊಂದಿದ್ದವು. ರಮಾದೇವಿಯಿಂದ ಸೇವಿಸಲ್ಪಡುವ ಪಾದಕಮಲಗಳುಳ್ಳವನೂ, ಶಾಸ್ತ್ರಗಳಿಗೆಲ್ಲ ಉತ್ಪತ್ತಿಸ್ಥಾನವಾದವನೂ, ಎಲ್ಲಕ್ಕೂ ಮೊದಲಿನವನೂ, ವಾಸುದೇವನೂ ಆದ ನಿನ್ನನ್ನೇ ನಾನು ಭಜಿಸುತ್ತೇನೆ.''

೫. ಧರ್ಮನು ಸ್ತುತಿಸುತ್ತಾನೆ:—''ತಾಪತ್ರಯಗಳಿಂದ ಸುಡಲ್ಪಟ್ಟ ದೇಹವುಳ್ಳವರಿಗೆ ನಿನ್ನ ಕಥೆಯು ಅಮೃತದಂತೆ ಸಂಸಾರಪಾಶದಿಂದ ಬಿಡುಗಡೆಯನ್ನುಂಟುಮಾಡುವುದಾಗುವುದು; ಅನೇಕ ಜನ್ಮಗಳಿಂದ ಕೂಡಿಬಂದಿರುವ ಪಾಪರಾಶಿಯನ್ನು ಪರಿಹರಿಸುವುದು; ಬಹುಬೇಗನೆಯೇ ನಿನ್ನಲ್ಲಿ ಭಕ್ತಿಯನ್ನೂ ಉಂಟುಮಾಡುವುದು.

೬. ಓ ಅನಂತ! ಪ್ರಭು, ನಿನ್ನ ಕಥೆಯು ಯಾವಾಗಲೂ ನನ್ನೆದುರಿಗೆ ಬಂದು ಕರ್ಣಮಾರ್ಗದಿಂದ ನನ್ನ ಹೃದಯಕುಹರವನ್ನು ಪ್ರವೇಶಮಾಡಲಿ, ನಿನ್ನನ್ನು ಬಿಟ್ಟ ಬೇರೆ ವಾಸನೆಯೆಲ್ಲವೂ ನನ್ನನ್ನು ತೊರೆದುಹೋಗಲಿ. ದಯಾಸಮುದ್ರನೂ, ಸರ್ವವಿಜಯಿಯೂ ಆದ ನಿನಗೆ ನಮಸ್ಕಾರವು.

ಪ್ರಜಾಪತಯ ಊಚುಃ :—

ಧನ್ಯಾ ಏತೇ ಕಲ್ಪವೃಕ್ಷಾ ಯದೀಯಾಂ
ಛಾಯಾಮೇತಾಮಾಶ್ರಿತಸ್ತ್ವಂ ಸಹಶ್ರೀಃ ।
ಧನ್ಯಃ ಕರ್ತಾ ಮಂಡಪಸ್ಯಾಸ್ಯ ತೇ ವೈ
ಧನ್ಯೈಷಾ ಭೂರ್ಯತ್ರ ಪೀಠಂ ತವೇಶ ॥ ೭ ॥
ಧನ್ಯೋ ಲೋಕೇ ನೂನಮೇಷೋಂಬುರಾಶಿಃ
ಸಾಕ್ಷಾತ್ತುಭ್ಯಂ ಯೇನ ದತ್ತಾ ಸ್ವಕನ್ಯಾ ।
ಧನ್ಯಾಶ್ಚೈತೇ ತ್ವಾಂ ವಯಂ ವೀಕ್ಷಮಾಣಾ
ಧನ್ಯೇಶಾನಂ ಶ್ರೀಪತಿಂ ತ್ವಾಂ ನತಾಃ ಸ್ಮಃ ॥ ೮ ॥

ಮನವ ಊಚುಃ :—

ಧರ್ಮಃ ಖಲು ಸ ಹಿ ಪರಮೋ
ಧರ್ಮೇಭ್ಯೋ ಮಾಧವ ಸಕಲೇಭ್ಯೋಪಿ ।
ಭಕ್ತಿರ್ಭವತಿ ಯತೋ ವೈ
ಧರ್ಮೋ ಭುವಿ ತ್ವಯಿ ಹಿ ನಿರವದ್ಯಾ ॥ ೯ ॥
ಧರ್ಮಾತ್ಮಾನಂ ಭಗವನ್ಧರ್ಮಧುರೀಣಂ ಚ ಧರ್ಮಪಾತಾರಂ ।
ಸರ್ವಾತಿ ಪ್ರಿಯಧರ್ಮಂ ನುಮಸ್ತ್ವಂ ಧರ್ಮಸಂಭೂತಿಂ ॥ ೧೦ ॥

---

೭. ಪ್ರಜಾಪತಿಗಳು ಸ್ತುತಿಸುತ್ತಾರೆ:—"ಎಲೈ ಸ್ವಾಮಿಯೇ! ಶ್ರೀದೇವೀಸಮೇತನಾಗಿ ನೀನು ಯಾವುಗಳ ನೆರಳನ್ನಾಶ್ರಯಿಸಿರುವೆಯೋ ಆ ಈ ಕಲ್ಪವೃಕ್ಷಗಳೇ ಧನ್ಯಗಳು! ನಿನಗೋಸ್ಕರ ಈ ಮಂಟಪವನ್ನು ರಚಿಸಿರುವಾತನೇ ಧನ್ಯನು! ನಿನಗೆ ಪೀಠವನ್ನು ಹಾಕಿರುವ ಈ ಭೂಮಿಯೆ ಧನ್ಯೆಯು.

೮. ಕನ್ಯೆಯನ್ನು ಸಾಕ್ಷಾತ್ತಾದ ನಿನಗೇ ದಾನಮಾಡಿರುವ ಈ ಸಮುದ್ರರಾಜನು ಲೋಕದಲ್ಲೆಲ್ಲ ನಿಜವಾಗಿಯೂ ಧನ್ಯನು! ನಿನ್ನನ್ನು ನೋಡುತ್ತಿರುವವರಾದ ಈ ನಾವೆಲ್ಲರೂ ಧನ್ಯರು! ಧನ್ಯನೂ, ಸರ್ವಪ್ರಭುವೂ, ಶ್ರೀಪತಿಯೂ ಆದ ನಿನಗೆ ತಲೆಬಾಗಿ ನಮಸ್ಕರಿಸುತ್ತೇವೆ."

೯. ಮನುಗಳು ಸ್ತುತಿಸುತ್ತಾರೆ:—"ಧರ್ಮವು ಎಲ್ಲಕ್ಕಿಂತ ಶ್ರೇಷ್ಠವಾಗಿರುವುದು ಸರಿಯಷ್ಟೆ. ಎಲೈ ಮಾಧವನೇ! ಸಕಲಧರ್ಮಗಳ ಆಚರಣೆಯಿಂದಲೂ, ಧರ್ಮಕ್ಕೆ ನೆಲೆಯಾದ ನಿನ್ನಲ್ಲಿ ನಿಷ್ಕಲ್ಮಷವಾದ ಭಕ್ತಿಯುಂಟಾಗುವುದಾದರೆ ಆಗ ಮಾತ್ರ ಧರ್ಮಗಳೆಲ್ಲವೂ ಪರಮಶ್ರೇಷ್ಠಗಳಾಗುತ್ತವೆಯೆಂಬುದು ದಿಟವು.

೧೦. ಎಲೈ ಭಗವಂತನೇ! ಧರ್ಮಾತ್ಮನೂ, ಧರ್ಮಧುರೀಣನೂ, ಧರ್ಮರಕ್ಷಕನೂ, ಎಲ್ಲಕ್ಕಿಂತಲೂ ಧರ್ಮವನ್ನೇ ಅತಿ ಪ್ರಿಯವೆಂದು ಭಾವಿಸಿರುವವನೂ, ಧರ್ಮಕ್ಕೆ ಉತ್ಪತ್ತಿಸ್ಥಾನವೂ ಆಗಿರುವ ನಿನ್ನನ್ನು ನಮಸ್ಕರಿಸುತ್ತೇವೆ."

ಋಷಯ ಊಚುಃ:—

ಭಕ್ತ್ಯಾ ಹೀನಸ್ತ್ವದ್ವಿಮುಖೋ ವಯುನಾರ್ಥೀ
ಶ್ರಾಮ್ಯನ್ ಭೂಯೋಽಪ್ಯಸ್ಯ ನ ಸಿದ್ಧಿಂ ಸಮುಪೈತಿ ।
ತಹ್ಯಾರ್ಸಕ್ತಃ ಕರ್ಮಣಿ ಕಾಮ್ಯೇತು ಕುತೋಽಸೌ
ಸೌಖ್ಯಂ ಯಾಯಾದಕ್ಷಯಮಾನಂದಮಹಾಬ್ಧೇ ॥ ೧೧ ॥
ಭಕ್ತ್ಯಾ ನಿತ್ಯಂ ತ್ವಾಮತ ಏವ ವಯಂ ವೈ
ಶ್ರದ್ಧಾಯುಕ್ತಾ ಧರ್ಮತಪೋನಿಗಮಾದ್ಯೈಃ ।
ಮಾಯಾತೀತಂ ಕಾಲನಿಯಂತಾರಮುದಾರಂ
ಧ್ಯಾಯಾಮಃ ಶ್ರೀಕಾಂತ ಪರಾತ್ಪರಮೇಕಂ ॥ ೧೨ ॥

ಇಂದ್ರ ಉವಾಚ:—

ಭಗವನ್ಬಹುದುಃಖಿತಾ ವಯಂ
ನನು ದುರ್ವಾಸಸ ಏವ ಹೇಲನಾತ್ ।
ನ ಭವಂತಮೃತೇಽವಿತುಂ ಹಿ ನೋ
ವಿಧಿರುದ್ರಪ್ರಮುಖಾ ಇಮೇಽಶಕನ್ ॥ ೧೩ ॥
ವಿಗತಾಖಿಲ ಸಂಪದೋ ನಿರನ್ನಾಃ
ಸಮಭಾವಂ ಭುವಿ ಪಾಮರೈರುಪೇತಾಃ ।

---

೧೧. ಋಷಿಗಳು ಸ್ತುತಿಸುತ್ತಾರೆ:—"ಭಕ್ತಿಹೀನನಾಗಿ ನಿನ್ನಲ್ಲಿ ವಿಮುಖನಾಗಿರುವ ಯಾವ ಅರ್ಥಿಯೂ ಬಹಳವಾಗಿ ಶ್ರಮಪಡುವವನಾದರೂ ತನ್ನ ಕಾರ್ಯದಲ್ಲಿ ಸಿದ್ಧಿಯನ್ನು ಹೊಂದುವುದಿಲ್ಲವು. ಹೀಗಿರುವಲ್ಲಿ ಆನಂದಮಹಾಸಾಗರಸ್ವರೂಪನಾಗಿರುವ ಎಲೈ ಸ್ವಾಮಿಯೇ! ಆಸಕ್ತನಾಗಿ ಕಾಮ್ಯಕರ್ಮದಲ್ಲಿಯೆ ತೊಡಗಿದ್ದರೆ ಅವನು ಹೇಗೆತಾನೆ ಸೌಖ್ಯವನ್ನೈದಿಯಾನು?

೧೨. ಆದ್ದರಿಂದಲೇ ಓ ಶ್ರೀಕಾಂತಾ! ನಾವು ಶ್ರದ್ಧೆಯಿಂದ ಕೂಡಿದವರಾಗಿ ಧರ್ಮ, ತಪಸ್ಸು, ನಿಗಮ ಮೊದಲಾದುವುಗಳಿಂದ, ಮಾಯಾತೀತನೂ, ಕಾಲವನ್ನು ನಡೆಸುವವನೂ, ಉದಾರನೂ, ಪರಾತ್ಪರನೂ, ಏಕೈಕನೂ ಆದ ನಿನ್ನನ್ನು ಭಕ್ತಿಯಿಂದ ನಿತ್ಯವೂ ಧ್ಯಾನಿಸುತ್ತೇವೆ."

೧೩. ಇಂದ್ರನು ಸ್ತುತಿಸುತ್ತಾನೆ:—"ಭಗವಂತಾ! ದುರ್ವಾಸನನ್ನು ಅವಹೇಳನಮಾಡಿದ್ದರಿಂದಲೆ ನಾವು ಬಹು ದುಃಖಿತರಾದೆವು. ನೀನೊಬ್ಬನು ಹೊರತು ಬ್ರಹ್ಮ, ರುದ್ರರೇ ಮೊದಲಾದ ಈ ದೇವತೆಗಳಾರೂ ನಮ್ಮನ್ನು ಕಾಪಾಡಲು ಶಕ್ತರಾಗಲಿಲ್ಲವು.

೧೪. ನಾವು ಸಮಸ್ತಸಂಪತ್ತುಗಳನ್ನೂ ಕಳೆದುಕೊಂಡು ಅನ್ನವಿಲ್ಲದವರಾಗಿ ಭೂಮಿಯಲ್ಲಿ ಪಾಮರರೊಡನೆ ಪಾಮರರಾಗಿ ಅಲೆದೆವು. ಈಗ ನಾವು ನಿನ್ನಿಂದಲೆ

ಭವತ್ಯೈವ ವಯಂ ಹೃತಾಪದಃ ಸ್ಮಃ
ಸಪದಿ ಶ್ರೀಹರಯೇ ನಮೋಽಸ್ತು ತುಭ್ಯಂ ॥ ೧೪ ॥

ಅಗ್ನಿರುವಾಚ :—

ಗೀರ್ವಾಣದಾನವನರಾದ್ಯುಪಜೀವನಾನ್ನಂ
ಯನ್ನಿರ್ಮಿತಂ ಹಿ ಭವತೈವ ತತೋ ಬುಧಾಸ್ತು ।
ಯಜ್ಞೇಷು ತೇನ ಯಜನಂ ತವ ಕುರ್ವತೇಽಥೋ
ತ್ವಚ್ಛೇಷಮನ್ಯದಿವಿಷದ್ಭ್ಯ ಉಪಾನಯಂತಿ ॥ ೧೫ ॥
ಕಾಮ್ಯೇಷು ಕರ್ಮಸುರತಾ ಅಪಿ ಯಾಗ್ನಿಕಾಸ್ತೇ
ತತ್ಕರ್ಮಬಂಧನತ ಆಶು ವಿಮುಚ್ಯ ಯಾಂತಿ ।
ಬ್ರಾಹ್ಮೀಂ ಗತಿಂ ತದಿತರೇತು ಭವಂತಿ ಚೌರಾಃ
ಶ್ರೀಯಜ್ಞಪೂರುಷಮಹಂ ಪ್ರಣಮಾಮಿ ತಂ ತ್ವಾಂ ॥೧೬॥

ಮರುತ ಊಚುಃ :—

ಭಕ್ತಾ ಏಕಾಂತಿಕಾಸ್ತೇಽಕ್ಷರ ಪರಮಪದೇ ಸೇವಯಾ ತೇ ತು ಹೀನಂ
ವಾಸೈಶ್ವರ್ಯಾದಿ ನೇಚ್ಛಂತ್ಯತಿಶಯಿತಸುಖಂ ನಾಪಿ ಕೈವಲ್ಯಮೋಕ್ಷಂ।
ತದ್ಯುಕ್ತಂ ತ್ವಾತ್ಮನೋಽಪಿ ಶ್ವಪಚಕುಲಜನುರ್ಮಾನಯಂತ್ಯುತ್ತಮಂ ವೈ
ತ್ವಂ ತ್ವಾಮೇಕಾಂತಧರ್ಮಾಶ್ರಯಣಮುಪಗತಾಃ ಶ್ರೀಮಹಾ
ಪೂರುಷಂ ಸ್ಮಃ ॥ ೧೭ ॥

---

ಸಮಸ್ತಆಪತ್ತುಗಳಿಂದಲೂ ಬಿಡುಗಡೆಯನ್ನು ಪಡೆದಿದ್ದೇವೆ. ಶ್ರೀಹರೀ ! ಇದೊ ನಿನಗೆ ನಮಸ್ಕಾರಮಾಡುತ್ತೇವೆ.''

೧೫. ಅಗ್ನಿಯು ಸ್ತುತಿಸುತ್ತಾನೆ:—'' ದೇವತೆಗಳು, ದಾನವರು, ನರರು, ಮೊದಲಾದವರ ಜೀವನನಿರ್ವಾಹಕ್ಕಾಗಿ ನೀನೇ ಅನ್ನವನ್ನು ನಿರ್ಮಿಸಿದ್ದೀಯೆ. ಆ ಕಾರಣದಿಂದಲೇ ವಿದ್ವಾಂಸರು ನಿನಗೆ ಯಜ್ಞಗಳಲ್ಲಿ ಆ ಅನ್ನದಿಂದಲೆ ಯಜನ ಮಾಡುತ್ತಾರೆ. ಬಳಿಕ ನಿನಗರ್ಪಿಸಿ ಉಳಿದುದನ್ನು ಇತರ ದೇವತೆಗಳಿಗೆ ನೀಡುತ್ತಾರೆ.

೧೬. ಆ ಯಜ್ಞಕರ್ತರು ಕಾಮ್ಯಕರ್ಮಗಳಲ್ಲಿ ನಿರತರಾಗಿರುವರಾದರೂ ಕರ್ಮಬಂಧದಿಂದ ಬೇಗನೆಯೆ ಬಿಡುಗಡೆಹೊಂದಿ ಬ್ರಾಹ್ಮೀಗತಿಯನ್ನೈದುತ್ತಾರೆ. ಅವರು ಹೊರತಾಗಿ ಉಳಿದ ಬೇರೆಯವರು ಚೋರರಾಗುತ್ತಾರೆ. ಅಂಥ ಯಜ್ಞಪುರುಷನಾಗಿರುವ ನಿನಗೆ ಪ್ರಣಾಮಮಾಡುತ್ತೇನೆ.''

೧೭. ಮರುತರು ಸ್ತುತಿಸುತ್ತಾರೆ:— '' ಯಾರು ನಿನ್ನ ಏಕಾಂತಭಕ್ತರಾಗಿರುವರೋ ಅವರು ನಾಶರಹಿತವಾದ ಪರಮಪದದಲ್ಲಿಯೂ ನಿನ್ನ ಸೇವೆಯೊಂದಿಲ್ಲವಾದರೆ ವಾಸವನ್ನಾಗಲಿ, ಐಶ್ವರ್ಯಾದಿಗಳನ್ನಾಗಲಿ, ಅತಿಶಯವಾದ ಸುಖವನ್ನಾಗಲಿ ಇಚ್ಛಿಸುವುದಿಲ್ಲ ; ಕೈವಲ್ಯಮೋಕ್ಷವನ್ನೂ ಬಯಸುವುದಿಲ್ಲ.

ಸಿದ್ಧಾ ಊಚುಃ:—

ನೈಕಬ್ರಹ್ಮಾಂಡಸರ್ಗಾದಿಕಾರಣಂ ತ್ವಾಮಕಾರಣಂ ।
ತತ್ಸ್ಥಂ ತದ್ವ್ಯತಿರಿಕ್ತಂ ಚ ನಿಯಂತಾರಂ ನಮಾಮಹೇ ॥ ೧೮ ॥

ರುದ್ರಾ ಊಚುಃ:—

ಮಾಯಯಾಃ ಸರ್ವಮೋಹಿನ್ಯಾ ಮೋಹನಂ ಮೋಹವರ್ಜಿತಂ ।
ಮಹಾಕಾಲಸ್ಯಾಪಿ ಕಾಲಂ ತ್ವಾಂ ನಮಃ ಪುರುಷೋತ್ತಮಂ ॥ ೧೯ ॥

ಆದಿತ್ಯಾ ಊಚುಃ:—

ಪ್ರಕಾಶಿತಾ ಯೇನ ವಯಂ ಜಗಂತಿ
ಪ್ರಕಾಶಯಾಮೋ ಭವತಾ ರಮೇಶ ।
ಸ್ವಯಂ ಪ್ರಕಾಶಂ ತಮುರುಪ್ರಕಾಶಂ
ಪ್ರಕಾಶಮೂರ್ತಿಂ ಪ್ರಣತಾ ಭವಂತಂ ॥ ೨೦ ॥

ಸಾಧ್ಯ ಊಚುಃ:—

ಶಾಸ್ತಾ ನೃಪಾಣಾಂ ಚ ಮಹೋರಗಾಣಾಂ
ದೈತ್ಯಾಧಿಪಾನಾಂ ಚ ಸುರಾಧಿಪಾನಾಂ ।

---

ಅದರಿಂದ (ಎಂದರೆ ನಿನ್ನ ಸೇವೆಯಿಂದ) ಕೂಡಿದ್ದು ಶ್ವಪಚಕುಲದ ಜನ್ಮವೇ ಆದರೂ ತಮಗೆ ಅದೇ ಉತ್ತಮವೆಂದು ಭಾವಿಸುತ್ತಾರೆ. ಅಂಥ ಏಕಾಂತ ಧರ್ಮಕ್ಕೆ ಆಶ್ರಯಸ್ಥಾನವಾಗಿರುವ ಓ ಮಹಾಪುರುಷ! ನಾವು ಇಂತಹ ನಿನ್ನನ್ನು ಬಳಿಸಾರಿ ಬಂದಿದ್ದೇವೆ.''

೧೮. ಸಿದ್ಧರು ಸ್ತುತಿಸುತ್ತಾರೆ:— ''ಎಲೈ ಸ್ವಾಮಿಯೆ! ಅನೇಕ ಬ್ರಹ್ಮಾಂಡಗಳ ಸೃಷ್ಟಿಸ್ಥಿತಿ ಮೊದಲಾದುವುಗಳಿಗೆ ಕಾರಣನಾದರೂ ನಿನಗೆ ಮಾತ್ರ ಕಾರಣವೊಂದಿಲ್ಲದವನಾಗಿಯೂ, ಅದರಲ್ಲಿ ನೆಲಸಿರುವವನಾದರೂ ಅದಕ್ಕಿಂತಲೂ ಪ್ರತ್ಯೇಕವಾದವನಾಗಿಯೂ, ಅವುಗಳೆಲ್ಲವನ್ನೂ ನಡೆಸುವವನಾಗಿಯೂ ಇರುವ ನಿನಗೆ ನಮೋ ನಮೋ!''

೧೯. ರುದ್ರರು ಸ್ತುತಿಸುತ್ತಾರೆ:—''ಎಲೈ ನಾರಾಯಣನೇ! ಸರ್ವವನ್ನೂ ಮೋಹಗೊಳಿಸುವ ಮಾಯೆಗೂ ಮೋಹವುಂಟುಮಾಡುವವನೂ, ನೀನು ಮಾತ್ರ ಮೋಹವಿಲ್ಲದವನೂ, ಮಹಾಕಾಲನಿಗೂ ಕಾಲನಾಗಿರುವವನೂ, ಪುರುಷೋತ್ತಮನೂ ಆದ ನಿನಗೆ ನಮೋ ನಮಃ.''

೨೦. ಆದಿತ್ಯರು ಸ್ತುತಿಸುತ್ತಾರೆ:— ''ಓ ಪರಮೇಶ್ವರಾ! ರಮಾಪತಿಯಾದ ನಿನ್ನಿಂದಲೇ ಪ್ರಕಾಶವನ್ನು ಪಡೆದಿರುವ ನಾವೆಲ್ಲರೂ ಈರೇಳು ಲೋಕಗಳನ್ನೂ ಆ ಪ್ರಕಾಶದಿಂದಲೇ ಬೆಳಗುತ್ತಿರುವೆವು. ಅಂತಹ ಸ್ವಯಂಪ್ರಕಾಶನೂ, ಅಮಿತಪ್ರಕಾಶನೂ, ಪ್ರಕಾಶಮೂರ್ತಿಯೇ ಆದವನೂ ಆದ ನಿನಗೆ ಇದೋ ನಾವೆಲ್ಲರೂ ಪ್ರಣತರಾಗಿರುವೆವು.''

೨೧. ಸಾಧ್ಯರು ಸ್ತುತಿಸುತ್ತಾರೆ:— ''ದೇವದೇವ! ನೃಪತಿಗಳು, ಮಹೋರಗರು, ದೈತ್ಯಾಧಿಪತಿಗಳು, ಸುರಾಧಿಪತಿಗಳು, ಮನುಗಳು, ಪ್ರಜಾಪತಿ

ತ್ವಂ ವೈ ಮನೂನಾಂ ಚ ಪ್ರಜಾಪತೀನಾಂ
ರಾಜಾಧಿರಾಜಾಯ ನಮೋಽಸ್ತು ತುಭ್ಯಂ ॥ ೨೧ ॥

**ವಸವ ಊಚುಃ:—**

ಭವತಿ ಭುವಿ ಯದಾ ಯದಾಽಸುರಾಂಶೈಃ
ಪ್ರಥಿತಸನಾತಧರ್ಮಧಾರ್ಮಿಕಾಣಾಂ ।
ಕದನಮುರು ತದಾ ತದಾ ಸ್ವಯಂ ತೇ
ಹ್ಯವತರತೇ ಪ್ರಣಮಾಮ ಧರ್ಮಗೋಪ್ತ್ರೇ ॥ ೨೨ ॥

**ಚಾರಣಾ ಊಚುಃ:—**

ಚರಿತ್ರಂ ಶುಭಂ ತೇ ಧೃತಾನೇಕಮೂರ್ತೇಃ
ಪ್ರಬಂಧೈರನೇಕೈರ್ಹಿ ಗಾಯಂತಿ ಭಕ್ತಾಃ ।
ಯದಾಶ್ರೋತೃವಕ್ತೄನ್ ಪುನಾತ್ಯೇವ ಸದ್ಯೋ
ವಯಂ ತಂ ನತಾಃ ಪುಣ್ಯಕೀರ್ತಿಂ ಭವಂತಂ ॥ ೨೩ ॥

**ಗಂಧರ್ವಾಪ್ಸರಸ ಊಚುಃ:—**

ಯೇ ಕಥಾಸ್ತೇ ವಿಹಾಯಾನ್ಯಗಾಥಾಃ ಪ್ರಭೋ
ಕೀರ್ತಯಂತೇಽಥ ಶೃಣ್ವಂತಿ ವಾ ತೇ ಜನಾಃ ।
ದುಃಖಿತಾಃಸ್ಯುಶ್ಚ ಸಂಸಾರಪಾಶೈಃ ಸಿತಾಸ್ತಂ
ನತಾಃ ಸ್ಮಃ ಶರಣ್ಯಂ ಭವಂತಂ ವಯಂ ॥ ೨೪ ॥

---

ಗಳು ಇವರೆಲ್ಲರನ್ನೂ ಅಂಕೆಯಲ್ಲಿಟ್ಟು ಆಳುವವನು ನೀನೇ! ಇಂತಹ ರಾಜಾಧಿರಾಜನಾದ ನಿನಗೆ ನಮಸ್ಕಾರವು."

೨೨. ವಸುಗಳು ಸ್ತುತಿಸುತ್ತಾರೆ:— "ಪ್ರಸಿದ್ಧವಾದ ಸನಾತನಧರ್ಮವನ್ನಾಶ್ರಯಿಸಿದ ಧಾರ್ಮಿಕರಿಗೆ ಭೂಮಿಯಲ್ಲಿ ಅಸುರಾಂಶವುಳ್ಳವರೊಡನೆ ಮಹತ್ತಾದ ಕದನವುಂಟಾದ ಸಮಯಗಳಲ್ಲೆಲ್ಲ ನೀನು ಸಾಕ್ಷಾತ್ತಾಗಿಯೆ ಅವತರಿಸುತ್ತೀಯೆ. ಹಾಗೆ ಅವತರಿಸಿ ಧರ್ಮರಕ್ಷಣೆಯನ್ನೆಸಗುವ ನಿನಗೆ ಪ್ರಣಾಮಮಾಡುತ್ತೇವೆ."

೨೩. ಚಾರಣರು ಸ್ತುತಿಸುತ್ತಾರೆ:—"ಎಲೈ ಪ್ರಭುವೇ! ಅನೇಕ ಮೂರ್ತಿಗಳನ್ನು ಧರಿಸಿಬಂದವನಾದ ನಿನ್ನ ಶುಭಚರಿತ್ರವನ್ನು ಅನೇಕ ಪ್ರಬಂಧಗಳ ಮೂಲಕ ಭಕ್ತರು ಗಾನಮಾಡುತ್ತಾರೆ. ಆ ನಿನ್ನ ಪುಣ್ಯಚರಿತ್ರೆಯು ಹೇಳುವವರನ್ನೂ ಕೇಳುವವರನ್ನೂ ತಕ್ಷಣವೇ ಪುನೀತರನ್ನಾಗಿ ಮಾಡುತ್ತದೆ. ಅಂಥ ಪುಣ್ಯಕೀರ್ತಿಯಾದ ನಿನ್ನನ್ನು ನಾವು ನಮಸ್ಕರಿಸುತ್ತೇವೆ."

೨೪. ಗಂಧರ್ವರೂ ಅಪ್ಸರೆಯರೂ ಸ್ತುತಿಸುತ್ತಾರೆ:–"ಪ್ರಭುವೇ! ಯಾರು ನಿನ್ನ ಕಥೆಗಳನ್ನು ಬಿಟ್ಟು ಬೇರೆ ಕಥೆಗಳನ್ನು ಹೇಳುತ್ತಾರೆಯೋ ಆ ಜನರು ಸಂಸಾರಪಾಶಗಳಿಂದ ಕಟ್ಟಲ್ಪಟ್ಟು ದುಃಖಿತರಾಗುತ್ತಾರೆ. ಶರಣಾಗತರಿಗೆ ಆಶ್ರಯಕೊಡುವವನಾದ ಅಂತಹ ನಿನಗೆ ಮಣಿಯುತ್ತೇವೆ."

ಸುಮುದ್ರ ಉವಾಚ :—

ಅಜಿತ ತವಾಽಥ ತಾವಕಜನಸ್ಯ ಮುದಾಽಲ್ಪಮಪಿ ದ್ರವಿಣ
ಜಲಾನ್ನವಸ್ತ್ರನಮನಾನ್ಯತಮೇನ ಸಕೃತ್ ।
ಚರಿತಿ ಹ ಸೇವನಂ ಸ ಪದವೀಂ ಮಹತೀಂ ಮಹತಾಂ
ವ್ರಜತಿ ಜನೋಽಲ್ಪಕೋಽಪಿ ತಮಹಂ ಪ್ರಣತಃ ಕರುಣಂ॥೨೫॥

ಪಾರ್ಷದಾ ಊಚುಃ :—

ಪಿತರೌ ತ್ವಮಸಿ ಸ್ವಜನಸ್ತ್ವಮಸಿ
ತ್ವಮಸೀಷ್ಟಗುರುಃ ಸುಹೃದಾತ್ಮಪತಿಃ ।
ತ್ವಮಸೀಶ್ವರ ಏವ ಚ ನಃ ಪರಮ
ಸ್ತ್ವಮಸಿ ದ್ರವಿಣಂ ಸಕಲಂ ತ್ವಮಸಿ ॥ ೨೬ ॥

ಮೂರ್ತಿರುವಾಚ :—

ಯತ್ಸಂಬಂಧತ ಏವ ಯಾಂತಿ ಪದವೀಮುಚ್ಚಾಂ ಮಹದ್ಭಿರ್ನುತಾಂ
ಸ್ತ್ರೀಶೂದ್ರಾಸುರನೀಚಪಕ್ಷಿಪಶವಃ ಪಾಪಾತ್ಮಜೀವಾ ಅಪಿ ।
ಯದ್ದೀನಾ ವಿಭುದೇಶ್ವರಾ ಅಪಿ ಭವಂತ್ಯರ್ಚ್ಯೋಜ್ಝಿತಾಸ್ತತ್ಕ್ಷಣಂ
ಗೋಲೋಕಾಧಿಪತಿಂ ತಮೇವ ಹೃದಯೇ ನಿತ್ಯಂ ಭಜೇ ತ್ವಾಮಹಂ ॥

---

೨೫. ಸಮುದ್ರನು ಸ್ತುತಿಸುತ್ತಾನೆ:—"ಎಲೈ ಅಜಿತನೇ! ನಿನಗಾಗಲಿ, ನಿನ್ನ ಭಕ್ತಜನರಿಗಾಗಲಿ ಹಣ, ನೀರು, ಅನ್ನ, ವಸ್ತ್ರಗಳನ್ನು ನೀಡುವುದರಿಂದಲೂ, ನಮಸ್ಕರಿಸುವುದರಿಂದಲೂ, ಬೇರೆ ಯಾವುದಾದರೂ ಬಗೆಯಿಂದ ಒಮ್ಮೆ ಯಾದರೂ ಅಲ್ಪವಾದರೂ ಸೇವೆಯನ್ನು ಮಾಡುವುದರಿಂದಲೂ ಮಾನವನು ಕೇವಲ ಅಲ್ಪನೇ ಆದರೂ ಮಹಾತ್ಮರ ಮಹತ್ತಾದ ಪದವಿಯನ್ನು ಪಡೆಯುತ್ತಾನೆ. ಅಂಥ ನಿನ್ನನ್ನು ದೀನನಾಗಿ ನಮಸ್ಕರಿಸುತ್ತೇನೆ."

೨೬. ಪಾರ್ಷದರು ಸ್ತುತಿಸುತ್ತಾರೆ:—"ನಮಗೆ ತಾಯಿತಂದೆಗಳು ನೀನೇ! ಸ್ವಜನವೂ ನೀನೇ! ನೀನೇ ನಮಗೆ ಇಷ್ಟಗುರುವು; ಸ್ನೇಹಿತನು ಮತ್ತು ಒಡೆಯನು. ನೀನೇ ನಮಗೆ ಪರಮೇಶ್ವರನೂ ಸಮಸ್ತವೂ ನೀನೇ ಆಗಿದ್ದೀಯೆ."

೨೭. ಮೂರ್ತಿಯು ಸ್ತುತಿಸುತ್ತಾಳೆ:— "ಸ್ತ್ರೀಯರು, ಶೂದ್ರರು, ಅಸುರರು, ನೀಚರು, ಪಶುಪಕ್ಷಿಗಳು ಇವರೆಲ್ಲರೂ ಪಾಪಾತ್ಮಜೀವಿಗಳಾಗಿದ್ದರೂ ಯಾರ ಸಂಬಂಧವುಂಟಾದ ಮಾತ್ರದಿಂದಲೇ ಮಹಾತ್ಮರಿಂದ ಹೊಗಳಲ್ಪಟ್ಟ ಉಚ್ಚವಾದ ಪದವಿಯನ್ನು ಪಡೆಯುವರೋ, ಯಾರ ಸಂಬಂಧವಿಲ್ಲದಿರುವವರು ವಿಭುದೇಶ್ವರರೇ ಆದರೂ ಆ ಕ್ಷಣವೆ ಪೂಜೆಯಿಲ್ಲದವರಾಗುತ್ತಾರೆಯೋ ಅಂಥ ಗೋಲೋಕಾಧಿಪತಿಯಾದ ನಿನ್ನನ್ನೇ ನಿತ್ಯವೂ ನಾನು ಹೃದಯದಲ್ಲಿ ಭಜಿಸುತ್ತೇನೆ."

ಸಾವಿತ್ರ್ಯುವಾಚ :—

ತ್ವಂ ಸರ್ಗಕಾಲೇ ಪ್ರಕೃತಿಂ ಚ ಪೂರುಷಂ
ದೃಷ್ಟ್ಯಾ ಸ್ವಯೋತ್ಥಾಪ್ಯ ತತಸ್ತದಾತ್ಮನಾ ।
ತತ್ತ್ವಾನಿ ಸೃಷ್ಟ್ವಾ ಮಹದಾದಿಮಾನಿತೈ
ರ್ನೈಕಾನ್ವಿರಾಜೋ ಬಹುಧಾ ಸಸರ್ಜಿಥ ॥ ೨೮ ॥
ವೈರಾಜರೂಪೇಣ ಜಗದ್ವಿಧಾತೃತಾಂ
ಸ್ವೀಕೃತ್ಯ ದೇವಾಸುರಮಾನುಷೋರಗಾನ್ ।
ತ್ವಂ ಸ್ಥಾವರಂ ಜಂಗಮಮೀಶ ನಿರ್ಮಮೇ
ತ್ವಮಾದಿಕರ್ತಾರಮುಪಾಶ್ರಿತಾಸ್ಮ್ಯಹಂ ॥ ೨೯ ॥

ದುರ್ಗೋವಾಚ :—

ಪ್ರಿಯತಮಯಾಽಧಿಕಯಾ ಹೃದಿ ಚಿಂತನಂ
ವಿದಧತೇ ತವ ಯೇ ಭುವಿ ತೇ ವಿಭೋ ।
ನ ಪರಮೇಷ್ಠಿಸುಖಂ ನ ದಿವಃ ಸುಖಂ
ನ ಕಮಯಂತಿ ಧರೈಕನರೇಶತಾಂ ॥ ೩೦ ॥
ಪ್ರಸಭಮರ್ಪಿತಮಪ್ಯತುಲಂ ತ್ವಯಾ
ಸುಖಮಿದಂ ಸಮವಾಪ್ಯ ಚ ತತ್ರ ತೇ ।
ತದಪಹಾಯ ನ ಶಕ್ತಿಕೃತಃ ಕ್ಷಣಂ
ತಮು ನಮಾಮಿ ಚ ಸಾತ್ವತನಾಯಕಂ ॥ ೩೧ ॥

---

೨೮. ಸಾವಿತ್ರಿಯು ಸ್ತುತಿಸುತ್ತಾಳೆ :—"ನೀನು ಸೃಷ್ಟಿಕಾಲದಲ್ಲಿ ಪ್ರಕೃತಿಯನ್ನೂ ಪುರುಷನನ್ನೂ ನಿನ್ನ ದೃಷ್ಟಿಯಿಂದಲೇ ಹೊರಹೊಮ್ಮಿಸಿದ ಬಳಿಕ ಪ್ರಕೃತಿಪುರುಷಾತ್ಮಕನಾಗಿ ತತ್ತ್ವಗಳನ್ನು ಸೃಷ್ಟಿಸಿ, ಮಹದಾದಿಗಳಾದ ಅನೇಕ 'ವಿರಾಜ'ಗಳನ್ನು ಬಹುಪ್ರಕಾರವಾಗಿ ಸೃಷ್ಟಿಮಾಡಿದೆ.

೨೯. ಎಲೈ ಸ್ವಾಮಿಯೇ! ವೈರಾಜರೂಪದಿಂದ ನೀನು ಜಗದ್ವಿಧಾತೃತ್ವವನ್ನು ಕೈಕೊಂಡು ದೇವ, ಅಸುರ, ಮಾನುಷ, ಉರಗರನ್ನೂ, ಸ್ಥಾವರ ಜಂಗಮಗಳನ್ನೂ ನಿರ್ಮಿಸಿರುವೆ. ಈ ರೀತಿ ಆದಿಕರ್ತನಾಗಿರುವ ನಿನ್ನನ್ನು ಉಪಾಸನೆ ಮಾಡುವವಳಾಗಿದ್ದೇನೆ."

೩೦. ದುರ್ಗೆಯು ಸ್ತುತಿಸುತ್ತಾಳೆ :—"ವಿಭುವೇ! ಭೂಮಿಯಲ್ಲಿ ಯಾರು ಅಧಿಕಪ್ರಿಯವೆಂದು ಭಾವಿಸಿ ಹೃದಯದಲ್ಲಿ ನಿನ್ನ ಚಿಂತನೆಯನ್ನು ಮಾಡುತ್ತಿರುವರೋ ಅವರು ಬ್ರಹ್ಮಸುಖವನ್ನು ಬಯಸುವುದಿಲ್ಲವು. ಸ್ವರ್ಗಸುಖವನ್ನು ಕಾಮಿಸುವುದಿಲ್ಲ. ಭೂಮಂಡಲದ ಸಾಮ್ರಾಜ್ಯವನ್ನು ಆಶಿಸುವುದಿಲ್ಲ.

೩೧. ಎಣೆಯಿಲ್ಲದ ಈ ಸುಖವೆಲ್ಲವನ್ನೂ ನೀನೇ ಕೊಟ್ಟೆಯಾದರೂ ಅದನ್ನು ಪಡೆದುಕೊಂಡ ಅವರು ಅದರಲ್ಲಿ ಕ್ಷಣಕಾಲವೂ ನೆಲಸುವುದಿಲ್ಲ; ಅದನ್ನು

ನದ್ಯ ಊಚುಃ:—

ವರದ ನಮನಮಾತ್ರಂ ನಾಮಸಂಕೀರ್ತನಂ ವಾ
ವಿದಧತಿ ತವ ಯೇ ವೈ ಜ್ಞಾನತೋಽಜ್ಞಾನತೋ ವಾ ।
ಜನಿಮೃತಿಯಮಭೀತೇಸ್ತ್ರಾನಪಿ ತ್ರಾಯಮಾಣಂ
ನರಸಖಮುಪಯಾತಾಃ ಸ್ಮೋಽದ್ಯ ನಾರಾಯಣಂ ತ್ವಾಂ॥೩೨॥

ದೇವಪತ್ನ್ಯ ಊಚುಃ:—

ಭುವಿ ಧೃತಾ ಕೃತೇರ್ಜನ್ಮ ಮಂಗಲಂ
ಚರಿತಮದ್ಭುತಂ ಲೋಕಪಾವನಂ ।
ಭವತಿ ನಿರ್ಗುಣಂ ಸರ್ವಮೇವ ತೇ
ಭವಸಿ ನಿರ್ಗುಣಂ ಬ್ರಹ್ಮ ಯತ್ಪರಂ ॥ ೩೩ ॥
ತವ ಸಮಾಶ್ರಯಾತ್ತಾಮಸಾ ಜನಾ
ಅಪಿ ಚ ರಾಜಸಾಃ ಸಾತ್ತ್ವಿಕಾಶ್ಚ ಯೇ ।
ನನು ಭವಂತಿ ತೇ ನಿರ್ಗುಣಾಸ್ತತೋ
ವಯಮುಪಾಸ್ಮಹೇ ತ್ವಾಂ ಹಿ ನಿರ್ಗುಣಂ ॥ ೩೪ ॥

---

ತೊರೆದು ನಿನ್ನನ್ನೇ ಭಜಿಸುವರು. ಅಂತಹ ಸಾತ್ವತನಾಯಕನಾದ ನಿನ್ನನ್ನು ನಮಿಸುತ್ತೇನೆ.''

೩೨. ನದೀದೇವತೆಗಳು ಸ್ತುತಿಸುತ್ತಾರೆ:—''ಎಲೈ ವರದನೇ ! ಜ್ಞಾನದಿಂದಲಾಗಲಿ, ಅಜ್ಞಾನದಿಂದಲಾಗಲಿ ಯಾರು ನಿನಗೆ ನಮಸ್ಕಾರಮಾತ್ರವನ್ನೋ, ನಿನ್ನ ನಾಮಸಂಕೀರ್ತನೆಯನ್ನೋ ಮಾಡುವರೋ ಅವರನ್ನು ಕೂಡ ಜನನ ಮರಣ ಮತ್ತು ಯಮ ಭೀತಿಗಳಿಂದ ನೀನು ರಕ್ಷಿಸಿ ಕಾಪಾಡುತ್ತೀಯೆ. ನರಸಖನೂ, ನಾರಾಯಣನೂ ಆದ ಅಂತಹ ನಿನ್ನನ್ನು ಈಗ ಬಳಿಸಾರಿ ಶರಣುಬಂದಿದ್ದೇವೆ.''

೩೩. ದೇವಪತ್ನಿಯರು ಸ್ತುತಿಸುತ್ತಾರೆ:—''ಭೂಲೋಕದಲ್ಲಿ ಆಕೃತಿಯನ್ನು ತಾಳಿಬಂದ ನಿನ್ನ ಜನ್ಮವು ಮಂಗಳಮಯವಾದುದು; ನಿನ್ನ ಚರಿತ್ರೆಯು ಅದ್ಭುತವಾದುದು; ಲೋಕವನ್ನು ಪಾವನಗೊಳಿಸುವಂಥದು. ನಿನಗೆ ಸಂಬಂಧಿಸಿದ ಸರ್ವಸ್ವವೂ ಸತ್ತ್ವರಜಸ್ತಮೋಗುಣಗಳನ್ನು ಮೀರಿದುದಾಗುತ್ತದೆ. ನೀನು ಯಾವುದು ಎಲ್ಲಕ್ಕಿಂತಲೂ ಶ್ರೇಷ್ಠವೆನಿಸಿರುವುದೋ ಆ ನಿರ್ಗುಣಬ್ರಹ್ಮವೇ ಆಗಿರುತ್ತೀಯೆ.

೩೪. ನಿನ್ನನ್ನು ದೃಢವಾಗಿ ಆಶ್ರಯಿಸುವುದರಿಂದ ತಾಮಸರಾದ ಜನರೂ ಮತ್ತು ಯಾರು ರಾಜಸರೋ, ಸಾತ್ವಿಕರೋ ಆ ಜನರು ಕೂಡ ನಿರ್ಗುಣರಾಗುತ್ತಾರೆ. ಆದುದರಿಂದ ನಾವು ಅಂತಹ ನಿರ್ಗುಣಬ್ರಹ್ಮಮೂರ್ತಿಯಾದ ನಿನ್ನನ್ನು ಉಪಾಸನೆ ಮಾಡುತ್ತೇವೆ.''

ಋಷಿಪತ್ನ್ಯ ಊಚುಃ:—

ಆರ್ತಾನಾಮುರುವೃಜಿನೈಸ್ತ್ರಿಧಾ ಚ ತಾಪೈಃ
ಸರ್ವಾಪತ್ಪ್ರಶಮನಮೇಕಮೇವ ವಿಷ್ಣೋಃ ।
ಪಾದಾಬ್ಜಂ ತವ ಭವತೀತಿ ತದ್ದ್ವಯಂ ವೈ
ಪ್ರಾಪ್ತಾಃ ಸ್ಮಃ ಶರಣಮನಂತ ದೇವದೇವ ॥ ೩೫ ॥

ಪೃಥಿವ್ಯುವಾಚ:—

ಪೂರ್ಣಶಾರದಸುಧಾಕರಾನನಂ
ಶಾರದಾಬ್ಜದಲದೀರ್ಘಲೋಚನಂ ।
ಶ್ರೀವಿಯೋಗ ಬಹುಧಾರ್ತಿಮೋಚನಂ
ವಾಸುದೇವಮಹಮೇಕಮಾಶ್ರಯೇ ॥ ೩೬ ॥

ಸರಸ್ವತ್ಯುವಾಚ:—

ನಯನೇ ಮಮಾಚ್ಯುತ ತವಾತಿಸುಂದರೇ
ಮುಖಶೀತರೋಚಿಷಿ ಚಕೋರತಾಂ ಗತೇ ।
ನ ಹಿ ಗಚ್ಛತೋಽನ್ಯತ ಇತೀಯಮೇವ ಮೇ
ಹೃದಿ ಮೂರ್ತಿರಸ್ತು ಸತತಂ ನಹೇತರಾ ॥ ೩೭ ॥

---

೩೫. ಋಷಿಪತ್ನಿಯರು ಸ್ತುತಿಸುತ್ತಾರೆ:—"ದೇವಾ! ಕಠಿನವಾದ ಮಹಾಪಾಪಗಳಿಂದಲೂ, ತಾಪತ್ರಯಗಳಿಂದಲೂ, ಆರ್ತರಾದವರ ಸಮಸ್ತ ಆಪತ್ತುಗಳನ್ನು ಶಮನಮಾಡುವಂಥದು ನಿನ್ನ ಪಾದಾಬ್ಜವೊಂದೇ. ಎಲೈ ವಿಷ್ಣುವೇ! ಅನಂತಾ, ದೇವದೇವಾ! ಈ ತಿಳಿವಳಿಕೆಯಿಂದ ನಾವು ನಿನ್ನನ್ನಾಶ್ರಯಿಸಿ ಬಂದಿದ್ದೇವೆ."

೩೬. ಪೃಥಿವಿಯು ಸ್ತುತಿಸುತ್ತಾಳೆ:—"ಶರತ್ಕಾಲದ ಪೂರ್ಣಚಂದ್ರನಂತೆಸೆಯುವ ಮುಖವುಳ್ಳವನೂ, ಶರತ್ಕಾಲದ ತಾವರೆಯ ದಳದಂತೆ ದೀರ್ಘವಾದ ಕಣ್ಣುಳ್ಳವನೂ, ಶ್ರೀವಿಯೋಗದಿಂದುಂಟಾಗುವ ಬಹು ಬಗೆಯ ಸಂಕಟಗಳನ್ನು ಪರಿಹರಿಸುವವನೂ ಆದ ವಾಸುದೇವ! ನಿನ್ನೊಬ್ಬನನ್ನೇ ನಾನು ಆಶ್ರಯಿಸುತ್ತೇನೆ."

೩೭. ಸರಸ್ವತಿಯು ಸ್ತುತಿಸುತ್ತಾಳೆ:—"ಎಲೈ ಅಚ್ಯುತನೇ! ನನ್ನ ಕಣ್ಣುಗಳೆರಡೂ ಅತಿ ಸುಂದರವಾದ ನಿನ್ನ ಮುಖಚಂದ್ರನಲ್ಲಿ ಚಕೋರತ್ವವನ್ನು ಪಡೆದಿರಲಾಗಿ, ಬೇರೊಂದೆಡೆಗೆ ಹೋಗಲೇ ಆರದವಾಗಿವೆ. ಆದುದರಿಂದ ನನ್ನ ಹೃದಯದಲ್ಲಿ ಈ ನಿನ್ನ ಮೂರ್ತಿಯೇ ಸದಾ ನೆಲಸಿರಲಿ. ಬೇರೆ ಯಾವುದೂ ನೆಲಸದಿರಲಿ."

ಸ್ಕಂದ ಉವಾಚ :—
ಇತಿ ಸ್ತುತೋಽಖಿಲೈರ್ದೇವೈಃ ಸೋಽಭಿನಂದ್ಯ ದೃಶೈವ ತಾನ್ ।
ಪ್ರಾಹ ಶ್ರಿಯಂ ಶುಭೇ ಪಶ್ಯ ದೇವಾದೀಂಸ್ತ್ವಮಿಮಾನಿತಿ ॥ ೩೮ ॥
ತತಃ ಸಮೀಕ್ಷಿತಾಃ ಪ್ರೀತ್ಯಾ ತಯಾ ಮಧುರಯಾ ದೃಶಾ ।
ತ್ರಿಲೋಕೀವಾಸಿನಃ ಸರ್ವೇ ಋದ್ಧಾ ಆಸನ್ಯಥಾ ಪುರಾ ॥ ೩೯ ॥
ಲೇಭಿರೇ ಸ್ವಸ್ವಋದ್ಧಿಂ ತೇ ಗೃಹಿಣಸ್ತ್ಯಾಗಿನೋಽಪಿ ಚ ।
ಧರ್ಮಾದಯಶ್ಚ ಸಾನಂದಂ ಪ್ರಚರಂತಿಸ್ಮ ಪೂರ್ವವತ್ ॥ ೪೦ ॥
ತಸ್ಯಾಃ ಶ್ರಿಯಾಶ್ಚ ಭಗವಾನ್ ದದೌ ಸ್ಥಾನಮುರಃ ಸ್ವಕಂ ।
ತತ್ರ ಸ್ಥಿತ್ವೈವ ಸಾವ್ಯಾಪತ್ತ್ರೈಲೋಕ್ಯಂ ಸಂಪದಾತ್ಮನಾ ॥ ೪೧ ॥
ತತೋ ರತ್ನಾಕರಃ ಸ್ವಸ್ಮಾಚ್ಛ್ರೀಜನೇರನುಭಾವತಃ ।
ಬಭೂವಾನ್ವರ್ಥಸಂಜ್ಞೋ ವೈ ಸಂಪೂರ್ಣಾಕ್ಷಯರತ್ನವಾನ್ ॥ ೪೨ ॥
ಚತುರ್ವಿಧೈರ್ಬಹುರಸೈಃ ಸದನ್ನೈರಮೃತೋಪಮೈಃ ।
ಸರ್ವಾನ್ ಸರ್ವಗತಾಂಸ್ತತ್ರ ತರ್ಪಯಾಮಾಸ ಸಾದರಂ ॥ ೪೩ ॥

---

೩೮. ಸ್ಕಂದನು ಹೇಳುತ್ತಾನೆ:— ಈ ರೀತಿ ಸಮಸ್ತ ದೇವತೆಗಳಿಂದಲೂ ಸ್ತುತಿಸಲ್ಪಟ್ಟವನಾದ ಆ ನಾರಾಯಣನು ಕಣ್ನೋಟದಿಂದಲೇ ಅವರನ್ನು ಅಭಿನಂದಿಸಿ, ಶ್ರೀದೇವಿಯನ್ನು ಕುರಿತು, 'ಎಲೆ ಮಂಗಳಾಂಗಿ! ಈ ದೇವಾದಿಗಳನ್ನು ಕಟಾಕ್ಷಿಸಿ ನೋಡು' ಎಂದನು.

೩೯. ಬಳಿಕ ಆ ಶ್ರೀದೇವಿಯು ಪ್ರೀತಿಯಿಂದ ಮಧುರದೃಷ್ಟಿಯನ್ನು ಪಸರಿಸಿ ಅವರನ್ನೊಮ್ಮೆ ನೋಡಿದಳು. ಅವಳಿಂದ ವೀಕ್ಷಿಸಲ್ಪಟ್ಟ ತ್ರಿಲೋಕನಿವಾಸಿಗಳಾದ ಸರ್ವರೂ ಪೂರ್ವದಲ್ಲಿ ಹೇಗಿದ್ದರೊ ಹಾಗೆಯೇ ಸಂಪತ್ಸಮೃದ್ಧಿಯನ್ನು ಹೊಂದಿದವರಾದರು.

೪೦–೪೧. ಅವರೇ ಅಲ್ಲದೆ ಗೃಹಿಗಳೂ, ತ್ಯಾಗಿಗಳೂ, ಎಲ್ಲರೂ ತಮ್ಮತಮ್ಮ ಋದ್ಧಿಗಳನ್ನು ಪಡೆದುಕೊಂಡರು. ಧರ್ಮಾದಿಗಳು ಕೂಡ ಆನಂದದಿಂದ ಮೊದಲಿನಂತೆ ಪ್ರಚಾರಹೊಂದಿದವು. ಆ ಶ್ರೀದೇವಿಗಾದರೋ ಭಗವಂತನು ತನ್ನ ವಕ್ಷಸ್ಥಳವನ್ನೇ ಸ್ಥಾನವಾಗಿ ಕಲ್ಪಿಸಿಕೊಟ್ಟನು. ಆಕೆಯು ಅಲ್ಲಿ ನೆಲಸಿಯೇ ಸಂಪತ್ಸ್ವರೂಪದಿಂದ ಮೂರು ಲೋಕಗಳನ್ನೂ ವ್ಯಾಪಿಸಿದಳು.

೪೨. ಇದಾದಬಳಿಕ ರತ್ನಾಕರನು ತನ್ನಲ್ಲಿ ಶ್ರೀದೇವಿಯು ಜನಿಸಿದುದರ ಪ್ರಭಾವದಿಂದ ಸಂಪೂರ್ಣವಾದ ಅಕ್ಷಯರತ್ನಗಳುಳ್ಳವನಾಗಿ ಅನ್ವರ್ಥ (ರತ್ನಾಕರ) ನಾಮವುಳ್ಳವನಾದನು.

೪೩. ಆ ರತ್ನಾಕರನು ಬಹುರಸಗಳಿಂದ ಕೂಡಿ ಅಮೃತಸಮಾನಗಳಾದ ನಾಲ್ಕುಬಗೆಯ ಶ್ರೇಷ್ಠಾನ್ನಗಳಿಂದ ಬಂದಿದ್ದ ಸರ್ವರನ್ನೂ ತೃಪ್ತಿಪಡಿಸಿದನು.

ಅನರ್ಘ್ಯಾಣಿ ಚ ವಸ್ತ್ರಾಣಿ ರತ್ನಭೂಷಾಃ ಪರಿಚ್ಛದಾನ್ ।
ದೇವಾದಿಭ್ಯೋ ದದೌ ಪ್ರೀತ್ಯಾ ಸರ್ವೇಭ್ಯೋಽಪಿ ಪೃಥಕ್ ಪೃಥಕ್॥ ೪೪ ॥
ಜಾಮಾತುಸ್ತುಷ್ಟಯೇ ಸ್ವಸ್ಯ ತದೀಯೇಭ್ಯಸ್ತದಾಂಬುಧೇಃ ।
ನಾಸೀತ್ಕಿಮಪ್ಯದೇಯಂ ವೈ ಘನವದ್ಧನವರ್ಷಿಣಃ ॥ ೪೫ ॥
ಭಗವಾನಪಿ ತದ್ವತ್ತಂ ಯೌತಕಂ ಚ ಧನಂ ಬಹು ।
ಬ್ರಾಹ್ಮಣೇಭ್ಯಃ ಪ್ರದಾಯೈವ ಶ್ರಿಯಾ ಸಹ ತಿರೋದಧೇ ॥ ೪೬ ॥
ಲಕ್ಷ್ಮೀನಾರಾಯಣಾಭ್ಯಾಂ ತೇ ಭೃಶಮಾನಂದಿತಾಃ ಸುರಾಃ ।
ಇಂದ್ರಾದಯೋ ದಿವಂ ಜಗ್ಮುಃ ಸ್ವಂ ಸ್ವಂ ಧಾಮಾಽಪರೇ ಯಯುಃ ॥
ಅಧಿಕಾರಂ ಚ ಸಂಪ್ರಾಪ್ಯ ಯಥಾಪೂರ್ವಂ ನಿಜಂ ನಿಜಂ ।
ಸರ್ವೇಽಪಿ ಸುಖಿನೋ ಜಾತಾಃ ಪ್ರಸಾದಾತ್ಕಮಲಾಪತೇಃ ॥ ೪೮ ॥
ಮಂದರಂ ಚ ಗಿರಿಂ ತಾರ್ಕ್ಷ್ಯಃ ಪುನರ್ಭಗವದಾಜ್ಞಯಾ ।
ಸ್ವಸ್ಥಾನಂ ಸಮುಪಾನೀಯ ಸ್ಥಾಪಯಾಮಾಸ ಲೀಲಯಾ ॥ ೪೯ ॥
ಏವಮಿಂದ್ರೇಣ ಬ್ರಹ್ಮರ್ಷೇ ನಷ್ಟಾ ಬ್ರಾಹ್ಮಣಶಾಪತಃ ।
ಉಪಲಬ್ಧಾ ಪುನಃ ಸಂಪನ್ನಾರಾಯಣಪ್ರಸಾದತಃ ॥ ೫೦ ॥

---

೪೪. ಅನರ್ಘ್ಯವೆನಿಸಿದ ವಸ್ತ್ರಗಳನ್ನೂ, ರತ್ನಭೂಷಣಗಳನ್ನೂ, ಬಗೆ ಬಗೆಯ ಹೊದಿಕೆಗಳನ್ನೂ, ಸಮಸ್ತದೇವತೆಗಳಿಗೂ ಒಬ್ಬೊಬ್ಬರಿಗೂ ಬೇರೆ ಬೇರೆಯಾಗಿ ಪ್ರೀತಿಯಿಂದ ಉಡುಗರೆ ಕೊಟ್ಟನು.

೪೫. ತನ್ನಳಿಯನ ತೃಪ್ತಿಗಾಗಿ ಅವನಿಗೂ ಅವನ ಕಡೆಯವರಿಗೂ ದಾನ ಮಾಡುವಲ್ಲಿ ಮೇಘದಂತೆ ಧನವೃಷ್ಟಿಯನ್ನೂ ಕರೆಯುವನಾದ ಆ ಅಂಬುಧಿಗೆ ಅದೇಯವಾದುದು ಯಾವುದೊಂದೂ ಕಾಣಿಸುತ್ತಿರಲಿಲ್ಲ.

೪೬. ಭಗವಂತನು ಕೂಡ ಮದುವೆಯ ಉಡುಗೊರೆಯಾಗಿ ಬಂದ ಆ ಬಹು ಧನವನ್ನೂ ಬ್ರಾಹ್ಮಣರಿಗೆ ದಾನಮಾಡಿ ಶ್ರೀಯಿಂದೊಡಗೂಡಿ ಅಂತರ್ಧಾನ ಹೊಂದಿದನು.

೪೭. ಶ್ರೀಲಕ್ಷ್ಮೀನಾರಾಯಣರ ಕಲ್ಯಾಣ ಮಹೋತ್ಸವವನ್ನು ನೋಡಿ ಬಹಳವಾಗಿ ಆನಂದಿಸಿದ ಇಂದ್ರಾದಿ ಬೇವತೆಗಳು ಸ್ವರ್ಗಕ್ಕೆ ಹೊರಟುಹೋದರು. ಉಳಿದವರು ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

೪೮. ಆ ಕಮಲಾಪತಿಯ ಪ್ರಸಾದದಿಂದ ಮೊದಲಿನಂತೆಯೆ ತಮ್ಮ ತಮ್ಮ ಅಧಿಕಾರವನ್ನು ಪಡೆದು ಸರ್ವರೂ ಸುಖಿಗಳಾದರು.

೪೯. ಭಗವಂತನ ಆಜ್ಞೆಯಿಂದ ತಾರ್ಕ್ಷ್ಯನು (ಗರುಡನು) ಮಂದರಗಿರಿಯನ್ನು ಲೀಲೆಯಿಂದೆತ್ತಿ ಅದರ ಸ್ಥಾನಕ್ಕೇ ತಂದು ಸ್ಥಾಪನೆಮಾಡಿದನು.

೫೦. ಎಲೈ ಬ್ರಹ್ಮರ್ಷಿಯೇ! ಹೀಗೆ ಬ್ರಾಹ್ಮಣಶಾಪದಿಂದ ನಾಶವಾಗಿ

ಯ ಏತಾಂ ಶೃಣುಯಾತ್ ಪುಣ್ಯಾಂ ಕಥಾಂ ಭಗವತೋ ಮುನೇ ।
ಕೀರ್ತಯೇತ್ ಪ್ರಯತೋ ವಾಪಿ ಸಂಪದಂ ಪ್ರಾಪ್ನುತೋ ಹಿ ಸಃ ॥೫೧॥
ಗೃಹಿಣಾಂ ಧನಸಿದ್ಧಿಃ ಸ್ಯಾತ್ ತ್ಯಾಗಿನಾಂ ಚ ಯಥೇಪ್ಸಿತಾ ।
ಭಕ್ತಿಜ್ಞಾನ ವಿರಾಗಾದೇರ್ಭವೇತ್ಸಿದ್ಧಿರನೇನ ವೈ ॥ ೫೨ ॥
ಇತಿ ತೇ ಕಥಿತಂ ಬ್ರಹ್ಮನ್ಯಥೇಂದ್ರಃ ಪ್ರಾಪ ಸಂಪದಂ ।
ನಾರದೋಽಪಿ ಯಥಾ ಶ್ವೇತಂ ದ್ವೀಪಂ ಸ ಗತವಾನೃಷಿಃ ।
ತತ್ತೇ ಸರ್ವಂ ಪ್ರವಕ್ಷ್ಯಾಮಿ ಶೃಣುಷ್ವೈಕೇನ ಚೇತಸಾ ॥ ೫೩ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಲಕ್ಷ್ಮೀನಾರಾಯಣ ಸ್ತುತಿನಿರೂಪಣಂ" ನಾಮ ಪಂಚದಶೋಽಧ್ಯಾಯಃ**

---

ಹೋಗಿದ್ದ ಸಂಪತ್ತನ್ನು ಆ ಮಹೇಂದ್ರನು ಶ್ರೀಮನ್ನಾರಾಯಣನ ಪ್ರಸಾದದಿಂದ ಪುನಃ ಪಡೆದುಕೊಂಡನು.

೫೧ ಎಲೈ ಮುನಿಯೇ! ಯಾವನು ಪುಣ್ಯಕರವಾದ ಭಗವಂತನ ಈ ಕಥೆಯನ್ನು ಕೇಳುವನೋ, ಅಥವಾ ನಿಯಮನಿಷ್ಠನಾಗಿ ಈ ಕಥೆಯನ್ನು ಹೇಳುವನೋ ಅವನು ಸಂಪತ್ತನ್ನು ಪಡೆಯುತ್ತಾನೆ.

೫೨. ಇದರಿಂದ ಗೃಹಸ್ಥರಿಗೆ ಧನಸಿದ್ಧಿಯುಂಟಾಗುತ್ತದೆ. ತ್ಯಾಗಿಗಳಿಗೂ ಭಕ್ತಿ, ಜ್ಞಾನ, ವೈರಾಗ್ಯಾದಿಗಳಲ್ಲಿ ಅವರವರಿಗೆ ಇಷ್ಟವಿರುವ ಪ್ರಕಾರದಲ್ಲಿ ಸಿದ್ಧಿಯುಂಟಾಗುತ್ತದೆ.

೫೩. ಎಲೈ ಬ್ರಾಹ್ಮಣನೇ! ಇಂದ್ರನು ಸಂಪತನ್ನು ಹೇಗೆ ಪಡೆದನೆಂಬುದನ್ನು ಈ ರೀತಿ ನಿನಗೆ ಹೇಳಲಾಯಿತು. ಆ ನಾರದಋಷಿಯು ಕೂಡ ಹೇಗೆ ಶ್ವೇತದ್ವೀಪಕ್ಕೆ ಹೋದನೆಂಬ ಆ ಸಂಗತಿಯೆಲ್ಲವನ್ನೂ ನಿನಗೆ ತಿಳಿಸುತ್ತೇನೆ. ಒಮ್ಮನಸ್ಸಿನಿಂದ ಆಲಿಸು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವಾಸುದೇವ ಮಾಹಾತ್ಮ್ಯದಲ್ಲಿ
"ಶ್ರೀಲಕ್ಷ್ಮೀನಾರಾಯಣಸ್ತೋತ್ರನಿರೂಪಣ"ವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶೋಽಧ್ಯಾಯಃ

## ಗೋಲೋಕವರ್ಣನಂ

ಸ್ಕಂದ ಉವಾಚ :—

**ಮೇರುಶೃಂಗಂ ಸಮಾರೂಢೋ ನಾರದೋ ದಿವ್ಯಯಾ ದೃಶಾ ।**
**ಶ್ವೇತದ್ವೀಪಂ ಚ ತತ್ರಸ್ಥಾನ್ ಪಶ್ಯನ್ ಮುಕ್ತಾನ್ ಸಹಸ್ರಶಃ ॥ ೧ ॥**
**ವಾಸುದೇವೇ ಭಗವತಿ ದೃಷ್ಟಿಮಾಬಧ್ಯ ತತ್ಕ್ಷಣಂ ।**
**ಉತ್ಪಪಾತ ಮಹಾಯೋಗೀ ಸದ್ಯಃ ಪ್ರಾಪ ಚ ಧಾಮ ತತ್ ॥ ೨ ॥**
**ಪ್ರಾಪ್ಯಶ್ವೇತಂ ಮಹಾದ್ವೀಪಂ ನಾರದೋ ಹೃಷ್ಟಮಾನಸಃ ।**
**ದದರ್ಶ ಭಕ್ತಾಂಸ್ತಾನೇವ ಶ್ವೇತಾಂಶ್ಚಂದ್ರಪ್ರಭಾನ್ ಶುಭಾನ್ ॥ ೩ ॥**
**ಪೂಜಯಾಮಾಸ ಶಿರಸಾ ಮನಸಾ ತೈಶ್ಚ ಪೂಜಿತಃ ।**
**ದಿದೃಕ್ಷುರ್ಬ್ರಹ್ಮ ಪರಮಂ ಸ ಚ ಕೃಚ್ಛ್ರಪರಃ ಸ್ಥಿತಃ ॥ ೪ ॥**
**ಭಕ್ತಮೇಕಾಂತಿಕಂ ವಿಷ್ಣೋರ್ಬುದ್ಧ್ವಾ ಭಾಗವತಾಸ್ತು ತೇ ।**
**ತಮೂಚುಸ್ತುಷ್ಟಮನಸೋ ಜಪಂತಂ ದ್ವಾದಶಾಕ್ಷರಂ ॥ ೫ ॥**

---

### ಕನ್ನಡದ ಅನುವಾದ

#### ಗೋಲೋಕವರ್ಣನ

೧—೨. ಸ್ಕಂದನು ಹೇಳುತ್ತಾನೆ:—ನಾರದನು ಮೇರುಶಿಖರವನ್ನೇರಿ ಶ್ವೇತದ್ವೀಪವನ್ನೂ ಅಲ್ಲಿರುವ ಸಹಸ್ರಾರುಮಂದಿ ಮುಕ್ತರನ್ನೂ ದಿವ್ಯದೃಷ್ಟಿಯಿಂದ ನೋಡುತ್ತ, ಭಗವಂತನಾದ ವಾಸುದೇವನಲ್ಲಿ ದೃಷ್ಟಿಯನ್ನು ನೆಲೆಗೊಳಿಸಿ ತಕ್ಷಣವೆ ಮೇಲಕ್ಕೆ ಹಾರಿದನು ; ಆ ಮಹಾಯೋಗಿಯು ಕೂಡಲೆ ಆ ಸ್ಥಾನಕ್ಕೂ ಹೋಗಿ ಸೇರಿದನು.

೩. ಶ್ವೇತದ್ವೀಪವನ್ನೈದಿದತರುವಾಯ ಆತನು ಹರ್ಷತುಂಬಿದ ಮನಸ್ಸುಳ್ಳವನಾದನು. ಅಲ್ಲಿ ಚಂದ್ರಪ್ರಭೆಯಂತೆ ಬೆಳಗುತ್ತ ಶ್ವೇತವರ್ಣವುಳ್ಳವರಾದ ಆ ಭಕ್ತರನ್ನು ಕಂಡನು.

೪. ಶಿರಸ್ಸಿನಿಂದ ನಮಸ್ಕರಿಸಿಯೂ, ಮನಸ್ಸಿನಿಂದ ಧ್ಯಾನಿಸಿಯೂ, ಅವರನ್ನು ಪೂಜಿಸಿದನು ; ಅವರಿಂದಲೂ ಪ್ರತಿಯಾಗಿ ಪೂಜಿಸಲ್ಪಟ್ಟನು. ಪರಬ್ರಹ್ಮನನ್ನು ದರ್ಶನಮಾಡಬೇಕೆಂಬ ಬಯಕೆಯುಳ್ಳವನಾಗಿ ಅಲ್ಲಿಯೇ ಕೃಚ್ಛ್ರವ್ರತವನ್ನು ಮಾಡತೊಡಗಿದನು.

೫. ಆ ಭಾಗವತರಾದರೊ ಅವನು ಮಹಾವಿಷ್ಣುವಿನ ಏಕಾಂತಭಕ್ತನೆಂದು ತಿಳಿದು ಮನಸ್ಸಂತುಷ್ಟಿಯನ್ನು ಹೊಂದಿದವರಾಗಿ ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತಿದ್ದ ಅವನನ್ನು ಕುರಿತು ಹೀಗೆಂದರು :—

ಶ್ವೇತಮುಕ್ತಾ ಊಚುಃ:—
ಮುನಿವರ್ಯ ಭವಾನ್ ಭಕ್ತಃ ಕೃಷ್ಣಸ್ಯಾಽಸಿ ಯತೋಽತ್ರ ನಃ ।
ದೃಷ್ಟವಾನ್ ದೇವದುರ್ದರ್ಶ್ಯಾನ್ಕಿಮಿಚ್ಛನ್ನಥ ತಪ್ಯತಿ ॥ ೬ ॥
ನಾರದ ಉವಾಚ:—
ಭಗವಂತಂ ಪರಂ ಬ್ರಹ್ಮ ಸಾಕ್ಷಾತ್ಕೃಷ್ಣಮಹಂ ಪ್ರಭುಂ ।
ದ್ರಷ್ಟುಮುತ್ಕೋಽಸ್ಮಿ ಭಕ್ತೇಂದ್ರಾಸ್ತಂ ದರ್ಶಯತ ತತ್ಪ್ರಿಯಾಃ ॥ ೭ ॥
ಸ್ಕಂದ ಉವಾಚ:—
ತದೈಕಃ ಶ್ವೇತಮುಕ್ತಸ್ತು ಕೃಷ್ಣೇನ ಪ್ರೇರಿತೋ ಹೃದಿ ।
ಏಹಿ ತೇ ದರ್ಶಯೇ ಕೃಷ್ಣಮಿತ್ಯುಕ್ತ್ವಾ ಪುರತೋಽಭವತ್ ॥ ೮ ॥
ಪ್ರಹೃಷ್ಟೋ ನಾರದಸ್ತೇನ ಸಾಕಮಾಕಾಶವರ್ತ್ಮನಾ ।
ಪಶ್ಯನ್ ಧಾಮಾನಿ ದೇವಾನಾಂ ತತ ಊರ್ಧ್ವಂ ಯಯೌ ಮುನಿಃ ॥ ೯ ॥
ಸಪ್ತರ್ಷೀಂಶ್ಚ ಧ್ರುವಂ ದೃಷ್ಟ್ವಾಽನಾಸಕ್ತಃ ಕುತ್ರಚಿತ್ಸ ಚ ।
ಮಹರ್ಜನತಪೋಲೋಕಾನ್ವ್ಯತೀಯಾಯ ದ್ವಿಜೋತ್ತಮ ॥ ೧೦ ॥

---

೬. ಶ್ವೇತಮುಕ್ತರು ಹೇಳುತ್ತಾರೆ:—"ಎಲೈ ಮುನಿವರ್ಯನೇ! ನೀನು ಇಲ್ಲಿಗೆ ಬಂದು ದೇವತೆಗಳಿಗೂ ನೋಡಲು ಕಷ್ಟಸಾಧ್ಯರಾದ ನಮ್ಮನ್ನು ನೋಡಿದೆ. ಆದುದರಿಂದ ನೀನು ಶ್ರೀ ಕೃಷ್ಣನ ಭಕ್ತನೇ ಸರಿ. ಇನ್ನೂ ನೀನೇನನ್ನು ಬಯಸಿ ತಪಿಸುತ್ತಿದ್ದೀಯೆ?"

೭. ನಾರದನು ಹೇಳುತ್ತಾನೆ:—"ಎಲೈ ಭಕ್ತಶ್ರೇಷ್ಠರೇ! ಪ್ರಭುವೂ, ಭಗವಂತನೂ, ಪರಬ್ರಹ್ಮನೂ ಆದ ಸಾಕ್ಷಾತ್ ಶ್ರೀಕೃಷ್ಣನನ್ನು ದರ್ಶನಮಾಡಬೇಕೆಂದು ಉತ್ಸುಕನಾಗಿದ್ದೇನೆ. ಅವನಿಗೆ ಪ್ರಿಯರಾಗಿರುವ ನೀವು ನನಗೆ ಅವನ ದರ್ಶನವನ್ನು ಮಾಡಿಸಿರಿ."

೮. ಸ್ಕಂದನು ಹೇಳುತ್ತಾನೆ:— ಆಗ ಒಬ್ಬ ಶ್ವೇತಮುಕ್ತನು ಕೃಷ್ಣನಿಂದ ಹೃದಯದಲ್ಲಿ ಪ್ರೇರಿಸಲ್ಪಟ್ಟವನಾಗಿ, 'ಎಲೈ ಭಕ್ತನೇ! ಬಾ, ನಿನಗೆ ಕೃಷ್ಣನನ್ನು ತೋರಿಸುತ್ತೇನೆ' ಎಂದು ನುಡಿದು ಮುಂದೆ ಹೊರಟನು.

೯. ನಾರದಮುನಿಯು ಬಹಳವಾಗಿ ಹರ್ಷಗೊಂಡು ಅವನೊಡನೆ ಆಕಾಶಮಾರ್ಗದಲ್ಲಿ ಹೊರಟು ದೇವತೆಗಳ ಸ್ಥಾನಗಳೆಲ್ಲವನ್ನೂ ದಾಟಿ ಅಲ್ಲಿಂದ ಮೇಲಕ್ಕೆ ಹೋದನು.

೧೦. ಎಲೈ ದ್ವಿಜೋತ್ತಮನೇ! ಆ ಮುನಿಯು ಸಪ್ತರ್ಷಿಗಳನ್ನೂ, ಧ್ರುವನನ್ನೂ ಕಂಡು ಅಲ್ಲೆಲ್ಲಿಯೂ ಆಸಕ್ತಿಯಿಲ್ಲದವನಾಗಿ, ಮಹರ್ಲೋಕ, ಜನೋಲೋಕ, ತಪೋಲೋಕಗಳನ್ನು ದಾಟಿ ಮುಂದೆ ನಡೆದನು.

ಬ್ರಹ್ಮಲೋಕಂ ತತೋ ದೃಷ್ಟ್ವಾ ಶ್ವೇತಮುಕ್ತಾನುಗೋ ಮುನಿಃ ।
ಕೃಷ್ಣಸ್ಯೈವೇಚ್ಛಯಾಽಧ್ವಾನಂ ಪ್ರಾಪಾಷ್ಟಾವರಣೇಷ್ವಪಿ ॥ ೧೧ ॥
ಭೂಮ್ಯಪ್ತೇಜೋಽನಿಲಾಕಾಶಾಹಮ್ಮಹತ್ಪ್ರಕೃತೀಃ ಕ್ರಮಾತ್ ।
ಕ್ರಾಂತ್ವಾ ದಶೋತ್ತರಗುಣಾಃ ಪ್ರಾಪ ಗೋಲೋಕಮದ್ಭುತಂ ॥ ೧೨ ॥
ಧಾಮ ತೇಜೋಮಯಂ ತದ್ಧಿ ಪ್ರಾಪ್ಯಮೇಕಾಂತಿಕೈರ್ಹರೇಃ ।
ಗಚ್ಛನ್ಸದರ್ಶ ವಿತತಾಮಗಾಧಾಂ ವಿರಜಾಂ ನದೀಂ ॥ ೧೩ ॥
ಗೋಪೀಗೋಪಗಣಸ್ನಾನಧೌತಚಂದನಸೌರಭಾಂ ।
ಪುಂಡರೀಕೈಃ ಕೋಕನದೈ ರಮ್ಯಾಮಿಂದೀವರೈರಪಿ ॥ ೧೪ ॥
ತಸ್ಯಾಸ್ತಟಂ ಮನೋಹಾರಿ ಸ್ಫಟಿಕಾಶ್ಮಮಯಂ ಮಹತ್ ।
ಪ್ರಾಪ ಶ್ವೇತಹರಿದ್ರಕ್ತಪೀತಸನ್ಮಣಿರಾಜಿತಂ ॥ ೧೫ ॥
ಕಲ್ಪವೃಕ್ಷಾಲಿಭಿರ್ಜುಷ್ಟಂ ಪ್ರವಾಲಾಂಕುರಶೋಭಿತಂ ।
ಸ್ಯಮಂತಕೇಂದ್ರನೀಲಾದಿ ಮಣೀನಾಂ ಖನಿಮಂಡಿತಂ ॥ ೧೬ ॥

---

೧೧. ಬಳಿಕ, ಆ ಶ್ವೇತಮುಕ್ತನನ್ನು ಅನುಸರಿಸಿ ಹೋಗುತ್ತಲಿದ್ದ ಆ ಮುನಿಯು ಬ್ರಹ್ಮಲೋಕವನ್ನು ಕಂಡು ಶ್ರೀಕೃಷ್ಣನ ಇಚ್ಛೆಯಿಂದಲೇ ಅಷ್ಟಾವರಣಗಳಲ್ಲಿಯೂ ಕೂಡ ಮಾರ್ಗವನ್ನು ಪಡೆದನು.

೧೨. ಭೂಮಿ, ಅಪ್ (ನೀರು), ತೇಜಸ್ಸು, ಅನಿಲ (ವಾಯು), ಆಕಾಶ, ಅಹಂಕಾರ, ಮಹತ್ಪ್ರಕೃತಿ—ಒಂದಕ್ಕಿಂತ ಒಂದು ಹತ್ತರಷ್ಟು ಅಧಿಕವೆನಿಸಿರುವ ಇವುಗಳೆಲ್ಲವನ್ನೂ ಕ್ರಮವಾಗಿ ದಾಟಿ ಅದ್ಭುತವಾದ ಗೋಲೋಕವನ್ನೈದಿದನು.

೧೩. ಶ್ರೀಹರಿಯ ಏಕಾಂತಭಕ್ತರಿಂದ ಮಾತ್ರವೇ ಪಡೆಯತಕ್ಕುದಾದುದೂ, ತೇಜೋಮಯವಾದುದೂ ಆದ ಆ ಪರಂಧಾಮವನ್ನೈದಿಹೋಗುತ್ತಾ ವಿಸ್ತಾರವೂ, ಅಗಾಧವೂ ಆದ ವಿರಜಾನದಿಯನ್ನು ಕಂಡನು.

೧೪. ಗೋಪಗೋಪೀಸಮೂಹಗಳು ಸ್ನಾನಮಾಡುವುದರಿಂದ ತೊಳೆದುಹೋದ ಚಂದನದ ಸುಗಂಧದಿಂದ ಕೂಡಿದುದಾಗಿ ಪುಂಡರೀಕ, ಕೋಕನದ, ಇಂದೀವರ ಮೊದಲಾದ ಪುಷ್ಪಗಳಿಂದ ಮನೋಹರವಾಗಿಯೂ ಇದ್ದ ಆ ವಿರಜಾನದಿಯು ಬಹಳವಾಗಿ ಪ್ರಕಾಶಿಸುತ್ತಿದ್ದಿತು.

೧೫. ಆ ಮುನಿಯು, ಸ್ಫಟಿಕಶಿಲಾಮಯವಾಗಿ ಬಿಳುಪು, ಪಚ್ಚೆ, ಹಳದಿ ಬಣ್ಣಗಳ ಶ್ರೇಷ್ಠಮಣಿಗಳಿಂದ ವಿರಾಜಿತವಾಗಿ ಮನೋಹರವಾಗಿದ್ದ ಅದರ ಮಹತ್ತರವಾದ ತೀರವನ್ನು ಹೋಗಿ ಸೇರಿದನು.

೧೬. ಆ ತೀರವು ಕಲ್ಪವೃಕ್ಷದ ಸಾಲುಗಳಿಂದ ಕೂಡಿ, ಹವಳದ ಕುಡಿಗಳಿಂದ ಶೋಭಿತವಾಗಿದ್ದಿತು; ಸ್ಯಮಂತಕ, ಇಂದ್ರನೀಲ ಮೊದಲಾದ ಮಣಿಗಳ ಗಣಿಗಳಿಂದಲೇ ಮಂಡಿತವಾಗಿದ್ದಿತು.

ನಾನಾಮಣೀಂದ್ರನಿಚಿತಸೋಪಾನತತಿಶೋಭನಂ ।
ಕೂಜದ್ಭಿರ್ಮಧುರಂ ಜುಷ್ಟಂ ಹಂಸಕಾರಂಡವಾದಿಭಿಃ ॥ ೧೭ ॥
ವೃಂದೈಃ ಕಾಮದುಘಾನಾಂ ಚ ಗಜೇಂದ್ರಾಣಾಂ ಚ ವಾಜಿನಾಂ ।
ಪಿಬದ್ಭಿರ್ನಿರ್ಮಲಂ ತೋಯಂ ರಾಜಿತಂ ಸವ್ಯತಿಕ್ರಮಾತ್ ॥ ೧೮ ॥
ಉತ್ತೀರ್ಯಾಥ ಧುನೀಂ ದಿವ್ಯಾಂ ತತ್ಕ್ಷಣಾದೀಶ್ವರೇಚ್ಛಯಾ ।
ತದ್ಧಾಮಪರಿಖಾಭೂತಾಂ ಶತಶೃಂಗಾಗಮಾಪ ಸಃ ॥ ೧೯ ॥
ಹಿರಣ್ಮಯಂ ದರ್ಶನೀಯಂ ಕೋಟಿಯೋಜನಮುಚ್ಛ್ರಿತಂ ।
ವಿಸ್ತಾರೇ ದಶಕೋಟ್ಯಸ್ತು ಯೋಜನಾನಾಂ ಮನೋಹರಂ ॥ ೨೦ ॥
ಸಹಸ್ರಶಃ ಕಲ್ಪವೃಕ್ಷೈಃ ಪಾರಿಜಾತಾದಿಭಿರ್ದ್ರುಮೈಃ ।
ಮಲ್ಲಿಕಾಯೂಥಿಕಾಭಿಶ್ಚ ಲವಂಗೈಲಾಲತಾದಿಭಿಃ ॥ ೨೧ ॥
ಸ್ವರ್ಣರಂಭಾದಿಭಿಶ್ಚಾನ್ಯೈಃ ಶೋಭಮಾನಂ ಮಹೀರುಹೈಃ ।
ದಿವ್ಯೈರ್ಮೃಗಗಣೈರ್ನಾಗೈಃ ಪಕ್ಷಿಭಿಶ್ಚ ಸುಕೂಜಿತೈಃ ॥ ೨೨ ॥
ದುರ್ಗಾಯಿತಸ್ಯ ತದ್ಧಾಮ್ನಸ್ತಸ್ಯ ರಮ್ಯೇಷು ಸಾನುಷು ।
ಮನೋಜ್ಞಾನ್ವಿತತಾನೈಕ್ಷತ್ ಭಗವದ್ರಾಸಮಂಡಪಾನ್ ॥ ೨೩ ॥

---

೧೭. ಬಗೆಬಗೆಯ ಮಣಿಶ್ರೇಷ್ಠಗಳಿಂದ ಕೆತ್ತಿದ ಸೋಪಾನಸಮೂಹಗಳಿಂದ ಶೋಭಿಸುತ್ತಿದ್ದಿತು. ಮಧುರವಾಗಿ ಧ್ವನಿಬೀರುತ್ತಿರುವ ಹಂಸಕಾರಂಡವಾದಿಗಳಿಂದ ಕೂಡಿದುದಾಗಿದ್ದಿತು.

೧೮–೨೦. ತರುವಾಯ ಆ ನಾರದಮುನಿಯು ಆ ನದಿಯ ನಿರ್ಮಲೋದಕವನ್ನು ಕುಡಿಯುತ್ತಿರುವ ಕಾಮಧೇನುಗಳನ್ನೂ, ದಿವ್ಯಗಜಶ್ರೇಷ್ಠಗಳನ್ನೂ ಕಂಡನು. ತರುವಾಯ ಆತನು ದಿವ್ಯಾಶ್ವಗಳ ಹಿಂಡುಗಳಿಂದ ರಂಜಿಸುತ್ತಿದ್ದ ಆ ನದಿಯನ್ನು ದಾಟಿದನು. ಆತನು ಆ ಗೋಕುಲಧಾಮಕ್ಕೆ ಅಗಳ್ತೆಯಂತೆ ಒಪ್ಪುವ ಆ ದಿವ್ಯನದಿಯನ್ನು ದಾಟಿ, ಆ ಕ್ಷಣವೆ ಈಶ್ವರೇಚ್ಛೆಯಿಂದ ಶತಶೃಂಗ ಪರ್ವತಕ್ಕೆ ಹೋಗಿ ಸೇರಿದನು. ಆ ಪರ್ವತವು ಸ್ವರ್ಣಮಯವಾಗಿ ನೋಟಕ್ಕೆ ಮನೋಹರವಾಗಿ ಒಂದುಕೋಟಿಯೋಜನ ಎತ್ತರವಾಗಿ ಕಂಗೊಳಿಸುತ್ತಿದ್ದಿತು.

೨೧–೨೨. ಸಹಸ್ರಸಹಸ್ರಸಂಖ್ಯೆಯ ಕಲ್ಪವೃಕ್ಷಗಳಿಂದಲೂ, ಪಾರಿಜಾತ ಮೊದಲಾದ ಹೂಮರಗಳಿಂದಲೂ, ಮಲ್ಲಿಗೆಯ ಗುಂಪುಗಳಿಂದಲೂ, ಲವಂಗ ಏಲಕ್ಕಿಗಳ ಬಳ್ಳಿಗುಂಪುಗಳಿಂದಲೂ, ಚಿನ್ನದ ಬಾಳೆಯ ಗಿಡಗಳಿಂದಲೂ, ಬೇರೆ ಬಗೆಯ ಮರಗಳಿಂದಲೂ ಶೋಭಿಸುತ್ತಿದ್ದಿತು. ದಿವ್ಯಮೃಗಸಮೂಹಗಳಿಂದಲೂ, ನಾಗಗಳಿಂದಲೂ, ಪಕ್ಷಿಗಳ ಇಂಪಾದ ಕೂಜಿತಗಳಿಂದಲೂ ರಂಜಿಸುತ್ತಿದ್ದಿತು.

೨೩. ಆ ಧಾಮಕ್ಕೆ ದುರ್ಗದ ಹಾಗಿದ್ದ ಆ ಪರ್ವತದ ರಮ್ಯವಾದ ತಪ್ಪಲುಗಳಲ್ಲಿ ಮನಸ್ಸಿಗೆ ಮೆಚ್ಚಾಗಿರುವುದಾಗಿಯೂ, ವಿಸ್ತಾರವಾಗಿಯೂ ಇರುವ ಭಗವಂತನ ರಾಸಮಂಡಪಗಳನ್ನೂ ಕಂಡನು.

ವೃತಾನುದ್ಯಾನತತಿಭಿಃ ಫುಲ್ಲಪುಷ್ಪಸುಗಂಧಿಭಿಃ ।
ಕಪಾಟೈ ರತ್ನನಿಚಿತೈಶ್ಚತುರ್ದ್ವಾರಸುಶೋಭನಾನ್ ॥ ೨೪ ॥
ಚಿತ್ರತೋರಣಸಂಪನ್ನೈ ರತ್ನಸ್ತಂಭೈಃ ಸಹಸ್ರಶಃ ।
ಜುಷ್ಟಾಂಶ್ಚ ಕದಲೀಸ್ತಂಭೈರ್ಮುಕ್ತಾಲಂಬೈರ್ವಿತಾನಕೈಃ ॥ ೨೫ ॥
ದೂರ್ವಾಲಾಜಾಕ್ಷತ ಫಲೈರ್ಯುಕ್ತಾನ್ಮಾಂಗಲಿಕೈರಪಿ ।
ಚಂದನಾಗುರುಕಸ್ತೂರೀ ಕೇಶರೋಕ್ಷಿತ ಚತ್ವರಾನ್ ॥ ೨೬ ॥
ಸುಶ್ರಾವ್ಯವಾದ್ಯ ನಿನಿದೈರ್ಹೃದ್ಯಾನ್ ಬಹುವಿಧೈರಪಿ ।
ತೇಷು ಯೂಥಾನಿ ಗೋಪೀನಾಂ ಕೋಟಿಶಃ ಸ ದದರ್ಶ ಹ ॥ ೨೭ ॥
ಅನರ್ಘ್ಯವಾಸೋ ಭೂಷಾಭಿಃ ಸದ್ರತ್ನಮಣಿಕಂಕಣೈಃ ।
ಕಾಂಚೀನೂಪುರಕೇಯೂರೈಃ ಶೋಭಿತಾನ್ಯಂಗುಲೀಯಕೈಃ ॥ ೨೮ ॥
ತಾರುಣ್ಯರೂಪಲಾವಣ್ಯೈಃ ಸ್ವರೈಶ್ಚಾಽಪ್ರತಿಮಾನಿ ಹ ।
ರಾಧಾಲಕ್ಷ್ಮೀಸವರ್ಣಾನಿ ಶೃಂಗಾರಿಕಕರಾಣಿ ಚ ॥ ೨೯ ॥

---

೨೪. ಆ ರಾಸಮಂಡಪಗಳು ಅರಳಿದ ಹೂಗಳ ಸುಗಂಧಗಳಿಂದೊಡಗೂಡಿದ ಉದ್ಯಾನ ಸಮೂಹಗಳಿಂದ ಸುತ್ತುವರಿಯಲ್ಪಟ್ಟಿದ್ದುವು; ರತ್ನಗಳು ಕೆತ್ತಿದ ಕಂದಗಳುಳ್ಳ ನಾಲ್ಕು ನಾಲ್ಕು ಬಾಗಿಲುಗಳಿಂದ ಶೋಭಾಯಮಾನವಾಗಿದ್ದುವು.

೨೫. ಚಿತ್ರತೋರಣಗಳಿಂದೆಸೆಯುವ ಸಹಸ್ರಾರು ರತ್ನಸ್ತಂಭಗಳಿಂದಲೂ, ಬಾಳೆಯ ಕಂಬಗಳಿಂದಲೂ, ಮುತ್ತುಗಳು ಇಳಿಯಬಿಟ್ಟ ಮೇಲ್ಕಟ್ಟುಗಳಿಂದಲೂ ಕೂಡಿದುವಾಗಿದ್ದುವು.

೨೬. ಮಂಗಳಲಕ್ಷಣಗಳಾದ ದೂರ್ವೆ (ಹುಲ್ಲುಗರಿಕೆ), ಅರಳು, ಅಕ್ಷತೆ, ಫಲಗಳಿಂದ ಕೂಡಿದ್ದುವು. ಚಂದನ, ಅಗುರು, ಕಸ್ತೂರಿ, ಕೇಶರಗಳಿಂದ ತೊಳೆದ ಚೌಕಗಳಿಂದೆಸೆಯುತ್ತಿದ್ದುವು.

೨೭. ಸುಶ್ರಾವ್ಯವಾದ ವಿವಿಧವಾದ್ಯನಾದಗಳಿಂದ ಮನಸ್ಸಿಗೆ ಹಿತವಾಗಿದ್ದುವು. ಆ ದೇವಮುನಿಯು ಅವುಗಳಲ್ಲಿ ಗೋಪಿಯರ ಗುಂಪುಗಳನ್ನು ಕೋಟಿ ಕೋಟಿ ಸಂಖ್ಯೆಯಲ್ಲಿ ಕಂಡನು.

೨೮. ಅನರ್ಘ್ಯವಾದ ವಸ್ತ್ರಭೂಷಣಗಳಿಂದಲೂ, ಶ್ರೇಷ್ಠವಾದ ರತ್ನ ಮಣಿಕಂಕಣಗಳಿಂದಲೂ, ಕಾಂಚಿ (ಒಡ್ಯಾಣ), ನೂಪುರ (ಕಾಲಂದಿಗೆ), ಕೇಯೂರ (ಬಾಹುಜಿಗೆ)ಗಳಿಂದಲೂ, ಉಂಗುರಗಳಿಂದಲೂ ಆ ಗೋಪಾಂಗನೆಯರು ಬಹುವಾಗಿ ಶೋಭಿಸುತ್ತಿದ್ದರು.

೨೯. ತಾರುಣ್ಯದಲ್ಲಿಯೂ, ರೂಪಲಾವಣ್ಯಗಳಲ್ಲಿಯೂ, ಕಂಠಸ್ವರಗಳಲ್ಲಿಯೂ ಅವರು ಅಪ್ರತಿಮರಾಗಿದ್ದರು; ರಾಧಾಲಕ್ಷ್ಮಿಯರಿಗೆ ಸಮಾನವಾದ ವರ್ಣವುಳ್ಳವರಾಗಿದ್ದರಲ್ಲದೆ ಶೃಂಗಾರದ ಕಣಿಗಳೇ ಆಗಿದ್ದರು.

ಭೋಗದ್ರವ್ಯೈರ್ಬಹುವಿಧೈರ್ಮಂಡಪೇಷು ಯುತೇಷು ಚ ।
ವಿಲಸಂತಿ ಚ ಗಾಯಂತಿ ಮನೋಜ್ಞಾಃ ಕೃಷ್ಣಗೀತಿಕಾಃ ॥ ೩೦ ॥
ಉಪತ್ಯಕಾಸು ತಸ್ಯಾದ್ರೇರಥ ವೃಂದಾವನಾಭಿಧಂ ।
ವನಂ ಮಹತ್ತದದ್ರಾಕ್ಷೀತ್ ಸಾವರ್ಣೇ ನಾರದೋ ಮುನಿಃ ॥ ೩೧ ॥
ಕೃಷ್ಣಸ್ಯ ರಾಧಿಕಾಯಾಶ್ಚ ಪ್ರಿಯಂ ತತ್ಕ್ರೀಡನಸ್ಥಲಂ ।
ಕಲ್ಪದ್ರುಮಾಲಿಭೀ ರಮ್ಯಂ ಸರೋಭಿಶ್ಚ ಸಪಂಕಜೈಃ ॥ ೩೨ ॥
ಆಮ್ರೈರಾಮ್ರಾತಕೈರ್ನೀಪೈರ್ಬದರೀಭಿಶ್ಚ ದಾಡಿಮೈಃ ।
ಖರ್ಜೂರೀ ಪೂಗನಾರಂಗೈರ್ನಾಲಿಕೇರೈಶ್ಚ ಚಂದನೈಃ ॥ ೩೩ ॥
ಜಂಬೂಜಂಬೀರಪನಸೈರಕ್ಷೋದೈಃ ಸುರದಾರುಭಿಃ ।
ಕದಲೀಭಿಶ್ಚಂಪಕೈಶ್ಚ ದ್ರಾಕ್ಷಾಭಿಃ ಸ್ವರ್ಣಕೇತಕೈಃ ॥ ೩೪ ॥
ಫಲಪುಷ್ಪಭರಾನಮ್ರೈರ್ನಾನಾವೃಕ್ಷೈರ್ವಿರಾಜಿತಂ ।
ಮಲ್ಲಿಕಾ ಮಾಧವೀ ಕುಂದೈರ್ಲವಂಗೈರ್ಯೂಥಿಕಾದಿಭಿಃ ॥ ೩೫ ॥
ಮಂದಶೀತ ಸುಗಂಧೇನ ಸೇವಿತಂ ಮಾತರಿಶ್ವನಾ ।
ಶತಶೃಂಗಸೃತೈರಾರ್ದ್ರಂ ನಿರ್ಝರೈಶ್ಚ ಸಮಂತತಃ ॥ ೩೬ ॥

---

೩೦. ಬಹು ವಿಧಗಳಿಂದ ಭೋಗದ್ರವ್ಯಗಳಿಂದ ಆ ಮಂಟಪಗಳು ತುಂಬಿರಲಾಗಿ ಅವರು ವಿಲಾಸವನ್ನು ಬೀರುತ್ತ ಮನೋಜ್ಞಗಳಾದ ಶ್ರೀಕೃಷ್ಣನ ಗೀತೆಗಳನ್ನು ಗಾನಮಾಡುತ್ತಿದ್ದರು.

೩೧. ಎಲೈ ಸಾವರ್ಣಿಯೇ! ಆ ಬೆಟ್ಟದ ತಪ್ಪಲಿನಲ್ಲಿ ವೃಂದಾವನವೆಂಬ ಮಹತ್ತರವಾದ ವನವುಂಟು. ಅದನ್ನು ಆ ನಾರದಮುನಿಯು ಕಂಡನು.

೩೨. ಆ ಕ್ರೀಡಾಸ್ಥಾನವು ಶ್ರೀಕೃಷ್ಣನಿಗೂ ರಾಧೆಗೂ ಪ್ರಿಯವಾದುದು. ಕಲ್ಪವೃಕ್ಷದ ಪಂಕ್ತಿಗಳಿಂದಲೂ, ತಾವರೆಗಳಿಂದೊಡಗೂಡಿದ ಸರೋವರಗಳಿಂದಲೂ ರಮ್ಯವಾಗಿರುವುದು.

೩೩–೩೫. ಆಮ್ರ (ಮಾವು), ಆಮ್ರಾತಕ (ಅಮಟೆ), ನೀಪ (ಕಡಹ), ಬದರಿ, ದಾಳಿಂಬೆ, ಖರ್ಜೂರ, ಅಡಕೆ, ಕಿತ್ತಳೆ, ತೆಂಗು, ಚಂದನ, ನೇರಿಳೆ, ನಿಂಬೆ, ಹಲಸು, ಅಕ್ಷೋದ, ದೇವದಾರು, ಬಾಳೆ, ಸಂಪಿಗೆ, ದ್ರಾಕ್ಷಿ, ಹೊಂಗೇದಗೆ ಇವೇ ಮೊದಲಾದ ಫಲಪುಷ್ಪಗಳ ಭಾರದಿಂದ ಬಗ್ಗಿಹೋಗಿರುವ ಬಗೆಬಗೆಯ ಮರಗಳಿಂದ ವಿರಾಜಿಸುತ್ತಿರುವುದು. ಮಲ್ಲಿಗೆ, ಮಾಧವಿ, ಕುಂದ, ಲವಂಗ, ಯೂಥಿಕೆ, ಮೊದಲಾದ ಹೂಬಳ್ಳಿಗಳಿಂದ ಪ್ರಕಾಶಿಸುತ್ತಿರುವುದು.

೩೬. ತಣ್ಣಗೆ ಸುಗಂಧವನ್ನು ಬೀರಿ ಬೀಸುವ ಮಂದಮಾರುತದಿಂದ ಸೇವಿತವಾಗಿರುವುದು. ಶತಶೃಂಗಪರ್ವತದಿಂದ ಹೊರಹರಿದುಬರುವ ಝರಿಗಳಿಂದ ಸುತ್ತಮುತ್ತ ಎಲ್ಲೆಡೆಯೂ ಆರ್ದ್ರವಾಗಿರುವುದು.

**ಸದಾವಸಂತಶೋಭಾಢ್ಯಂ ರತ್ನದೀಪಾಲಿ ಮಂಡಿತೈಃ ।**
**ಶೃಂಗಾರಿಕ ದ್ರವ್ಯಯುತೈಃ ಕುಂಜೈರ್ಜುಷ್ಟಮನೇಕಶಃ ॥ ೩೭ ॥**
**ಗೋಪಾನಾಂ ಗೋಪಿಕಾನಾಂ ಚ ಕೃಷ್ಣಸಂಕೀರ್ತನೈರ್ಮುಹುಃ ।**
**ಗೋವತ್ಸ ಪಕ್ಷಿನಿನದೈರ್ನಾನಾಭೂಷಣ ನಿಸ್ವನೈಃ ।**
**ದಧಿಮಂಥನ ಶಬ್ದೈಶ್ಚ ಸರ್ವತೋ ನಾದಿತಂ ಮುನೇ ॥ ೩೮ ॥**
**ಫುಲ್ಲಪುಷ್ಪ ಫಲಾನಮ್ರ ನಾನಾದ್ರುಮಸುಶೋಭನೈಃ ।**
**ದ್ವಾತ್ರಿಂಶತಾ ವನೈರನ್ಯೈರ್ಯುಕ್ತಂ ಪಶ್ಯನ್ ಮನೋಹರೈಃ ॥ ೩೯ ॥**
**ತದ್ವೀಕ್ಷ್ಯ ಹೃಷ್ಟಃ ಸ ಪ್ರಾಪ ಗೋಲೋಕಪುರಮುಜ್ಜ್ವಲಂ ।**
**ವರ್ತುಲಂ ರತ್ನದುರ್ಗಂ ಚ ರಾಜಮಾರ್ಗೋಪಶೋಭಿತಂ ॥ ೪೦ ॥**
**ರಾಜಿತಂ ಕೃಷ್ಣಭಕ್ತಾನಾಂ ವಿಮಾನೈಃ ಕೋಟಿಭಿಸ್ತಥಾ ।**
**ರಥೈ ರತ್ನೇಂದ್ರಖಚಿತೈಃ ಕಿಂಕಿಣೀಜಾಲಶೋಭಿತೈಃ ॥ ೪೧ ॥**
**ಮಹಾಮಣೀಂದ್ರನಿಕರೈ ರತ್ನಸ್ತಂಭಾಲಿಮಂಡಿತೈಃ ।**
**ಅದ್ಭುತೈಃ ಕೋಟಿಶಃ ಸೌಧೈಃ ಪಂಕ್ತಿಸಂಸ್ಥೈರ್ಮನೋಹರಂ ॥ ೪೨ ॥**

---

೩೭. ಸದಾಕಾಲವೂ ವಸಂತಋತುವಿನ ಶೋಭೆಯಿಂದ ತುಂಬಿರುವುದು. ರತ್ನದೀಪಪಂಕ್ತಿಗಳಿಂದ ಕೂಡಿ ಶೃಂಗಾರಕ್ಕೆ ಸಹಾಯಕವಾದ ದ್ರವ್ಯಗಳಿಂದ ತುಂಬಿದ ಅನೇಕ ನಿಕುಂಜ (ಬಳ್ಳಿಮನೆ)ಗಳಿಂದ ಪ್ರಕಾಶಿಸುತ್ತಿರುವುದು.

೩೮. ಎಲೈ ಮುನಿಯೇ! ಗೋಪರೂ, ಗೋಪಿಯರೂ ಬಾರಿಬಾರಿಗೂ ಮಾಡುವ ಕೃಷ್ಣಸಂಕೀರ್ತನೆಗಳಿಂದಲೂ, ಹಸುಕರುಗಳು ಮತ್ತು ಪಕ್ಷಿಗಳ ನಿನದದಿಂದಲೂ, ನಾನಾ ಬಗೆಯ ಭೂಷಣಧ್ವನಿಗಳಿಂದಲೂ, ಮೊಸರುಕಡೆಯುವ ಸದ್ದಿನಿಂದಲೂ ಎಲ್ಲ ಕಡೆಯೂ ನಾದಮಯವಾಗಿರುವುದು.

೩೯. ಅರಳಿದ ಹೂವುಗಳು ಮತ್ತು ಹಣ್ಣುಗಳು ಜಗಿದು ಹೇರಿ ಬಾಗಿರುವ ನಾನಾ ಬಗೆಯ ಮರಗಳಿಂದ ಬಹಳವಾಗಿ ಶೋಭಿಸುತ್ತ ನೋಟಕರಿಗೆ ಮನೋಹರಗಳಾದ ಮೂವತ್ತೆರಡು ಉದ್ಯಾನಪ್ರದೇಶಗಳಿಂದ ಕೂಡಿರುವುದು.

೪೦. ಆ ನಾರದನು ಅದನ್ನು ನೋಡಿ ಹರ್ಷಗೊಂಡು ಉಜ್ಜ್ವಲವಾದ ಗೋಲೋಕಪುರವನ್ನು ಹೋಗಿ ಸೇರಿದನು. ಅದು ವರ್ತುಲಾಕಾರವಾಗಿ ರತ್ನದ ದುರ್ಗದಿಂದೊಪ್ಪಿ ರಾಜಮಾರ್ಗಗಳಿಂದ ಶೋಭಿಸುತ್ತಿರುವುದು.

೪೧. ಶ್ರೀಕೃಷ್ಣಭಕ್ತರ ಕೋಟಿಕೋಟಿ ಸಂಖ್ಯೆಯ ವಿಮಾನಗಳಿಂದ ರಂಜಿಸುತ್ತಿರುವುದು. ಶ್ರೇಷ್ಠ ರತ್ನಗಳನ್ನು ಕೆತ್ತಿರುವುದಾಗಿ ಕಿರುಗಂಟೆಗಳ ಸಾಲುಗಳಿಂದಲಂಕರಿಸಿರುವ ರಥಗಳಿಂದ ಪ್ರಕಾಶಿಸುತ್ತಿರುವುದು.

೪೨. ಮಹಾಮಣಿಗಳ ಸಮೂಹಗಳಿಂದೊಪ್ಪುವ ರತ್ನದ ಕಂಬಸಾಲುಗಳಿಂದ ಕೂಡಿದುವಾಗಿ ಸಾಲು ಸಾಲಾಗಿ ನೆಲೆಗೊಂಡ ಕೋಟ್ಯನುಕೋಟಿ ಅದ್ಭುತಸಾಧನಗಳಿಂದ ಮನೋಹರವಾಗಿರುವುದು.

ವಿಲಾಸಮಂಡಪೈ ರಮ್ಯೈ ರತ್ನಸಾರವಿನಿರ್ಮಿತೈಃ ।
ರತ್ನೇಂದ್ರದೀಪತತಿಭಿಃ ಶೋಭನಂ ರತ್ನವೇದಿಭಿಃ ॥ ೪೩ ॥
ಕೇಸರಾಗುರುಕಸ್ತೂರೀ ಕುಂಕುಮದ್ರವಚರ್ಚಿತಂ ।
ದಧಿದೂರ್ವಾಲಾಜಪೂಗೈ ರಂಭಾಭಿಃ ಶೋಭಿತಾಂಗಣಂ ॥ ೪೪ ॥
ವಾರಿಪೂರ್ಣೈರ್ಹೇಮಘಟೈಸ್ತೋರಣೈಃ ಕೃತಮಂಗಲಂ ।
ಮಣಿಕುಟ್ಟಿಮರಾಜಾಧ್ವ ಚಲದ್ಭೂರಿಗಜಾಶ್ವಕಂ ॥ ೪೫ ॥
ಶ್ರೀಕೃಷ್ಣದರ್ಶನಾಯಾತೈರ್ನೈಕಬ್ರಹ್ಮಾಂಡನಾಯಕೈಃ ।
ವಿರಿಂಚಿಶಂಕರಾದ್ಯೈಶ್ಚ ಬಲಿಹಸ್ತೈಃ ಸುಸಂಕುಲಂ ॥ ೪೬ ॥
ವ್ರಜದ್ಭಿಃ ಕೃಷ್ಣವಿಚ್ಛಾಥ ಗೋಪಗೋಪೀಕದಂಬಕೈಃ ।
ಸುಸಂಕುಲಮಹಾಮಾರ್ಗಂ ಮುನೋದಾಲೋಕ್ಯ ತನ್ಮುನಿಃ ॥ ೪೭ ॥
ಕೃಷ್ಣಮಂದಿರಮಾಪಾಽಥ ಸರ್ವಾಶ್ಚರ್ಯಂ ಮನೋಹರಂ ।
ನಂದಾದಿವೃಷಭಾನ್ವಾದಿಗೋಪಸೌಧಾಲಿಭಿರ್ವೃತಂ ॥ ೪೮ ॥

---

೪೩. ರತ್ನಸಾರಗಳಿಂದ ನಿರ್ಮಿತವಾಗಿರುವ ರಮ್ಯವಾದ ವಿಲಾಸಮಂಟಪಗಳಿಂದಲೂ, ರತ್ನದೀಪಪಂಕ್ತಿಗಳಿಂದಲೂ, ರತ್ನದ ಜಗುಲಿಗಳಿಂದಲೂ ಶೋಭಿಸುತ್ತಿರುವುದು.

೪೪–೪೫. ಕೇಸರ, ಅಗುರು, ಕಸ್ತೂರಿ, ಕುಂಕುಮಗಳನ್ನು ಕದರಿರುವ ನೀರಿನಿಂದ ಸಾರಿಸಲ್ಪಟ್ಟು ದಧಿ (ಮೊಸರು), ದೂರ್ವೆ (ಗರಿಕೆ), ಲಾಜ (ಅರಳು), ಪೂಗ (ಅಡಿಕೆಗೊಂಚಲು)ಗಳಿಂದಲೂ, ಬಾಳೆಯ ಗಿಡಗಿಂದಲೂ ಶೋಭಿಸುವ ಅಂಗಳಗಳುಳ್ಳುದಾಗಿರುವುದು. ನೀರು ತುಂಬಿದ ಚಿನ್ನದ ಗಡಿಗೆಗಳಿಂದಲೂ, ತೋರಣಗಳಿಂದಲೂ ಮಂಗಳಾಲಂಕಾರವನ್ನು ಹೊಂದಿ ಬೆಳಗುತ್ತಿರುವುದು. ದೊಡ್ಡ ದೊಡ್ಡ ಆನೆ ಕುದುರೆಗಳ ಓಡಾಟದಿಂದ ಕೂಡಿದ ಮಣಿಖಚಿತವಾದ ನೆಲವುಳ್ಳ ರಾಜಮಾರ್ಗದಿಂದ ರಂಜಿಸುತ್ತಿರುವುದು.

೪೬. ಶ್ರೀಕೃಷ್ಣನ ಸಂದರ್ಶನಕ್ಕಾಗಿ ಬಂದು ಕೈಯಲ್ಲಿ ಕಾಣಿಕೆಯನ್ನು ಹಿಡಿದು ನಿಂತಿರುವ ಅನೇಕಬ್ರಹ್ಮಾಂಡನಾಯಕರಿಂದಲೂ, ಬ್ರಹ್ಮಶಂಕರಾದಿ ದೇವತೆಗಳಿಂದಲೂ ದಟ್ಟವಾಗಿ ತುಂಬಿರುವುದು.

೪೭–೪೮. ಶ್ರೀಕೃಷ್ಣನ ಸಂದರ್ಶನಕ್ಕಾಗಿ ಹೋಗುತ್ತಿರುವ ಗೋಪಗೋಪೀ ಸಮೂಹಗಳಿಂದ ಬಹಳ ಒತ್ತೊತ್ತಾಗಿ ತುಂಬಿರುವ ಮಹಾಮಾರ್ಗಗಳಿಂದ ಪ್ರಕಾಶಿಸುವುದು. ಅದನ್ನು ನೋಡಿ ಆ ಮುನಿಯು ಬಹಳವಾಗಿ ಆನಂದಿಸಿದನು. ಬಳಿಕ ಅವನು ನಂದಗೋಪನೇ ಮೊದಲಾದ ಗೋಪಾಲರ ಸೌಧಪಂಕ್ತಿಗಳಿಂದ ಸುತ್ತುವರಿಯಲ್ಪಟ್ಟು ಸರ್ವಾಶ್ಚರ್ಯಗಳಿಗೂ ನೆಲೆಯಾಗಿ ಮನೋಹರವಾಗಿ ಕಂಗೊಳಿಸುತ್ತಿರುವ ಶ್ರೀಕೃಷ್ಣನ ದಿವ್ಯಮಂದಿರವನ್ನು ಸೇರಿದನು.

**ಚತುರ್ದ್ವಾರೈಃ ಷೋಡಶಭಿರ್ದುರ್ಗೈಃ ಸಪರಿಖೈರ್ಯುತಂ ।**
**ಕೋಟಿಗೋಪವೃತೈಕೈಕದ್ವಾರಪಾಲಸುರಕ್ಷಿತೈಃ ॥ ೪೯ ॥**
**ರತ್ನಸ್ತಂಭಕಪಾಟೇಷು ದ್ವಾರ್ಷು ಸ್ವಾಗ್ರಸ್ಥಿತೇಷು ಸಃ ।**
**ಉಪಾವಿಷ್ಟಾನ್ ಕ್ರಮೇಣೈವ ದ್ವಾರಪಾಲಾನ್ ದದರ್ಶ ಹ ॥ ೫೦ ॥**
**ವೀರಭಾನುಂ ಚಂದ್ರಭಾನುಂ ಸೂರ್ಯಭಾನುಂ ತೃತೀಯಕಂ ।**
**ವಸುಭಾನುಂ ದೇವಭಾನುಂ ಶಕ್ರಭಾನುಂ ತತಃ ಪರಂ ॥ ೫೧ ॥**
**ರತ್ನಭಾನುಂ ಸುಪಾರ್ಶ್ವಂ ಚ ವಿಶಾಲವೃಷಭಂ ತತಃ ।**
**ಅಂಶುಂ ಬಲಂ ಚ ಸುಬಲಂ ದೇವಪ್ರಸ್ಥಂ ವರೂಥಪಂ ॥ ೫೨ ॥**
**ಶ್ರೀದಾಮಾನಂ ಚ ನತ್ವಾಽಸೌ ಪ್ರವಿಷ್ಟೋಂತಸ್ತದಾಜ್ಞಯಾ ।**
**ಮಹಾಚತುಷ್ಕೇ ವಿತತೇ ತೇಜೋಽಪಶ್ಯನ್ಮಹೋಚ್ಛ್ರಯಂ ॥ ೫೩ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ ''ಗೋಲೋಕವರ್ಣನಂ''
ನಾಮ ಷೋಡಶೋಽಧ್ಯಾಯಃ

---

೪೯. ಆ ಕೃಷ್ಣಮಂದಿರವಾದರೋ ಸುತ್ತುವರೆದ ಅಗಳ್ತೆಗಳಿಂದಲೂ, ನಾಲ್ಕು ನಾಲ್ಕು ಬಾಗಿಲುಗಳಿಂದಲೂ ಕೂಡಿದ ಹದಿನಾರು ದುರ್ಗಗಳುಳ್ಳದಾಗಿರುವುದು. ಆ ಒಂದೊಂದು ಬಾಗಿಲೂ ಕೋಟಿ ಗೋಪರಿಂದ ಬಳಸಲ್ಪಟ್ಟ ದ್ವಾರಪಾಲಕರಿಂದ ಸುರಕ್ಷಿತವಾಗಿರುವುದು.

೫೦. ರತ್ನದ ಕಂಬ ಮತ್ತು ಕದಗಳುಳ್ಳ ಬಾಗಿಲುಗಳೆದುರಿಗೆ ಕ್ರಮವಾಗಿ ಕುಳಿತಿದ್ದ ದ್ವಾರಪಾಲಕರುಗಳನ್ನೂ ಆ ದೇವಮುನಿಯು ಕಂಡನು.

೫೧-೫೩. ಆ ಮುನಿಶ್ರೇಷ್ಠನು ವೀರಭಾನು, ಚಂದ್ರಭಾನು, ಸೂರ್ಯಭಾನು, ವಸುಭಾನು, ದೇವಭಾನು, ಶಕ್ರಭಾನು, ರತ್ನಭಾನು, ಸುಪಾರ್ಶ್ವ, ವಿಶಾಲ, ವೃಷಭ, ಅಂಶುಬಲ, ಸುಬಲ, ದೇವಪ್ರಸ್ಥ, ವರೂಥಪ, ಶ್ರೀದಾಮ ಎಂಬ ದ್ವಾರರಕ್ಷಕರನ್ನು ಕ್ರಮವಾಗಿ ಕಂಡನು. ಇವರಿಗೆ ನಮಸ್ಕಾರ ಮಾಡಿ ಅಪ್ಪಣೆ ಪಡೆದು ಆತನು ಒಳಕ್ಕೆ ಪ್ರವೇಶಿಸಿ ವಿಸ್ತಾರವಾದ ಒಂದು ದೊಡ್ಡ ತೊಟ್ಟಿಯಲ್ಲಿ ಬಹು ಉನ್ನತವಾದ ತೇಜೋರಾಶಿಯನ್ನು ಕಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವಾಸುದೇವ
ಮಾಹಾತ್ಮ್ಯದಲ್ಲಿ '' ಗೋಲೋಕವರ್ಣನ ''ವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

## ಶ್ರೀ ವಾಸುದೇವದರ್ಶನಂ

ಸ್ಕಂದ ಉವಾಚ:—

ಸತ್ತ್ವೇಕಕಾಲಸಂಭೂತಕೋಟಿಕೋಟ್ಯರ್ಕಸನ್ನಿಭಂ ।
ಸವ್ಯಚಷ್ಟ ಮಹತ್ತೇಜೋ ದಿವ್ಯಂ ಸಿತತರಂ ಮುನೇ ॥ ೧ ॥
ದಿಶಶ್ಚ ವಿದಿಶಃ ಸರ್ವಾ ಊರ್ಧ್ವಾರ್ಧೋ ವ್ಯಾಪ್ಯವಚ್ಚ ಯತ್ ।
ಅಕ್ಷರಂ ಬ್ರಹ್ಮ ಕಥಿತಂ ಸಚ್ಚಿದಾನಂದಲಕ್ಷಣಂ ॥ ೨ ॥
ಪ್ರಕೃತಿಂ ಪುರುಷಂ ಚೋಭೌ ತತ್ಕಾರ್ಯಾಣ್ಯಪಿ ಸರ್ವಶಃ ।
ವ್ಯಾಪ್ತಂ ಯದ್ಯೋಗಸಂಸಿದ್ಧಾಃ ಷಟ್ಚಕ್ರಾಣಿ ನಿಜಾಂತರೇ ।
ವ್ಯತೀತ್ಯ ಮೂರ್ಧ್ನಿ ಪಶ್ಯಂತಿ ವಾಸುದೇವಪ್ರಸಾದತಃ ॥ ೩ ॥
ಯದ್ಭಾಸಾ ಭಾಸಿತಃ ಸೂರ್ಯೋ ವಹ್ನಿರಿಂದುಶ್ಚ ತಾರಕಾಃ ।
ಭಾಸಯಂತಿ ಜಗತ್ಸರ್ವಂ ಸ್ವಪ್ರಕಾಶಂ ತಥಾಮೃತಂ ॥ ೪ ॥
ಯದ್ಬ್ರಹ್ಮಪುರಮಿತ್ಯಾಹುರ್ಭಗವದ್ಧಾಮ ಸಾತ್ವತಾಃ ।
ಯಸ್ಯಾಂತಿಕೇಷು ಪರಿತಸ್ತಿಷ್ಠಂತ್ಯರ್ಚಕಕೋಟಯಃ ॥ ೫ ॥

---

## ಕನ್ನಡದ ಅನುವಾದ

### ವಾಸುದೇವದರ್ಶನವರ್ಣನ

೧. ಸ್ಕಂದನು ಹೇಳುತ್ತಾನೆ:—ಎಲೈ ಮುನಿಯೇ! ಆ ನಾರದನು ಏಕಕಾಲದಲ್ಲಿಯೇ ಉದಿಸಿಬಂದ ಕೋಟ್ಯನುಕೋಟಿ ಸೂರ್ಯರ ಕಾಂತಿಗೆ ಸಮಾನವಾಗಿ ಅತಿ ಶುಭ್ರವೂ, ಮಹತ್ತರವೂ ಆದ ಆ ದಿವ್ಯತೇಜಸ್ಸನ್ನು ಕಂಡನು.

೨. ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ, ಭೂಮ್ಯಂತರಿಕ್ಷಗಳನ್ನೂ ವ್ಯಾಪಿಸಿಕೊಂಡಿದ್ದ ಆ ತೇಜಸ್ಸೇ ಸಚ್ಚಿದಾನಂದಲಕ್ಷಣವುಳ್ಳ ಅಕ್ಷರಬ್ರಹ್ಮವೆಂದು ಹೇಳಲ್ಪಟ್ಟಿರುವುದು.

೩-೬. ಪ್ರಕೃತಿ ಪುರುಷರಿಬ್ಬರನ್ನೂ, ಅವರ ಕಾರ್ಯಗಳನ್ನೂ, ಯಾವುದು ಎಲ್ಲ ಕಡೆಯೂ ವ್ಯಾಪಿಸಿರುವುದೋ, ಯೋಗದಲ್ಲಿ ಚೆನ್ನಾಗಿ ಸಿದ್ಧಿಯನ್ನು ಪಡೆದಿರುವವರು ವಾಸುದೇವನ ಪ್ರಸಾದದಿಂದ ಷಟ್ಚಕ್ರಗಳನ್ನೂ ದಾಟಿ ತಮ್ಮೊಳಗಣ ಸಹಸ್ರಾರಚಕ್ರದಲ್ಲಿ ಯಾವುದನ್ನು ಕಾಣುವರೋ, ಯಾವುದರ ಬೆಳಕಿನಿಂದ ಬೆಳಕುಹೊಂದಿ ಸೂರ್ಯ, ಅಗ್ನಿ, ಚಂದ್ರ ಮತ್ತು ನಕ್ಷತ್ರಗಳು ಸರ್ವಜಗತ್ತನ್ನೂ ಬೆಳಗಿಸುವುವೋ, ಯಾವುದು ಸ್ವಪ್ರಕಾಶವುಳ್ಳದಾಗಿ ಅಮೃತವಾಗಿರುವುದೋ, ಯಾವುದನ್ನು ಸಾತ್ವತರು ಭಗವಂತನ ನೆಲೆವಣೆಯಾದ ಬ್ರಹ್ಮಪುರವೆಂದು ಹೇಳುವರೋ, ಯಾವುದರ ಸಮೀಪದಲ್ಲಿ ಕೋಟ್ಯಂತರ ಅರ್ಚಕರು ಸುತ್ತಮುತ್ತ

ಬ್ರಹ್ಮಶಂಕರವೃಂದಾನಿ ಹ್ಯುಪರ್ಯುರ್ಪರಿ ಸಂಭ್ರಮಾತ್ ।
ಪತಂತಿ ಬಲಿಹಸ್ತಾನಿ ಗೋಪಗೋಪೀವ್ರಜಾಶ್ಚ ಯತ್ ॥ ೬ ॥
ಕೃಷ್ಣಸ್ಯಾನುಗ್ರಹೋ ಯಸ್ಮಿನ್ ಸ ತೇಜಸಿ ತಮೀಕ್ಷತೇ ।
ಕೇವಲಂ ತೇಜ ಏವಾನ್ಯೇ ಪಶ್ಯಂತಿ ನ ತು ತಂ ಮುನೇ ॥ ೭ ॥

ತಸ್ಮಿನ್ ದದರ್ಶಾದ್ಭುತದಿವ್ಯಮಂದಿರಂ
ವಿಚಿತ್ರ ರತ್ನೇಂದ್ರಮಯಂ ಮನೋಜ್ಞಂ ।
ರತ್ನೋಜ್ವಲಸ್ತಂಭ ಸಹಸ್ರಕಾಂತಂ
ಮಹಾಸಭಾಮಂಡಪದರ್ಶನೀಯಂ ॥ ೮ ॥
ಸೌಧಾಲಿಭಿರ್ಭೂರಿಭಿರುಜ್ವಲಾಭಿಃ
ಸ್ವೋಪಾಸಕಾನಾಂ ಪರಿತೋ ವಿರಾಜಿತಂ ।
ವಿಚಿತ್ರಸೂಕ್ಷ್ಮಾಂಬರರತ್ನಭೂಷಾ
ವಿಭೂಷಿತಾನಾಂ ಹಿ ನೃಣಾಂ ಚ ಯೋಷಿತಾಂ ॥ ೯ ॥
ಸಿಂಹಾಸನಂ ತತ್ರ ಮಣೀಂದ್ರಸಾರೈ
ರತ್ನೇಂದ್ರಸಾರೈಶ್ಚ ವಿನಿರ್ಮಿತಂ ಸಃ ।

---

ಬಳಸಿ ನಿಂತಿರುವರೋ, ಬ್ರಹ್ಮ ಶಂಕರರ ಸಮೂಹಗಳೂ, ಗೋಪಗೋಪಿಯರ ಗುಂಪುಗಳೂ ಕೈಯಲ್ಲಿ ಕಾಣಿಕೆಯನ್ನು ಹಿಡಿದವರಾಗಿ ಯಾವುದನ್ನು ದರ್ಶನ ಮಾಡಲು ಸಂಭ್ರಮದಿಂದ ಮೇಲೆ ಮೇಲೆ ನುಗ್ಗಿ ಬಿದ್ದು ಬರುತ್ತಿರುವರೋ ಅಂಥ ದಿವ್ಯ ತೇಜಸ್ಸನ್ನು ಆ ಮುನಿಯು ಕಂಡನು.

೭. ಎಲೈ ಮುನಿಯೇ! ಯಾರಲ್ಲಿ ಶ್ರೀ ಕೃಷ್ಣನಿಗೆ ಅನುಗ್ರಹವುಂಟಾಗುವುದೋ ಅವನುಮಾತ್ರ ಆ ತೇಜೋರೂಪನಾದ ಶ್ರೀ ಕೃಷ್ಣನನ್ನು ಕಾಣುತ್ತಾನೆ. ಉಳಿದವರು ಆ ತೇಜಸ್ಸನ್ನು ಮಾತ್ರ ಕಾಣುತ್ತಾರೆಯಾಗಲಿ ಅವನನ್ನು ಬೇರೆ ಕಾಣುವುದಿಲ್ಲ.

೮. ನಾರದಮಹರ್ಷಿಯು ಆ ತೇಜಸ್ಸಿನಲ್ಲಿ, ವಿಚಿತ್ರವಾದ ಶ್ರೇಷ್ಠರತ್ನ ಮಯವಾಗಿಯೂ, ಮನಮೆಚ್ಚುವುದಾಗಿಯೂ, ರತ್ನಗಳಿಂದ ಪ್ರಜ್ವಲಿಸುವ ಸಹಸ್ರಾರು ಕಂಬಗಳಿಂದ ಕಳೆಯೆರಚುವುದಾಗಿಯೂ, ಮಹಾಸಭಾಮಂಟಪ ಗಳಿಂದ ನೋಟಕ್ಕೊಪ್ಪಿ ಮನೋಹರವಾಗಿಯೂ ಇರುವ ಅದ್ಭುತವಾದ ದಿವ್ಯ ಮಂದಿರವನ್ನು ಕಂಡನು.

೯. ಆ ದಿವ್ಯಮಂದಿರವು ವಿಚಿತ್ರವಾದ ನವಿರುಬಟ್ಟೆಗಳನ್ನುಟ್ಟು ರತ್ನಭೂಷಣ ಗಳಿಂದ ಭೂಷಿತರಾಗಿ ಉಪಾಸಕರಾದ ಸ್ತ್ರೀಪುರುಷರ ಅಸಂಖ್ಯಾಕವಾದ ಉಜ್ವಲ ತೇಜೋವಿರಾಜಿತ ದಿವ್ಯಸೌಧಪಂಕ್ತಿಗಳಿಂದ ಸುತ್ತುಮುತ್ತಲೂ ಆವರಿಸಲ್ಪಟ್ಟು ರಾರಾಜಿಸುತ್ತಿದ್ದಿತು.

೧೦. ಮಣೀಂದ್ರಸಾರಗಳಿಂದಲೂ, ರತ್ನೇಂದ್ರಸಾರಗಳಿಂದಲೂ ನಿರ್ಮಿಸ

ಆಶ್ಚರ್ಯಕೃತ್ಪ್ರೇಕ್ಷಕಮಾನಸಾನಾಂ
ದಿವ್ಯಂ ಮುನಿಃ ಪ್ರೈಕ್ಷತ ಭೂರಿಹರ್ಷಃ ॥ ೧೦ ॥
ತತ್ರಾಽಥ ಕೃಷ್ಣಂ ಭಗವಂತಮೈಕ್ಷ
ನ್ನಾರಾಯಣಂ ನಿರ್ಗುಣಮಾಸ್ಥಿತಂ ಸಃ ।
ಸರ್ವಜ್ಞಮೀಶಂ ಪುರುಷೋತ್ತಮಂ ಚ
ಯಂ ವಾಸುದೇವಂ ಚ ವದಂತಿ ಸಾತ್ವತಾಃ ॥ ೧೧ ॥
ಯಂ ಕೇಚಿದಾಹುಃ ಪರಮಾತ್ಮಸಂಜ್ಞಂ
ಕೇಚಿತ್ಪರಂ ಬ್ರಹ್ಮ ಪರಾತ್ಪರಂ ಚ ।
ಬ್ರಹ್ಮೇತಿ ಕೇಚಿದ್ಭಗವಂತಮೇಕೇ
ವಿಷ್ಣುಂ ಚ ಭಕ್ತಾಃ ಪರಮೇಶ್ವರಂ ಚ ॥ ೧೨ ॥
ಕಂದರ್ಪಸಾಹಸ್ರಮನೋಹರಾಂಗಂ
ಸದಾಕಿಶೋರಂ ಕರುಣಾನಿದಾನಂ ।
ಅತಿಪ್ರಶಾಂತಾಕೃತಿದರ್ಶನೀಯಂ
ಕ್ಷರಾಕ್ಷರೇಭ್ಯಶ್ಚ ಪರಂ ಸ್ವತಂತ್ರಂ ॥ ೧೩ ॥

---

ಲ್ಪಟ್ಟು ನೋಟಕರ ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡುವುದಾದ ದಿವ್ಯ ಸಿಂಹಾಸನವನ್ನು ಆ ಭವ್ಯಮಂದಿರಮಧ್ಯದಲ್ಲಿ ಕಂಗೊಳಿಸುತ್ತಿರುವುದನ್ನು ಆ ಮುನಿಯು ನೋಡಿ ಪರಮಹರ್ಷಿತನಾದನು.

೧೧. ಆ ಸಿಂಹಾಸನದಲ್ಲಿ ನಿರ್ಗುಣಸ್ವರೂಪವನ್ನು ತಳೆದು ನೆಲಸಿದ ಭಗವಂತನಾದ ಶ್ರೀಕೃಷ್ಣನನ್ನಾತನು ಕಂಡನು. ಸಾತ್ವತರು ಯಾರನ್ನು ಸರ್ವಜ್ಞನೆಂದೂ, ಈಶ್ವರನೆಂದೂ, ಪುರುಷೋತ್ತಮನೆಂದೂ, ವಾಸುದೇವನೆಂದೂ ಹೇಳುವರೋ ಆ ಕೃಷ್ಣರೂಪಿಯಾದ ನಾರಾಯಣನೇ ಆತನಾಗಿದ್ದನು.

೧೨. ಕೆಲವರು ಯಾರನ್ನು ಪರಮಾತ್ಮನೆಂದು ಹೇಳುತ್ತಾರೆಯೋ ಮತ್ತೆ ಕೆಲವರು ಯಾರನ್ನು ಪರಬ್ರಹ್ಮವೆನ್ನುತ್ತಾರೆಯೋ, ಪರಾತ್ಪರವಾದ ಬ್ರಹ್ಮವೆಂದು ಮತ್ತಾವನನ್ನು ಕೆಲವರೆನ್ನುತ್ತಾರೆಯೊ, ಕೆಲವರು ಯಾರನ್ನು ಭಗವಂತನೆನ್ನುವರೊ, ವಿಷ್ಣುವೆಂದೂ ಪರಮೇಶ್ವರನೆಂದೂ ಭಕ್ತರು ಯಾರನ್ನು ಕರೆಯುತ್ತಾರೆಯೋ ಆ ಸ್ವಾಮಿಯೇ ಆ ಶ್ರೀಕೃಷ್ಣಪರಮಾತ್ಮನಾಗಿದ್ದನು.

೧೩. ಮನ್ಮಥನಿಗೆ ಸಾವಿರಪಾಲು ಮನೋಹರವಾದ ಅಂಗಗಳುಳ್ಳವನೂ, ಸದಾಕಾಲವೂ ಕಿಶೋರ (ಬಾಲಕ)ನಾಗಿಯೇ ಇರುವವನೂ, ಕರುಣೆಗೆ ನೆಲೆವನೆಯೂ, ಅತಿ ಪ್ರಶಾಂತವಾದ ಆಕೃತಿಯಿಂದೊಡಗೂಡಿ ನಯನಮನೋಹರನಾದವನೂ ಕ್ಷರ ಮತ್ತು ಅಕ್ಷರಗಳೆರಡಕ್ಕೂ ಮೀರಿದವನೂ, ಸ್ವತಂತ್ರನೂ ಆದ ಪರಬ್ರಹ್ಮವಸ್ತುವೇ ಆತನಾಗಿದ್ದನು.

ನೈಕಾಂಡಸರ್ಗಸ್ಥಿತಿನಾಶಲೀಲಾ
ವಿಧಾಯಕಾಪಾಂಗನಿರೀಕ್ಷಣಂ ಚ ।
ಅನೇಕಕೋಟ್ಯಂಡಮಹಾಧಿರಾಜಂ
ವಿಶ್ವೈಕವಂದ್ಯಂ ನಟವರ್ಯವೇಷಂ ॥ ೧೪ ॥
ಅನರ್ಘ್ಯದಿವ್ಯೋತ್ತಮಪೀತವಾಸಸ
ಮನೇಕಸದ್ರತ್ನ ವಿಭೂಷಣಾಢ್ಯಂ ।
ನವೀನಜೀಮೂತಸಮಾನವರ್ಣಂ
ಕರ್ಣೋಲ್ಲಸತ್ಸನ್ಮಕರಾಭಕುಂಡಲಂ ॥ ೧೫ ॥
ನಿಜಾಂಗನಿರ್ಯಾತಿತಭೂರಿತೇಜ
ಶ್ಛಯಾವೃತತ್ವಾತ್ಸಿತವರ್ಣಮುಕ್ತಂ ।
ಸದ್ರತ್ನಸಾರೋಜ್ವಲ ಸತ್ಕಿರೀಟಂ
ಶರತ್ಸರೋಜಚ್ಛದಚಾರುನೇತ್ರಂ ॥ ೧೬ ॥
ಸುಗಂಧಿಸಚ್ಚಂದನ ಚರ್ಚಿತಾಂಗಂ
ಶ್ರೀವತ್ಸಲಕ್ಷ್ಮಾಂಕಿತಹೃತ್ಕಪಾಟಂ ।
ನಿನಾದಯಂತಂ ಮಧುರಂ ಚ ವೇಣುಂ
ಕೃತ್ವಾ ಮುಖಾಗ್ರೇಂಬುಜಚಾರುದೋರ್ಭ್ಯಾಂ ॥ ೧೭ ॥

---

೧೪. ಆ ಸ್ವಾಮಿಯು, ಅನೇಕ ಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿ ನಾಶಗಳೆಂಬ ಲೀಲೆಯನ್ನು ನಡಸುವ ಕಡೆಗಣ್ಣೋಟವುಳ್ಳವನಾಗಿ, ಅನೇಕಕೋಟಿ ಬ್ರಹ್ಮಾಂಡಗಳಿಗೆ ರಾಜಾಧಿರಾಜನೂ, ವಿಶ್ವಕ್ಕೆಲ್ಲ ಏಕೈಕವಂದ್ಯನೂ, ನಟವರ್ಯನ ವೇಷವನ್ನು ತಳೆದು ಕಂಗೊಳಿಸುವವನೂ ಆಗಿದ್ದನು.

೧೫. ಅನರ್ಘ್ಯವೂ, ದಿವ್ಯವೂ ಆದ ಉತ್ತಮ ಪೀತಾಂಬರವನ್ನು ಧರಿಸಿ ಅನೇಕ ಶ್ರೇಷ್ಠರತ್ನಗಳಿಂದ ಮಾಡಿದ ಭೂಷಣಗಳಿಂದ ಭೂಷಿತನಾಗಿ ಹೊಸ ಮುಗಿಲಿಗೆ ಸಮಾನವಾದ ನೀಲವರ್ಣವುಳ್ಳವನಾಗಿ, ಕಿವಿಗಳಲ್ಲಿ ಹೊಳೆಹೊಳೆಯುವ ಮಕರಕುಂಡಲಗಳನ್ನು ತಳೆದು ಆ ಪರಮಾತ್ಮನು ಕಂಗೊಳಿಸುತ್ತಿದ್ದನು.

೧೬. ಆ ದೇವದೇವನು ತನ್ನ ಅಂಗಗಳಿಂದ ಹೊರಹೊಮ್ಮುವ ಬಹು ದೊಡ್ಡದಾದ ತೇಜೋರಾಶಿಯಿಂದ ಆವರಿಸಲ್ಪಟ್ಟಿರುವ ಕಾರಣದಿಂದಲೇ ಬಿಳಿಯ ಬಣ್ಣದವನೆಂದು ಹೇಳಲ್ಪಡುವವನೂ, ಮಹಾರತ್ನಗಳ ಸಾರದಿಂದ ಪ್ರಜ್ವಲಿಸುವ ಉತ್ತಮ ಕಿರೀಟವನ್ನು ಧರಿಸಿರುವವನೂ, ಶರತ್ಕಾಲದ ಕೆಂದಾವರೆಯ ದಳದಂತೆಸೆಯುವ ಮನೋಹರವಾದ ನೇತ್ರಗಳುಳ್ಳವನೂ ಆಗಿದ್ದನು.

೧೭. ಆತನು ಸುಗಂಧಯುಕ್ತವಾದ ಚಂದನಪೂಸಿದ ಅಂಗಗಳುಳ್ಳವನೂ, ಶ್ರೀವತ್ಸಚಿಹ್ನೆಯಿಂದ ಗುರುತುಮಾಡಲ್ಪಟ್ಟಿರುವ ವಕ್ಷಸ್ಥಳವುಳ್ಳವನೂ,

ಜಯಾ ಸುಶೀಲಾಲಲಿತಾಮುಖಾನಾಂ
ವೃಂದೈಃ ಸಖೀನಾಂ ಸಹ ರಾಧಯಾ ಚ ।
ಸಮರ್ಚ್ಯಮಾನಂ ರಮಯಾ ಚ ಭಾಮಾ
ಕಲಿಂದಜಾಜಾಂಬವತೀಮುಖಾನಾಂ ॥ ೧೮ ॥
ಧರ್ಮೇಣ ವೇದೈರಖಿಲೈರ್ಭಗೈಶ್ಚ
ಜ್ಞಾನಾದಿಭಿಃ ಸಂಯುತಪಾಣಿಯುಗ್ಮೈಃ ।
ನಿಷೇವ್ಯಮಾಣಂ ಚ ಸುದರ್ಶನಾದ್ಯೈ
ರ್ನಿಜಾಯುಧೈರ್ಮೂರ್ತಿಧರೈರನೇಕೈಃ ॥ ೧೯ ॥
ಮಸಾರಮಾಣಿಕ್ಯ ಸುವರ್ಣವರ್ಣೈಃ
ಸಿತೈಶ್ಚ ಕೈಶ್ಚಿನ್ನಿಜಪಾರ್ಷದಾಗ್ರ್ಯೈಃ ।
ಉಪಾಸಿತಂ ಚಕ್ರಗದಾಬ್ಜಶಂಖ
ಲಸದ್ಭುಜೈರ್ನಂದಸುನಂದಮುಖ್ಯೈಃ ॥ ೨೦ ॥
ಶ್ರೀದಾಮಮುಖ್ಯೈರಥ ಗೋಪವೇಷೈ
ರ್ಭಕ್ತ್ಯಾವನಮ್ರೈರ್ದ್ವಿಭುಜೈರನೇಕೈಃ ।
ಉಪಾಸ್ಯಮಾನಂ ಗರುಡೇನ ಚಾಗ್ರತೋ
ವಿಭೂತಿಭಿಶ್ಚಾಷ್ಟಭಿರಾನತಾಭಿಃ ॥ ೨೧ ॥

---

ಅಂಬುಜಗಳಂತೆ ಮನೋಹರವಾದ ತೋಳುಗಳಿಂದ ಬಾಯ್ತುದಿಯಲ್ಲಿ ಕೊಳಲನ್ನಿಟ್ಟು ಮಧುರವಾಗಿ ಇನಿದನಿಯನ್ನು ಹೊರಸೂಸುತ್ತಿದ್ದನು.

೧೮. ಆ ಪರಮಾತ್ಮನು ಜಯೆ, ಸುಶೀಲೆ, ಲಲಿತೆ ಮೊದಲಾದ ಸಖಿಯರ ಸಮೂಹದಿಂದಲೂ, ರಾಧೆಯೊಡಗೂಡಿದ ರಮೆಯಿಂದಲೂ, ಸತ್ಯಭಾಮೆ, ಕಾಲಿಂದಿ, ಜಾಂಬವತಿಯರೇ ಮೊದಲಾದವರಿಂದಲೂ ಸೇವೆಗೊಳ್ಳುತ್ತಿದ್ದನು.

೧೯. ಧರ್ಮಾಭಿಮಾನಿದೇವತೆ, ಅಖಿಲವೇದಗಳು, ಷಡ್ಗುಣೈಶ್ವರ್ಯಗಳು, ಜ್ಞಾನಾದಿಗಳು, ಮೂರ್ತಿಗಳನ್ನು ಧರಿಸಿಬಂದಿರುವ ಅನೇಕ ಸ್ವಂತ ಆಯುಧಗಳು ಮೊದಲಾದ ಬದ್ಧಾಂಜಲಿಪುಟರಾದ ಸಮಸ್ತರಿಂದಲೂ ಆ ವಾಸುದೇವನು ಸೇವಿಸಲ್ಪಡುತ್ತಿದ್ದನು.

೨೦. ಮಸಾರ (ಪಚ್ಚೆ), ಮಾಣಿಕ್ಯ, ಸುವರ್ಣಗಳ ವರ್ಣವುಳ್ಳವರೂ ಬಿಳಿಯಬಣ್ಣವುಳ್ಳವರೂ, ಚಕ್ರ ಗದೆ ಪದ್ಮ ಶಂಖಗಳನ್ನು ಧರಿಸಿ ಮೆರೆಯುವ ತೋಳುಗಳುಳ್ಳವರೂ ಆದ ನಂದ ಸುನಂದರೇ ಮೊದಲಾದ ಪಾರ್ಷದಶ್ರೇಷ್ಠರು ಆ ಭಗವಂತನನ್ನು ಉಪಾಸಿಸುತ್ತಿದ್ದರು.

೨೧. ಗೋಪವೇಷವನ್ನು ಧರಿಸಿ ಬಾಹುದ್ವಯಭೂಷಿತರಾಗಿ ಭಕ್ತಿಯಿಂದ ಬಾಗಿ ನಿಂತಿರುವ ಶ್ರೀದಾಮನೇ ಮೊದಲಾದ ಅನೇಕ ಭಕ್ತರಿಂದಲೂ, ಗರುಡ

ಮೂರ್ತ್ಯಾ ಚ ಶಾಂತ್ಯಾ ದಯಯಾ ಚ ಸೇವಿತಂ
ಪುಷ್ಟ್ಯಾ ಚ ತುಷ್ಟ್ಯಾ ಹ್ಯಥ ಮೇಧಯಾಚ ।
ಶ್ರದ್ಧಾಕ್ರಿಯಾಹ್ಯುನ್ನತಿಭಿಶ್ಚ ಮೈತ್ರ್ಯಾ
ತಥಾ ತಿತಿಕ್ಷಾಸ್ಮೃತಿಬುದ್ಧಿಭಿಶ್ಚ ॥ ೨೨ ॥
ದೃಷ್ಟ್ವಾ ತಮತ್ಯದ್ಭುತದಿವ್ಯಮೂರ್ತಿಂ
ತದ್ರೂಪಸೌರಭ್ಯಹೃತಾಖಿಲೇಂದ್ರಿಯಃ ।
ಆನಂದವಾರಿಪ್ರತಿರುದ್ಧದೃಷ್ಟಿಃ
ಪ್ರೇಮ್ಣೋತ್ಥರೋಮಾ ಸುಖಸಂಭೃತೋಽಭೂತ್ ॥
ದಂಡವತ್ತಂ ನಮಸ್ಕೃತ್ಯ ನಾರದಃ ಪ್ರೇಮವಿಹ್ವಲಃ ।
ಬದ್ಧಾಂಜಲಿಪುಟಸ್ತಸ್ಥೌ ವೀಕ್ಷಮಾಣಸ್ತದಾನನಂ ॥ ೨೪ ॥
ತಂ ಮಾನಯಾಮಾಸ ಹರಿಃ ಪೃಷ್ಟ್ವಾ ಸ್ವಾಗತಮಾದರಾತ್ ।
ಭಕ್ತಮೇಕಾಂತಿಕಂ ಸ್ವಸ್ಯ ಸ್ವೇನೈವ ಚ ದಿದೃಕ್ಷಿತಂ ॥ ೨೫ ॥
ಭಗವದ್ವಾಕ್ಯಪೀಯೂಷಾಸ್ವಾದ ಪ್ರಾಪ್ತಾತ್ಮಸಂಸ್ಮೃತಿಃ ।
ತದ್ದರ್ಶನಮಹಾನಂದೋ ಭಕ್ತ್ಯಾ ತುಷ್ಟಾವ ತಂ ಮುನಿಃ ॥ ೨೬ ॥

---

ನಿಂದಲೂ, ಎದುರುಗಡೆಯಲ್ಲಿಯೆ ತಲೆ ತಗ್ಗಿಸಿನಿಂತ ಮೂರ್ತಿಮತ್ತುಗಳಾದ ಅಷ್ಟೈಶ್ವರ್ಯಗಳಿಂದಲೂ ಆ ಪರಮಾತ್ಮನು ಉಪಾಸಿಸಲ್ಪಡುತ್ತಿದ್ದನು.

೨೨. ಇಷ್ಟೆಯಲ್ಲದೆ ಆ ಸ್ವಾಮಿಯು ಮೂರ್ತಿ, ಶಾಂತಿ, ದಯೆ, ಪುಷ್ಟಿ, ಮೇಧಾ, ಶ್ರದ್ಧಾ, ಕ್ರಿಯಾ, ಉನ್ನತಿ, ಮೈತ್ರಿ, ತಿತಿಕ್ಷಾ, ಸ್ಮೃತಿ, ಬುದ್ಧಿ— ಇವರೆಲ್ಲರಿಂದಲೂ ಸೇವೆಯನ್ನು ಕೈಗೊಳ್ಳುತ್ತಿದ್ದನು.

೨೩. ನಾರದಮುನಿಯು ಇಂತಹ ಅತ್ಯದ್ಭುತಮಹಿಮನಾದ ದಿವ್ಯ ಮೂರ್ತಿಯುಳ್ಳ ಆ ಕೃಷ್ಣಭಗವಂತನನ್ನು ನೋಡಿ, ಆ ರೂಪದ ಸೌರಭ್ಯದಿಂದ ಇಂದ್ರಿಯಗಳೆಲ್ಲವೂ ಸೆಳೆಯಲ್ಪಟ್ಟವನಾಗಿ, ಆನಂದಬಾಷ್ಪವುಕ್ಕಿ ಕಣ್ನೋಟ ವನ್ನಡ್ಡಗಟ್ಟಿರಲು ಪ್ರೇಮಭರದಿಂದ ರೋಮಾಂಚಗೊಂಡು ಸುಖಸಂಪೂರ್ಣ ನಾದನು.

೨೪. ತರುವಾಯ ಆತನು ಆ ಭಗವಂತನಿಗೆ ದಂಡವತ್ತಾಗಿ ನಮಸ್ಕಾರ ಮಾಡಿ ಪ್ರೇಮದಿಂದ ಕಳವಳಹೊಂದಿ ಕೈಮುಗಿದುಕೊಂಡು ಆ ಪ್ರಭುವಿನ ಮುಖವನ್ನೇ ನೋಡುತ್ತಾ ನಿಂತುಬಿಟ್ಟನು.

೨೫. ತನ್ನನ್ನು ನೋಡಬೇಕೆಂದು ತಾನೇ ಪ್ರೇರಣೆಮಾಡಿ ಕರಿಸಿದ ತನ್ನ ಏಕಾಂತಭಕ್ತನಾದ ಆ ನಾರದನನ್ನು ಕಂಡು ಶ್ರೀಹರಿಯು ತಾನಾಗಿಯೆ ಅವನನ್ನು ಕುರಿತು ಆದರದಿಂದ ಸ್ವಾಗತವನ್ನು ಬಯಸಿ ಕುಶಲಪ್ರಶ್ನೆ ಮಾಡಿದನು.

೨೬. ಭಗವಂತನ ಆ ವಾಕ್ಯಾಮೃತರಸವನ್ನಾಸ್ವಾದಿಸಿ ಅದರಿಂದ ಆತ್ಮ

ನಾರದ ಉವಾಚ :-

ಜಯ ಶ್ರೀಕೃಷ್ಣ ಭಗವನ್ ನಾರಾಯಣ ಜಗತ್ಪ್ರಭೋ ।
ವಾಸುದೇವಾಽಖಿಲಾವಾಸ ಸದೈಕಾಂತಿಕವಲ್ಲಭ ॥ ೨೭ ॥
ಅತ್ಯಾಶ್ಚರ್ಯಾರ್ಚನೀಯಾಂಘ್ರೇ ರಾಧಿಕಾಕಮಲಾದಿಭಿಃ ।
ತ್ವಮೇವಾತ್ಯಂತಿಕಂ ಶ್ರೇಯೋಽಭೀಪ್ಸತಾಂ ಪರಮಾ ಗತಿಃ ॥ ೨೮ ॥
ನಿತ್ಯಾನಾಮಾತ್ಮನಾಂ ನಿತ್ಯ ಆತ್ಮಾ ಚೇತನಚೇತನಃ ।
ಕ್ಷರಾಕ್ಷರೇಭ್ಯಶ್ಚ ಪರಸ್ತ್ವಂ ಬ್ರಹ್ಮ ಪರಮಂ ಹರೇ ॥ ೨೯ ॥
ಯಥಾ ವಿಶುದ್ಧಿಃ ಸಿದ್ಧಿಶ್ಚ ಭಕ್ತ್ಯಾ ಪರಮಯಾ ತವ ।
ತಥಾ ನಸ್ಯಾನ್ನೃಣಾಮನ್ಯೈಃ ಸಾಧನೈಸ್ತಪ ಆದಿಭಿಃ ॥ ೩೦ ॥
ತ್ವದಂಘ್ರಿ ದಿವ್ಯಜ್ಯೋತ್ಸ್ನೈಕಾ ಮುಮುಕ್ಷೂಣಾಂ ಹೃದಿ ಸ್ಥಿತಂ ।
ಮಹತ್ಸಂತಮಸಂ ಹರ್ತುಂ ಸದ್ಯಃ ಶಕ್ತಾಸ್ತಿ ಸತ್ಪತೇ ॥ ೩೧ ॥

---

ಸ್ಮೃತಿಯನ್ನು ಪಡೆದವನಾಗಿ, ಆತನ ದರ್ಶನದಿಂದ ಮಹಾನಂದವನ್ನು ಹೊಂದಿದ ಆ ಮುನಿಯು ಭಕ್ತಿಯಿಂದ ಅವನನ್ನು ಈ ರೀತಿ ಸ್ತುತಿಸಿದನು.

೨೭. ನಾರದನು ಸ್ತುತಿಸುತ್ತಾನೆ:— "ಶ್ರೀಕೃಷ್ಣಾ, ಭಗವಂತಾ, ನಾರಾಯಣಾ, ಜಗತ್ಪ್ರಭೂ, ವಾಸುದೇವಾ, ಅಖಿಲಾವಾಸಾ (ಎಲ್ಲೆಡೆಯೂ ಇರುವವನೆ), ಏಕಾಂತಭಕ್ತರಿಗೆ ಯಾವಾಗಲೂ ವಲ್ಲಭನಾಗಿರುವವನೇ! ನಿನಗೆ ಜಯವಾಗಲಿ !!

೨೮. ರಾಧೆ, ಕಮಲೆ (ಲಕ್ಷ್ಮಿ) ಮೊದಲಾದವರಿಂದ ಅರ್ಚಿಸಲ್ಪಡುತ್ತಿರುವುವೂ, ಅತ್ಯಾಶ್ಚರ್ಯಕರವೂ, ಮಹಿಮೆಯುಳ್ಳವೂ ಆದ ದಿವ್ಯಪಾದಗಳುಳ್ಳ ಓ ಸ್ವಾಮಿಯೇ! ಬಯಸುವವರಿಗೆ ನೀನೇ ಶ್ರೇಷ್ಠವಾದ ಶ್ರೇಯಸ್ಸು! ನೀನೇ ಪರಮಗತಿಯು !!

೨೯. ಎಲೈ ಹರಿಯೇ! ನಿತ್ಯರಾದ ಆತ್ಮರಿಗೆ ನೀನು ನಿತ್ಯಾತ್ಮನು; ಚೇತನಕ್ಕೆ ಚೇತನನು; ಕ್ಷರ ಮತ್ತು ಅಕ್ಷರಗಳೆಲ್ಲಕ್ಕಿಂತಲೂ ಶ್ರೇಷ್ಠನಾದವನು; ನೀನೇ ಪರಬ್ರಹ್ಮವು.

೩೦. ನಿನ್ನಲ್ಲಿ ಪರಮಭಕ್ತಿಯುಳ್ಳ ಮಾನವರಿಗೆ ಪರಿಶುದ್ಧಿಯೂ ಸಿದ್ಧಿಯೂ ಉಂಟಾಗುವ ಹಾಗೆ ತಪಸ್ಸೇ ಮೊದಲಾದ ಇತರ ಸಾಧನಗಳಿಂದ ಉಂಟಾಗುವುದಿಲ್ಲ.

೩೧. ಎಲೈ ಸಜ್ಜನರೊಡೆಯನೇ! ಮೋಕ್ಷಾಪೇಕ್ಷಿಗಳ ಹೃದಯದಲ್ಲಿ ನೆಲಸಿದ ಮಹತ್ತಾದ ಗಾಢಾಂಧಕಾರವನ್ನು ತಕ್ಷಣವೇ ಪರಿಹಾರಮಾಡಲು ನಿನ್ನ ಪಾದಗಳಿಂದ ಹೊರಸೂಸುವ ದಿವ್ಯವಾದ ಬೆಳುದಿಂಗಳೊಂದೇ ಸಮರ್ಥವಾಗಿರುವುದು.

ಸರ್ವೈರ್ವೇದೈಸ್ತ್ವಮೇವೇಜ್ಯ ಉಪಾಸ್ಯೋ ಜ್ಞೇಯ ಏವ ಚ ।
ನಿರೂಪಿತೋಽಸಿ ಭಗವನ್ ಸರ್ವಕಾರಣಕಾರಣಂ ॥ ೩೨ ॥
ಏಕ್ಕೈಕಸ್ಮಿನ್ರೋಮಕೂಪೇ ಯತ್ತ್ವಾಸ್ತಿ ಸಿತಂ ಮಹಃ ।
ಶಾಂತಮಾನಂದರೂಪಂ ಚ ತತ್ಕೋಟೀಂದುಪ್ರಭಾಧಿಕಂ ॥ ೩೩ ॥
ಅಸ್ಮಿಂಸ್ತ್ವಮಕ್ಷರೇ ಧಾಮ್ನಿ ನಿರ್ಗುಣೇಽಮೃತಸಂಜ್ಞಕೇ ।
ಮಹಃಪುಂಜೇ ಸದೈವಾಸ್ಸೇ ನಿರ್ಗುಣಃ ಪುರುಷೋತ್ತಮಃ ॥ ೩೪ ॥
ಬ್ರಹ್ಮಾಂಡಭಯದಾತ್ ಕಾಲಾತ್ ಮಾಯಾಯಾಶ್ಚ ಮಹಾಭಯಾತ್ ।
ಮುಕ್ತಾ ಭಕ್ತಾ ಭವಂತ್ಯೇವ ತ್ವದೀಯೋಪಾಸನಾಬಲಾತ್ ॥ ೩೫ ॥
ತಂ ತ್ವಾಮಹಮುಪೇತೋಽಸ್ಮಿ ಶರಣಂ ಜಗದೀಶ್ವರಂ ।
ಸರ್ವಾತ್ಮಾನಂ ವಿಭುಂ ಬ್ರಹ್ಮ ಮಹಾಪುರುಷಮಚ್ಯುತಂ ॥ ೩೬ ॥
ಯಥಾ ತ್ವಚ್ಚರಣಾಂಭೋಜೇ ಭಕ್ತಿರ್ಮೇ ನಿಶ್ಚಲಾ ಸದಾ ।
ಭವೇತ್ತಥೈವ ದೇವೇಶ ಕರ್ತುಮರ್ಹಸ್ಯನುಗ್ರಹಂ ॥ ೩೭ ॥

---

೩೨. 'ಯಜ್ಞಗಳ ಮೂಲಕ ಆರಾಧಿಸಲ್ಪಡಬೇಕಾದವನು ನೀನೇ; ಉಪಾಸನೆಮಾಡಬೇಕಾದವನು ನೀನೇ, ತಿಳಿಯಬೇಕಾದವನು ನೀನೇ, ಸರ್ವ ಕಾರಣಗಳಿಗೂ ಕಾರಣನಾದವನೂ ನೀನೇ' ಓ ಭಗವಂತಾ! ಹೀಗೆಂದು ಸರ್ವವೇದಗಳಿಂದಲೂ ನೀನೇ ನಿರೂಪಿತನಾಗಿದ್ದೀಯೆ.

೩೩. ನಿನ್ನ ಒಂದೊಂದು ರೋಮಕೂಪದಲ್ಲಿಯೂ ಯಾವ ಶುಭ್ರತೇಜಸ್ಸು ನೆಲಸಿರುವುದೋ, ಶಾಂತವೂ ಆನಂದರೂಪವೂ ಆಗಿರುವ ಆ ತೇಜಸ್ಸೇ ಕೋಟಿ ಚಂದ್ರರ ಪ್ರಭೆಗಿಂತಲೂ ಅಧಿಕವಾಗಿರುವುದು.

೩೪. ಅಮೃತವೆಂದು ಹೆಸರುಹೊಂದಿ ನಿರ್ಗುಣವೆನಿಸಿದ ಈ ಅಕ್ಷರ ಧಾಮದಲ್ಲಿ ನಿರ್ಗುಣನೂ ಪುರುಷೋತ್ತಮನೂ ಆದ ನೀನು ತೇಜೋರಾಶಿಯಾಗಿ ಸದಾಕಾಲವೂ ನೆಲಸಿದ್ದೀಯೆ.

೩೫. ಭಕ್ತರು ನಿನ್ನ ಉಪಾಸನೆಯ ಬಲದಿಂದ ಬ್ರಹ್ಮಾಂಡಕ್ಕೇ ಭಯ ವನ್ನುಂಟುಮಾಡುವ ಕಾಲ (ಯಮ)ನಿಂದಲೂ, ಮಾಯೆಯ ಮಹಾಭಯ ದಿಂದಲೂ ಮುಕ್ತರಾಗಿಯೇ ಆಗುತ್ತಾರೆ.

೩೬. ಜಗದೀಶ್ವರನೂ, ಸರ್ವಾತ್ಮನೂ, ವಿಭುವೂ, ಬ್ರಹ್ಮವೂ, ಮಹಾ ಪುರುಷನೂ, ಅಚ್ಯುತನೂ ಆದ ಅಂಥ ನಿನ್ನನ್ನು ನಾನು ಶರಣೆಂದು ಆಶ್ರಯಿಸಿ ಬಂದಿದ್ದೇನೆ.

೩೭. ಎಲೈ ದೇವೇಶಾ! ನಿನ್ನ ಚರಣಕಮಲಗಳಲ್ಲಿ ಸದಾಕಾಲವೂ ನನಗೆ ನಿಶ್ಚಲವಾದ ಭಕ್ತಿಯುಂಟಾಗುವಹಾಗೆ ಅನುಗ್ರಹಮಾಡಬೇಕು.''

ಸ್ಕಂದ ಉವಾಚ:—

**ಇತ್ಥಂ ದೇವರ್ಷಿಣಾ ಭಕ್ತ್ಯಾ ಸಂಸ್ತುತಃ ಪರಮೇಶ್ವರಃ ।**
**ತಮಾನಂದಯನ್ವಾಚಾ ಸುಧಾಸಂಮಿತಯಾ ಮುನಿಂ ॥ ೩೮ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಶ್ರೀವಾಸುದೇದರ್ಶನಂ" ನಾಮ ಸಪ್ತದಶೋಽಧ್ಯಾಯಃ

---

೩೮. ಸ್ಕಂದನು ಹೇಳುತ್ತಾನೆ:— ಈ ರೀತಿಯಾಗಿ ದೇವರ್ಷಿಯಾದ ನಾರದನು ಭಕ್ತಿಯಿಂದ ಸ್ತುತಿಸಲು ಆ ಪರಮೇಶ್ವರನು ಅಮೃತಕ್ಕೆ ಸಮಾನವಾದ ನುಡಿಗಳಿಂದ ಆ ಮುನಿಯನ್ನು ಆನಂದಪಡಿಸುತ್ತಾ ಅವನನ್ನು ಕುರಿತು ಹೀಗೆ ನುಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವಾಸುದೇವ ಮಾಹಾತ್ಮ್ಯದಲ್ಲಿ "ವಾಸುದೇವದರ್ಶನವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಾದಶೋಽಧ್ಯಾಯಃ

### ಶ್ರೀವಾಸುದೇವಾವತಾರಾದಿಕಥನಂ

ಶ್ರೀಭಗವಾನುವಾಚ :—

ದರ್ಶನಂ ಮಮ ಯಜ್ಜಾತಂ ತವ ತತ್ತು ಮಹಾಮುನೇ ।
ನಿತ್ಯೈಕಾಂತಿಕಭಕ್ತತ್ವಾನ್ನಿರ್ದಂಭತ್ವಾನ್ಮದಿಚ್ಛಯಾ ॥ ೧ ॥
ಅಹಿಂಸಾಬ್ರಹ್ಮಚರ್ಯಂ ಚ ತ್ವಯಿ ನಿತ್ಯಂ ಚ ತದ್ದ್ವಯಂ ।
ಸ್ವಧರ್ಮೋಪಶಮೌ ಚೈವ ವೈರಾಗ್ಯಂ ಚಾತ್ಮವೇದನಂ ॥ ೨ ॥
ಸತ್ಸಂಗೋಽಷ್ಟಾಂಗಯೋಗಶ್ಚ ಸರ್ವಥೇಂದ್ರಿಯನಿಗ್ರಹಃ ।
ಮುನ್ಯನ್ನವೃತ್ತಿಶ್ಚ ತಪಃ ಸರ್ವವ್ಯಸನಹೀನತಾ ॥ ೩ ॥
ಮದೇಕಾಂತಿಕಭಕ್ತಿಶ್ಚ ಮಹಾತ್ಮ್ಯಜ್ಞಾನಪೂರ್ವಿಕಾ ।
ವರ್ತತೇ ತೇನ ಮಾಮತ್ರ ಪಶ್ಯಸಿ ತ್ವಂ ಹಿ ಸುವ್ರತ ॥ ೪ ॥
ಈದೃಗ್ಲಕ್ಷಣಸಂಪನ್ನಾ ಯೇಸ್ಯುರನ್ಯೇಪಿ ಮಾನವಾಃ ।
ತೇಪಿ ಮಾಮೀದೃಶಂ ವಿಪ್ರ ಪಶ್ಯಂತ್ಯೇಕಾಂತಿಕಾಪ್ರಿಯಂ ॥ ೫ ॥
ಅಸಾವಹಮಿಹ ಬ್ರಹ್ಮನ್ನಸ್ಮಿನ್ನಕ್ಷರಧಾಮನಿ ।
ರಾಧಾಲಕ್ಷ್ಮೀಯುತೋ ನಿತ್ಯಂ ವಸಾಮಿ ಸ್ವಾಶ್ರಿತೈಃ ಸಹ ॥ ೬ ॥

---

### ಕನ್ನಡದ ಅನುವಾದ

### ಶ್ರೀವಾಸುದೇವಾವತಾರಾದಿಕಥನ

೧. ಶ್ರೀಭಗವಂತನು ಹೇಳುತ್ತಾನೆ:— "ಎಲೈ ಮಹಾಮುನಿಯೇ! ನೀನು ನನಗೆ ಸತತವೂ ಏಕಾಂತಭಕ್ತನಾಗಿರುವುದರಿಂದಲೂ, ದಂಭರಹಿತನಾಗಿರುವುದರಿಂದಲೂ ನನ್ನ ಇಚ್ಛೆಯಿಂದಲೇ ಈಗ ನಿನಗೆ ನನ್ನ ಸಂದರ್ಶನವು ಲಭಿಸಿರುವುದು.

೨-೪. ಎಲೈ ಸುವ್ರತನೇ! ಅಹಿಂಸೆ ಬ್ರಹ್ಮಚರ್ಯಗಳೂ, ಸ್ವಧರ್ಮ, ಉಪಶಮ (ಶಾಂತಿ), ವೈರಾಗ್ಯ, ಆತ್ಮಜ್ಞಾನ, ಸತ್ಸಂಗ, ಅಷ್ಟಾಂಗಯೋಗ, ಸರ್ವಪ್ರಕಾರವಾದ ಇಂದ್ರಿಯನಿಗ್ರಹ, ಮುನಿಗೆ ಅರ್ಹವಾದ ಅನ್ನಸಂಪಾದನ ವೃತ್ತಿ, ತಪಸ್ಸು, ಸರ್ವವ್ಯಸನಗಳೂ ಇಲ್ಲದಿರುವುದು, ನನ್ನ ಮಹಾತ್ಮೆಯನ್ನರಿತಿರುವ ತಿಳುವಳಿಕೆಯಿಂದುದಿಸಿದ ಏಕಾಂತಭಕ್ತಿ ಮೊದಲಾದುವೆಲ್ಲವೂ ನಿನ್ನಲ್ಲಿ ಸದಾ ನೆಲಸಿವೆ. ಆದುದರಿಂದಲೇ ನೀನು ಇಲ್ಲಿ ನನ್ನನ್ನು ನೋಡುತ್ತಿದ್ದೀಯೆ.

೫. ಅಯ್ಯಾ ಬ್ರಾಹ್ಮಣನೇ! ಈ ರೀತಿಯ ಲಕ್ಷಣಗಳಿಂದೊಡಗೂಡಿದ ಇತರ ಮಾನವರೂ ಏಕಾಂತಭಕ್ತಿಪ್ರಿಯನಾಗಿರುವ ನನ್ನನ್ನು ಹೀಗೆಯೆ ಕಾಣುತ್ತಾರೆ.

೬. ನಾರದಾ! ನಾನು ಈ ಅಕ್ಷರಧಾಮದಲ್ಲಿ (ನಾಶರಹಿತವಾದ ಈ ಸ್ಥಾನ

**ವಾಸುದೇವಸ್ಸ್ವರೂಪೋಽಹಂ ಸರ್ವಕರ್ಮಫಲಪ್ರದಃ ।**
**ಅಂತರ್ಯಾಮಿತಯಾ ವರ್ತೇ ಸ್ವತಂತ್ರಃ ಸರ್ವದೇಹಿನಾಂ ॥ ೭ ॥**
**ವೈಕುಂಠಾಖ್ಯೇ ಮಹಾಧಾಮ್ನಿ ಲಕ್ಷ್ಮ್ಯಾ ಸಹ ಚತುರ್ಭುಜಃ ।**
**ವಸಾಮಿ ನಂದಗರುಡಮುಖ್ಯೈಃ ಸಾಕಂ ಚ ಪಾರ್ಷದೈಃ ॥ ೮ ॥**
**ಧಾಮ್ನಿ ತೇಜೋಮಯೇ ದಿವ್ಯೇ ಶ್ವೇತದ್ವೀಪೇಽನ್ವಹಂ ಭುವಿ ।**
**ದದಾಮಿ ಶ್ವೇತಮುಕ್ತೇಭ್ಯಃ ಪಂಚಕಾಲಂ ಸ್ವದರ್ಶನಂ ॥ ೯ ॥**
**ಕುರ್ವೇಽನಿರುದ್ಧ ಪ್ರದ್ಯುಮ್ನಸಂಕರ್ಷಣಸಮಾಹ್ವಯೈಃ ।**
**ಸ್ವರೂಪೈರ್ನೈಕಕೋಟ್ಯಂಡ ಸರ್ಗಸ್ಥಿತ್ಯಪ್ಯಯಾನಹಂ ॥ ೧೦ ॥**
**ಸರ್ಗಾರಂಭೇ ಮಯಾ ಬ್ರಹ್ಮಾ ಸೃಷ್ಟೋ ನಾಭಿಸರೋರುಹಾತ್ ।**
**ತಪಸಾರಾಧಯಾಮಾಸ ಸಮಾಂ ಯಜ್ಞೈಶ್ಚ ನಾರದ ॥ ೧೧ ॥**
**ತತಸ್ತಸ್ಮೈ ಪ್ರಸನ್ನೋಽಹಂ ಪ್ರಾದದಾಮೀಪ್ಸಿತಾನ್ವರಾನ್ ।**
**ಬ್ರಹ್ಮನ್ ಪ್ರಾಪ್ಸ್ಯಸಿ ಸಾಮರ್ಥ್ಯಂ ಪ್ರಜಾನಾಂ ತ್ವಂ ಹಿ ಸರ್ಜನೇ ॥ ೧೨ ॥**

---

ದಲ್ಲಿ) ರಾಧಾಲಕ್ಷ್ಮೀಸಮೇತನಾಗಿ ಆಶ್ರಿತರಿಂದೊಡಗೂಡಿದವನಾಗಿ ವಾಸ ಮಾಡುತ್ತಿರುತ್ತೇನೆ.

೭. ನಾನು ವಾಸುದೇವಸ್ವರೂಪನು; ಸರ್ವಕರ್ಮಗಳಿಗೂ ಫಲವನ್ನು ಕೊಡತಕ್ಕವನು; ಸರ್ವದೇಹಿಗಳಲ್ಲಿಯೂ ಅಂತರ್ಯಾಮಿಯಾಗಿ ನೆಲಸಿದ್ದೇನೆ; ಸ್ವತಂತ್ರನಾಗಿದ್ದೇನೆ.

೮. ನಾನು ವೈಕುಂಠವೆಂಬ ಮಹಾಧಾಮದಲ್ಲಿ ಲಕ್ಷ್ಮೀಸಮೇತನಾಗಿ ಚತುರ್ಭುಜಗಳನ್ನು ತಳೆದು ನಂದ, ಗರುಡ ಮೊದಲಾದ ಪಾರ್ಷದರಿಂದೊಡ ಗೂಡಿ ವಾಸಮಾಡುತ್ತೇನೆ.

೯. ನಾನು ಭೂಮಿಯಲ್ಲಿ ತೇಜೋಮಯಧಾಮವೆನಿಸಿದ ದಿವ್ಯವಾದ ಶ್ವೇತದ್ವೀಪದಲ್ಲಿ ಸದಾ ನೆಲಸಿ ಶ್ವೇತಮುಕ್ತರಿಗೆ ಪಂಚಕಾಲಗಳಲ್ಲಿಯೂ ನನ್ನ ದರ್ಶನವನ್ನು ದಯಪಾಲಿಸುತ್ತೇನೆ.

೧೦. ನಾನು ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಎಂಬ ರೂಪಗಳಿಂದ ಅನೇಕಕೋಟಿಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುತ್ತಿರುವೆನು.

೧೧. ಸೃಷ್ಟಿಯ ಮೊದಲಲ್ಲಿ ನನ್ನ ನಾಭಿಕಮಲದಿಂದ ಬ್ರಹ್ಮನು ನನ್ನಿಂದಲೇ ಸೃಜಿಸಲಾದನು. ನಾರದಾ! ತಪಸ್ಸಿನಿಂದಲೂ ಯಜ್ಞಗಳಿಂದಲೂ ಅವನು ನನ್ನನ್ನು ಆರಾಧಿಸಿದನು.

೧೨. ಆ ಬಳಿಕ ನಾನು ಅವನಿಗೆ ಪ್ರಸನ್ನನಾಗಿ ಬೇಕುಬೇಕಾದ ವರಗಳೆಲ್ಲ ವನ್ನೂ ಕೊಟ್ಟು ಹೀಗೆ ಹೇಳಿದೆನು :—'ಅಯ್ಯಾ ಬ್ರಹ್ಮನೇ! ನೀನು ಪ್ರಜೆಗಳನ್ನು ಸೃಷ್ಟಿಮಾಡುವುದಕ್ಕೆ ತಕ್ಕ ಸಾಮರ್ಥ್ಯವನ್ನು ಪಡೆದಿರುತ್ತೀಯೆ.

ಆಜ್ಞಾಯಾಮೇವ ತಾಃ ಸರ್ವಾಃ ತವ ಸ್ಥಾಸ್ಯಂತಿ ಮದ್ವರಾತ್ ।
ವೇದಾಶ್ಚಾಪಿ ಸ್ಫುರಿಷ್ಯಂತಿ ತವ ಬುದ್ಧೌ ಸನಾತನಾಃ ॥ ೧೩ ॥
ಜ್ಞಾನಂ ಚ ಮತ್ಸ್ವರೂಪಸ್ಯ ಯಥಾವತ್ತೇ ಭವಿಷ್ಯತಿ ।
ತ್ವಯಾ ಕೃತಾಂ ಚ ಮರ್ಯಾದಾಂ ನಾತಿಕ್ರಂಸ್ಯತಿ ಕಶ್ಚನ ॥ ೧೪ ॥
ಸುರಾಸುರಗಣಾನಾಂ ಚ ಮುನೀನಾಂ ಚ ಮಹಾತ್ಮನಾಂ ।
ತ್ವಮೇವ ವರದೋ ಬ್ರಹ್ಮನ್ ವರೇಪ್ಸೂನಾಂ ಭವಿಷ್ಯಸಿ ॥ ೧೫ ॥
ಅಸಾಧ್ಯೇ ಯತ್ರ ಕಾರ್ಯೇ ಚ ಮೋಹಮೇಷ್ಯಸಿ ತತ್ರ್ವಹಂ ।
ಪ್ರಾದುರ್ಭಾಯ ಕರಿಷ್ಯಾಮಿ ಸ್ಮೃತಮಾತ್ರಸ್ತ್ವಯಾ ವಿಧೇ ॥ ೧೬ ॥
ಸೃಜ್ಯಮಾನೇ ತ್ವಯಾ ವಿಶ್ವೇ ನಷ್ಟಾಂ ಪೃಥ್ವೀಂ ಮಹಾರ್ಣವೇ ।
ಆನಯಿಷ್ಯಾಮಿ ಸ್ವಂ ಸ್ಥಾನಂ ವಾರಾಹಂ ರೂಪಮಾಸ್ಥಿತಃ ।
ಹಿರಣ್ಯಾಕ್ಷಂ ನಿಹತ್ಯೈವ ದೈತ್ಯೇಯಂ ಬಲಗರ್ವಿತಂ ॥ ೧೭ ॥
ದಿನಾಂತೇ ತವ ಮತ್ಸ್ಯೋಽಹಂ ಭೂತ್ವಾ ಕ್ಷೋಣೀಂ ತರೀಮಿವ ।
ಸಹೌಷಧಿಂ ಧಾರಯಿಷ್ಯೇ ಮನ್ವಾದೀಂಶ್ಚ ನಿಶಾವಧಿ ॥ ೧೮ ॥

---

೧೩. ನನ್ನ ವರಬಲದಿಂದ ಅವರೆಲ್ಲರೂ ನಿನ್ನ ಆಜ್ಞೆಗೆ ಅಧೀನರಾಗಿರುತ್ತಾರೆ. ಸನಾತನಗಳಾದ ವೇದಗಳು ಕೂಡ ನಿನ್ನ ಬುದ್ಧಿಯಲ್ಲಿ ಸ್ಫುರಿಸುತ್ತವೆ.

೧೪. ನನ್ನ ಸ್ವರೂಪಜ್ಞಾನವೂ ಯಥಾವತ್ತಾಗಿಯೆ ನಿನಗೆ ಉಂಟಾಗುತ್ತದೆ. ನೀನು ಮಾಡಿದ ಕಟ್ಟುಪಾಡಿನ ಮರ್ಯಾದೆಯನ್ನು ಯಾವೊಬ್ಬನೂ ಮೀರುವುದಿಲ್ಲ.

೧೫. ವರಗಳನ್ನು ಪಡೆಯಬಯಸುವ ಸುರಾಸುರಗಣಗಳಿಗೂ ಮಹಾತ್ಮರಾದ ಮುನಿಗಳಿಗೂ ನೀನೇ ವರವನ್ನು ಕೊಡುವವನಾಗುತ್ತೀಯೆ.

೧೬. ಎಲೈ ವಿಧಿಯೇ! ಅಸಾಧ್ಯವಾದ ಯಾವುದಾದರೂ ಒಂದು ಕಾರ್ಯದಲ್ಲಿ ಭ್ರಾಂತಿಗೊಂಡಾಗ ನೀನು ನನ್ನನ್ನು ಸ್ಮರಿಸಿದಮಾತ್ರಕ್ಕೇ ನಾನು ಉದಿಸಿ ಬಂದು ಆ ಕಾರ್ಯವನ್ನು ಆಗಗೊಳಿಸುತ್ತೇನೆ.

೧೭. ನೀನು ವಿಶ್ವವನ್ನು ಸೃಷ್ಟಿಮಾಡುತ್ತಿರುವಲ್ಲಿ ಮಹಾಸಾಗರದಲ್ಲಿ ಮುಳುಗಿ ನಷ್ಟವಾಗುವ ಪೃಥ್ವಿಯನ್ನು, ನಾನು ವರಾಹರೂಪವನ್ನು ಧರಿಸಿ ಬಲಗರ್ವಿತನಾದ ಹಿರಣ್ಯಾಕ್ಷನೆಂಬ ದೈತ್ಯನನ್ನು ಕೊಂದು ಮತ್ತೆ ಅದರ ಸ್ಥಾನಕ್ಕೆ ತಂದಿಡುವೆನು.

೧೮. ನಿನಗೆ ಹಗಲು ಮುಗಿದು ರಾತ್ರಿಯಾಗಲು, ನಾನು ಮತ್ಸ್ಯನಾಗಿ ಔಷಧಿಸಮೇತವಾದ ಭೂಮಿಯನ್ನು, ಮನು ಮೊದಲಾದವರನ್ನು ಹಡಗಿನ ಹಾಗೆ ರಾತ್ರಿಯೆಲ್ಲ ಧರಿಸಿಕೊಂಡಿರುತ್ತೇನೆ.

ಸುಧಾಯೈ ಮಥ್ನತಾಮಬ್ಧಿಂ ಕಾಶ್ಯಪಾನಾಂ ನಿರಾಶ್ರಯಂ ।
ಮಂಥಾನಂ ಕೂರ್ಮರೂಪೋಽಹಂ ಧಾಸ್ಯೇ ಪೃಷ್ಠೇ ಚ ಮಂದರಃ ॥ ೧೯ ॥
ನಾರಸಿಂಹಂ ವಪುಃ ಕೃತ್ವಾ ಹಿರಣ್ಯಕಶಿಪುಂ ವಿಧೇ ।
ಸುರಕಾರ್ಯೇ ಹನಿಷ್ಯಾಮಿ ಯಜ್ಞಘ್ನಂ ದಿತಿನಂದನಂ ॥ ೨೦ ॥
ವಿರೋಚನಸ್ಯ ಬಲವಾನ್ ಬಲಿಃ ಪುತ್ರೋ ಮಹಾಸುರಃ ।
ಭವಿಷ್ಯತಿ ಸ ಶಕ್ರಂ ಚ ಸ್ವಾರಾಜ್ಯಾಚ್ಚ್ಯಾವಯಿಷ್ಯತಿ ॥ ೨೧ ॥
ತ್ರೈಲೋಕ್ಯೇಽಪಹೃತೇ ತೇನ ವಿಮುಖೇ ಚ ಶಚೀಪತೌ ।
ಅದಿತ್ಯಾಂ ದ್ವಾದಶಃ ಪುತ್ರಃ ಸಂಭವಿಷ್ಯಾಮಿ ಕಶ್ಯಪಾತ್ ॥ ೨೨ ॥
ತತೋ ರಾಜ್ಯಂ ಪ್ರದಾಸ್ಯಾಮಿ ದೇವೇಂದ್ರಾಯ ದಿವಃ ಪುನಃ ।
ದೇವತಾಃ ಸ್ಥಾಪಯಿಷ್ಯಾಮಿ ಸ್ವೇಷು ಸ್ಥಾನೇಷ್ವಹಂ ವಿಧೇ ।
ಬಲಿಂ ಚೈವ ಕರಿಷ್ಯಾಮಿ ಪಾತಾಲತಲವಾಸಿನಂ ॥ ೨೩ ॥
ಕರ್ದಮಾದ್ದೇವಹೂತ್ಯಾಂ ಚ ಭೂತ್ವಾಽಥ ಕಪಿಲಾಭಿಧಃ ।
ಪ್ರವರ್ತಯಿಷ್ಯೇ ಕಾಲೇನ ನಷ್ಟಂ ಸಾಂಖ್ಯಂ ವಿರಾಗಯುಕ್ ॥ ೨೪ ॥
ದತ್ತೋ ಭೂತ್ವಾಽನಸೂಯಾಯಾಮತ್ರೇರಾನ್ವೀಕ್ಷಿಕೀಂ ತತಃ ।
ಪ್ರಹ್ಲಾದಾಯೋಪದೇಕ್ಷ್ಯಾಮಿ ವಿದ್ಯಾಂ ಚ ಯದವೇ ವಿಧೇ ॥ ೨೫ ॥

---

೧೯. ಕಶ್ಯಪಪುತ್ರರು (ದೇವದಾನವರು) ಸುಧೆಗಾಗಿ ಸಮುದ್ರವನ್ನು ಕಡೆಯುವಲ್ಲಿ ಕಡೆಗೋಲಾದ ಮಂದರಕ್ಕೆ ಆಶ್ರಯವಿಲ್ಲದಿರಲು ನಾನು ಕೂರ್ಮ ರೂಪವನ್ನು ತಾಳಿ ಆ ಮಂದರವನ್ನು ಬೆನ್ನಮೇಲೆ ಹೊತ್ತುಕೊಳ್ಳುವೆನು.

೨೦. ಎಲೈ ವಿಧಿಯೇ! ದೇವಕಾರ್ಯಕ್ಕಾಗಿ ನರಸಿಂಹಶರೀರವನ್ನು ಧರಿಸಿ ಯಜ್ಞನಾಶಕನಾದ ಹಿರಣ್ಯಕಶಿಪುವೆಂಬ ದೈತ್ಯನನ್ನು ಕೊಲ್ಲುವೆನು.

೨೧. ವಿರೋಚನನಿಗೆ ಬಲಿಯೆಂಬ ಬಲಿಷ್ಠನಾದ ಮಹಾಸುರನು ಪುತ್ರ ನಾಗುವನು. ಅವನು ಶಕ್ರನನ್ನು ಸ್ವಾರಾಜ್ಯದಿಂದ ಚ್ಯುತಿಗೊಳಿಸುವನು.

೨೨. ಅವನು ಮೂರುಲೋಕದ ರಾಜ್ಯವನ್ನು ಅಪಹರಿಸಿರಲು ಶಚೀಪತಿ ಯಾದ ಇಂದ್ರನು ವಿಮುಖನಾಗುತ್ತಾನೆ. ಆಗ ನಾನು ಅದಿತಿಯಲ್ಲಿ ಕಶ್ಯಪನಿಂದ ವಾಮನನೆಂಬ ಹೆಸರಿನಿಂದ ಹನ್ನೆರಡನೆಯ ಮಗನಾಗಿ ಹುಟ್ಟುವೆನು.

೨೩. ಎಲೈ ವಿಧಿಯೇ! ಬಳಿಕ ದೇವೇಂದ್ರನಿಗೆ ಸ್ವರ್ಗರಾಜ್ಯವನ್ನು ಮರಳಿ ಕೊಡಿಸುವೆನು; ದೇವತೆಗಳನ್ನು ಅವರವರ ಸ್ಥಾನಗಳಲ್ಲಿ ಸ್ಥಾಪಿಸುವೆನು. ಬಲಿಯನ್ನು ಕೂಡ ಪಾತಾಲನಿವಾಸಿಯನ್ನಾಗಿಸುವೆನು.

೨೪. ಆ ಬಳಿಕ ಕರ್ದಮನಿಂದ ದೇವಹೂತಿಯಲ್ಲಿ ಕಪಿಲನೆಂಬ ಹೆಸರಿನಿಂದ ಜನಿಸಿ, ವೈರಾಗ್ಯವನ್ನು ತಾಳಿ ಕಾಲವಶದಿಂದ ನಷ್ಟವಾಗಿಹೋದ ಸಾಂಖ್ಯಶಾಸ್ತ್ರ ವನ್ನು ಪ್ರವರ್ತನಗೊಳಿಸುವೆನು.

೨೫. ಎಲೈ ವಿಧಿಯೇ! ಅನಸೂಯೆಯಲ್ಲಿ ಅತ್ರಿಗೆ ದತ್ತ(ನೆಂಬ ಮಗ)

ಮೇರುದೇವ್ಯಾಂ ಸುತೋ ನಾಭೇರ್ಭೂತ್ವಾಹಮೃಷಭೋ ಭುವಿ ।
ಧರ್ಮಂ ಪಾರಮಹಂಸ್ಯಾಖ್ಯಂ ವರ್ತಯಿಷ್ಯೇ ಸನಾತನಂ ॥ ೨೬ ॥
ತ್ರೇತಾಯುಗೇ ಭವಿಷ್ಯಾಮಿ ರಾಮೋ ಭೃಗುಕುಲೋದ್ವಹಃ ।
ಕ್ಷತ್ರಂ ಚೋತ್ಸಾದಯಿಷ್ಯಾಮಿ ಭಗ್ನಸೇತುಕೃದಧ್ವಗಂ ॥ ೨೭ ॥
ಸಂಧೌ ತು ಸಮನುಪ್ರಾಪ್ತೇ ತ್ರೇತಾಯಾಂ ದ್ವಾಪರಸ್ಯ ಚ ।
ಕೌಶಲ್ಯಾಯಾಂ ಭವಿಷ್ಯಾಮಿ ರಾಮೋ ದಶರಥಾದಹಂ ॥ ೨೮ ॥
ಸೀತಾಭಿಧಾನಾ ಲಕ್ಷ್ಮೀಶ್ಚ ಭವಿತ್ರೀ ಜನಕಾತ್ಮಜಾ ।
ಉದ್ವಹಿಷ್ಯಾಮಿ ತಾಮೈಶಂ ಭಂಕ್ತ್ವಾ ಧನುರಹಂ ಮಹತ್ ॥ ೨೯ ॥
ತತೋ ರಕ್ಷಃ ಪತಿಂ ಘೋರಂ ದೇವರ್ಷಿದ್ರೋಹಕಾರಿಣಂ ।
ಸೀತಾಪಹಾರಿಣಂ ಸಂಖ್ಯೇ ಹನಿಷ್ಯಾಮಿ ಸಹಾನುಜಂ ॥ ೩೦ ॥
ತಸ್ಯ ಮೇ ತು ಚರಿತ್ರಾಣಿ ವಾಲ್ಮೀಕ್ಯಾದ್ಯಾ ಮಹರ್ಷಯಃ ।
ತದಾ ಗಾಸ್ಯಂತಿ ಬಹುಧಾ ಯಚ್ಛ್ರುತೇಃ ಸ್ಯಾದಘಕ್ಷಯಃ ॥ ೩೧ ॥

---

ನಾಗಿ ಹುಟ್ಟಿ ಅನ್ವೀಕ್ಷಕೀವಿದ್ಯೆಯನ್ನು ಪ್ರಹ್ಲಾದನಿಗೂ, ಯದುವಿಗೂ ಉಪದೇಶ ಮಾಡುವೆನು.

೨೬. ಮೇರುದೇವಿಯಲ್ಲಿ ನಾಭಿಗೆ ವೃಷಭನೆಂಬ ಮಗನಾಗಿ ಹುಟ್ಟಿ ಭೂಲೋಕದಲ್ಲಿ ಸನಾತನವಾದ ಪರಮಹಂಸಧರ್ಮವನ್ನು ಪ್ರವರ್ತನಗೊಳಿಸುವೆನು.

೨೭. ತ್ರೇತಾಯುಗದಲ್ಲಿ ಭೃಗುಕುಲದಲ್ಲಿ ಪರಶುರಾಮನಾಗಿ ಜನಿಸುವೆನು. ಆಗ ದುರ್ಮಾರ್ಗದಲ್ಲಿ ನಡೆಯುವ ಕ್ಷತ್ರಿಯಕುಲವನ್ನು ನಿರ್ಮೂಲ ಮಾಡುವೆನು.

೨೮. ತ್ರೇತಾದ್ವಾಪರಗಳ ಸಂಧಿಕಾಲವುಂಟಾಗುತ್ತಿರಲಾಗಿ ಕೌಶಲ್ಯೆಯಲ್ಲಿ ದಶರಥನಿಂದ ಶ್ರೀರಾಮನಾಗಿ ಜನಿಸುವೆನು.

೨೯. ಲಕ್ಷ್ಮಿಯು ಕೂಡ ಸೀತೆಯೆಂಬ ಹೆಸರುಳ್ಳವಳಾಗಿ ಜನಕನ ಮಗಳಾಗುವಳು. ಈಶ್ವರನ ಮಹಾಧನುಸ್ಸನ್ನು ಮುರಿದು ನಾನು ಅವಳನ್ನು ಮದುವೆಯಾಗುವೆನು.

೩೦. ಬಳಿಕ ದೇವತೆಗಳಿಗೂ ಋಷಿಗಳಿಗೂ ದ್ರೋಹಮಾಡುವವನೂ, ಸೀತಾಪಹಾರಿಯೂ ಆದ ರಾವಣನೆಂಬ ಘೋರರಾಕ್ಷಸರಾಜನನ್ನು ತಮ್ಮನೊಡನೆ ಯುದ್ಧದಲ್ಲಿ ಸಂಹರಿಸುವೆನು.

೩೧. ಆ ನನ್ನ ಚರಿತ್ರೆಗಳನ್ನು ವಾಲ್ಮೀಕಿ ಮೊದಲಾದ ಮಹರ್ಷಿಗಳು ಬಹುವಿಧವಾಗಿ ಗಾನಮಾಡುವರು. ಆ ಚರಿತ್ರೆಯನ್ನು ಕೇಳುವುದರಿಂದ ಪಾಪಕ್ಷಯವುಂಟಾಗುವುದು.

ದ್ವಾಪರಸ್ಯ ಕಲೇಶ್ಚೈವ ಸಂಧೌ ಪರ್ಯವಸಾನಿಕೇ ।
ಭೂಭಾರಾಸುರನಾಶಾರ್ಥಂ ಪಾತುಂ ಧರ್ಮಂ ಚ ಧಾರ್ಮಿಕಾನ್ ।
ವಸುದೇವಾದ್ಭವಿಷ್ಯಾಮಿ ದೇವಕ್ಯಾಂ ಮಥುರಾಪುರೇ ॥ ೩೨ ॥
ಕೃಷ್ಣೋಽಹಂ ವಾಸುದೇವಾಖ್ಯಸ್ತಥಾ ಸಂಕರ್ಷಣೋ ಬಲಃ ।
ಪ್ರದ್ಯುಮ್ನಶ್ಚಾನಿರುದ್ಧಶ್ಚ ಭವಿಷ್ಯಂತಿ ಯದೋಃ ಕುಲೇ ॥ ೩೩ ॥
ಗೋಪಸ್ಯ ವೃಷಭಾನೋಸ್ತು ಸುತಾ ರಾಧಾ ಭವಿಷ್ಯತಿ ।
ವೃಂದಾವನೇ ತಯಾ ಸಾಕಂ ವಿಹರಿಷ್ಯಾಮಿ ಪದ್ಮಜ ॥ ೩೪ ॥
ಲಕ್ಷ್ಮೀಶ್ಚ ಭೀಷ್ಮಕಸುತಾ ರುಕ್ಮಿಣ್ಯಾಖ್ಯಾ ಭವಿಷ್ಯತಿ ।
ಉದ್ವಹಿಷ್ಯಾಮಿ ರಾಜನ್ಯಾನ್ ಯುದ್ಧೇ ನಿರ್ಜಿತ್ಯ ತಾಮಹಂ ॥ ೩೫ ॥
ಧರ್ಮದ್ರುಹೋಽಸುರಾನ್ ಹತ್ವಾ ತದಾವಿಷ್ಟಾಶ್ಚ ಭೂಪತೀನ್ ।
ಧರ್ಮಂ ಸಂಸ್ಥಾಪಯನ್ನೇವ ಕರಿಷ್ಯೇ ನಿರ್ಭರಾಂ ಭುವಂ ॥ ೩೬ ॥
ಯೇನ ಕೇನಾಪಿ ಭಾವೇನ ಯಸ್ಯ ಕಸ್ಯಾಪಿ ಮಾನಸಂ ।
ಮಯಿ ಸಂಯೋಕ್ಷ್ಯತೇ ತಂ ತಂ ನೇಷ್ಯೇ ಬ್ರಹ್ಮಗತಿಂ ಪರಾಂ ॥ ೩೭ ॥

---

೩೨. ದ್ವಾಪರ ಮತ್ತು ಕಲಿಯುಗದ ಸಂಧಿಸಮಯದಲ್ಲಿ, ಆ ಸಂಧಿಕಾಲವು ಮುಗಿದುಬರುತ್ತಿರುವಾಗ ಭೂಭಾರಕಾರಿಗಳಾದ ಅಸುರರನ್ನು ನಾಶಪಡಿಸುವುದಕ್ಕೂ, ಧರ್ಮವನ್ನು ಮತ್ತು ಧಾರ್ಮಿಕರನ್ನು ಕಾಪಾಡುವುದಕ್ಕೂ ಮಥುರಾ ಪಟ್ಟಣದಲ್ಲಿ ವಸುದೇವನಿಂದ ದೇವಕಿಯಲ್ಲಿ ಶ್ರೀಕೃಷ್ಣರೂಪದಿಂದ ಜನಿಸುವೆನು.

೩೩. ದೇವಕಿಯಲ್ಲಿ ಹುಟ್ಟುವ ನಾನು ವಾಸುದೇವನೆಂದೂ ಶ್ರೀಕೃಷ್ಣನೆಂದೂ ಪ್ರಸಿದ್ಧನಾಗುವೆನು. ಹಾಗೆಯೇ ಸಂಕರ್ಷಣನು ಬಲಭದ್ರನಾಗಿಯೂ, ಪ್ರದ್ಯುಮ್ನನೂ, ಅನಿರುದ್ಧನೂ ಸಹ, ಆ ಯದುವಿನ ಕುಲದಲ್ಲಿಯೆ ಜನಿಸುವರು.

೩೪. ವೃಷಭಾನುವೆಂಬ ಗೋಪನಿಗೆ ಮಗಳಾಗಿ ರಾಧೆಯು ಜನಿಸುವಳು. ನಾನು ವೃಂದಾವನದಲ್ಲಿ ಅವಳೊಡಗೂಡಿ ವಿಹರಿಸುವೆನು.

೩೫. ಲಕ್ಷ್ಮಿಯೂ, ರುಕ್ಮಿಣಿಯೆಂಬ ಹೆಸರಿನಿಂದ ಭೀಷ್ಮರಾಜನ ಮಗಳಾಗುವಳು. ರಾಜನ್ಯರನ್ನು ಯುದ್ಧದಲ್ಲಿ ಸೋಲಿಸಿ ಅವಳನ್ನು ನಾನು ವಿವಾಹ ಮಾಡಿಕೊಳ್ಳುವೆನು.

೩೬. ಧರ್ಮದ್ರೋಹಿಗಳಾದ ಅಸುರರನ್ನೂ, ಆ ಅಸುರರಿಂದ ಆವಿಷ್ಟರಾದ ರಾಜರುಗಳನ್ನೂ ಸಂಹರಿಸಿ ಧರ್ಮಸಂಸ್ಥಾಪನೆ ಮಾಡುತ್ತಾ ಭೂಮಿಯನ್ನು ಹಗುರಗೊಳಿಸುವೆನು.

೩೭. ಯಾವ ಯಾವನ ಮನಸ್ಸು ಯಾವ ಯಾವ ಭಾವದಿಂದಲಾದರೂ ನನ್ನಲ್ಲಿ ಸಂಯೋಜಿಸಲ್ಪಟ್ಟಿದಾದರೆ ಅವನವನನ್ನು ಅದದೇ ಭಾವದಿಂದಲೇ ಶ್ರೇಷ್ಠವಾದ ಬ್ರಹ್ಮಗತಿಯನ್ನೈದಿಸುವೆನು.

ಧರ್ಮಂ ಭುವಿ ಸ್ಥಾಪಯಿತ್ವಾ ಕೃತ್ವಾ ಯದುಕುಲಕ್ಷಯಂ ।
ಪಶ್ಯತಾಂ ಸರ್ವದೇವಾನಾಮಂತರ್ಧಾಸ್ಯೇ ಭುವಸ್ತತಃ ॥ ೩೮ ॥
ಕೃಷ್ಣಸ್ಯ ಮಮ ವೀರ್ಯಾಣಿ ಕೃಷ್ಣದ್ವೈಪಾಯನಾದಯಃ ।
ಗಾಸ್ಯಂತಿ ಬಹುಧಾ ಬ್ರಹ್ಮನ್ ಸದ್ಯಃ ಪಾಪಹರಾಣಿ ಹಿ ॥ ೩೯ ॥
ಕೃಷ್ಣದ್ವೈಪಾಯನೋ ಭೂತ್ವಾ ಪರಾಶರಮುನೇಃ ಸುತಃ ।
ಶಾಖಾವಿಭಾಗಂ ವೇದಸ್ಯ ಕರಿಷ್ಯಾಮಿ ತರೋರಿವ ॥ ೪೦ ॥
ವೈದಿಕಂ ವಿಧಿಮಾಶ್ರಿತ್ಯ ತ್ರಿಲೋಕೀಪರಿಪೀಡಕಾನ್ ।
ಛಲೇನ ಮೋಹಯಿಷ್ಯಾಮಿ ಭೂತ್ವಾ ಬುದ್ಧೋಽಸುರಾನಹಂ ॥ ೪೧ ॥
ಮಯಾ ಕೃಷ್ಣೇನ ನಿಹತಾಃ ಸಾರ್ಜುನೇನ ರಣೇಷು ಯೇ ।
ಪ್ರವರ್ತಯಿಷ್ಯಂತ್ಯಸುರಾಸ್ತೇ ತ್ವಧರ್ಮಂ ಯದಾ ಕ್ಷಿತೌ ॥ ೪೨ ॥
ಧರ್ಮದೇವಾತ್ತದಾ ಭಕ್ತಾದಹಂ ನಾರಾಯಣೋ ಮುನಿಃ ।
ಜನಿಷ್ಯೇ ಕೋಸಲೇ ದೇಶೇ ಭೂಮೌ ಹಿ ಸಾಮಗೋ ದ್ವಿಜಃ ॥ ೪೩ ॥
ಮುನಿಶಾಪಾನ್ವೃತಾ ಪ್ರಾಪ್ತಾನ್ ಋಷೀಂಸ್ತಾಂಸ್ತಥೋದ್ಧವಂ ।
ತತೋಽವಿತಾ ಸುರೇಭ್ಯೋಽಹಂ ಸದ್ಧರ್ಮಂ ಸ್ಥಾಪಯನ್ನಜ ॥ ೪೪ ॥

---

೩೮. ಭೂಮಿಯಲ್ಲಿ ಧರ್ಮವನ್ನು ಸ್ಥಾಪನೆಮಾಡಿ, ಯದುಕುಲಕ್ಕೆ ಕ್ಷಯವನ್ನುಂಟುಮಾಡಿ ಸಮಸ್ತದೇವತೆಗಳೂ ನೋಡುತ್ತಿರಲಾಗಿ ಭೂಮಿಯಿಂದ ಅಂತರ್ಧಾನಹೊಂದುವೆನು.

೩೯. ಎಲೈ ಬ್ರಹ್ಮನೇ! ಕೃಷ್ಣನಾದ ನನ್ನ ಪರಾಕ್ರಮಗಳನ್ನು ಕೃಷ್ಣದ್ವೈಪಾಯನನೇ ಮೊದಲಾದ ಮುನಿಗಳು ಗಾನಮಾಡುವರು. ಅವು ಕೇಳಿದ ಕ್ಷಣವೆ ಪಾಪಗಳನ್ನು ಪರಿಹರಿಸುವಂಥವು.

೪೦–೪೧. ಇದಾದಬಳಿಕ ನಾನು ಪರಾಶರಮುನಿಸುತನಾದ ಕೃಷ್ಣದ್ವೈಪಾಯನನಾಗಿ ಮರದ ಕೊಂಬೆಗಳನ್ನು ಬೇರ್ಪಡಿಸುವಂತೆ ವೇದಗಳನ್ನು ಶಾಖೆಗಳ ಮೂಲಕ ವಿಭಾಗಮಾಡುವೆನು. ಆ ತರುವಾಯ ನಾನು ಬುದ್ಧನಾಗಿ ಅವತರಿಸಿ ವಿಧಿಯನ್ನಾಶ್ರಯಿಸಿ ಮೂರು ಲೋಕಗಳನ್ನೂ ವಿಶೇಷವಾಗಿ ಪೀಡಿಸುವವರಾದ ಅಸುರರನ್ನು ಮೋಸದಿಂದ ಮೋಹಗೊಳಿಸುವೆನು.

೪೨–೪೩. ಅರ್ಜುನನಿಂದೊಡಗೂಡಿದ ಕೃಷ್ಣರೂಪಿಯಾವ ನನ್ನಿಂದ ಯುದ್ಧಗಳಲ್ಲಿ ಯಾರು ಯಾರು ಹತರಾದರೋ ಆ ಅಸುರರು ಭೂಮಿಯಲ್ಲಿ ಅಧರ್ಮವನ್ನು ಮತ್ತೆ ಯಾವಾಗ ಪ್ರಚುರಗೊಳಿಸಿರುವರೋ ಆಗ ಕೋಶಲ ದೇಶದಲ್ಲಿ ಧರ್ಮದೇವನೆಂಬ ಭಕ್ತನಿಗೆ ಮಗನಾಗಿ ಸಾಮಗಬ್ರಾಹ್ಮಣನಾದ ನಾರಾಯಣಮುನಿಯಾಗಿ ಜನಿಸುವೆನು.

೪೪. ಎಲೈ ಅಜನೇ! ಮುನಿಶಾಪದಿಂದ ಮನುಷ್ಯತ್ವವನ್ನು ಪಡೆದ

ಜನಾನ್ ಮ್ಲೇಚ್ಛಮಯಾನ್ ಭೂಮೌ ಕಲೇರಂತೇ ಮಹೈನಸಃ ।
ಕಲ್ಕೀ ಭೂತ್ವಾ ಹನಿಷ್ಯಾಮಿ ವಿಚರನ್ದಿವ್ಯವಾಜಿನಾ ॥ ೪೫ ॥
ಯದಾ ಯದಾ ಚ ವೇದೋಕ್ತೋ ಧರ್ಮೋ ನಾಶಿಷ್ಯತೇಽಸುರೈಃ ।
ಪ್ರಾದುರ್ಭಾವೋ ಭವಿಷ್ಯೋ ಮೇ ತದ್ರಕ್ಷಾಯೈ ತದಾ ತದಾ ॥ ೪೬ ॥
ತಸ್ಮಾಚ್ಚಿಂತಾಂ ವಿಹಾಯೈವ ಪ್ರಜಾಃ ಸೃಜ ಯಥಾ ಪುರಾ ।
ಏತಾನ್ ದತ್ವಾ ವರಾಂಸ್ತಸ್ಮಾ ಅಹಮಂತರ್ಹಿತೋಽಭವಂ ॥ ೪೭ ॥
ಯಥಾ ತಸ್ಮೈ ವರಾ ದತ್ತಾಸ್ತಥೈವ ಚ ಮಯಾ ಕೃತಂ ।
ಕುರ್ವೇ ಕರಿಷ್ಯೇ ಚ ಮುನೇ ನಿಜಶಕ್ತಿಭಿರಂಜಸಾ ॥ ೪೮ ॥
ಏವಂವಿಧಸ್ಯ ಮೇ ಬ್ರಹ್ಮನ್ನೀಶಿತುಃ ಸರ್ವದೇಹಿನಾಂ ।
ದರ್ಶನಂ ದುರ್ಲಭಂ ಜಾತಂ ತವೈಕಾಂತಿಕಭಕ್ತಿತಃ ॥ ೪೯ ॥
ವರಂ ವರಯ ಮತ್ತಸ್ತ್ವಂ ಸ್ವಾಭೀಷ್ಟಂ ಮುನಿಸತ್ತಮ ।
ಪ್ರಸನ್ನೋಽಸ್ಮಿ ಭೃಶಂ ತುಭ್ಯಂ ನಾಽಫಲಂ ಮಮ ದರ್ಶನಂ ॥ ೫೦ ॥

---

ಋಷಿಗಳನ್ನೂ, ಉದ್ಧವನನ್ನೂ ಅಸುರರಿಂದ ರಕ್ಷಿಸುವೆನು; ಸದ್ಧರ್ಮವನ್ನು ಸ್ಥಾಪಿಸುವೆನು.

೪೫. ಭೂಮಿಯಲ್ಲಿ ಕಲಿಯುಗದ ಕೊನೆಯಲ್ಲಿ ನಾನು ಕಲ್ಕಿಯಾಗಿ ದಿವ್ಯವಾದ ಕುದುರೆಯನ್ನೇರಿ ಸಂಚರಿಸುತ್ತ ಮಹಾಪಾಪಿಗಳಾಗಿ ಮ್ಲೇಚ್ಛಮಯರಾಗಿರುವ ಜನರನ್ನು ಸಂಹರಿಸುವೆನು.

೪೬. ವೇದೋಕ್ತವಾದ ಧರ್ಮವು ಅಸುರರಿಂದ ಯಾವಯಾವ ಕಾಲಗಳಲ್ಲಿ ನಾಶಗೊಳಿಸಲ್ಪಡುವುದೋ ಆ ಕಾಲಗಳಲ್ಲೆಲ್ಲ ಆ ಧರ್ಮರಕ್ಷಣೆಗಾಗಿ ನನ್ನ ಅವತಾರವು ಆಗಿಯೇ ಆಗುವುದು.

೪೭–೪೮. ಆದ್ದರಿಂದ ಚಿಂತೆಯನ್ನು ತೊರೆದು ಪೂರ್ವದಲ್ಲಿದ್ದ ಹಾಗೆಯೇ ಪ್ರಜೆಗಳನ್ನು ಸೃಷ್ಟಿಮಾಡು.' ಅವನಿಗೆ ಈ ರೀತಿ ವರಗಳನ್ನು ಕೊಟ್ಟು ನಾನು ಅಂತರ್ಧಾನವನ್ನು ಹೊಂದಿದೆನು. ಅಲ್ಲದೆ ಅವನಿಗೆ ವರಗಳನ್ನು ಕೊಟ್ಟಂತೆಯೆ ನಾನು ಎಲ್ಲ ಕಾರ್ಯಗಳನ್ನೂ ಮಾಡಿದೆನು. ಎಲೈ ಮುನಿಯೇ! ನನ್ನ ಶಕ್ತಿಗಳಿಂದ ಈಗಲೂ ಹಾಗೆಯೇ ಮಾಡುತ್ತೇನೆ; ಮುಂದೂ ಮಾಡುವೆನು.

೪೯. ಓ ಬ್ರಾಹ್ಮಣಾ! ಈ ರೀತಿಯಾಗಿ ಸರ್ವದೇಹಿಗಳಿಗೂ ಅಧೀಶ್ವರನಾಗಿರುವ ನನ್ನ ದರ್ಶನವು ದುರ್ಲಭವಾದುದು. ನಿನ್ನ ಏಕಾಂತಭಕ್ತಿಯಿಂದ ಅದು ನಿನಗೆ ದೊರೆತಿರುವುದು.

೫೦. ಎಲೈ ಮುನಿಶ್ರೇಷ್ಠನೇ! ನನ್ನಿಂದ ನಿನಗೆ ಇಷ್ಟವಾಗಿರುವ ವರವನ್ನು ಕೇಳಿಕೊ. ನಿನ್ನಲ್ಲಿ ಬಹಳ ಪ್ರಸನ್ನನಾಗಿದ್ದೇನೆ. ನನ್ನ ದರ್ಶನವು ಎಂದಿಗೂ ಫಲವಿಲ್ಲದುದಾಗುವುದಿಲ್ಲವು.''

ಸ್ಕಂದ ಉವಾಚ :—

ಶ್ರುತ್ವೇತಿ ಭಗವದ್ವಾಕ್ಯಂ ನಾರದೋ ಮುನಿಸತ್ತಮಃ ।
ಮನ್ಯಮಾನೋ ನಿಜಂ ಧನ್ಯಂ ತಮುವಾಚ ಪ್ರಭುಂ ಮುನೇ ॥ ೫೧ ॥
ದರ್ಶನಾದೇವ ತೇ ಸ್ವಾಮಿನ್ ಸಂಪೂರ್ಣೋ ಮೇ ಮನೋರಥಃ ।
ಇದಂ ಹಿ ದುರ್ಲಭಂ ಮನ್ಯೇ ಸರ್ವೇಷಾಮಪಿ ದೇಹಿನಾಂ ॥ ೫೨ ॥
ಅತಸ್ತೇ ಚ ತ್ವದೀಯಾನಾಂ ತ್ವದ್ಧಾಮ್ನೋಽಸ್ಯಾಮೃತಸ್ಯ ಚ ।
ಸಾಕ್ಷಾತ್ಸನಿರೀಕ್ಷಣಾದನ್ಯತ್ ಪ್ರಾಪ್ಯಂ ಮೇ ನಾಸ್ತಿ ವಾಂಛಿತಂ ॥ ೫೩ ॥
ಇತೋನ್ಯದ್ದುರ್ಲಭಂ ಕ್ವಾಪಿ ನಾಸ್ತಿ ಬ್ರಹ್ಮಾಂಡಗೋಲಕೇ ।
ಯದಹಂ ಪರಿತುಷ್ಟಾತ್ತ್ವೇ ಪ್ರಾರ್ಥಯೇಯಮಿಹಾಚ್ಯುತ ॥ ೫೪ ॥
ಲೋಕಾಂತರಸುಖಂ ಯತ್ತದ್ವೈದಿಕೈರೇವ ಕರ್ಮಭಿಃ ।
ದೈವೈಃ ಪಿತ್ರ್ಯೈಶ್ಚ ಲಭ್ಯೇತ ತಚ್ಚಾಪ್ಯಸ್ತಿ ಹಿ ನಶ್ವರಂ ॥ ೫೫ ॥
ನೇಚ್ಛಾಮಿ ತದಹಂ ಕಿಂಚಿತ್ ಸುಖಂ ತ್ವತ್ತಃ ಪರಂ ಪ್ರಭೋ ।
ವರಮೇಕಂ ತು ಯಾಚೇ ತ್ವತ್ತ್ವೇಪ್ಸಿತಂ ವರದರ್ಷಭಾತ್ ॥ ೫೬ ॥

---

೫೧. ಸ್ಕಂದನು ಹೇಳುತ್ತಾನೆ:—ಎಲೈ ಮುನಿಯೇ! ಹೀಗೆ ನುಡಿದ ಭಗವಂತನ ಮಾತುಗಳನ್ನಾಲಿಸಿ ಮುನಿಶ್ರೇಷ್ಠನಾದ ನಾರದನು ತನ್ನನ್ನು ತಾನೇ ಧನ್ಯನೆಂದು ಭಾವಿಸಿಕೊಳ್ಳುತ್ತ ಆ ಪ್ರಭುವನ್ನು ಕುರಿತು ಇಂತೆಂದನು :—

೫೨. "ಎಲೈ ಸ್ವಾಮಿಯೇ! ನಿನ್ನ ದರ್ಶನದಿಂದಲೇ ನನ್ನ ಮನೋರಥವು ಸಂಪೂರ್ಣವಾಯಿತು. ಈ ನಿನ್ನ ಸಂದರ್ಶನಭಾಗ್ಯವು ಸರ್ವದೇಹಿಗಳಿಗೂ ದುರ್ಲಭವಾದುದೆಂದೇ ನಾನು ಭಾವಿಸುತ್ತೇನೆ.

೫೩. ಆದುದರಿಂದ ನಿನ್ನ, ನಿನ್ನವರ ಮತ್ತು ಅಮೃತವಾದ ಈ ನಿನ್ನ ಧಾಮದ ಸಾಕ್ಷಾತ್ತಾದ ದರ್ಶನವೊಂದು ಹೊರತಾಗಿ ಬೇರೆ ಯಾವುದನ್ನೂ ಪಡೆಯಬೇಕೆಂಬ ಇಚ್ಛೆಯು ನನಗಿರುವುದಿಲ್ಲ.

೫೪. ಎಲೈ ಅಚ್ಯುತನೇ! ಸಂತುಷ್ಟನಾದ ನಿನ್ನಿಂದ ಪ್ರಾರ್ಥಿಸಿ ಪಡೆಯೋಣವೆಂದರೆ ಇದಕ್ಕಿಂತ ದುರ್ಲಭವಾದುದು ಬ್ರಹ್ಮಾಂಡಗೋಲಕದಲ್ಲೆಲ್ಲಿಯೂ ಬೇರೊಂದಿಲ್ಲ.

೫೫. ದೇವಸಂಬಂಧವಾದ ಮತ್ತು ಪಿತೃಸಂಬಂಧವಾದ ವೈದಿಕಕರ್ಮಗಳಿಂದಲೇ ಯಾವ ಲೋಕಾಂತರ ಸುಖವುಂಟಾಗುವುದೊ ಅದು ಕೂಡ ನಶ್ವರವಾದುದು.

೫೬. ಪ್ರಭುವೇ! ನಿನ್ನಿಂದ ಆ ಶ್ರೇಷ್ಠಸುಖವೊಂದಿಷ್ಟನ್ನೂ ನಾನು ಪಡೆಯಬಯಸುವುದಿಲ್ಲ. ವರದರಲ್ಲಿ ಶ್ರೇಷ್ಠನಾದ ನಿನ್ನಿಂದ ನನಗಿಷ್ಟವಾದ ಒಂದು ವರವನ್ನು ಮಾತ್ರ ಬೇಡಿಕೊಳ್ಳುತ್ತೇನೆ.

ತವಾಽಥ ತವಭಕ್ತಾನಾಂ ಸದೈವ ಗುಣಗಾಯನೇ ।
ಅತ್ಯುತ್ಸುಕಾಸ್ತು ಮೇ ಬುದ್ಧಿಸ್ತ್ವಯಿ ಪ್ರೀತಿರ್ವಿವರ್ಧಿನೀ ॥ ೫೭ ॥
ಸ್ಕಂದ ಉವಾಚ :—
ತಥಾಸ್ತ್ವಿತಿ ಪ್ರತಿಶ್ರುತ್ಯ ಕೃಷ್ಣಸ್ತೇನೇತಿ ಯಾಚಿತಂ ।
ಗಾನೋಪಯುಕ್ತಾಂ ಮಹತೀಂ ವೀಣಾಂ ದತ್ವಾಽಬ್ರವೀತ್ಪುನಃ ॥೫೮॥
ಶ್ರೀ ಭಗವಾನುವಾಚ :—
ಅಧುನಾ ಗಚ್ಛ ದೇವರ್ಷೇ ವಿಶಾಲಾಂ ಬದರೀಮಿತಃ ।
ತತ್ರ ಧರ್ಮಾತ್ಮಜಂ ಭಕ್ತ್ಯಾ ಮಾಮಾರಾಧಯ ಸುವ್ರತ ॥ ೫೯ ॥
ತ್ವಂ ಹ್ಯೇಕಾಂತಿಕಭಕ್ತೋಽಸಿ ಮಮ ನಿಷ್ಕಪಟಾಂತರಃ ।
ತೇನ ತ್ವಾಮಧಿಕಂ ಮನ್ಯೇ ವಿಧೇರಪಿ ಪಿತುಸ್ತವ ॥ ೬೦ ॥
ಯಾದೃಶೋಽಹಂ ಚ ಯದ್ರೂಪೋ ಯಾವಾಂಶ್ಚ ಮಹಿಮಾ ಮಮ ।
ವಿದುಸ್ತತ್ಸರ್ವಮಪಿ ಮೇ ಭಕ್ತಾ ಏಕಾಂತಿಕಾ ಮುನೇ ॥ ೬೧ ॥
ಹೃದಿ ಚಿಂತ್ಯೋಽಹಮೇವಾಸ್ಮಿ ಸತಾಂ ತೇಷಾಂ ಚ ತೇ ಮಮ ।
ತೇಷಾಮಿಷ್ಟಂ ನ ಮತ್ತೋಽನ್ಯತ್ ಮಮ ತೇಭ್ಯೋ ನ ಕಿಂಚನ ॥ ೬೨ ॥

---

೫೭. ನಿನ್ನ ಮತ್ತು ನಿನ್ನ ಭಕ್ತರ ಗುಣಗಾನವಲ್ಲಿ ನನ್ನ ಬುದ್ಧಿಯು ಸದಾ ಅತ್ಯುತ್ಸುಕವಾಗಿರಲಿ. ನಿನ್ನಲ್ಲಿ ಪ್ರೀತಿಯನ್ನು ಹೆಚ್ಚಿಸುತ್ತಿರಲಿ.''

೫೮. ಸ್ಕಂದನು ಹೇಳುತ್ತಾನೆ:— ನಾರದನು ಈ ರೀತಿ ಪ್ರಾರ್ಥಿಸಲು ಆ ಶ್ರೀಕೃಷ್ಣನು 'ಹಾಗೆಯೇ ಆಗಲೆಂ'ದು ನುಡಿದು ಗಾನಕ್ಕೆ ಉಪಯುಕ್ತವಾದ ಮಹತೀವೀಣೆಯನ್ನಿತ್ತು ಮತ್ತೆ ಅವನಿಗೆ ಹೇಳಿದನು :—

೫೯. ಶ್ರೀಭಗವಂತನು ಹೇಳುತ್ತಾನೆ:— '' ಎಲೈ ದೇವರ್ಷಿಯೇ! ಈಗ ನೀನು ಇಲ್ಲಿಂದ ವಿಶಾಲವಾದ ಬದರೀಕ್ಷೇತ್ರಕ್ಕೆ ಹೋಗು. ಎಲೈ ಸುವ್ರತನೇ! ಅಲ್ಲಿ ಧರ್ಮಾತ್ಮಜನಾದ ನನ್ನನ್ನು ಭಕ್ತಿಯಿಂದ ಆರಾಧಿಸು.

೬೦. ನೀನು ನಿಷ್ಕಪಟವಾದ ಅಂತರಂಗವುಳ್ಳವನಾಗಿ ನನಗೆ ಏಕಾಂತ ಭಕ್ತನಾಗಿದ್ದೀಯೆ. ಆದುದರಿಂದ ನಿನ್ನ ತಂದೆಯಾದ ಬ್ರಹ್ಮನಿಗಿಂತಲೂ ನೀನೇ ಹೆಚ್ಚೆಂದು ನಾನು ತಿಳಿದಿದ್ದೇನೆ.

೬೧. ಎಲೈ ಮುನಿಯೇ! ನಾನು ಹೇಗಿದ್ದೇನೆಯೋ, ಯಾವ ರೂಪವುಳ್ಳವನಾಗಿರುವನೋ, ನನ್ನ ಮಹಿಮೆಯೆಷ್ಟೋ ಅವೆಲ್ಲವನ್ನೂ ನನ್ನ ಏಕಾಂತ ಭಕ್ತರು ತಿಳಿದಿರುವರು.

೬೨. ಸತ್ಪುರುಷರಾದ ಅವರು ತಮ್ಮ ಹೃದಯದಲ್ಲಿ ಚಿಂತಿಸತಕ್ಕವನು ನಾನೇ ಆಗಿದ್ದೇನೆ. ನನಗೂ ಅವರೇ ಚಿಂತ್ಯರಾಗಿದ್ದಾರೆ. ಅವರಿಗಿಷ್ಟವಾದುದು ನನಗಿಂತಲೂ ಬೇರೊಂದಿಲ್ಲ. ನನಗೆ ಅವರನ್ನುಳಿದು ಬೇರೊಂದು ಇಷ್ಟವಸ್ತುವಿಲ್ಲ.

ಯಥಾ ಪತಿವ್ರತಾ ನಾರ್ಯೋ ವಶೀಕುರ್ವಂತಿ ಸತ್ಪತಿಂ ।
ನಿಜೈರ್ಗುಣೈಸ್ತಥಾ ಭಕ್ತಾ ವಶೀಕುರ್ವಂತಿ ಮಾಮಪಿ ॥ ೬೩ ॥
ಅನುಯಾಮಿ ಶ್ರಿಯಾಸಾಕಂ ತಾನಹಂ ಪರವಾನಿವ ।
ಯತ್ರ ಯತ್ರ ಚ ತೇ ಸಂತಿ ತತ್ರ ತತ್ರಾಹಮಸ್ಮಿಹಿ ॥ ೬೪ ॥
ಸತ್ಸಂಗಾದೇವ ಮತ್ಪ್ರಾಪ್ತಿರ್ಭವೇದ್ಭುವಿ ಮುಮುಕ್ಷತಾ ।
ನಾನ್ಯೋಽಪಾಯೇನ ದೇವರ್ಷೇ ಸತ್ಯಮಿತ್ಯವಧಾರಯ ॥ ೬೫ ॥
ಶರಣಂ ಹಿ ಮಾಮೇವ ಮಾನುಷಾಃ ಪ್ರಾಪ್ನುವಂತಿ ಯೇ ।
ತರ್ಹ್ಯೇವ ತೇ ವಿಮುಚ್ಯಂತೇ ಮಾಯಯಾ ಜೀವಬಂಧನಾತ್ ॥ ೬೬ ॥
ಮಾಂ ಪ್ರಪನ್ನಸ್ತು ಪುರುಷೋ ಯೇನ ಕೇನಾಪಿ ಭಾವತಃ ।
ಯಥೇಷ್ಟಂ ಸುಖಮಾಪ್ನೋತಿ ನ ತು ಸಂಸೃತಿಮನ್ಯವತ್ ॥ ೬೭ ॥
ಸ್ಕಂದ ಉವಾಚ :—
ಏವಮುಕ್ತೋ ಭಗವತಾ ಪ್ರಾಪ್ತೋಽನುಗ್ರಹಮೀಪ್ಸಿತಂ ।
ಪ್ರಣಮ್ಯ ಸಾಶ್ರುನಯನಃ ಪರ್ಯಾವರ್ತತ ನಾರದಃ ॥ ೬೮ ॥

---

೬೩. ಯಾವ ರೀತಿಯಲ್ಲಿ ಪತಿವ್ರತೆಯರಾದ ನಾರಿಯರು ತಮ್ಮ ಗುಣಗಳಿಂದ ಪತಿಯನ್ನು ವಶಪಡಿಕೊಳ್ಳುವರೋ ಅದೇ ರೀತಿಯಲ್ಲಿ ಭಕ್ತರು ನನ್ನನ್ನು ತಮ್ಮ ಗುಣಗಳಿಂದ ವಶಪಡಿಸಿಕೊಳ್ಳುತ್ತಾರೆ.

೬೪. ನಾನು ಲಕ್ಷ್ಮೀಸಮೇತನಾಗಿ ಪರಾಧೀನನಾಗುವವನಂತೆ ಅವರನ್ನು ಅನುಸರಿಸಿ ಹೋಗುತ್ತೇನೆ. ಎಲ್ಲೆಲ್ಲಿ ಅವರಿರುವರೊ ಅಲ್ಲಲ್ಲೆಲ್ಲ ನಾನೂ ಇರುವೆನು.

೬೫. ಭೂಮಿಯಲ್ಲಿ ಮೋಕ್ಷವನ್ನು ಬಯಸುವವರಿಗೆಲ್ಲ ಅವರ (ಭಕ್ತರ) ಸಂಗದಿಂದ ಮಾತ್ರವೆ ನನ್ನ ಪ್ರಾಪ್ತಿಯುಂಟಾಗುತ್ತದೆ. ಬೇರೆ ಯಾವ ಉಪಾಯದಿಂದಲೂ ಆಗಲಾರದು. ಎಲೈ ದೇವರ್ಷಿಯೇ! ಇದು ಸತ್ಯವೆಂದು ತಿಳಿದುಕೊ.

೬೬. ಮನುಷ್ಯರು ನನ್ನನ್ನೇ ಯಾವಾಗ ಶರಣುಹೊಂದುವರೊ ಆಗಲೇ ಅವರು ಜೀವಬಂಧನಕಾರಿಯಾದ ಮಾಯೆಯಿಂದ ಬಿಡುಗಡೆಹೊಂದುತ್ತಾರೆ.

೬೭. ಯಾವುದೇ ಭಾವದಿಂದಲಾದರೂ ನನ್ನನ್ನು ಅನನ್ಯವಾಗಿ ಆಶ್ರಯಿಸಿರುವ ಪುರುಷನು ತನಗಿಷ್ಟವಾದ ಸುಖವನ್ನು ಪಡೆಯುತ್ತಾನೆ; ಬೇರೆಯವರಂತೆ ಸಂಸಾರವನ್ನು ಸೇರುವುದಿಲ್ಲ.''

೬೮. ಸ್ಕಂದನು ಹೇಳುತ್ತಾನೆ:—ಹೀಗೆ ನಾರದನು ಭಗವಂತನಿಂದ ಹೇಳಲ್ಪಟ್ಟವನಾಗಿ ತಾನು ಬಯಸಿದ ಅನುಗ್ರಹವನ್ನು ಪಡೆದುಕೊಂಡು ಆನಂದದಿಂದ ಕಣ್ಣೀರು ಸುರಿಸುತ್ತ ನಮಸ್ಕಾರ ಮಾಡಿ ಹಿಂದಿರುಗಿದನು.

ತನೋವ ವೀಣಯಾ ಗಾಯನ್ ಶ್ವೇತಮುಕ್ತಮಪಶ್ಯತ ।
ಪ್ರಾಗ್ಯತ್ನಾಗ್ರೇ ಚಲಂತಂ ತಮನ್ವಗಚ್ಛದ್ದ್ವಿಜರ್ಷಭ ॥ ೬೯ ॥
ಸದ್ಯಃ ಶ್ವೇತಂ ಮಹಾದ್ವೀಪಂ ಪ್ರಾಪ್ಯ ಶ್ವೇತಾನ್ ಪ್ರಣಮ್ಯ ತಾನ್ ।
ನಿವೃತ್ತೋ ನಾರದೋ ಬ್ರಹ್ಮನ್ ತರಸಾ ಮೇರುಮಾಗಮತ್ ॥ ೭೦ ॥
ತತೋ ಮೇರೋಃ ಪ್ರಚಕ್ರಾಮ ಪರ್ವತಂ ಗಂಧಮಾದನಂ ।
ನಿಪಪಾತ ಚ ಖಾತ್ತೂರ್ಣಂ ವಿಶಾಲಾಂ ಬದರೀಮನು ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಶ್ರೀವಾಸುದೇವಾವತಾರಾದಿಕಥನಂ"ನಾಮಾಷ್ಟಾದಶೋಽಧ್ಯಾಯಃ

---

೬೯. ಎಲೈ ದ್ವಿಜಶ್ರೇಷ್ಠನೇ! ವೀಣೆಯನ್ನು ನುಡಿಸುತ್ತ ಆ ಭಗವಂತನನ್ನು ಕುರಿತೇ ಗಾನಮಾಡುತ್ತ ಬಂದು ಅದೇ ಶ್ವೇತಮುಕ್ತನನ್ನೇ ಕಂಡನು. ಮೊದಲಿನಂತೆಯೆ ಆ ಶ್ವೇತಮುಕ್ತನು ಮುಂದೆ ನಡೆಯುತ್ತಿರಲು ತಾನು ಅವನನ್ನು ಹಿಂಬಾಲಿಸುತ್ತ ನಡೆದನು.

೭೦. ಅಯ್ಯಾ ಬ್ರಾಹ್ಮಣಾ! ಆ ನಾರದನು ಆ ಕೂಡಲೆ ಶ್ವೇತಮಹಾದ್ವೀಪವನ್ನು ಸೇರಿ ಅಲ್ಲಿನ ಶ್ವೇತಮುಕ್ತರಿಗೆ ಪ್ರಣಾಮಮಾಡಿ ಅಲ್ಲಿಂದ ಹಿಂದಿರುಗಿ ಹೊರಟು ಬೇಗ ಬೇಗನೆ ಮೇರುವಿಗೆ ಬಂದನು.

೭೧. ಬಳಿಕ ಮೇರುಪರ್ವತದಿಂದ ಗಂಧಮಾದನಪರ್ವತಕ್ಕೆ ಪ್ರಯಾಣ ಮಾಡಿದನು. ವಿಶಾಲವಾದ ಬದರಿಯ ಸಮೀಪದಲ್ಲಿ ಆಕಾಶದಿಂದ ಬೇಗ ಕೆಳಗಿಳಿದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವಾಸುದೇವ ಮಾಹಾತ್ಮ್ಯದಲ್ಲಿ "ಶ್ರೀವಾಸುದೇವಾವತಾರಾದಿಕಥನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕೋನವಿಂಶೋಽಧ್ಯಾಯಃ

## ನಾರದನರನಾರಾಯಣಸಮಾಗಮಂ

ಸ್ಕಂದ ಉವಾಚ :—

**ತತಃ ಸ ದದೃಶೇ ದೇವೌ ಪುರಾಣಾವೃಷಿಸತ್ತಮೌ ।**
**ತಪಶ್ಚರಂತೌ ಸುಮಹದಾತ್ಮನಿಷ್ಠೌ ಮಹಾವ್ರತೌ ॥ ೧ ॥**
**ತೇಜಸಾಪ್ಯಧಿಕೌ ಸೂರ್ಯಾತ್ ಸರ್ವಲೋಕವಿರೋಚನಾತ್ ।**
**ಶ್ರೀವತ್ಸಲಕ್ಷಣೌ ಪೂಜ್ಯೌ ಜಟಾಮಂಡಲಧಾರಿಣೌ ॥ ೨ ॥**
**ಪದ್ಮಚಿಹ್ನಭುಜೌ ತೌ ಚ ಪಾದಯೋಶ್ಚಕ್ರಲಕ್ಷಣೌ ।**
**ವ್ಯೂಢೋರಸ್ಕೌ ದೀರ್ಘಭುಜೌ ಸಿತಸೂಕ್ಷ್ಮಘನಾಂಶುಕೌ ॥ ೩ ॥**
**ಸ್ವಾಸ್ಯೌ ಪೃಥುಲಲಾಟೌ ಚ ಸುಭ್ರುವೌ ಶುಭನಾಸಿಕೌ ।**
**ಶುಭಲಕ್ಷಣಸಂಪನ್ನೌ ದಿವ್ಯಮೂರ್ತೀ ಘನಪ್ರಭೌ ॥ ೪ ॥**
**ವಿನಯೇನಾಂತಿಕಂ ಪ್ರಾಪ್ಯ ತಯೋಃ ಕೃತ್ವಾ ಪ್ರದಕ್ಷಿಣಾಂ ।**
**ಭಕ್ತ್ಯಾ ಪ್ರಣಮ್ಯ ಸಾಷ್ಟಾಂಗಂ ತಸ್ಥೌ ಪ್ರಾಂಜಲಿರಗ್ರತಃ ॥ ೫ ॥**

---

### ಕನ್ನಡದ ಅನುವಾದ

#### ನಾರದನರನಾರಾಯಣಸಮಾಗಮ ವರ್ಣನ

೧. ಸ್ಕಂದನು ಹೇಳುತ್ತಾನೆ:—ಬಳಿಕ ಆ ನಾರದನು ಆತ್ಮನಿಷ್ಠರಾಗಿ ಮಹಾವ್ರತವನ್ನು ಧರಿಸಿ ಮಹತ್ತರವಾದ ತಪಸ್ಸುಮಾಡುತ್ತಿದ್ದ ಪುರಾತನರೂ ಋಷಿಶ್ರೇಷ್ಠರೂ ಆದ ಇಬ್ಬರು ದೇವತೆಗಳನ್ನು ಕಂಡನು.

೨. ಅವರು ಸರ್ವಲೋಕಗಳನ್ನೂ ಬೆಳಗುವ ಸೂರ್ಯನಿಗಿಂತಲೂ ತೇಜಸ್ಸಿನಲ್ಲಿ ಅಧಿಕರಾಗಿದ್ದರು. ಶ್ರೀವತ್ಸಲಕ್ಷಣವುಳ್ಳವರಾಗಿ ಜಟಾಮಂಡಲವನ್ನು ಧರಿಸಿ ಪೂಜ್ಯರಾಗಿದ್ದರು.

೩. ಅವರ ಭುಜಗಳಲ್ಲಿ ಪದ್ಮಚಿಹ್ನೆಯೂ, ಪಾದಗಳಲ್ಲಿ ಚಕ್ರಚಿಹ್ನೆಯೂ ರಂಜಿಸುತ್ತಿದ್ದವು. ವಿಸ್ತಾರವಾದ ಎದೆ ಮತ್ತು ದೀರ್ಘವಾದ ತೋಳುಗಳುಳ್ಳವರಾಗಿದ್ದರು. ಬೆಳ್ಳಗಿರುವ ಸೂಕ್ಷ್ಮವಸ್ತ್ರಗಳನ್ನುಟ್ಟಿದ್ದರು.

೪. ಚೆನ್ನಾದ ಬಾಯಿ, ವಿಸ್ತಾರವಾದ ಹಣೆ, ಒಳ್ಳೆಯ ಹುಬ್ಬು, ಶುಭಕರವಾದ ಮೂಗು—ಇವುಗಳಿಂದ ಶೋಭಿಸುತ್ತ ಶುಭಲಕ್ಷಣಸಂಪನ್ನರಾಗಿ ದಿವ್ಯಮೂರ್ತಿಗಳಾಗಿ ಮಿಗಿಲಾದ ಕಾಂತಿಯಿಂದ ಬೆಳಗುತ್ತಿದ್ದರು.

೫. ನಾರದಮುನಿಯು ವಿನಯದಿಂದ ಸಮೀಪಕ್ಕೆ ಹೋಗಿ ಅವರಿಗೆ ಪ್ರದಕ್ಷಿಣೆಮಾಡಿ ಭಕ್ತಿಯಿಂದ ಸಾಷ್ಟಾಂಗಪ್ರಣಾಮಮಾಡಿ ಅವರ ಮುಂದುಗಡೆ ಕೈಮುಗಿದು ನಿಂತುಕೊಂಡನು.

ತತಸ್ತೌ ತಪಸಾಂ ವಾಸೌ ಯಶಸಾಂ ತೇಜಸಾಮಪಿ ।
ಋಷೀ ಪೌರ್ವಾಹ್ಣಿಕಸ್ಯಾಂತೇ ವಿಧೇಮೌನಂ ವಿಹಾಯ ಚ ॥ ೬ ॥
ಪ್ರೀತ್ಯಾ ನಾರದಮವ್ಯಗ್ರೌ ಪಾದ್ಯಾರ್ಘ್ಯಾಭ್ಯಾಂ ಸಮರ್ಚತಾಂ ।
ಪೀಠಯೋರುಪವಿಷ್ಟೌ ತೌ ಕೌಶಯೋರ್ನಾರದಶ್ಚ ಸಃ ॥ ೭ ॥
ತೇಷು ತತ್ರೋಪವಿಷ್ಟೇಷು ಸ ದೇಶೋಽಭ್ಯರಾಜತ ।
ಆಜ್ಯಾಹುತಿಮಹಾಜ್ವಾಲೈರ್ಯಜ್ಞವಾಟೋಽಗ್ನಿಭಿರ್ಯಥಾ ॥ ೮ ॥
ಅಥ ನಾರಾಯಣಸ್ತತ್ರ ನಾರದಂ ವಾಕ್ಯಮಬ್ರವೀತ್ ।
ಸುಖೋಪವಿಷ್ಟಂ ವಿಶ್ರಾಂತಂ ಕೃತಾತಿಥ್ಯಂ ಸುಸತ್ಕೃತಂ ॥ ೯ ॥

ಶ್ರೀನಾರಾಯಣ ಉವಾಚ :—

ಅಪಿ ಬ್ರಹ್ಮನ್ ಸ ಭಗವಾನ್ ಪರಮಾತ್ಮಾ ಸನಾತನಃ ।
ಬ್ರಹ್ಮಧಾಮ್ನಿ ತ್ವಯಾ ದೃಷ್ಟ ಆವಯೋಃ ಕಾರಣಂ ಪರಂ ॥ ೧೦ ॥

ನಾರದ ಉವಾಚ :—

ಭಗವಂಸ್ತ್ವತ್ಪ್ರಸಾದೇನ ತಮಹಂ ಪರಮೇಶ್ವರಂ ।
ವಾಸುದೇವಂ ಸಮಾಲೋಕೇ ಸ್ಥಿತಮಕ್ಷರಧಾಮನಿ ॥ ೧೧ ॥

---

೬–೭. ಬಳಿಕ ತಪಸ್ಸು, ಯಶಸ್ಸು, ತೇಜಸ್ಸುಗಳಿಗೆ ನಿವಾಸಸ್ಥಾನವೆನಿಸಿದ ಆವರಿಬ್ಬರು ಋಷಿಗಳೂ ಪ್ರಾತಃಕಾಲಿಕ ಕರ್ಮಗಳು ಮುಗಿಯಲು ಮೌನವಿಧಿಯನ್ನು ಬಿಟ್ಟು, ಶಾಂತರಾಗಿ ಪ್ರೀತಿಯಿಂದ ಪಾದ್ಯ ಮತ್ತು ಅರ್ಘ್ಯಗಳನ್ನು ಕೊಟ್ಟು ಆ ನಾರದನನ್ನು ಅರ್ಚಿಸಿದರು. ಬಳಿಕ ಅವರಿಬ್ಬರೂ ದರ್ಭಾಸನಗಳನ್ನು ಮಂಡಿಸಿದರು. ನಾರದನೂ ಕುಳಿತುಕೊಂಡನು.

೮–೯. ಅವರು ಅಲ್ಲಿ ಕುಳಿತಿರಲು ಆ ಪ್ರದೇಶವು ಆಜ್ಯಾಹುತಿಯಿಂದ ಪ್ರಜ್ವಲಿಸುವ ಮಹಾಜ್ವಾಲೆಗಳನ್ನು ತಳೆದ ಅಗ್ನಿಗಳಿಂದ ಕೂಡಿದ ಯಜ್ಞವಾಟಿಯಂತೆ ವಿರಾಜಿಸುತ್ತಿದ್ದಿತು. ಬಳಿಕ ಅವರಲ್ಲಿ ನಾರಾಯಣನು ಆತಿಥ್ಯವನ್ನು ಪಡೆದು ಚೆನ್ನಾಗಿ ಸತ್ಕಾರಹೊಂದಿ ವಿಶ್ರಾಂತಿಯನ್ನು ತೆಗೆದುಕೊಂಡು ಸುಖವಾಗಿ ಅಲ್ಲಿ ಕುಳಿತಿದ್ದ ನಾರದನನ್ನು ಕುರಿತು ಹೀಗೆಂದನು.

೧೦. ಶ್ರೀನಾರಾಯಣನು ಹೇಳುತ್ತಾನೆ:— "ಎಲೈ ಬ್ರಾಹ್ಮಣನೇ! ನಮ್ಮಿಬ್ಬರಿಗೂ ಪರಮಕಾರಣನೂ, ಸನಾತನನೂ, ಪರಮಾತ್ಮನೂ ಆದ ಆ ಭಗವಂತನನ್ನು ಬ್ರಹ್ಮಧಾಮದಲ್ಲಿ ನೀನು ನೋಡಿದೆಯಲ್ಲವೆ?" ಎಂದು ಕೇಳಿದನು.

೧೧. ನಾರದನು ಹೇಳುತ್ತಾನೆ:—"ಎಲೈ ಸ್ವಾಮಿಯೇ! ಅಕ್ಷರಧಾಮದಲ್ಲಿ ನೆಲಸಿರುವ ಪರಮೇಶ್ವರನಾದ ಆ ವಾಸುದೇವನನ್ನು ನಿಮ್ಮ ಪ್ರಸಾದದಿಂದ ನಾನು ನೋಡಿದೆನು.

**ಇಹ ಚೈವಾಗತಸ್ತೇನ ವಿಸೃಷ್ಟೋ ವಾಂ ನಿಷೇವಿತುಂ ।**
**ಆಸಿಷ್ಯೇ ತತ್ಪರೋ ಭೂತ್ವಾ ಯುವಾಭ್ಯಾಂ ಸಹ ನಿತ್ಯಶಃ ॥ ೧೨ ॥**
**ಶ್ರೀ ನಾರಾಯಣ ಉವಾಚ :—**
**ಧನ್ಯೋಽಸ್ಯನುಗೃಹೀತೋಽಸಿ ಯತ್ತೇ ದೃಷ್ಟಃ ಸ್ವಯಂ ಪ್ರಭುಃ ।**
**ನ ಹಿ ತಂ ದೃಷ್ಟವಾನ್ ಬ್ರಹ್ಮನ್ ಕಶ್ಚಿದ್ದೇವೋಽಪಿ ವಾ ಋಷಿಃ ॥ ೧೩ ॥**
**ಭಕ್ತ್ಯೈಕಾಂತಿಕಯಾ ತಸ್ಯ ಪ್ರಾಪ್ತಾ ಅಕ್ಷರಸಾಮ್ಯತಾಂ ।**
**ಭಕ್ತಾಸ್ತ ಏವೈನಂ ಪಶ್ಯಂತ್ಯಖಿಲಕಾರಣಕಾರಣಂ ॥ ೧೪ ॥**
**ಸ ದಿವ್ಯಮೂರ್ತಿರ್ಭಗವಾನ್ ದುರ್ದಶಃ ಪುರುಷೋತ್ತಮಃ ।**
**ನಾರದೈತದ್ಧಿ ಮೇ ಸತ್ಯಂ ವಚನಂ ಸಮುದಾಹೃತಂ ॥ ೧೫ ॥**
**ನಾನ್ಯೋ ಭಕ್ತಾತ್ಪ್ರಿಯತರೋ ಲೋಕೇ ತಸ್ಯಾಸ್ತಿ ಕಶ್ಚನ ।**
**ತತಃ ಸ್ವಯಂ ದರ್ಶಿತವಾಂಸ್ತವಾತ್ಮಾನಂ ದ್ವಿಜೋತ್ತಮ ॥ ೧೬ ॥**
**ತೇಜಃ ಪುಂಜಾಭಿರುದ್ಧಾಂಗೋ ಗುಣಾತೀತಾದ್ಭುತಾಕೃತಿಃ ।**
**ಅಖಂಡಾನಂದರೂಪಶ್ಚ ಸದಾ ಶುದ್ಧೋಽಚ್ಯುತೋಽಸ್ತಿ ಸಃ ॥ ೧೭ ॥**

---

೧೨. ಅವನಿಂದ ಕಳುಹಿಸಲ್ಪಟ್ಟವನಾಗಿ ನಿಮ್ಮನ್ನು ಸೇವಿಸುವುದಕ್ಕೆ ಅಲ್ಲಿಂದ ಇಲ್ಲಿಗೇ ಬಂದಿದ್ದೇನೆ. ಸದಾ ಅವನನ್ನೇ ನೆನೆಯುತ್ತ ನಿಮ್ಮೊಡನೆ ಇಲ್ಲಿಯೇ ಇರುತ್ತೇನೆ.''

೧೩. ಶ್ರೀನಾರಾಯಣನು ಹೇಳುತ್ತಾನೆ:—'' ಆ ಸಾಕ್ಷಾತ್ ಪ್ರಭುವನ್ನೇ ಕಂಡೆಯಾದ್ದರಿಂದ ನೀನು ಧನ್ಯನಾದೆ; ಅನುಗೃಹೀತನಾದೆ. ಎಲೈ ಬ್ರಾಹ್ಮಣನೇ! ದೇವತೆಯೇ ಆಗಲಿ, ಋಷಿಯೇ ಆಗಲಿ ಯಾವೊಬ್ಬನೂ ಅವನನ್ನು ಕಂಡೇ ಇರುವುದಿಲ್ಲವು.

೧೪–೧೫. ಏಕಾಂತಭಕ್ತಿಯಿಂದ ಅವನೊಡನೆ ನಾಶರಹಿತವಾದ ಸಾಮ್ಯತೆಯನ್ನು ಯಾರು ಪಡೆದಿರುವರೋ ಆ ಭಕ್ತರುಮಾತ್ರವೇ ಅಖಿಲ ಕಾರಣಕಾರಣನಾದ ಅವನನ್ನು ಕಾಣುವರು. ದಿವ್ಯ ಮೂರ್ತಿಯೂ, ಪುರುಷೋತ್ತಮನೂ ಆದ ಆ ಭಗವಂತನನ್ನು ನೋಡುವುದು ಸುಲಭವಲ್ಲ. ಅವನು ದುರ್ದರ್ಶನು. ನಾರದಾ! ಈ ನನ್ನ ಮಾತು ಸತ್ಯವಾದುದು.

೧೬. ಅವನಿಗೆ ಲೋಕದಲ್ಲಿ ಭಕ್ತನಿಗಿಂತಲೂ ಹೆಚ್ಚು ಪ್ರಿಯನಾದವನು ಬೇರಾವನೂ ಇರುವುದಿಲ್ಲ. ಎಲೈ ದ್ವಿಜೋತ್ತಮನೇ! ಆದುದರಿಂದಲೇ ಅವನು ತಾನಾಗಿಯೇ ನಿನಗೆ ತನ್ನ ದರ್ಶನವನ್ನು ದಯೆಗೈದಿರುವನು.

೧೭. ಅವನು ತೇಜಸ್ಸಿನ ರಾಶಿಯಿಂದ ಸುತ್ತುವರಿಯಲ್ಪಟ್ಟ ಅಂಗಗಳುಳ್ಳವನೂ, ಗುಣಾತೀತವಾದ ಅದ್ಭುತಾಕೃತಿಯುಳ್ಳವನೂ, ಅಖಂಡವಾದ ಆನಂದ ರೂಪನೂ, ಸದಾ ಶುದ್ಧನೂ ಅಚ್ಯುತ (ನಾಶರಹಿತ)ನೂ ಆಗಿರುವನು.

ರೂಪವರ್ಣವಯೋಽವಸ್ಥಾಃ ಪ್ರಾಕೃತಾ ನೈವ ತಸ್ಯ ಹಿ ।
ಸರ್ವಂ ತಸ್ಯಾಸ್ತಿ ತದ್ದಿವ್ಯಂ ಸರ್ವೋಽಪಕರಣಾನಿ ಚ ।
ಏಕಾಂತಿಕಾನಾಂ ಭಕ್ತಾನಾಂ ಸ ಏವ ಪರಮಾ ಗತಿಃ ॥ ೧೮ ॥
ಆತ್ಮಬ್ರಹ್ಮೈಕ್ಯಸಂಪನ್ನೈರ್ವಿನಿವೃತ್ತಗುಣೈರಪಿ ।
ಕ್ರಿಯತೇ ವಾಸುದೇವಸ್ಯ ಭಕ್ತಿರಿತ್ಥಂ ಗುಣೋ ಹಿ ಸಃ ॥ ೧೯ ॥
ಮಾಹಾತ್ಮ್ಯಮಸ್ಯ ಕೋ ವಕ್ತುಂ ಶಕ್ನುಯಾತ್ಪರಮಾತ್ಮನಃ ।
ಅಚಿಂತ್ಯಾನಂತಶಕ್ತೀನಾಮಧಿಪಸ್ಯ ಮಹಾಮುನೇ ॥ ೨೦ ॥
ಆತ್ಮಾತ್ಮಾ ಚಾಕ್ಷರಾತ್ಮಾ ಚ ಹ್ಯೇಷ ಆಕಾಶನಿರ್ಮಲಃ ।
ದಿವ್ಯದೃಗೀಕ್ಷ್ಯಃ ಸನ್ಮಾತ್ರಃ ಪುರುಷೋ ವಸುದೇವಜಃ ॥ ೨೧ ॥
ಸಮಸ್ತಕಲ್ಯಾಣಗುಣೋ ನಿರ್ಗುಣಶ್ಚೇಶ್ವರೇಶ್ವರಃ ।
ಪರಯಾ ವಿದ್ಯಯಾ ವೇದ್ಯ ಉಪಾಸ್ಯೋ ಬ್ರಹ್ಮವಿತ್ಪ್ರಭುಃ ॥ ೨೨ ॥
ದಿವ್ಯಮೂರ್ತಿಂ ತಮೀಶಾನಂ ತಪಸೈಕಾಂತಿಕೇನ ಚ ।
ಯಃ ಪ್ರೀಣಯತಿ ಧರ್ಮೇಣ ಸ ಧನ್ಯತಮ ಉಚ್ಯತೇ ॥ ೨೩ ॥

---

೧೮. ಅವನ ರೂಪ, ಬಣ್ಣ, ವಯಸ್ಸು, ಅವಸ್ಥೆ—ಇವು ಯಾವುವೂ ಪ್ರಾಕೃತಗಳಲ್ಲ. ಅವನ ಆ ರೂಪಾದಿಗಳೇ ಅಲ್ಲದೆ ಸಮಸ್ತ ಉಪಕರಣಗಳೂ ದಿವ್ಯವಾದುವು. ಏಕಾಂತಭಕ್ತರಿಗೆಲ್ಲ ಅವನೇ ಪರಮಗತಿಯು.

೧೯. ಆತ್ಮಬ್ರಹ್ಮರ ಐಕ್ಯವನ್ನರಿತು ಬಲ್ಲವರೂ, ಗುಣನಿವೃತ್ತಿಯನ್ನು ಮಾಡಿಕೊಂಡಿರುವವರೂ ಕೂಡ ಆ ವಾಸುದೇವನಲ್ಲಿ ಭಕ್ತಿಯನ್ನು ಮಾಡುತ್ತಾರೆ. ಅವನು ಇಂಥ ಅಮೋಘಗುಣವುಳ್ಳವನು.

೨೦. ಎಲೈ ಮಹಾಮುನಿಯೇ! ಚಿಂತಿಸಲರಿದಾದ ಅನಂತಶಕ್ತಿಗಳಿಗೆ ಅಧಿಪತಿಯಾದ ಆ ಪರಮಾತ್ಮನ ಮಾಹಾತ್ಮ್ಯವನ್ನು ವಿವರಿಸಲು ಯಾವನು ತಾನೆ ಶಕ್ತನಾದಾನು?

೨೧. ಅವನು ಆತ್ಮರಿಗೆ ಆತ್ಮನು. ಅಕ್ಷರಾತ್ಮನು; ಆಕಾಶದಂತೆ ನಿರ್ಮಲನಾದವನು; ದಿವ್ಯದೃಷ್ಟಿಯಿಂದ ಮಾತ್ರ ನೋಡಲು ಸಾಧ್ಯನಾದವನು. ಜ್ಞಾನಸ್ವರೂಪನು; ಪರಮಪುರುಷನು; ಅವನೇ ವಾಸುದೇವನು.

೨೨. ಸಮಸ್ತಕಲ್ಯಾಣಗುಣಗಳೂ ಉಳ್ಳವನು ಆತನೇ! ಗುಣರಹಿತನೂ ಆತನೇ; ಈಶ್ವರರಿಗೆಲ್ಲ ಈಶ್ವರನೂ, ಪರಾವಿದ್ಯೆಯಿಂದ ತಿಳಿಯಲಾಗುವವನೂ, ಸರ್ವರಿಂದಲೂ ಉಪಾಸಿಸಲರ್ಹನಾದವನೂ, ಬ್ರಹ್ಮಜ್ಞರಿಗೆಲ್ಲ ಪ್ರಭುವೂ ಆತನೇ!

೨೩. ದಿವ್ಯಮೂರ್ತಿಯಾದ ಆ ಈಶ್ವರನನ್ನು ಏಕಾಂತತಪಸ್ಸಿನಿಂದಲೂ, ಧರ್ಮದಿಂದಲೂ ಯಾವನು ಮೆಚ್ಚಿಸಿ ಪ್ರೀತಿಯನ್ನುಂಟುಮಾಡುವನೋ ಅವನೇ ಧನ್ಯತಮನೆನಿಸುವನು.

ತಸ್ಮಾತ್ತ್ವಮಪಿ ದೇವರ್ಷೇ ಧರ್ಮೇಣೈಕಾಂತಿಕೇನ ತಂ ।
ಆರಾಧಯನ್ನಿಹೈವಾಂಗ ಕಂಚಿತ್ಕಾಲಂ ತಪಃ ಕುರು ॥ ೨೪ ॥
ತಪಸೈವಾಽತಿಶುದ್ಧಾತ್ಮಾ ಮಾಹಾತ್ಮ್ಯಂ ತಸ್ಯ ಸತ್ಪತೇಃ ।
ಯಥಾವಜ್ಜ್ಞಾಸ್ಯತಿ ಭವಾನ್ ಪ್ರೋಚ್ಯಮಾನಂ ಮಯಾಽಖಿಲಂ ॥ ೨೫ ॥
ಸರ್ವಾರ್ಥಸಾಧನಂ ವಿದ್ಧಿ ತಪಸ್ತದ್ಧೃದಯಂ ಮುನೇ ।
ನಾತಪ್ತಭೂರಿತಪಸಾ ಸ ವಶೀಕ್ರಿಯತೇ ಪ್ರಭುಃ ॥ ೨೬ ॥

ಸ್ಕಂದ ಉವಾಚ :—

ಏವಮುಕ್ತೋ ಭಗವತಾ ನರನಾರಾಯಣೇನ ಸಃ ।
ಪ್ರೀತಸ್ತಪಃ ಕರ್ತುಮಿಚ್ಛಂಸ್ತಮುವಾಚ ಮಹಾಮತಿಃ ॥ ೨೭ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ನಾರದನರನಾರಾಯಣಸಮಾಗಮೋ" ನಾಮೈಕೋನವಿಂಶೋಽಧ್ಯಾಯಃ**

---

೨೪. ಆದುದರಿಂದ, ಎಲೈ ದೇವರ್ಷಿಯೇ! ನೀನು ಕೂಡ ಏಕಾಂತವಾದ ಭಕ್ತಿಧರ್ಮದಿಂದಲೇ ಅವನನ್ನು ಆರಾಧಿಸುತ್ತ ಇಲ್ಲಿಯೇ ಸ್ವಲ್ಪಕಾಲ ತಪಸ್ಸನ್ನು ಮಾಡುತ್ತಿರು.

೨೫. ತಪಸ್ಸಿನಿಂದಲೆ ನೀನು ಶುದ್ಧಾತ್ಮನಾಗಿ ನಾನು ಹೇಳುತ್ತಿರುವ ಸತ್ಪತಿಯಾದ ಅವನ ಮಹಿಮೆಯೆಲ್ಲವನ್ನೂ ಯಥಾವತ್ತಾಗಿ ತಿಳಿದುಕೊಳ್ಳುತ್ತೀಯೆ.

೨೬. ತಪಸ್ಸು ಸಮಸ್ತ ಇಷ್ಟಾರ್ಥಗಳನ್ನು ಸಾಧಿಸಿಕೊಡುವ ಸಾಧನವೆಂದು ತಿಳಿದುಕೊ. ಎಲೈ ಮುನಿಯೇ! ಆ ತಪಸ್ಸೇ ಅವನ ಹೃದಯ. ಬಹಳವಾಗಿ ತಪಸ್ಸುಮಾಡಿಲ್ಲದವನು ಆ ಪ್ರಭುವನ್ನು ವಶಪಡಿಸಿಕೊಳ್ಳಲಾರನು."

೨೭. ಸ್ಕಂದನು ಹೇಳುತ್ತಾನೆ:— ಭಗವಂತನಾದ ನಾರಾಯಣನಿಂದ ಹೀಗೆ ಹೇಳಲ್ಪಟ್ಟ ಆ ನಾರದನು ಸುಪ್ರೀತನಾಗಿ ತಪಸ್ಸನ್ನು ಮಾಡಬಯಸಿ ಆ ನಾರಾಯಣಮುನಿಯನ್ನು ಕುರಿತು ಹೀಗೆಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ನಾರದನರನಾರಾಯಣ ಸಮಾಗಮವರ್ಣನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶೋಽಧ್ಯಾಯಃ

## ಚಾತುರ್ವರ್ಣ್ಯಧರ್ಮನಿರೂಪಣಂ

ನಾರದ ಉವಾಚ :—

ಭಗವನ್ ಬ್ರೂಹಿ ಮೇ ಧರ್ಮಮೇಕಾಂತಂ ತವ ಸಂಮತಂ ।
ಪ್ರೀಯಂತೇ ಯೇನ ವಿಶ್ವಾತ್ಮಾ ವಾಸುದೇವಃ ಸ ಸರ್ವದಾ ॥ ೧ ॥

ಶ್ರೀನಾರಾಯಣ ಉವಾಚ :—

ಸಾಧು ಪೃಷ್ಟಂ ತ್ವಯಾ ಬ್ರಹ್ಮನ್ಮತಿಸ್ತೇ ವಿಮಲಾ ಕಿಲ ।
ಮಯಿ ಸ್ನಿಗ್ಧಾಯ ಭಕ್ತಾಯ ತುಭ್ಯಂ ಗುಹ್ಯಮಪಿ ಬ್ರುವೇ ॥ ೨ ॥
ಧರ್ಮ ಏಷ ಮಯಾ ಪ್ರೋಕ್ತಃ ಕಲ್ಪಸ್ಯಾದೌ ವಿವಸ್ವತೇ ।
ತಮೇವ ಕಥಯೇ ತುಭ್ಯಂ ಸನಾತನಮಹಂ ಮುನೇ ॥ ೩ ॥
ಸ್ವಧರ್ಮಜ್ಞಾನ ವೈರಾಗ್ಯೈಃ ಸಹಲಕ್ಷ್ಮ್ಯೇವದೀಶ್ವರೇ ।
ತಸ್ಮಿನ್ನನನ್ಯಾ ಭಕ್ತಿರ್ಯಾ ಧರ್ಮ ಏಕಾಂತಿಕಃ ಸ ವೈ ॥ ೪ ॥

---

## ಕನ್ನಡದ ಅನುವಾದ

### ಚಾತುರ್ವರ್ಣ್ಯಧರ್ಮನಿರೂಪಣ

೧. ನಾರದನು ಕೇಳುತ್ತಾನೆ:—"ಎಲೈ ಭಗವಂತನೇ! ವಿಶ್ವಾತ್ಮನಾದ ಆ ವಾಸುದೇವನು ಸರ್ವಕಾಲದಲ್ಲಿಯೂ ಯಾವುದರಿಂದ ಪ್ರೀತನಾಗುತ್ತಾನೆಯೊ, ನಿನಗೆ ಸಮ್ಮತವಾಗಿರುವ ಆ ಏಕಾಂತಭಕ್ತಿಧರ್ಮವನ್ನು ತಿಳಿಸು."

೨. ಶ್ರೀನಾರಾಯಣನು ಹೇಳುತ್ತಾನೆ:—"ಎಲೈ ಬ್ರಾಹ್ಮಣನೇ! ನೀನು ಸರಿಯಾಗಿಯೆ ಕೇಳಿದೆ. ನಿನ್ನ ಮತಿಯು ನಿರ್ಮಲವಾಗಿರುವುದು. ನನ್ನಲ್ಲಿ ಸ್ನೇಹವುಳ್ಳವನೂ, ಭಕ್ತನೂ ಆಗಿರುವ ನಿನಗೆ ರಹಸ್ಯವಾಗಿರುವುದಾದರೂ ಅದನ್ನು ನಾನು ಹೇಳುವೆನು.

೩. ಈ ಕಲ್ಪದ ಆದಿಯಲ್ಲಿ ವಿವಸ್ವತನಿಗೆ ಈ ಧರ್ಮವನ್ನು ನಾನೇ ಹೇಳಿದೆನು. ಎಲೈ ಮುನಿಯೇ! ಸನಾತನವಾದ ಆ ಧರ್ಮವನ್ನೇ ಈಗ ನಿನಗೆ ಹೇಳುತ್ತೇನೆ.

೪. ಸ್ವಧರ್ಮ, ಜ್ಞಾನ, ವೈರಾಗ್ಯಗಳಿಂದ ಕೂಡಿ, ಈಶ್ವರನಲ್ಲಿ ಲಕ್ಷ್ಮಿಯಂತೆ ಅನನ್ಯವಾದ ಭಕ್ತಿಯಿಟ್ಟಿರುವುದು ಯಾವುದೋ ಅದೇ ಏಕಾಂತ ಧರ್ಮವು.

ತೇನೈವಾತಿಪ್ರಸನ್ನಃ ಸ್ಯಾದ್ಗೋಲೋಕಾಧಿಪತಿಃ ಸ್ವಯಂ ।
ಜಾಯತೇ ಸ ಚ ಭಕ್ತೋಽಪಿ ಪರಿಪೂರ್ಣಮನೋರಥಃ ॥ ೫ ॥

ನಾರದ ಉವಾಚ :—

ಲಕ್ಷಣಾನಿ ಬುಭುತ್ಸಾಮಿ ಸ್ವಧರ್ಮಾದೇಃ ಪೃಥಕ್ ಪೃಥಕ್ ।
ಶಾಸ್ತ್ರಯೋನೇರಹಂ ತ್ವತ್ತೋ ವಕ್ತುಂ ತಾನಿ ತ್ವಮರ್ಹಸಿ ॥ ೬ ॥
ನಿಗಮಾಗಮಶಾಸ್ತ್ರಾಣಾಂ ಸರ್ವೇಷಾಮಪಿ ಸತ್ಪತೇ ।
ಮೂಲಂ ತ್ವಮೇಕ ಏವಾಸಿ ಯೇಷು ಧರ್ಮಃ ಸನಾತನಃ ॥ ೭ ॥
ತ್ವಮೇವ ಸಾಕ್ಷಾದ್ಭಗವಾನ್ ವಾಸುದೇವೋಽಕ್ಷರಾತ್ಪರಃ ।
ಶ್ರೇಯಸೇ ಸರ್ವಭೂತಾನಾಂ ವರ್ತಸೇಽತ್ರ ದಯಾನಿಧಿಃ ॥ ೮ ॥
ತ್ವತ್ತೋಽನ್ಯೇ ತು ಸ್ವಸ್ವಭಾವಗುಣತಂತ್ರಾ ಹ್ಯಜಾದಯಃ ।
ಯಥಾವನ್ನ ವಿಜಾನೀಯುರ್ಧರ್ಮಾದೀಂಸ್ತ್ವಮತೋ ವದ ॥ ೯ ॥

ಸ್ಕಂದ ಉವಾಚ :—

ಇತಿ ದೇವರ್ಷಿಣಾ ಪೃಷ್ಟೋ ಭಗವಾನ್ ಧರ್ಮನಂದನಃ ।
ಸ್ವಧರ್ಮಾದೀನ್ ಕ್ರಮೇಣೈವ ಕಥಯಾಮಾಸ ಸರ್ವವಿತ್ ॥ ೧೦ ॥

---

೫. ಆದ್ದರಿಂದಲೇ ಸ್ವಯಂ ಗೋಲೋಕಾಧಿಪತಿಯು ಸುಪ್ರೀತನಾಗುತ್ತಾನೆ. ಆ ಭಕ್ತನೂ ಕೂಡ ಪರಿಪೂರ್ಣಮನೋರಥನಾಗುತ್ತಾನೆ.''

೬–೭. ನಾರದನು ಕೇಳುತ್ತಾನೆ:— ''ಶಾಸ್ತ್ರಗಳಿಗೆ ಜನ್ಮಸ್ಥಾನವೆನಿಸಿದ ನಿನ್ನಿಂದ ಸ್ವಧರ್ಮಾದಿಗಳ ಲಕ್ಷಣಗಳನ್ನು ಬೇರೆ ಬೇರೆಯಾಗಿ ತಿಳಿಯಲಪೇಕ್ಷಿಸುತ್ತೇನೆ. ಎಲೈ ನಾರಾಯಣಮುನಿಯೇ! ಅವನ್ನು ನೀನು ನನಗೆ ತಿಳಿಯಹೇಳಬೇಕು. ಎಲೈ ಸಜ್ಜನರೊಡೆಯನೇ! ಯಾವುಗಳಲ್ಲಿ ಸನಾತನವಾದ ಧರ್ಮವು ಹೇಳಲ್ಪಟ್ಟಿರುವುದೋ ಆ ನಿಗಮ, ಆಗಮ—ಶಾಸ್ತ್ರಗಳೆಲ್ಲಕ್ಕೂ ನೀನೊಬ್ಬನೇ ಮೂಲವಾಗಿದ್ದೀಯೆ.

೮–೯. ನೀನೇ ಅಕ್ಷರಕ್ಕಿಂತಲೂ ಪರವಸ್ತುವೆನಿಸಿದ ಸಾಕ್ಷಾದ್ಭಗವಂತನಾದ ವಾಸುದೇವನು. ಸರ್ವಭೂತಗಳ ಶ್ರೇಯಸ್ಸಿಗಾಗಿಯೇ ದಯಾನಿಧಿಯಾದ ನೀನು ಇಲ್ಲಿ ನೆಲಸಿದ್ದೀಯೆ. ನಿನಗಿಂತಲೂ ಬೇರೆಯವರಾದ ಬ್ರಹ್ಮನೇ ಮೊದಲಾದವರೆಲ್ಲರೂ ತಮ್ಮತಮ್ಮ ಸ್ವಭಾವಗುಣಗಳು ನಡೆಸಿದಂತೆ ನಡೆಯುವವರು. ಅವರು ಧರ್ಮಾದಿಗಳನ್ನು ಇದ್ದುದನ್ನಿದ್ದಂತೆ ತಿಳಿದವರಲ್ಲವಾದುದರಿಂದ ಅದನ್ನು ನೀನೇ ಹೇಳಬೇಕು.''

೧೦. ಸ್ಕಂದನು ಹೇಳುತ್ತಾನೆ:—ಹೀಗೆ ದೇವರ್ಷಿಯಿಂದ ಪ್ರಶ್ನಿಸಲ್ಪಟ್ಟವನಾದ ಸರ್ವಜ್ಞನಾದ ಭಗವಾನ್ ಧರ್ಮನಂದನನು (ಶ್ರೀನಾರಾಯಣನು) ಸ್ವಧರ್ಮ ಮೊದಲಾದುವನ್ನು ಕ್ರಮವಾಗಿಯೇ ಹೇಳಿದನು.

ಶ್ರೀ ನಾರಾಯಣ ಉವಾಚ:—
ವರ್ಣಾನಾಮಾಶ್ರಮಾಣಾಂ ಚ ಸದಾಚಾರಃ ಪೃಥಕ್ ಪೃಥಕ್ ।
ಸಾಮಾನ್ಯಃ ಸ ವಿಶೇಷಶ್ಚ ಸ್ವಧರ್ಮಃ ಸ ಉದೀರ್ಯತೇ ॥ ೧೧ ॥
ನೃಣಾಂ ಸಾಧಾರಣಂ ಧರ್ಮಂ ಸರ್ವೇಷಾಮಾದಿತಃ ಶೃಣು ।
ಅಹಿಂಸಾ ಪರಮೋಧರ್ಮಸ್ತತ್ರಾದಿಮ ಉದಾಹೃತಃ ॥ ೧೨ ॥
ಸ್ವಮುಖ್ಯಧರ್ಮವೃತ್ತ್ಯೋರಪ್ಯದ್ರೋಹೋ ಮನಸಾಪಿ ಯಃ ।
ಸತಿ ಗತ್ಯಂತರೇ ಪ್ರಾಣಿಮಾತ್ರಸ್ಯಾಪೀತಿ ಸಾ ಮತಾ ॥ ೧೩ ॥
ಸತ್ಯೋವಾಗ್ಭೂತಮಾತ್ರಸ್ಯ ದ್ರೋಹೋ ನಸ್ಯಾದ್ಯಥಾ ತಥಾ ।
ತಪಶ್ಚ ಶಾಸ್ತ್ರವಿಹಿತಭೋಗಸಂಕೋಚಲಕ್ಷಣಂ ॥ ೧೪ ॥
ಬಾಹ್ಯಮಾಭ್ಯಂತರಂ ಚೇತಿ ದ್ವಿವಿಧಂ ಶೌಚಕರ್ಮ ಚ ।
ಅನಾದಾನಂ ಪರಸ್ವಸ್ಯ ಪರೋಕ್ಷಂ ವಾ ಛಲೇನ ಚ ॥ ೧೫ ॥
ಯಥೋಚಿತಂ ಬ್ರಹ್ಮಚರ್ಯಂ ಕಾಮಲೋಭಕ್ರುಧಾಂ ಜಯಃ ।
ಮುದಾ ವಿತ್ತಾರ್ಪಣಂ ಪಾತ್ರೇ ತುಷ್ಟಿರ್ಲಬ್ಧೇನ ದೈವತಃ ॥ ೧೬ ॥

---

೧೧. ಶ್ರೀನಾರಾಯಣನು ಹೇಳುತ್ತಾನೆ:— "ಸಮಸ್ತವರ್ಣಗಳಿಗೂ, ಆಶ್ರಮಗಳಿಗೂ ಸದಾಚಾರವು ಸಾಮಾನ್ಯವೆಂದೂ, ವಿಶೇಷವೆಂದೂ ಬೇರೆ ಬೇರೆಯಾಗಿ ವಿಧಾಯಕವಾಗಿರುವುದು. ಅದೇ ಸ್ವಧರ್ಮವೆಂದು ಹೇಳಲ್ಪಡುವುದು.

೧೨. ಸಮಸ್ತಜನರಿಗೂ ಸಾಧಾರಣವಾಗಿರುವ ಧರ್ಮವನ್ನು ಈಗ ಹೇಳುವೆನು. ಮೊದಲಿನಿಂದ ಆಲಿಸು. ಅಹಿಂಸೆಯು ಪರಮ ಶ್ರೇಷ್ಠವಾದ ಧರ್ಮವು. ಅದು ಆ ಸಾಧಾರಣ ಧರ್ಮದಲ್ಲಿ ಮೊಟ್ಟಮೊದಲನೆಯದೆಂದು ಹೇಳಲ್ಪಟ್ಟಿದೆ.

೧೩. ತನ್ನ ಮುಖ್ಯ ಧರ್ಮಕ್ಕೂ, ವೃತ್ತಿಗಳಿಗೂ ಮನಸ್ಸಿನಲ್ಲಿಯಾದರೂ ದ್ರೋಹವಿಲ್ಲದಿರುವುದು ಯಾವುದೋ, ಗತ್ಯಂತರವಿರುವ ಸಂದರ್ಭದಲ್ಲಿ ಪ್ರಾಣಿಮಾತ್ರಕ್ಕೂ ಕೂಡ ದ್ರೋಹವಿಲ್ಲದಿರುವುದು ಯಾವುದೋ ಅದೇ ಅಹಿಂಸೆಯೆಂದು ತಿಳಿಯಲ್ಪಟ್ಟಿದೆ.

೧೪. ಯಾವ ಮಾತಿನಿಂದ ಭೂತಮಾತ್ರಕ್ಕೆ ದ್ರೋಹವುಂಟಾಗುವುದಿಲ್ಲವೋ ಆ ಮಾತು ಸತ್ಯವೆನಿಸಿಕೊಳ್ಳುವುದು. ಶಾಸ್ತ್ರದಲ್ಲಿ ವಿಧಿಸಿರುವ ಪ್ರಕಾರವಾಗಿ ಭೋಗಗಳನ್ನು ಸಂಕೋಚಪಡಿಸಿಕೊಳ್ಳುವುದೇ ತಪಸ್ಸು.

೧೫–೨೧. ಬಾಹ್ಯ, ಆಭ್ಯಂತರ—ಎಂಬೀ ಎರಡು ರೀತಿಯ ಶೌಚಕರ್ಮ; ಪರರಿಗೆ ಸೇರಿದ ವಸ್ತುವನ್ನು ಪರೋಕ್ಷದಲ್ಲಾಗಲಿ, ಮೋಸದಿಂದಾಗಲಿ ತೆಗೆದುಕೊಳ್ಳದಿರುವುದು; ಯಥೋಚಿತವಾದ (ಉಚಿತವೆಂದು ವಿಧಿಸಿರುವಷ್ಟರಮಟ್ಟಿಗೆ) ಬ್ರಹ್ಮಚರ್ಯ; ಕಾಮ, ಕ್ರೋಧ, ಲೋಭಗಳನ್ನು ಜಯಿಸುವುದು; ಯೋಗ್ಯರೂ, ಸತ್ಪಾತ್ರರೂ ಆದವರಿಗೆ ಸಂತೋಷದಿಂದ ವಿತ್ತವನ್ನರ್ಪಿಸುವುದು (ದಾನಮಾಡು

**ತೀರ್ಥೇ ಕ್ಷೇತ್ರೇ ಚ ಯಜ್ಞಾದೌ ಚತುರ್ವರ್ಗಾಪ್ತಯೇಽಪಿ ವಾ ।**
**ಆತ್ಮನೋ ವಾ ಪರಸ್ಯಾಪಿ ಸರ್ವಥಾ ಘಾತವರ್ಜನಂ ॥ ೧೭ ॥**
**ಜಾತಿಭ್ರಂಶಕರಾಣಾಂ ಚ ಕರ್ಮಣಾಂ ಪರಿವರ್ಜನಂ ।**
**ಪಾಣಿಪಾದೋದರೋಪಸ್ಥವಾಚಾಂ ಸಂಯಮನಂ ತಥಾ ॥ ೧೮ ॥**
**ಸರ್ವೇಷಾಂ ವ್ಯಸನಾನಾಂ ಚ ವರ್ಜನಂ ಮದ್ಯಮಾಂಸಯೋಃ ।**
**ವ್ಯಭಿಚಾರಾನ್ನಿವೃತ್ತಿಶ್ಚ ಕುಲಸದ್ಧರ್ಮಪಾಲನಂ ॥ ೧೯ ॥**
**ಏಕಾದಶೀನಾಂ ಸರ್ವಾಸಾಂ ಯಮೈಃ ಸಾಕಮುಪೋಷಣಂ ।**
**ಹರೇರ್ಜನ್ಮದಿನಾನಾಂ ಚ ವ್ರತಾಚರಣಮಂಜಸಾ ॥ ೨೦ ॥**
**ಆರ್ಜವಂ ಸಾಧುಸೇವಾ ಚ ವಿಭಜ್ಯಾನ್ನಾದಿಭೋಜನಂ ।**
**ಭಕ್ತಿರ್ಭಗವತಶ್ಚೇತಿ ಧರ್ಮಾಃ ಸಾಧಾರಣಾ ನೃಣಾಂ ॥ ೨೧ ॥**
**ಬ್ರಹ್ಮಕ್ಷತ್ರವಿಶಃ ಶೂದ್ರಾ ವರ್ಣಾಶ್ಚತ್ವಾರ ಈರಿತಾಃ ।**
**ತೇಷಾಂ ಪೃಥಕ್ ಪೃಥಕ್ ಧರ್ಮಾನ್ ವಿಶೇಷಾನ್ ವಚ್ಮಿ ತೇ ಮುನೇ ॥**
**ಶಮೋ ದಮಃ ಕ್ಷಮಾ ಶೌಚಂ ಆಸ್ತಿಕ್ಯಂ ಭಕ್ತಿರೀಶಿತುಃ ।**
**ತಪೋ ಜ್ಞಾನಂ ಚ ವಿಜ್ಞಾನಂ ವಿಪ್ರಧರ್ಮಾಃ ಸ್ವಭಾವಜಃ ॥ ೨೩ ॥**

---

ವುದು); ಅದೃಷ್ಟವಶದಿಂದ ದೊರೆತಷ್ಟರಲ್ಲಿ ತೃಪ್ತಿ; ತೀರ್ಥದಲ್ಲಿ, ಕ್ಷೇತ್ರದಲ್ಲಿ, ಯಜ್ಞಾದಿಗಳಲ್ಲಿ, ತನಗಾಗಲಿ ಇತರರಿಗಾಗಲಿ ಧರ್ಮಾರ್ಥಕಾಮಗಳೆಂಬ ನಾಲ್ಕು ಪುರುಷಾರ್ಥಗಳನ್ನು ಪಡೆಯುವುದರಲ್ಲಿಯೇ ಆಗಲಿ ಸರ್ವಪ್ರಕಾರದಿಂದಲೂ ಹಿಂಸೆಯನ್ನು ವರ್ಜಿಸುವುದು; ಜಾತಿಭ್ರಂಶಗೊಳಿಸುವಂಥ ಕರ್ಮಗಳನ್ನು ಪರಿತ್ಯಾಗ ಮಾಡುವುದು; ಕೈಕಾಲು, ಹೊಟ್ಟೆ, ಉಪಸ್ಥೆ, ಮಾತು—ಇವುಗಳನ್ನು ಅಂಕೆಯಲ್ಲಿ ಅಡಗಿಸಿಟ್ಟುಕೊಳುವುದು; ಸರ್ವವ್ಯಸನಗಳನ್ನೂ, ಮದ್ಯಮಾಂಸಗಳನ್ನೂ ವರ್ಜಿಸುವುದು; ವ್ಯಭಿಚಾರಕ್ಕೆ ವಿಮುಖವಾಗಿರುವುದು; ಕುಲಕ್ಕೆ ಉಚಿತವಾದ ಸದ್ಧರ್ಮವನ್ನು ಪಾಲಿಸುವುದು; ಏಕಾದಶೀ ದಿನಗಳಲ್ಲಿಯೂ ನಿಯಮ (ಇಂದ್ರಿಯನಿಗ್ರಹ)ಪೂರ್ವಕವಾಗಿ ಉಪವಾಸಮಾಡುವುದು; ಹರಿಯ ಜನ್ಮದಿನಗಳನ್ನು ನಡೆಸುವುದು; ವ್ರತಾಚರಣೆಮಾಡುವುದು; ಆರ್ಜವ (ಸರಳತೆ), ಸಾಧುಗಳ ಸೇವೆ, ಅನ್ನಾದಿಗಳನ್ನು ಅತಿಥಿ ಅಭ್ಯಾಗತರಿಗೆ ಹಂಚಿ (ಕೊಟ್ಟು) ಭೋಜನಮಾಡುವುದು; ಭಗವಂತನಲ್ಲಿ ಭಕ್ತಿ— ಇವು ಮನುಷ್ಯರೆಲ್ಲರಿಗೂ ಸಾಧಾರಣವಾಗಿರುವ ಧರ್ಮಗಳು.

೨೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ—ಈ ನಾಲ್ಕು ವರ್ಣಗಳು ಹೇಳಲ್ಪಟ್ಟಿವೆ. ಎಲೈ ಮುನಿಯೇ! ಅವುಗಳಿಗೆ ಬೇರೆಬೇರೆಯಾಗಿರುವ ವಿಶೇಷ ಧರ್ಮಗಳನ್ನು ನಿನಗೆ ಹೇಳುತ್ತೇನೆ.

೨೩. ಶಮ (ಶಾಂತಿ), ದಮ (ಇಂದ್ರಿಯನಿಗ್ರಹ), ಕ್ಷಮೆ (ಸಹನೆ),

ಶೂರತ್ವಂ ಧೈರ್ಯಮೌದಾರ್ಯಂ ಬಲಂ ತೇಜಃ ಶರಣ್ಯತಾ ।
ಗೋವಿಪ್ರಸಾಧುರಕ್ಷೇಜ್ಯಾ ಧರ್ಮಾಃ ಕ್ಷತ್ರಸ್ಯ ಕೀರ್ತಿತಾಃ ॥ ೨೪ ॥
ರಾಜ್ಞಸ್ತ್ವೇತೇಽಥ ನೀತ್ಯೈವ ಪ್ರಜಾನಾಂ ಪರಿಪಾಲನಂ ।
ಧರ್ಮಸಂಸ್ಥಾಪನಂ ಭೂಮೌ ಧರ್ಮಾ ದಂಡಾರ್ಹದಂಡನಂ ॥ ೨೫ ॥
ಆಸ್ತಿಕ್ಯಂ ದಾನನಿಷ್ಠಾ ಚ ಸಾಧುಬ್ರಾಹ್ಮಣಸೇವನಂ ।
ಅತುಷ್ಟಿರರ್ಥೋಪಚಯೇ ಧರ್ಮಾ ವೈಶ್ಯಸ್ಯ ಚೋದ್ಯಮಃ ॥ ೨೬ ॥
ದ್ವಿಜಾತೀನಾಂ ಚ ದೇವಾನಾಂ ಸೇವಾ ನಿಷ್ಕಪಟಂ ಗವಾಂ ।
ವಿಶೇಷಧರ್ಮಃ ಕಥಿತಃ ಶೂದ್ರಸ್ಯ ಮುನಿಸತ್ತಮ ॥ ೨೭ ॥
ಅಧ್ಯಾಪನಂ ಯಾಜನಂ ಚ ವಿಶುದ್ಧಾಚ್ಚ ಪ್ರತಿಗ್ರಹಃ ।
ವಿಪ್ರಸ್ಯ ಜೀವಿಕಾ ಪ್ರೋಕ್ತಾ ತತ್ರಾಂತ್ಯಾತ್ಸ್ವಾಪದಿ ಸ್ಮೃತಾ ॥ ೨೮ ॥
ಯಾಜನೇಽಧ್ಯಾಪನೇ ವಾಪಿ ದೋಷದರ್ಶೀ ದ್ವಿಜೋತ್ತಮಃ ।
ಯಸ್ತಸ್ಯಾನ್ಯಾಪಿ ವಿಹಿತಾ ವೃತ್ತಿರಸ್ತಿ ಚತುರ್ವಿಧಾ ॥ ೨೯ ॥

---

ಶೌಚ, ಆಸ್ತಿಕ್ಯ (ದೇವರು ಮತ್ತು ಶಾಸ್ತ್ರಗಳಲ್ಲಿ ನಂಬಿಕೆ), ದೇವರಲ್ಲಿ ಭಕ್ತಿ, ತಪಸ್ಸು, ಜ್ಞಾನ, ವಿಜ್ಞಾನ— ಇವು ಸ್ವಭಾವವಾದ ಬ್ರಾಹ್ಮಣನ ಧರ್ಮಗಳು.

೨೪–೨೫. ಶೂರತ್ವ, ಧೈರ್ಯ, ಔದಾರ್ಯ, ಬಲ, ತೇಜಸ್ಸು, ಶರಣ್ಯತೆ, ಆರ್ತರಿಗೆ ರಕ್ಷಣೆಕೊಡುವುದು, ಗೋಬ್ರಾಹ್ಮಣರನ್ನೂ, ಸಾಧುಗಳನ್ನೂ ರಕ್ಷಿಸುವುದು, ಯಜ್ಞಮಾಡುವುದು—ಇವು ಕ್ಷತ್ರಿಯನ ಸಾಮಾನ್ಯ ಧರ್ಮಗಳೆಂದು ಹೇಳಲ್ಪಟ್ಟವೆ. ರಾಜನಿಗಾದರೊ ಇವೂ(ಕ್ಷತ್ರಿಯರಿಗೆ ಮೇಲೆಹೇಳಿದ ಧರ್ಮಗಳು) ಮತ್ತು ನೀತಿಯನ್ನನುಸರಿಸಿಯೇ ಪ್ರಜೆಗಳನ್ನು ಪರಿಪಾಲಿಸುವುದು, ಭೂಮಿಯಲ್ಲಿ ಧರ್ಮಸಂಸ್ಥಾಪನೆಮಾಡುವುದು, ದಂಡಾರ್ಹರಾದವರನ್ನು ದಂಡಿಸುವುದು— ಇವು ವಿಶೇಷ ಧರ್ಮಗಳೆನಿಸುವುವು.

೨೬–೨೭. ಆಸ್ತಿಕ್ಯ, ದಾನನಿಷ್ಠೆ, ಸಾಧುಗಳ ಮತ್ತು ಬ್ರಾಹ್ಮಣರ ಸೇವೆ ಮಾಡುವುದು, ಹಣ ಕೂಡಿಸುವುದರಲ್ಲಿ ಅತೃಪ್ತಿ, ಉದ್ಯಮ — ಇವು ವೈಶ್ಯನ ಧರ್ಮಗಳು. ಬ್ರಾಹ್ಮಣರ ಮತ್ತು ದೇವತೆಗಳ ಸೇವೆ, ಗೋಸೇವೆ, ಕಪಟವಿಲ್ಲದಿರುವುದು—ಇವು ಶೂದ್ರನಿಗೆ ವಿಶೇಷಧರ್ಮಗಳೆಂದು ಹೇಳಲ್ಪಟ್ಟಿರುವುದು.

೨೮. ಅಧ್ಯಾಪನ (ಪಾಠ ಹೇಳುವುದು), ಯಜ್ಞಮಾಡಿಸುವುದು, ಪರಿಶುದ್ಧರಾದವರಿಂದ (ದಾನ) ಪ್ರತಿಗ್ರಹಮಾಡುವುದು—ಇದು ಬ್ರಾಹ್ಮಣನಿಗೆ ಜೀವನೋಪಾಯವೆಂದು ಹೇಳಿದೆ. ಆಪತ್ತಿನಲ್ಲಿ ಬೇರೆ ಜೀವನೋಪಾಯಗಳನ್ನೂ ತಿಳಿಸಿದೆ.

೨೯. ಯಜ್ಞಮಾಡಿಸುವುದೂ, ಅಧ್ಯಯನಮಾಡಿಸುವುದೂ ತಪ್ಪೆಂದು ಅವುಗಳಲ್ಲಿ ದೋಷವನ್ನು ಕಾಣುವ ದ್ವಿಜೋತ್ತಮನು ಯಾವನುಂಟೋ ಅವನಿಗೆ ನಾಲ್ಕುಬಗೆಯಾಗಿರುವ ಮತ್ತೊಂದು ವೃತ್ತಿಯು ವಿಧಿಸಲ್ಪಟ್ಟಿರುವುದು.

**ಶಿಲೋಂಛಂ ನಿತ್ಯಯಾಂಚಾ ಶಾಲೀನಂ ಚೋಚಿತಾ ಕೃಷಿಃ ।**
**ಶ್ರೇಯಸೀ ಪೂರ್ವಪೂರ್ವಾಽತ್ರ ಜ್ಞಾತವ್ಯಾ ದ್ವಿಜಸತ್ತಮೈಃ ॥ ೩೦ ॥**
**ವಿಪ್ರೋ ಜೀವೇದ್ವೈಶ್ಯವೃತ್ತ್ಯಾ ಸತ್ಯಾಮಾಪದಿ ನಾರದ ।**
**ಅಥವಾ ಕ್ಷತ್ರವೃತ್ತ್ಯಾಪಿ ಶ್ವವೃತ್ತ್ಯಾ ನ ತು ಕರ್ಹಿಚಿತ್ ॥ ೩೧ ॥**
**ಶಸ್ತ್ರೇಣ ಜೀವೇತ್ ಕ್ಷತ್ರಂ ತು ಸರ್ವತೋ ಧರ್ಮರಕ್ಷಯಾ ।**
**ಆಪನ್ನೋ ವೈಶ್ಯವೃತ್ತ್ಯೈವ ವಿಪ್ರರೂಪೇಣ ವಾ ಚರೇತ್ ॥ ೩೨ ॥**
**ಕರಾದಾನಾದಿ ನೃಪತೇರವಿಪ್ರಾದ್ವೃತ್ತಿರೀರಿತಾ ।**
**ದೇಶಕಾಲಾನುಸಾರೇಣ ರಂಜಯಿತ್ವಾಽಖಿಲಾಃ ಪ್ರಜಾಃ ॥ ೩೩ ॥**
**ಆಪತ್ಕಾಲೇಪಿ ಕ್ಷತ್ರಸ್ಯ ಬ್ರಾಹ್ಮಣಸ್ಯೇವ ಸರ್ವಥಾ ।**
**ವಿಗರ್ಹಿತಾ ನೀಚಸೇವಾ ಸ್ವತೇಜಃ ಕ್ಷಯಕಾರಿಣೀ ॥ ೩೪ ॥**
**ಕೃಷಿವಾಣಿಜ್ಯಗೋರಕ್ಷಾ ತುರೀಯಾ ವೃದ್ಧಿಜೀವನಂ ।**
**ವೈಶ್ಯಸ್ಯ ಜೀವಿಕಾ ಪ್ರೋಕ್ತಾ ಶೂದ್ರವೃತ್ತಿಸ್ತಥಾಪದಿ ॥ ೩೫ ॥**

---

೩೦. ಶಿಲೋಂಛ, ನಿತ್ಯಯಾಚನೆ, ಶಾಲೀನ, ಉಚಿತವಾದ ಕೃಷಿ—(ಇವೇ ಆ ನಾಲ್ಕು ವಿಧಗಳು). ಇವುಗಳಲ್ಲಿ ಮೊದಮೊದಲಿನದು ಆಮೇಲಿನದಕ್ಕಿಂತಲೂ ಮೇಲಾದುದೆಂದು ತಿಳಿಯಬೇಕು.

೩೧. ನಾರದಾ! ಆಪತ್ತು ಬಂದಾಗ ಬ್ರಾಹ್ಮಣನು ವೈಶ್ಯವೃತ್ತಿಯಿಂದ ಜೀವಿಸಬೇಕು. ಅಥವಾ ಕ್ಷತ್ರಿಯವೃತ್ತಿಯಿಂದಲಾದರೂ ಜೀವಿಸಬೇಕು. ಎಂದೆಂದಿಗೂ ಶ್ವವೃತ್ತಿಯಿಂದ (ನೀಚಸೇವೆಯಿಂದ) ಜೀವಿಸಬಾರದು.

೩೨. ಕ್ಷತ್ರಿಯನು ಎಲ್ಲ ಕಡೆಯಲ್ಲೂ ಧರ್ಮರಕ್ಷಣೆಮಾಡುತ್ತ ಶಸ್ತ್ರದಿಂದ ಜೀವಿಸಬೇಕು. ಆಪತ್ತಿಗೊಳಗಾದಲ್ಲಿ ವೈಶ್ಯವೃತ್ತಿಯಿಂದಲೆ ನಡೆಯಬೇಕು; ಅಪ್ಪಿತಪ್ಪಿ ಬ್ರಾಹ್ಮಣರೂಪದಿಂದಲೂ ನಡೆಯಬಹುದು.

೩೩. ದೇಶಕಾಲಾನುಸಾರವಾಗಿ ಸಮಸ್ತ ಪ್ರಜೆಗಳನ್ನೂ ರಂಜಿಸಿ ಬ್ರಾಹ್ಮಣರಲ್ಲದವರಿಂದ ಕರ (ತೆರಿಗೆ) ತೆಗೆದುಕೊಳ್ಳುವುದೇ ಮೊದಲಾದುದು ರಾಜನಿಗೆ ವೃತ್ತಿಯೆಂದು ಹೇಳಲ್ಪಟ್ಟಿದೆ.

೩೪. ಕ್ಷತ್ರಿಯನಿಗೆ ಆಪತ್ಕಾಲದಲ್ಲಿ ಕೂಡ ಬ್ರಾಹ್ಮಣನಿಗೆ ಹೇಗೊ ಹಾಗೆ ತಮ್ಮ ತೇಜಸ್ಸನ್ನೇ ಕ್ಷಯಗೊಳಿಸುವ ನೀಚಸೇವೆಯು ತ್ಯಾಜ್ಯವೆಂದು ನಿಂದಿಸಲ್ಪಟ್ಟಿದೆ.

೩೫. ಕೃಷಿ, ವಾಣಿಜ್ಯ, ಗೋರಕ್ಷಣೆ, ನಾಲ್ಕನೆಯದಾಗಿ ಬಡ್ಡಿಯಿಂದ ಜೀವಿಸುವುದು— ಇವು ವೈಶ್ಯನಿಗೆ ಜೀವನಮಾರ್ಗವೆಂದು ಹೇಳಲ್ಪಟ್ಟಿದೆ. ಆಪತ್ತಿನಲ್ಲಿ ಅವರಿಗೆ ಶೂದ್ರವೃತ್ತಿಯು ವಿಹಿತವಾಗಿದೆ.

ಶೂದ್ರೋ ಜೀವೇದ್ದ್ವಿಜಾತೀನಾಂ ಸೇವಾಲಬ್ಧಧನೇನ ಚ ।
ಆಪತ್ಕಾಲೇ ತು ಕಾರ್ವಾದೇರ್ಜೀವಿಕಾವೃತ್ತಿಮಾಶ್ರಯೇತ್ ॥ ೩೬ ॥
ಆಪನ್ಮುಕ್ತಸ್ತು ಸರ್ವೋಽಪಿ ಪ್ರಾಯಶ್ಚಿತ್ತಂ ಯಥೋಚಿತಂ ।
ವಿಧಾಯ ಸ್ವಸ್ವವೃತ್ತ್ಯೈವ ಪುನರ್ವರ್ತೇತ ಮುಖ್ಯಯಾ ॥ ೩೭ ॥
ಚಾತುರ್ವರ್ಣ್ಯಂ ಸತಾಂ ಸಂಗಂ ಕುರ್ಯಾನ್ನತ್ವಸತಾಂ ಕ್ವಚಿತ್ ।
ಮುಕ್ತಿಪ್ರದೋಽಸ್ತಿ ಸತ್ಸಂಗಃ ಕುಸಂಗೋ ನಿರಯಪ್ರದಃ ॥ ೩೮ ॥
ಕಾಮಂ ಕ್ರೋಧಂ ರಸಾಸ್ವಾದಂ ಜಿತ್ವಾ ಮಾನಂ ಚ ಮತ್ಸರಂ ।
ನಿರ್ದಂಭಂ ವಿಷ್ಣುಭಕ್ತಾ ಯೇ ತೇ ಸಂತಃ ಸಾಧವೋ ಮತಾಃ ॥ ೩೯ ॥
ಸ್ತ್ರಿಯಾಂ ಸ್ತ್ರೈಣೇ ರಸಾಸ್ವಾದೇ ಸಕ್ತಾಶ್ಚ ಧನಗೃಧ್ನವಃ ।
ಹಿಂಸ್ರಾದಂಭಕೃತಾಟೋಪಭಕ್ತಾಭಾಸಾಹ್ಯಸಾಧವಃ ॥ ೪೦ ॥
ಅಸಾಧುಷ್ವಾಸುರೀಸಂಪದ್ದೈವೀಸಂಪತ್ತು ಸಾಧುಷು ।
ಸಹಜಾಸ್ತೀತಿ ನಿಶ್ಚಿತ್ಯ ಸೇವ್ಯಾ ಸಂತಃ ಸುಖೇಪ್ಸುಭಿಃ ॥ ೪೧ ॥

---

೩೬. ಶೂದ್ರನು ದ್ವಿಜಾತಿಗಳ (ಬ್ರಹ್ಮ, ಕ್ಷತ್ರಿಯ, ವೈಶ್ಯರ) ಸೇವೆಯಿಂದ ದೊರೆತ ಧನದಿಂದ ಜೀವಿಸಬೇಕು. ಆಪತ್ಕಾಲದಲ್ಲಾದರೋ, ಮರಗೆಲಸ ಮೊದಲಾದುವುಗಳಿಂದ ಜೀವನಸಾಧಕವಾದ ವೃತ್ತಿಯನ್ನಾಶ್ರಯಿಸಬೇಕು.

೩೭. ಆಪತ್ತಿನಿಂದ ಬಿಡುಗಡೆ ಹೊಂದಿದಬಳಿಕ ಸರ್ವರೂ ಯಥೋಚಿತ ವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಮತ್ತೆ ತಮ್ಮ ತಮ್ಮ ಮುಖ್ಯ ವೃತ್ತಿಯನ್ನೇ ಅವಲಂಬಿಸಿ ನಡೆಯಬೇಕು.

೩೮–೩೯. ನಾಲ್ಕುವರ್ಣದವರೂ ಸತ್ಪುರುಷರ ಸಂಗವನ್ನು ಮಾಡಬೇಕು. ಅಸತ್ಸಂಗವನ್ನೆಂದಿಗೂ ಮಾಡಬಾರದು. ಸತ್ಸಂಗವು ಮುಕ್ತಿಯನ್ನುಂಟು ಮಾಡುವುದು. ದುಸ್ಸಂಗವು ನರಕವನ್ನುಂಟುಮಾಡುತ್ತದೆ. ಯಾರು ಕಾಮವನ್ನೂ, ಕ್ರೋಧವನ್ನೂ ತೊರೆದು ರಸಾಸ್ವಾದವನ್ನೂ, ಜಿಹ್ವಾಚಾಪಲ್ಯವನ್ನೂ ನಿಯಮಿಸಿ, ಮದಮಾತ್ಸರ್ಯಗಳನ್ನು ಗೆದ್ದು ದಂಭವಿಲ್ಲದೆ ವಿಷ್ಣುಭಕ್ತರಾಗಿರುವರೊ ಅವರೇ ಸತ್ಪುರುಷರು; ಅವರೇ ಸಾಧುಗಳೆಂದು ಹೇಳಲ್ಪಡುವರು.

೪೦. ಸ್ತ್ರೀಯಲ್ಲಿಯೂ, ಸ್ತ್ರೀಸಂಬಂಧವಾದ ವಿಷಯಗಳಲ್ಲಿಯೂ, ಸರಸಾಸ್ವಾದದಲ್ಲಿಯೂ ಆಸಕ್ತರೂ, ಧನವನ್ನು ಪಡೆದಿಟ್ಟುಕೊಳ್ಳಬೇಕೆಂಬ ಆಸೆಯುಳ್ಳವರೂ, ಹಿಂಸಾನಿರತರೂ, ದಂಭದಿಂದ ಆಟೋಪಮಾಡುವವರೂ, ಭಕ್ತಾಭಾಸರೂ (ಭಕ್ತರಂತೆ ನಟಿಸುವವರೂ)—ಅಸಾಧುಗಳು.

೪೧. ಅಸಾಧುಗಳಲ್ಲಿ ಆಸುರೀಸಂಪತ್ತೂ, ಸಾಧುಗಳಲ್ಲಿ ದೈವೀಸಂಪತ್ತೂ ಸಹಜವಾಗಿಯೇ ನೆಲಸಿರುವುದೆಂದು ನಿಶ್ಚಯಿಸಿ ಸುಖಪಡೆಯಬೇಕೆಂದು ಅಪೇಕ್ಷಿಸುವವರು ಸತ್ಪುರುಷರನ್ನೇ ಸೇವಿಸಬೇಕು.

ಯಾದೃಶಾಂ ಯಸ್ಯ ಸಂಗಃಸ್ಯಾಚ್ಛಾಸ್ತ್ರಾಣಾಂ ವಾ ನೃಣಾಮಪಿ ।
ಬುದ್ಧಿಃ ಸ್ಯಾತ್ತಾದೃಶೀ ತಸ್ಯ ಕಾರ್ಯೋऽತೋ ನಾಸತಾಂ ಹಿ ಸಃ ॥ ೪೨ ॥
ಯೇ ಸಾಧುಸೇವಾರುಚಯಃ ಪುರುಷಾ ನಿಜಶಕ್ತಿತಃ ।
ಅಪ್ರಾಪ್ಯಂ ನಾಸ್ತಿ ತೇಷಾಂ ವೈ ಕಿಮುಪ್ಯೈಶ್ವರ್ಯಮೂರ್ಜಿತಂ ॥ ೪೩ ॥
ಸ್ವಧರ್ಮಸ್ಥಾ ಅಪಿ ಸತಾಂ ದ್ರೋಹಿಣೋ ಯೇತು ಮಾನವಾಃ ।
ಸದ್ಗತಿಂ ನೈವ ತೇ ಯಾಂತಿ ಕ್ವಾಪಿ ಕೇನಾಪಿ ಕರ್ಮಣಾ ॥ ೪೪ ॥
ಮಹಾಪೂಜಾರತಾ ವಿಷ್ಣೋರ್ಭಕ್ತಾ ಅಪಿ ಸತಾಂ ಯದಿ ।
ದ್ರೋಹಂ ಕುರ್ಯುಸ್ತದಾ ತೇಷು ನ ಪ್ರಸೀದತಿ ಸ ಕ್ವಚಿತ್ ॥ ೪೫ ॥
ಸದ್ದ್ರೋಹಿಣಸ್ತು ದೇಹಾಂತೇ ಯಾಂ ಯಾಂ ಯೋನಿಂ ವ್ರಜಂತಿ ಚ ।
ತತ್ರ ತತ್ರ ಕ್ಷುಧಾರೋಗೈಃ ಪೀಡ್ಯಂತೇ ಜೀವಿತಾವಧಿ ॥ ೪೬ ॥
ಸತಾಮತಿಕ್ರಮಾದೇವ ಪುಣ್ಯಾನಾಂ ಮಹತಾಮಪಿ ।
ಸದ್ಯಃ ಕ್ಷಯಃ ಸ್ಯಾತ್ ಸರ್ವೇಷಾಮಾಯುಷಃ ಸಂಪದಾಮಪಿ ॥ ೪೭ ॥

---

೪೨. ಯಾರಿಗೆ ಯಾವ ರೀತಿಯ ಶಾಸ್ತ್ರಗಳಲ್ಲಿ ಸಂಗವಾಗುವುದೊ, ಯಾವ ರೀತಿಯ ಮನುಷ್ಯರಲ್ಲಿ ಸಂಗವುಂಟಾಗುವುದೋ ಅವರಿಗೆ ಆ ರೀತಿಯ ಬುದ್ಧಿಯೇ ಉಂಟಾಗುವುದು. ಆದುದರಿಂದ ಅಸಚ್ಛಾಸ್ತ್ರಗಳಲ್ಲೂ, ಅಸತ್ಪುರುಷರಲ್ಲೂ ಸಂಗಮಾಡಬಾರದು.

೪೩. ಯಾರು ತಮಗೆ ಶಕ್ತಿಯಿರುವಮಟ್ಟಿಗೂ ಸಾಧುಗಳ ಸೇವೆಯಲ್ಲಿ ರುಚಿಯುಳ್ಳವರಾಗಿರುವರೋ ಅಂಥ ಪುರುಷರಿಗೆ ದೊರೆಯಲಾರದ ಊರ್ಜಿತವಾದ ಐಶ್ವರ್ಯವೊಂದೂ ಇಲ್ಲ.

೪೪. ಯಾವ ಮನುಷ್ಯರು ಸ್ವಧರ್ಮದಲ್ಲಿಯೆ ಇರುವವರಾದರೂ ಸತ್ಪುರುಷರಿಗೆ ದ್ರೋಹಿಗಳಾಗಿರುವರೋ ಅವರು ಯಾವುದೇ ಕರ್ಮದಿಂದಲಾದರೂ ಎಲ್ಲಿಯೂ ಸದ್ಗತಿಯನ್ನು ಪಡೆಯುವುದೇ ಇಲ್ಲ.

೪೫. ಮಹಾಪೂಜೆಯಲ್ಲಿ ನಿರತರಾದ ವಿಷ್ಣುಭಕ್ತರೇ ಆದರೂ ಸತ್ಪುರುಷರಿಗೆ ದ್ರೋಹಮಾಡಿದರೆ ವಿಷ್ಣುವು ಅವರಲ್ಲಿ ಯಾವಕಾಲಕ್ಕೂ ಪ್ರಸನ್ನನಾಗುವುದಿಲ್ಲ.

೪೬. ಸಜ್ಜನರಿಗೆ ದ್ರೋಹಮಾಡಿದವರು ದೇಹವನ್ನು ತೊರೆದಬಳಿಕ ಯಾವಯಾವ ಜನ್ಮದಲ್ಲಿ ಹುಟ್ಟುವರೊ, ಆಯಾ ಜನ್ಮಗಳಲ್ಲೆಲ್ಲ ಬದುಕಿರುವವರೆಗೂ ಜಠರರೋಗಗಳಿಂದ ಪೀಡಿಸಲ್ಪಡುತ್ತಾರೆ.

೪೭. ಸಜ್ಜನರನ್ನು ಅತಿಕ್ರಮಿಸುವುದರಿಂದಲೇ ಮಹತ್ತಾಗಿರುವ ಪುಣ್ಯಗಳಿಗೂ ಸರ್ವಯಶಸ್ಸಿಗೂ ಸಂಪತ್ತುಗಳಿಗೂ ತಕ್ಷಣವೆ ಕ್ಷಯವುಂಟಾಗುತ್ತದೆ.

ತಸ್ಮಾತ್ಸೇವಾ ಸತಾಂ ಕಾರ್ಯಾ ಸರ್ವೈರಪಿ ಸುಖೇಪ್ಸುಭಿಃ ।
ಪುಣ್ಯತೀರ್ಥಾನಿ ಸೇವ್ಯಾನಿ ಪೂಜ್ಯಾ ವಿಪ್ರಾಶ್ಚ ಧೇನವಃ ॥ ೪೮ ॥
ತೀರ್ಥಾನಿ ದೇವಪ್ರತಿಮಾ ನಿಂದೇಯುರ್ಯೇ ಕುಬುದ್ಧಯಃ ।
ತೇಷಾಂ ತು ಜಾರಜಾತಾನಾಂ ವಂಶೋಚ್ಛೇದೋ ಭವೇದ್ಧ್ರುವಂ ॥ ೪೯ ॥
ಏಕಸ್ಮಿಂಸ್ತರ್ಪಿತೇ ವಿಪ್ರೇ ಸದ್ಭೋಜ್ಯೈರ್ದಕ್ಷಿಣಾದಿಭಿಃ ।
ತರ್ಪಿತಂ ಸ್ಯಾಜ್ಜಗತ್ಸರ್ವಂ ಹರಿಸ್ತುಷ್ಯತಿ ಚ ಸ್ವಯಂ ॥ ೫೦ ॥
ಏಕಸ್ಮಿನ್ ಬ್ರಾಹ್ಮಣೇ ದ್ರುಗ್ಧೇ ದ್ರುಗ್ಧಂ ಸ್ಯಾತ್ಸಕಲಂ ಜಗತ್ ।
ತಸ್ಮಾಚ್ಛಕ್ತ್ಯಾ ಪೂಜನೀಯಾ ಬ್ರಾಹ್ಮಣಾ ವಿಷ್ಣುರೂಪಿಣಃ ॥ ೫೧ ॥
ಗವಾಮಂಗೇಷು ತಿಷ್ಠಂತಿ ಸರ್ವೇ ದೇವಗಣಾ ಅಪಿ ।
ತಥಾ ಸರ್ವಾಣಿ ತೀರ್ಥಾನಿ ತಾಸು ತಿಷ್ಠಂತಿ ಸರ್ವದಾ ॥ ೫೨ ॥
ಗವ್ಯರ್ಚಿತಾಯಾಮೇಕಸ್ಯಾಂ ಸರ್ವೇ ದೇವಾಃ ಸಮರ್ಚಿತಾಃ ।
ಕೃತಾನಿ ಸ್ಯುಶ್ಚ ಸರ್ವಾಣಿ ತೀರ್ಥಾನ್ಯಪಿ ಚ ನಾರದ ॥ ೫೩ ॥
ಏಕಸ್ಯಾ ಅಪಿ ಗೋದ್ರೋಹೇ ಕೃತೇ ಕ್ವಾಪಿ ಪ್ರಮಾದತಃ ।
ದ್ರುಗ್ಧಾಃ ಸ್ಯುರ್ದೇವತಾಃ ಸರ್ವಾಸ್ತೀರ್ಥಾನ್ಯಪಿ ಚ ಕೃತ್ಸ್ನಶಃ ॥ ೫೪ ॥

---

೪೮. ಆದುದರಿಂದ ಸುಖವನ್ನು ಪಡೆಯಬಯಸುವ ಎಲ್ಲರೂ ಸಜ್ಜನರ ಸೇವೆಯನ್ನು ಮಾಡಬೇಕು; ಪುಣ್ಯತೀರ್ಥಗಳನ್ನು ಸೇವಿಸಬೇಕು; ಬ್ರಾಹ್ಮಣರನ್ನೂ, ಗೋವುಗಳನ್ನೂ ಪೂಜಿಸಬೇಕು.

೪೯–೫೦. ತೀರ್ಥಗಳನ್ನೂ, ದೇವಪ್ರತಿಮೆಗಳನ್ನೂ ಯಾವ ದುರ್ಬುದ್ಧಿಗಳು ನಿಂದಿಸುವರೋ ಆ ಜಾರಜಾತರ ವಂಶವು ನಿಶ್ಚಯವಾಗಿಯೂ ಧ್ವಂಸವಾಗಿಹೋಗುತ್ತದೆ. ಒಳ್ಳೆಯ ಭೋಜನವಸ್ತುಗಳಿಂದಲೂ, ದಕ್ಷಿಣೆ ಮೊದಲಾದವುಗಳಿಂದಲೂ ಒಬ್ಬ ವಿಪ್ರನನ್ನು ತೃಪ್ತಿಪಡಿಸಿದರೆ ಸರ್ವಜಗತ್ತಿಗೂ ತೃಪ್ತಿಯನ್ನುಂಟುಮಾಡಿದಂತಾಗುತ್ತದೆ. ಸ್ವಯಂ ಶ್ರೀಹರಿಯೂ ತೃಪ್ತನಾಗುತ್ತಾನೆ.

೫೧. ಒಬ್ಬ ಬ್ರಾಹ್ಮಣನಿಗೆ ದ್ರೋಹಮಾಡಿದರೆ ಸಕಲ ಜಗತ್ತಿಗೂ ದ್ರೋಹಮಾಡಿದಂತಾಗುತ್ತದೆ. ಆದುದರಿಂದ ವಿಷ್ಣುರೂಪಿಗಳಾದ ಬ್ರಾಹ್ಮಣರನ್ನು ಶಕ್ತ್ಯನುಸಾರವಾಗಿ ಪೂಜಿಸಬೇಕು.

೫೨. ಗೋವುಗಳ ಅಂಗಗಳಲ್ಲಿ ಸರ್ವದೇವತಾಗಣಗಳೂ ನೆಲಸಿವೆ. ಹಾಗೆಯೇ, ಸರ್ವತೀರ್ಥಗಳೂ ಆ ಗೋವುಗಳಲ್ಲಿ ಸರ್ವದಾ ನೆಲಸಿರುವುವು.

೫೩. ಒಂದು ಗೋವನ್ನು ಪೂಜೆಮಾಡಿದರೆ ಸರ್ವದೇವತೆಗಳಿಗೂ ಪೂಜೆ ಮಾಡಿದಂತಾಗುತ್ತದೆ; ಎಲೈ ನಾರದನೇ! ಅದರಿಂದಲೇ ಸಮಸ್ತತೀರ್ಥಗಳ ಸೇವೆಯನ್ನು ಮಾಡಿದಂತಾಗುತ್ತದೆ.

೫೪. ಎಲ್ಲಿಯಾದರೂ ಪ್ರಮಾದವಶದಿಂದಲಾದರೂ ಒಂದೇ ಒಂದು

ತಸ್ಮಾಚ್ಚಾತುರ್ವರ್ಣ್ಯಜನ್ಯೈಃ ಯಥೋಕ್ತವಿಧಿಸಂಸ್ಥಿತೈಃ ।
ಭವಿತವ್ಯಂ ಪ್ರಯತ್ನೇನ ಹ್ರೇತವ್ಯಂ ಚ ನಿಷೇಧತಃ ॥ ೫೫ ॥
ಚಾತುರ್ವರ್ಣ್ಯೇತರೇ ಯೇ ತು ತೇಷಾಂ ವೃತ್ತಿಃ ಕುಲೋಚಿತಾ ।
ಚೌರ್ಯಹಿಂಸಾದ್ಯಧರ್ಮೇಣ ರಹಿತೈವ ಹಿತಾವಹಾ ॥ ೫೬ ॥
ವರ್ಣಧರ್ಮಾ ಇತಿ ಪ್ರೋಕ್ತಾಃ ಸಂಕ್ಷೇಪೇಣ ಮಯಾ ಮುನೇ ।
ಚತುರ್ಣಾಮಾಶ್ರಮಾಣಾಂ ಚ ಧರ್ಮಾನಥ ವದಾಮಿ ತೇ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಚಾತುರ್ವರ್ಣ್ಯಧರ್ಮ ನಿರೂಪಣಂ"ನಾಮ ವಿಂಶೋಽಧ್ಯಾಯಃ

---

ಗೋವಿಗೆ ದ್ರೋಹಮಾಡಿದರೂ ಸರ್ವದೇವತೆಗಳಿಗೂ, ಸರ್ವ ತೀರ್ಥಗಳಿಗೂ ದ್ರೋಹಮಾಡಿದಂತಾಗುತ್ತದೆ.

೫೫. ಆದುದರಿಂದ ಚತುರ್ವರ್ಣಗಳಿಗೆ ಸೇರಿದ ಜನರೆಲ್ಲರೂ ತಮತಮಗೆ ಹೇಳಲ್ಪಟ್ಟಿರುವ ವಿಧಿಯಂತೆ ಪ್ರಯತ್ನಪೂರ್ವಕವಾಗಿ ನಡೆದುಕೊಳ್ಳುತ್ತಿರಬೇಕು. ನಿಷೇಧವಾದುವನ್ನು ಮಾಡದೆ ಬಿಡಬೇಕು.

೫೬. ಚಾತುರ್ವರ್ಣ್ಯಕ್ಕೆ ಸೇರದ ಬೇರೆಯವರಿಗೆ ಚೌರ್ಯ, ಹಿಂಸೆ ಮೊದಲಾದ ಅಧರ್ಮಗಳನ್ನುಳಿದು ಹಿತಕರವಾಗಿರುವ ಕುಲೋಚಿತವಾದ ವೃತ್ತಿಯೇ ಜೀವನೋಪಾಯವಾಗಿರುವುದು.

೫೭. ಎಲೈ ಮುನಿಯೇ! ವರ್ಣಧರ್ಮಗಳನ್ನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ನ್ಯಾಸ ಎಂಬ ನಾಲ್ಕು ಆಶ್ರಮಗಳ ಧರ್ಮಗಳನ್ನು ನಿನಗೆ ತಿಳಿಸುತ್ತೇನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಚಾತುರ್ವರ್ಣ್ಯಧರ್ಮನಿರೂಪಣ"ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕವಿಂಶೋಽಧ್ಯಾಯಃ

## ಬ್ರಹ್ಮಚಾರಿಧರ್ಮನಿರೂಪಣಂ

ಶ್ರೀ ನಾರಾಯಣ ಉವಾಚ :—

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।
ಏತ ಆಶ್ರಮಿಣಃ ಪ್ರೋಕ್ತಾಶ್ಚತ್ವಾರೋ ಮುನಿಸತ್ತಮ ॥ ೧ ॥
ಸಂಸ್ಕಾರೈಃ ಸಂಸ್ಕೃತೋ ಯಸ್ತು ಶುದ್ಧಯೋನಿರ್ದ್ವಿಜಾತಿತಾಂ ।
ಪ್ರಾಪ್ತಃ ಸ ಹಿ ಬ್ರಹ್ಮಚಾರೀ ತದ್ಧರ್ಮಾನಾದಿತೋ ಬ್ರುವೇ ॥ ೨ ॥
ವರ್ಣೀ ವೇದಮಧೀಯೀತ ವಸನ್ ಗುರುಗೃಹೇ ಶುಚಿಃ ।
ಜಿತೇಂದ್ರಿಯೋ ಜಿತಕ್ರೋಧೋ ವಿನೀತಸ್ಸತ್ಯಭಾಷಣಃ ॥ ೩ ॥
ಸಾಯಂ ಪ್ರಾತಶ್ಚರೇದ್ಧೋಮಂ ಭಿಕ್ಷಾಚರ್ಯಾಂ ಚ ಸಂಯುತಃ ।
ಕುರ್ಯಾತ್ತ್ರಿಕಾಲಂ ಸಂಧ್ಯಾಂ ಚ ವಿಷ್ಣುಪೂಜಾಂ ತಥಾನ್ವಹಂ ॥ ೪ ॥
ಗುರ್ವಾಜ್ಞಯೈವ ಭುಂಜೀತ ಮಿತಮನ್ನಮನಾಕುಲಃ ।
ಗುರುಸೇವಾಪರೋ ನಿತ್ಯಂ ಭವೇದ್ವ್ಯಸನವರ್ಜಿತಃ ॥ ೫ ॥

---

## ಕನ್ನಡದ ಅನುವಾದ

### ಬ್ರಹ್ಮಚಾರಿ ಧರ್ಮನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ:— "ಎಲೈ ಮುನಿಶ್ರೇಷ್ಠನೇ! ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ — ಈ ನಾಲ್ವರೂ ನಾಲ್ಕು ಆಶ್ರಮಗಳಲ್ಲಿರುವರೆಂದು ಹೇಳಲ್ಪಡುತ್ತಾರೆ.

೨. ಶುದ್ಧಜನ್ಮವುಳ್ಳ ಯಾವನು ಸಂಸ್ಕಾರಗಳಿಂದ ಸಂಸ್ಕೃತನಾಗಿ ದ್ವಿಜಾತಿತ್ವವನ್ನು ಪಡೆದಿರುವನೋ ಅವನು ಬ್ರಹ್ಮಚಾರಿ. ಅವನ ಧರ್ಮಗಳನ್ನು ಮೊದಲಿನಿಂದ ಹೇಳುತ್ತೇನೆ.

೩. ಬ್ರಹ್ಮಚಾರಿಯು ಗುರುವಿನ ಮನೆಯಲ್ಲಿ ವಾಸಮಾಡುತ್ತ ಶುಚಿಯಾಗಿ ಜಿತೇಂದ್ರಿಯನೂ, ಕ್ರೋಧವನ್ನು ಗೆದ್ದವನೂ, ವಿನೀತನೂ, ಸತ್ಯವನ್ನೇ ನುಡಿಯುವವನೂ ಆಗಿದ್ದು ವೇದವನ್ನು ಅಧ್ಯಯನಮಾಡಬೇಕು.

೪. ಸಾಯಂಕಾಲ ಪ್ರಾತಃಕಾಲಗಳಲ್ಲಿ ಹೋಮವನ್ನೂ, ಭಿಕ್ಷಾಟನೆಯನ್ನೂ ಮಾಡಬೇಕು. ಮೂರುಹೊತ್ತು ಮನಸ್ಸನ್ನು ಸ್ಥಿರಗೊಳಿಸಿಕೊಂಡು ಸಂಧ್ಯೋಪಾಸನೆ ಮಾಡಬೇಕು. ದಿನವೂ ವಿಷ್ಣುಪೂಜೆಯನ್ನು ಮಾಡಬೇಕು.

೫. ಗುರುವಿನ ಅಪ್ಪಣೆಯನ್ನು ಪಡೆದೇ ಅನ್ನವನ್ನು ಮಿತವಾಗಿಯೂ, ಇನ್ನೂ ಬೇಕೆಂಬ ಆಸೆಯನ್ನು ತೊರೆದು ಕಳವಳವಿಲ್ಲದವನಾಗಿಯೂ ಊಟ

ಸ್ನಾನೇ ಚ ಭೋಜನೇ ಹೋಮೇ ಜಪೇ ಮೌನಮುಪಾಶ್ರಯೇತ್ ।
ಛಿಂದ್ಯಾನ್ನ ನಖರೋಮಾಣಿ ದಂತಾನ್ನೈವಾತಿಧಾವಯೇತ್ ॥ ೬ ॥
ನಾತಿಧಾವೇಚ್ಚ ವಾಸಾಂಸಿ ಭವೇನ್ನಿಷ್ಕಪಟೋ ಗುರೌ ।
ಆಹೂತೋಽಧ್ಯಯನಂ ಕುರ್ಯಾದಾದಾವಂತೇ ಚ ತಂ ನಮೇತ್ ॥ ೭ ॥
ಅಸ್ಪೃಶ್ಯಾನ್ನಸ್ಪೃಶೇಚ್ಚಾಸೌ ನಾಽಸಂಭಾಷ್ಯಾಂಶ್ಚ ಭಾಷಯೇತ್ ।
ಅಭಕ್ಷ್ಯಂ ಭಕ್ಷಯೇನ್ನೈವ ನಾಽಪೇಯಂ ಚ ಪಿಬೇತ್ ಕ್ವಚಿತ್ ॥ ೮ ॥
ಮೇಖಲಾಮಜಿನಂ ದಂಡಂ ಬಿಭೃಯಾಚ್ಚ ಕಮಂಡಲುಂ ।
ಸಿತೇ ದ್ವೇ ವಾಸಸೀ ಬ್ರಹ್ಮಸೂತ್ರಂ ಚ ಜಪಮಾಲಿಕಾಂ ॥ ೯ ॥
ದರ್ಭಪಾಣಿಶ್ಚ ಜಟಿಲಃ ಕೇಶಸಂಸ್ಕಾರವರ್ಜಿತಃ ।
ಅಂಗರಾಗಂ ಪುಷ್ಪಹಾರಾನ್ ಭೂಷಣಾನಿ ಚ ವರ್ಜಯೇತ್ ॥ ೧೦ ॥
ತೈಲಾಭ್ಯಂಗಂ ನ ಕುರ್ವೀತ ಕಜ್ಜಲೇ ನಾಂಜನಂ ತಥಾ ।
ವರ್ಜಯೇಚ್ಚ ಪ್ರಯತ್ನೇನ ಸಂಸರ್ಗಂ ಮಧ್ಯಮಾಂಸಯೋಃ ॥ ೧೧ ॥

---

ಮಾಡಬೇಕು. ನಿತ್ಯವೂ ಗುರುಸೇವೆಯಲ್ಲಿಯೇ ನಿರತನಾಗಿರಬೇಕು. ವ್ಯಸನಗಳನ್ನು ತೊರೆದಿರಬೇಕು.

೬. ಸ್ನಾನ, ಭೋಜನ, ಹೋಮ, ಜಪಗಳನ್ನು ಮಾಡುವಾಗ ಮೌನವನ್ನು ಅವಲಂಬಿಸಬೇಕು. ಉಗುರು ಮತ್ತು ಕೂದಲುಗಳನ್ನು ಕತ್ತರಿಸಬಾರದು, ಹಲ್ಲುಗಳನ್ನು ಅತಿಯಾಗಿ ಉಜ್ಜಬಾರದು.

೭. ಬಟ್ಟೆಗಳನ್ನು ಅತಿಯಾಗಿ ಒಗೆಯಬಾರದು. ಗುರುವಿನಲ್ಲಿ ಕಪಟವಿಲ್ಲದವನಾಗಿರಬೇಕು. ಗುರುವು ಕರೆದಾಗ ಬಂದು ಅಧ್ಯಯನಮಾಡಬೇಕು. ಅಧ್ಯಯನಕ್ಕೆ ಮೊದಲೂ ಕಡೆಯಲ್ಲಿಯೂ ಗುರುವಿಗೆ ನಮಸ್ಕಾರಮಾಡಬೇಕು.

೮. ಅಸ್ಪೃಶ್ಯರನ್ನು ಸ್ಪರ್ಶಿಸಬಾರದು. ಸಂಭಾಷಣೆ ಮಾಡಬಾರದವರೊಡನೆ ಸಂಭಾಷಣೆ ಮಾಡಬಾರದು. ಅಭಕ್ಷ್ಯವನ್ನು (ತಿನ್ನಬಾರದ್ದನ್ನು) ತಿನ್ನಲೇಬಾರದು. ಅಪೇಯವನ್ನು (ಕುಡಿಯಬಾರದ್ದು) ಯಾವೊತ್ತೂ ಕುಡಿಯಬಾರದು.

೯. ಮೇಖಲೆ (ಮೌಂಜಿ, ಉಡಿದಾರ), ಕೃಷ್ಣಾಜಿನ, ದಂಡ, ಕಮಂಡಲು, ಬಿಳಿಯ ಎರಡು ಬಟ್ಟೆಗಳು, ಬ್ರಹ್ಮಸೂತ್ರ (ಯಜ್ಞೋಪವೀತ), ಜಪಮಾಲಿಕೆ ಇವನ್ನು ಧರಿಸಿಕೊಂಡಿರಬೇಕು.

೧೦. ಕೈಯಲ್ಲಿ ದರ್ಭೆಯನ್ನು ಹಿಡಿದಿರಬೇಕು. ಕೇಶಸಂಸ್ಕಾರವನ್ನು (ತಲೆಬಾಚುವುದನ್ನು) ತೊರೆದು ಜಟೆಯನ್ನು ಬಿಟ್ಟಿರಬೇಕು. ಅಂಗರಾಗ (ಗಂಧಾದಿಗಳು), ಪುಷ್ಪಹಾರ, ಭೂಷಣಗಳು ಇವನ್ನು ವರ್ಜಿಸಬೇಕು.

೧೧. ಎಣ್ಣೆ ಒತ್ತಿಕೊಂಡು ಅಭ್ಯಂಗಮಾಡಿಕೊಳ್ಳಬಾರದು. ಕಣ್ಣಿಗೆ

ಸ್ತ್ರೀಣಾಂ ನಿರೀಕ್ಷಣಂ ಸ್ಪರ್ಶಂ ಭಾಷಣಂ ಕ್ರೀಡನಾದಿ ಚ ।
ವರ್ಜಯೇತ್ಸರ್ವಥಾ ವರ್ಣೀ ಸ್ತ್ರೀಯಾಶ್ಚಾಪ್ಯವಲೋಕನಂ ॥ ೧೨ ॥
ವಿನಾಚ ದೇವಪ್ರತಿಮಾಂ ಕಾಷ್ಠಚಿತ್ರಾದಿಯೋಷಿತಂ ।
ಅಪಿ ನೈವ ಸ್ಪೃಶೇದ್ಧೀಮಾನ್ನ ಚ ಬುದ್ಧ್ಯಾವಲೋಕಯೇತ್ ॥ ೧೩ ॥
ಪ್ರಾಣಿಮಾತ್ರಂ ಚ ಮಿಥುನೀಭೂತಂ ನೇಕ್ಷೇತ ಕರ್ಹಿಚಿತ್ ।
ಸ್ತ್ರೀಣಾಂ ಗುಣಾಂಶ್ಚಾಪ್ಯಗುಣಾಂಚ್ಛೃಣುಯಾನ್ನೈವ ನೋ ವದೇತ್॥೧೪॥
ಅಸ್ಪೃಶನ್ನೇವ ವಂದೇತ ಗುರುಪತ್ನೀಮಪಿ ಸ್ವಕಾಂ ।
ಜನನ್ಯಾಪಿ ನ ತಿಷ್ಠೇತ ರಹಃಸ್ಥಾನೇ ತು ಕರ್ಹಿಚಿತ್ ॥ ೧೫ ॥
ಏವಂ ವೃತ್ತೋ ವಸೇತ್ತತ್ರ ಯಾವದ್ವಿದ್ಯಾಸಮಾಪನಂ ।
ತತೋ ವಿರಕ್ತೋ ನ್ಯಾಸೀ ಸ್ಯಾದ್ವರ್ಣೀ ವಾ ನೈಷ್ಠಿಕೋ ಭವೇತ್ ।
ಅನಧಿಕಾರಿತಾ ಪ್ರೋಕ್ತಾ ನೈಷ್ಠಿಕವ್ರತಿನಾಂ ಕಲೌ ॥ ೧೬ ॥

---

ಕಾಡಿಗೆಯನ್ನು ಹಚ್ಚಿಕೊಳ್ಳಲಾಗದು. ಮದ್ಯಮಾಂಸಗಳ ಸಂಸರ್ಗವನ್ನು ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು.

೧೨. ಬ್ರಹ್ಮಚಾರಿಯಾದವನು ಸ್ತ್ರೀಯರ ನಿರೀಕ್ಷಣ (ಹೆಂಗಸರನ್ನು ನೋಡುವುದು), ಸ್ಪರ್ಶನ (ಅವರನ್ನು ಮುಟ್ಟುವುದು), ಅವರೊಡನೆ ಸಂಭಾಷಣ ಮತ್ತು ಆಟವಾಡುವುದು—ಇವನ್ನು ಸರ್ವಪ್ರಯತ್ನದಿಂದಲೂ ವರ್ಜಿಸಬೇಕು. ಹೆಂಗಸರ ನೋಟಕ್ಕೆ ಗುರಿಯಾಗುವುದನ್ನೂ ವರ್ಜಿಸಬೇಕು.

೧೩. ದೇವರ ಪ್ರತಿಮೆ ಹೊರತಾಗಿ ಮರ ಚಿತ್ರ ಮೊದಲಾದ ರೂಪದ ಹೆಂಗಸರನ್ನೂ ಬುದ್ಧಿವಂತನಾದ ಬ್ರಹ್ಮಚಾರಿಯು ಮುಟ್ಟಬಾರದು. ಬುದ್ಧಿಪೂರ್ವಕವಾಗಿ ನೋಡಲೂಬಾರದು.

೧೪. ಹೆಣ್ಣುಗಂಡುಗಳು ಒಂದುಗೂಡಿದ ಪ್ರಾಣಿಮಾತ್ರವನ್ನು ಎಂದಿಗೂ ನೋಡಬಾರದು. ಸ್ತ್ರೀಯರ ಗುಣಗಳನ್ನಾಗಲಿ ಅವಗುಣಗಳನ್ನಾಗಲಿ ಕೇಳಲೂ ಬಾರದು, ಹೇಳಲೂಬಾರದು.

೧೫. ತನ್ನ ಗುರುಪತ್ನಿಯನ್ನಾದರೂ ಕೈಯಲ್ಲಿ ಮುಟ್ಟದೆಯೇ ವಂದಿಸಬೇಕು. ಯಾವಾಗಲೇ ಆದರೂ ತಾಯಿಯೊಡನೆ ಕೂಡ ಏಕಾಂತವಾದ ಸ್ಥಾನದಲ್ಲಿ ಇರಬಾರದು.

೧೬. ಈ ರೀತಿಯಾದ ನಡವಳಿಕೆಯುಳ್ಳವನಾಗಿ ವಿದ್ಯಾಭ್ಯಾಸವು ಮುಗಿಯುವವರೆಗೂ ಗುರುಕುಲದಲ್ಲಿ ವಾಸಮಾಡಬೇಕು. ಬಳಿಕ ವಿರಕ್ತನಾಗಿ ಸಂನ್ಯಾಸಿಯಾಗಬೇಕು ಅಥವಾ ನೈಷ್ಠಿಕನಾಗಬೇಕು. ಕಲಿಯುಗದಲ್ಲಿ ನೈಷ್ಠಿಕವ್ರತಿಗಳಿಗೆ ಅನಧಿಕಾರಿತ್ವವನ್ನು (ಎಂದರೆ ನೈಷ್ಠಿಕವ್ರತವನ್ನವಲಂಬಿಸಲು ಅಧಿಕಾರವಿಲ್ಲವೆಂದು) ಹೇಳಿದೆ.

ನ ಸಂಧಾವಿತಿ ವಿಜ್ಞೇಯಂ ಕಲೀತಿ ಶಬ್ದಸಂಗ್ರಹಾತ್ ।
ವನೀ ಸ್ಯಾದಥ ವಾ ಬ್ರಹ್ಮನ್ನವಿರಕ್ತೋ ಭವೇದ್ಗೃಹೀ ॥ ೧೭ ॥
ಪ್ರಾಜಾಪತ್ಯಂ ಚ ಸಾವಿತ್ರಂ ಬ್ರಾಹ್ಮಂ ನೈಷ್ಠಿಕಮೇವ ಚ ।
ಚತುರ್ವಿಧಂ ಬ್ರಹ್ಮಚರ್ಯಂ ತತ್ರೈಕಂ ಶಕ್ತಿತಃ ಶ್ರಯೇತ್ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಬ್ರಹ್ಮಚಾರಿ ಧರ್ಮ ನಿರೂಪಣಂ" ನಾಮೈಕವಿಂಶೋಽಧ್ಯಾಯಃ

---

೧೭. ಕಲಿಯೆಂಬ ಶಬ್ದವನ್ನು ಪ್ರಯೋಗಿಸಿರುವುದರಿಂದ ಕಲಿಯುಗದ ಸಂಧಿಯಲ್ಲಿಲ್ಲ ಎಂದು ತಿಳಿಯಬೇಕು. ಅಯ್ಯಾ ಬ್ರಾಹ್ಮಣನೇ! ಹಾಗಲ್ಲದಿದ್ದರೆ ವನೀ ಎಂದರೆ ವಾನಪ್ರಸ್ಥನಾಗಬೇಕು. ವಿರಕ್ತನಲ್ಲವಾದರೆ ಗೃಹಸ್ಥನಾಗಬೇಕು.

೧೮. ಪ್ರಾಜಾಪತ್ಯ, ಸಾವಿತ್ರ, ಬ್ರಾಹ್ಮ, ನೈಷ್ಠಿಕ ಎಂಬುದಾಗಿ ಬ್ರಹ್ಮಚರ್ಯವು ನಾಲ್ಕುಬಗೆಯಾಗಿರುವುದು. ತನ್ನ ಶಕ್ತಿಗೆ ತಕ್ಕಂತೆ ಅವುಗಳಲ್ಲಿ ಯಾವುದಾದರೂ ಒಂದನ್ನು ಆಶ್ರಯಿಸಿ ನಡೆಸಬೇಕು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಬ್ರಹ್ಮಚಾರಿ ಧರ್ಮನಿರೂಪಣ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ಗೃಹಸ್ಥಧರ್ಮನಿರೂಪಣಂ

ಶ್ರೀ ನಾರಾಯಣ ಉವಾಚ :—

ಗೃಹೀ ಬುಭೂಷುರ್ಗುರವೇ ದಕ್ಷಿಣಾಂ ಸ್ವಸ್ಯ ಶಕ್ತಿತಃ ।
ದತ್ವಾ ತದಾಜ್ಞಯೈವಾಽಸೌ ಸಮಾವರ್ತನಮಾಚರೇತ್ ॥ ೧ ॥
ತತಃ ಕುಲೋಚಿತಾಂ ಯೋಷಾಂ ವಯಸೋನಾಮರೋಗಿಣೀಂ ।
ಪುಂಲ್ಲಕ್ಷಣೇನ ರಹಿತಾಮಪಾಪಾಂ ವಿಧಿನೋದ್ವಹೇತ್ ॥ ೨ ॥
ಸ್ವಾಧಿಕಾರಾನುಸಾರೇಣ ಕೃಷ್ಣಸಂಪ್ರೀತಯೇಽನ್ವಹಂ ।
ದೇವರ್ಷಿಪಿತೃಭೂತಾನಿ ಯಜೇತ ವಿಧಿನಾ ತತಃ ॥ ೩ ॥
ಸ್ನಾನಂ ಸಂಧ್ಯಾಂ ಜಪಂ ಹೋಮಂ ಸ್ವಾಧ್ಯಾಯಂ ವಿಷ್ಣುಪೂಜನಂ ।
ತರ್ಪಣಂ ವೈಶ್ವದೇವಂ ಚ ಕುರ್ಯಾಚ್ಚಾತಿಥ್ಯಮನ್ವಹಂ ॥ ೪ ॥
ಕುರ್ಯಾತ್ಪುಣ್ಯಂ ಯಥಾಶಕ್ತಿ ನ್ಯಾಯಾರ್ಜಿತಧನೇನ ಚ ।
ಅನಾಸಕ್ತಃ ಪೋಷ್ಯವರ್ಗಂ ಪುಷ್ಣೀಯಾನ್ನ ತು ಪೀಡಯೇತ್ ॥ ೫ ॥

---

## ಕನ್ನಡದ ಅನುವಾದ

### ಗೃಹಸ್ಥಧರ್ಮನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ:— "ಗೃಹಸ್ಥನಾಗಬೇಕೆಂದಿರುವವನು ಗುರುವಿಗೆ ಯಥಾಶಕ್ತಿಯಾಗಿ ದಕ್ಷಿಣೆಯನ್ನು ಕೊಟ್ಟು ಅವನ ಅಪ್ಪಣೆ ಪಡೆದುಕೊಂಡೇ ಸಮಾವರ್ತನವನ್ನು ಆಚರಿಸಬೇಕು.

೨. ಬಳಿಕ ತನ್ನ ಕುಲಕ್ಕೆ ಯೋಗ್ಯಳಾಗಿಯೂ, ತನಗಿಂತ ಕಡಮೆಯ ವಯಸ್ಸಿನವಳಾಗಿಯೂ, ರೋಗವಿಲ್ಲದವಳಾಗಿಯೂ, ಗಂಡುಲಕ್ಷಣವಿಲ್ಲದವಳಾಗಿಯೂ, ಪಾಪರಹಿತಳಾಗಿಯೂ ಇರುವ ಹೆಂಗಸನ್ನು ವಿಧಿಪೂರ್ವಕವಾಗಿ ವಿವಾಹಮಾಡಿಕೊಳ್ಳಬೇಕು.

೩. ಆಮೇಲೆ ತನ್ನ ಅಧಿಕಾರಕ್ಕೆ ಅನುಸಾರವಾಗಿ ಶ್ರೀಕೃಷ್ಣನ ಪ್ರೀತಿಗೋಸ್ಕರ ದಿನದಿನವೂ ದೇವತೆಗಳು, ಋಷಿಗಳು, ಪಿತೃಗಳು, ಪ್ರಾಣಿಗಳು ಇವರನ್ನು ವಿಧಿಯನ್ನನುಸರಿಸಿ ಪೂಜಿಸುತ್ತಿರಬೇಕು.

೪. ಸ್ನಾನ, ಸಂಧ್ಯಾ, ಜಪ, ಹೋಮ, ಅಧ್ಯಯನ, ವಿಷ್ಣುಪೂಜೆ, ತರ್ಪಣ, ವೈಶ್ವದೇವ, ಅತಿಥಿಸತ್ಕಾರ ಇವನ್ನು ದಿನದಿನವೂ ಮಾಡುತ್ತಿರಬೇಕು.

೫. ನ್ಯಾಯವಾಗಿ ಸಂಪಾದಿಸಿದ ಧನದಿಂದ ಯಥಾಶಕ್ತಿಯಾಗಿ ಪುಣ್ಯ

**ದೇಹಂ ಚ ದೈಹಿಕಾನ್ವಾಸಾವುದ್ದಿಶ್ಯ ಪಶುವತ್ಪರೈಃ ।**
**ವೈರಂ ನ ಕುರ್ಯಾದ್ದೇಹಾದಾವಹಂತಾಂ ಮಮತಾಂ ತ್ಯಜೇತ್ ॥ ೬ ॥**
**ಕುರ್ಯಾದ್ಭಾಗವತಾನಾಂ ಚ ಸತಾಂ ಸಂಗಮತಂದ್ರಿತಃ ।**
**ನ ಸ್ತ್ರೈಣಾನಾಂ ವ್ಯಸನಿನಾಂ ಸಂಗಂ ಕುರ್ಯಾನ್ನ ಲೋಭಿನಾಂ ॥ ೭ ॥**
**ಕಾಮಭಾವೇನ ನೇಕ್ಷೇತ ಪರಯೋಷಾಂ ತು ಕರ್ಹಿಚಿತ್ ।**
**ಶ್ರಾದ್ಧಪರ್ವವ್ರತಾಹಾದೌ ನೋಪೇಯಾಚ್ಚ ಸ್ವಯೋಷಿತಂ ॥ ೮ ॥**
**ಪ್ರಾಪ್ತೋಽಪಿ ಪುರುಷಃ ಸಾಂಖ್ಯೇ ಯೋಗೇ ಚ ಪರಿಪಕ್ವತಾಂ ।**
**ಪುತ್ರ್ಯಾ ಅಪಿ ಪ್ರಸಂಗೇನ ರಹಃ ಸ್ಥಾನೇ ತು ಮುಹ್ಯತಿ ॥ ೯ ॥**
**ಅತೋ ಮಾತ್ರಾ ಭಗಿನ್ಯಾ ವಾ ದುಹಿತ್ರಾಪಿ ರಹಃಸ್ಥಲೇ ।**
**ಸಹ ನಾಸೀತ ಮತಿಮಾನ್ ಯುವತ್ಯಾ ಕಿಮುತಾಽನ್ಯಯಾ ॥ ೧೦ ॥**
**ಅಮಂಗಲಾನಾಂ ಸರ್ವೇಷಾಂ ವಿಧವಾ ಹ್ಯತ್ಯಮಂಗಲಂ ।**
**ತದ್ದರ್ಶನಂ ಚ ತತ್ಸ್ಪರ್ಶೋ ನೄಣಾಂ ಸುಕೃತಹೃತ್ತತಃ ॥ ೧೧ ॥**

---

ವನ್ನಾಚರಿಸಬೇಕು. ಅನಾಸಕ್ತನಾಗಿ ಪೋಷ್ಯವರ್ಗವನ್ನು ಪೋಷಿಸಬೇಕು, ಅವರನ್ನು ಪೀಡಿಸಬಾರದು.

೬. ದೇಹವನ್ನಾಗಲಿ, ದೈಹಿಕವಾದ ವಿಷಯಗಳನ್ನಾಗಲಿ ಉದ್ದೇಶಿಸಿ ಅವುಗಳಿಗಾಗಿ ಪಶುವಿನಂತೆ ಇತರರೊಡನೆ ವೈರವನ್ನು ಮಾಡಬಾರದು. ದೇಹಾದಿಗಳಲ್ಲಿ ಅಹಂಕಾರವನ್ನೂ ಮಮತೆಯನ್ನೂ ತ್ಯಜಿಸಬೇಕು.

೭. ಆಲಸ್ಯವಿಲ್ಲದವನಾಗಿ, ಭಾಗವತರ ಮತ್ತು ಸಜ್ಜನರ ಸಂಗವನ್ನು ಮಾಡಬೇಕು. ಸ್ತ್ರೈಣರು (ಸ್ತ್ರೀಲಂಪಟರು), ವ್ಯಸನಿಗಳು (ದುರ್ವಿಷಯಗಳಲ್ಲಿ ಅತ್ಯಾಸಕ್ತರು), ಲೋಭಿಗಳು ಇವರ ಸಂಗವನ್ನು ಮಾಡಲೇಬಾರದು.

೮. ಪರಸ್ತ್ರೀಯನ್ನು ಕಾಮಭಾವದಿಂದ ಎಂದಿಗೂ ನೋಡಬಾರದು. ಶ್ರಾದ್ಧದ ದಿನ, ಅಮಾವಾಸ್ಯಾದಿ ಪರ್ವದ ದಿನ, ವ್ರತದ ದಿನ ಮೊದಲಾದ ಕಾಲದಲ್ಲಿ ಸ್ವಪತ್ನೀಸಂಗವನ್ನು ಮಾಡಬಾರದು.

೯. ಪುರುಷನು ಸಾಂಖ್ಯದಲ್ಲಿಯೂ, ಯೋಗದಲ್ಲಿಯೂ ಪರಿಪಕ್ವತೆಯನ್ನು ಪಡೆದಿದ್ದರೂ ಪುತ್ರಿಯೊಡನೆಯೇ ಆದರೂ ರಹಸ್ಯಸ್ಥಾನದಲ್ಲಿರುವಾಗ ಪ್ರಸಂಗ ವಶದಲ್ಲಿ ಮೋಹಗೊಳ್ಳುವನು.

೧೦. ಆದುದರಿಂದ ಬುದ್ಧಿವಂತನಾದವನು ತಾಯಿ, ಸಹೋದರಿ, ಮಗಳು ಇವರ ಸಂಗಡವಾದರೂ ಏಕಾಂತಸ್ಥಳದಲ್ಲಿ ಕೂರಬಾರದು. ಹೀಗಿರುವಲ್ಲಿ ಬೇರೆ ಯುವತಿಯೊಡನೆ ಹೇಳಬೇಕಾದುದೇನು ?

೧೧. ಸರ್ವಾಮಂಗಳಗಳಲ್ಲಿಯೂ ವಿಧವೆಯು ಅತ್ಯಮಂಗಳೆಯು. ಆದುದರಿಂದ ಅವಳ ದರ್ಶನವೂ, ಸ್ಪರ್ಶವೂ ನರರಿಗೆ ಸುಕೃತನಾಶಕವಾಗಿರುವುದು.

ಪ್ರಯಾಣಕಾಲೇ ವಿಧವಾದರ್ಶನಂ ಸಮ್ಮುಖೇ ಯದಿ ।
ಸ್ಯಾತ್ತದಾ ನೈವ ಗಂತವ್ಯಮನ್ಯಥಾ ಮರಣಂ ಧ್ರುವಂ ॥ ೧೨ ॥
ಆಶಿಷೋ ವಿಧವಾ ಸ್ತ್ರೀಣಾಂ ಸಮಾಃ ಕಾಲಾಹಿಫೂತ್ಕೃತೈಃ ।
ತತಶ್ಚ ಬಿಭಿಯಾತ್ತಾಭ್ಯೋ ರಾಕ್ಷಸೀಭ್ಯೋ ಯಥಾ ಗೃಹೀ ॥ ೧೩ ॥
ಮದ್ಯಂ ಮಾಸಂ ಮಾದಕಂ ಚ ದ್ಯೂತಾದೀನ್ ದೂರತಸ್ತ್ಯಜೇತ್ ।
ನ ದ್ರೋಹಂ ಪ್ರಾಣಿಮಾತ್ರಸ್ಯ ಕುರ್ಯಾದ್ವಾಚಾಪಿ ಕರ್ಹಿಚಿತ್ ॥ ೧೪ ॥
ಅವತಾರಚರಿತ್ರಾಣಿ ಶೃಣುಯಾದನ್ವಹಂ ಹರೇಃ ।
ಸರ್ವಾ ಅಪಿ ಕ್ರಿಯಾಃ ಕುರ್ಯಾದ್ವಾಸುದೇವಾರ್ಥಮಾಸ್ತಿಕಃ ॥ ೧೫ ॥
ಊರ್ಜೇ ಮಾಘೇ ಚ ವೈಶಾಖೇ ಚಾತುರ್ಮಾಸ್ಯೇ ಮಲಿಮ್ಲುಚೇ ।
ಅನ್ಯೇಷು ಪುಣ್ಯಕಾಲೇಷು ವಿಶೇಷನಿಯಮಾಂಶ್ಚರೇತ್ ॥ ೧೬ ॥
ಪುಣ್ಯದೇಶೇ ಪುಣ್ಯಕಾಲೇ ಸತ್ಪಾತ್ರೇ ವಿಧಿನಾ ಗೃಹೀ ।
ದದ್ಯಾದ್ದಾನಂ ಯಥಾಶಕ್ತಿ ದಯಾಂ ಕುರ್ವೀತ ಜಂತುಷು ॥ ೧೭ ॥

---

೧೨. ಪ್ರಯಾಣಕಾಲದಲ್ಲಿ ಕಟ್ಟಿದುರಿಗೆ ವಿಧವೆಯ ದರ್ಶನವಾದಪಕ್ಷದಲ್ಲಿ ಆ ಪ್ರಯಾಣವನ್ನೇ ನಿಲ್ಲಿಸಿಬಿಡಬೇಕು. ಇಲ್ಲದಿದ್ದರೆ ಮರಣವು ಸಿದ್ಧವಾಗಿರುವುದು.

೧೩. ವಿಧವಾಸ್ತ್ರೀಯರ ಆಶೀರ್ವಾದವು ಕೃಷ್ಣಸರ್ಪದ ಫೂತ್ಕಾರಗಳಿಗೆ ಸಮಾನವಾಗಿರುವುದು. ಆದುದರಿಂದ ಗೃಹಸ್ಥನು ರಾಕ್ಷಸಿಯರಿಗೆ ಹೇಗೋ ಹಾಗೆ ಅವರಿಗೆ ಹೆದರಬೇಕು.

೧೪. ಮದ್ಯಮಾಂಸಗಳನ್ನೂ, ಮಾದಕವಸ್ತುಗಳನ್ನೂ, ದ್ಯೂತವೊದಲಾದುವನ್ನೂ ದೂರದಲ್ಲಿಯೇ ಬಿಟ್ಟುಬಿಡಬೇಕು. ಯಾವ ಪ್ರಾಣಿಗೇ ಆದರೂ ಯಾವ ಸಂದರ್ಭದಲ್ಲಿಯೇ ಆಗಲಿ ಮಾತಿನಲ್ಲಿಯೂ ದ್ರೋಹಮಾಡಬಾರದು.

೧೫. ದಿನದಿನವೂ ಶ್ರೀಹರಿಯ ಅವತಾರ ಚರಿತ್ರೆಗಳನ್ನು ಕೇಳುತ್ತಿರಬೇಕು. ಆಸ್ತಿಕನಾಗಿ ಶ್ರೀವಾಸುದೇವನ ತೃಪ್ತಿಗೋಸುಗವಾಗಿ ಸರ್ವಕರ್ಮಗಳನ್ನೂ ಮಾಡುತ್ತಿರಬೇಕು.

೧೬. ಕಾರ್ತಿಕ, ಮಾಘ, ವೈಶಾಖ ಈ ಮಾಸಗಳಲ್ಲೂ, ದೋಷಪರಿಹಾರಕವಾದ ಚಾತುರ್ಮಾಸ್ಯದಲ್ಲೂ, ಇತರ ಪುಣ್ಯಕಾಲಗಳಲ್ಲೂ ವಿಶೇಷನಿಯಮಗಳನ್ನು ನಡೆಸಬೇಕು.

೧೭. ಪುಣ್ಯದೇಶದಲ್ಲಿ, ಪುಣ್ಯಕಾಲದಲ್ಲಿ ತನಗೆ ಶಕ್ತಿಯಿರುವಮಟ್ಟಿಗೂ ಸತ್ಪಾತ್ರದಲ್ಲಿ ವಿಧಿಪೂರ್ವಕವಾಗಿ ದಾನಮಾಡಬೇಕು. ಸಮಸ್ತಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸಬೇಕು.

ಪುಣ್ಯಾನ್ ದೇಶಾನ್ ಪುಣ್ಯಕಾಲಾನ್ ಪುಣ್ಯಪಾತ್ರಾಣಿ ಚಾನಘ ।
ಕಥಯಾಮಿ ವಿಶೇಷೇಣ ಧರ್ಮವೃದ್ಧಿಕರಾಣಿ ತೇ ॥ ೧೮ ॥
ದೇಶಃ ಸರ್ವೋತ್ತಮಸ್ತ್ವೇಷ ಭುವಿ ಯೋ ಮದಧಿಷ್ಠಿತಃ ।
ಮಹಾಮುನಿಗಣಾ ಯತ್ರ ತಪಸ್ಯಂತಿ ಮಹಾವ್ರತಾಃ ॥ ೧೯ ॥
ಹರಿತದ್ಭಕ್ತಮಾಹಾತ್ಮ್ಯಾದ್ದೇಶಾನಾಮಸ್ತಿ ಪುಣ್ಯತಾ ।
ಗಂಗಾದ್ವಾರಂ ಮಧುಪುರೀ ನೈಮಿಷಾರಣ್ಯಮೇವ ಚ ॥ ೨೦ ॥
ಕುರುಕ್ಷೇತ್ರಮಯೋಧ್ಯಾ ಚ ಪ್ರಯಾಗಶ್ಚ ಗಯಾಶಿರಃ ।
ಪುರೀ ವಾರಾಣಸೀ ಚೈವ ಪುಣ್ಯಶ್ಚ ಪುಲಹಾಶ್ರಮಃ ॥ ೨೧ ॥
ಕಪಿಲಾಶ್ರಮಃ ಶ್ರೀರಂಗಃ ಪ್ರಭಾಸಶ್ಚ ಕುಶಸ್ಥಲೀ ।
ಕ್ಷೇತ್ರಂ ಸಿದ್ಧಪದಾಖ್ಯಂ ಚ ಪೌಷ್ಕರಂ ಚ ಮಹತ್ಸರಃ ॥ ೨೨ ॥
ಕ್ರೀಡಾಸ್ಥಾನಂ ಭಗವತಃ ಸಶ್ರಿಯೋ ರೈವತಾಚಲಃ ।
ತಥಾ ಗೋವರ್ಧನಗಿರಿಃ ಪುಣ್ಯಂ ವೃಂದಾವನಂ ವನಂ ॥ ೨೩ ॥
ಮಹೇಂದ್ರಮಲಯಾದ್ಯಾಶ್ಚ ಸಪ್ತಾಪಿ ಕುಲಪರ್ವತಾಃ ।
ಭಾಗೀರಥೀ ಮಹಾಪುಣ್ಯಾ ಯಮುನಾ ಚ ಸರಸ್ವತೀ ॥ ೨೪ ॥
ಗೋದಾವರೀ ಚ ಸರಯೂಃ ಕಾವೇರೀ ಗೋಮತೀ ಮುಖಾಃ ।
ಪುರಾಣಪ್ರಥಿತಾಃ ಪುಣ್ಯಾ ಮಹಾನದ್ಯೋ ನದಾಸ್ತಥಾ ॥ ೨೫ ॥

---

೧೮. ಪುಣ್ಯದೇಶಗಳನ್ನೂ, ಪುಣ್ಯಕಾಲಗಳನ್ನೂ, ಪುಣ್ಯಪಾತ್ರಗಳನ್ನೂ ನಿನಗೆ ಹೇಳುತ್ತೇನೆ. ಎಲೈ ಪಾಪರಹಿತನೇ! ಅವು ವಿಶೇಷ ಧರ್ಮವೃದ್ಧಿಕರವಾದುವು.

೧೯. ಭೂಮಿಯಲ್ಲಿ ಯಾವ ಸ್ಥಳದಲ್ಲಿ ನಾನು ನೆಲಸಿರುವೆನೊ ಆ ಸ್ಥಳವೇ ಸರ್ವೋತ್ತಮವಾದುದು. ಮಹಾವ್ರತಗಳನ್ನು ಧರಿಸಿದವರಾಗಿ ಮಹಾಮುನಿಗಳ ಸಮೂಹಗಳು ಅಲ್ಲಿ ತಪಸ್ಸುಮಾಡುತ್ತಿರುತ್ತವೆ.

೨೦–೨೮. ಶ್ರೀಹರಿಯ ಮತ್ತು ಶ್ರೀಹರಿಭಕ್ತರ ಮಾಹಾತ್ಮ್ಯೆಯಿಂದ ದೇಶ (ಸ್ಥಳ)ಗಳಿಗೆ ಪುಣ್ಯತೆಯುಂಟಾಗುವುದು. ಗಂಗಾದ್ವಾರ, ಮಧುಪುರಿ, ನೈಮಿಷಾರಣ್ಯ, ಕುರುಕ್ಷೇತ್ರ, ಅಯೋಧ್ಯೆ, ಪ್ರಯಾಗ, ಗಯಾಶಿರಸ್ಸು, ವಾರಾಣಸೀ (ಕಾಶಿ), ಪುರಿ, ಪುಣ್ಯಕರವಾದ ಪುಲಹಾಶ್ರಮ, ಕಪಿಲಾಶ್ರಮ, ಶ್ರೀರಂಗ, ಪ್ರಭಾಸ, ಕುಶಸ್ಥಲಿ, ಸಿದ್ಧಕ್ಷೇತ್ರ, ಪುಷ್ಕರಮಹಾಸರೋವರ, ಲಕ್ಷ್ಮೀಸಮೇತನಾದ ಭಗವಂತನಿಗೆ ಕ್ರೀಡಾಸ್ಥಾನವೆನಿಸಿರುವ ರೈವತಾಚಲ, ಗೋವರ್ಧನಗಿರಿ, ಪುಣ್ಯಕರವಾದ ವೃಂದಾವನ, ಮಹೇಂದ್ರ ಮಲಯವೇ ಮೊದಲಾದ ಏಳು ಕುಲಪರ್ವತಗಳು; ಮಹಾಪುಣ್ಯಕರವಾದ ಭಾಗೀರಥಿ (ಗಂಗಾನದಿ), ಯಮುನೆ, ಸರಸ್ವತಿ, ಗೋದಾವರಿ, ಸರಯು, ಕಾವೇರಿ,

ಮಹೋತ್ಸವೈರ್ಭವೇದ್ಯತ್ರ ಭಗವತ್ಪ್ರತಿಮಾರ್ಚನಮ್ ।
ಪ್ರಭೋರನನ್ಯಭಕ್ತಾಶ್ಚ ಭವೇಯುರ್ಯತ್ರ ಯತ್ರ ಚ ॥ ೨೬ ॥
ಅಹಿಂಸ್ರಾಶ್ಚ ಸ್ವಧರ್ಮಸ್ಥಾ ಯತ್ರ ಸ್ಯುರ್ಬ್ರಾಹ್ಮಣೋತ್ತಮಾಃ ।
ಮೃಗಾದ್ಯಾಃ ಪಶವೋ ಯತ್ರ ವಿಚರೇಯುಶ್ಚ ನಿರ್ಭಯಾಃ ॥ ೨೭ ॥
ಯತ್ರ ಯತ್ರಾವತಾರಾಶ್ಚ ಹರೇರ್ವಾಸಶ್ಚ ಯತ್ರ ವಾ ।
ಏತೇ ಪುಣ್ಯತಮಾ ದೇಶಾ ಭುವಿ ಸಂತಿ ವಿಶೇಷತಃ ॥ ೨೮ ॥
ಅಲ್ಪೋಽಪ್ಯೇಷು ಕೃತೋ ಧರ್ಮಃ ಸ್ಯಾತ್ಸಹಸ್ರಗುಣೋ ನೃಣಾಂ ।
ಪುಣ್ಯವೃದ್ಧಿಕರಾನ್ಕಾಲಾನ್ ಶೃಣ್ವತೋ ವಚ್ಮಿ ನಾರದ ॥ ೨೯ ॥
ಅಯನೇ ದ್ವೇ ಚ ವಿಷುವಂ ಗ್ರಹಣಂ ಸೂರ್ಯಸೋಮಯೋಃ ।
ದಿನಕ್ಷಯೋ ವ್ಯತೀಪಾತಃ ಶ್ರವಣರ್ಕ್ಷಾಣಿ ಸರ್ವಶಃ ॥ ೩೦ ॥
ದ್ವಾದಶ್ಯ ಏಕಾದಶ್ಯಶ್ಚ ಮನ್ವಾದ್ಯಾಶ್ಚ ಯುಗಾದಯಃ ।
ಪುಣ್ಯಾಃ ಸ್ಯುಸ್ತಿಥಯಃ ಸರ್ವಾ ಅಮಾವಾಸ್ಯಾ ಚ ವೈಧೃತಿಃ ॥ ೩೧ ॥
ಮಾಸರ್ಕ್ಷಯುಕ್ಪೌರ್ಣಮಾಸ್ಯಶ್ಚತಸ್ರೋಽಪ್ಯಷ್ಟಕಾಸ್ತಥಾ ।
ಸ್ವಜನ್ಮರ್ಕ್ಷಾಣಿ ಚ ಹರೇರ್ಜನ್ಮೋತ್ಸವದಿನಾನಿ ಚ ॥ ೩೨ ॥

---

ಗೋಮತಿ — ಮೊದಲಾದ ಪುರಾಣಪ್ರಸಿದ್ಧವಾದ ಮಹಾನದಿಗಳು ಮತ್ತು ನದಗಳು; ಎಲ್ಲೆಲ್ಲಿ ಮಹೋತ್ಸವಗಳಿಂದೊಡಗೂಡಿ ಭಗವಂತನ ಪ್ರತಿಮೆಯ ಅರ್ಚನೆಯು ನಡೆಯುವುದೋ, ಪ್ರಭುವಿನ ಅನನ್ಯಭಕ್ತರು ಎಲ್ಲೆಲ್ಲಿ ನೆಲಸಿರುವರೋ, ಎಲ್ಲಿ ಅಹಿಂಸಾತತ್ಪರರಾಗಿ ಸ್ವಧರ್ಮದಲ್ಲಿ ನೆಲೆಗೊಂಡ ಬ್ರಾಹ್ಮಣೋತ್ತಮರಿರುವರೋ, ಎಲ್ಲಿ ಜಿಂಕೆಯೇ ಮೊದಲಾದ ಪ್ರಾಣಿಗಳು ನಿರ್ಭಯವಾಗಿ ಸಂಚಾರ ಮಾಡುತ್ತಿರುವುವೋ, ಎಲ್ಲೆಲ್ಲಿ ಶ್ರೀಹರಿಯ ಅವತಾರಗಳಾಗಿರುವುವೊ, ಎಲ್ಲೆಲ್ಲಿ ಶ್ರೀಹರಿಯು ವಾಸಮಾಡುವನೋ—ಆ ಎಲ್ಲ ಪ್ರದೇಶಗಳೂ, ವಿಶೇಷವಾಗಿ, ಭೂಮಿಯಲ್ಲಿ ಪುಣ್ಯತಮಗಳಾಗಿರುವುವು.

೨೯. ಈ ಪ್ರದೇಶಗಳಲ್ಲಿ ಜನರು ಮಾಡಿದ ಧರ್ಮವು ಅಲ್ಪವಾದರೂ ಅದು ಸಾವಿರಪಾಲು ಹೆಚ್ಚಾಗುವುದು. ಎಲೈ ನಾರದನೇ! ಇನ್ನು ಪುಣ್ಯವೃದ್ಧಿಯನ್ನುಂಟುಮಾಡುವ ಕಾಲಗಳನ್ನು ನಿನಗೆ ತಿಳಿಸುತ್ತೇನೆ.

೩೦–೩೨. ಎರಡು ಅಯನಗಳು, ವಿಷುವ, ಸೂರ್ಯಚಂದ್ರಗ್ರಹಣಗಳು, ಸಂಧ್ಯಾಪ್ರದೋಷ, ವ್ಯತೀಪಾತ, ಶ್ರವಣನಕ್ಷತ್ರಗಳು, ದ್ವಾದಶಿಗಳು, ಏಕಾದಶಿಗಳು, ಮನ್ವಾದಿಗಳು, ಯುಗಾದಿಗಳು, ಸರ್ವಪುಣ್ಯತಿಥಿಗಳು, ಅಮಾವಾಸ್ಯೆ, ವೈಧೃತಿ, ಮಾಸನಕ್ಷತ್ರದಿಂದ ಕೂಡಿದ ನಾಲ್ಕುಪೂರ್ಣಿಮೆಗಳು, ಅಷ್ಟಕಗಳು, ಜನ್ಮನಕ್ಷತ್ರಗಳು, ಶ್ರೀಹರಿಯ ಜನ್ಮೋತ್ಸವ ದಿನಗಳು; ತನ್ನ

ಸ್ವಸ್ಯ ಸ್ತ್ರಿಯಾಶ್ಚಾರ್ಭಕಾನಾಂ ಸಂಸ್ಕಾರೋಽಭ್ಯುದಯಸ್ತಥಾ ।
ಸತ್ಪಾತ್ರಲಬ್ಧಿಶ್ಚ ಯದಾ ಕಾಲಾಃ ಪುಣ್ಯತಮಾ ಇಮೇ ॥ ೩೩ ॥
ದೇವಪಿತೃದ್ವಿಜಸತಾಮೇಷಾಂ ಶಕ್ತ್ಯಾ ಸಮರ್ಚನಂ ।
ಸ್ನಾನದಾನಜಪಾದೀನಿ ಸ್ಯುರನಂತಫಲಾನಿ ಹಿ ॥ ೩೪ ॥
ಸತ್ಪಾತ್ರಂ ತು ಸ್ವಯಂ ಸಾಕ್ಷಾತ್ ಭಗವಾನೇವ ನಾರದ ।
ಶಾಖಾನಾಮಿವ ಮೂಲಾಂಬು ಯದ್ದತ್ತಂ ಸರ್ವತುಷ್ಟಿಕೃತ್ ॥ ೩೫ ॥
ಅಹಿಂಸಾವೇದವಿದ್ಯಾಭಿಸ್ತುಷ್ಟಿಃ ಸದ್ಧರ್ಮಭಕ್ತಿಭಿಃ ।
ಹೃದಿ ವಿಷ್ಣುಂ ದಧ್ಯುರನ್ಯೇ ತೇ ಸತ್ಪಾತ್ರಾಣಿ ವೈ ದ್ವಿಜಾಃ ॥ ೩೬ ॥
ಏಕಾಂತಿಕಾಶ್ಚ ಭಗವದ್ಭಕ್ತಾ ಬದ್ಧವಿಮೋಚಕಾಃ ।
ಸತ್ಪಾತ್ರಾಣೀತಿ ಜಾನೀಹಿ ಯೇಷ್ವಾಸ್ತೇ ಭಗವಾನ್ ಸ್ವಯಂ ॥ ೩೭ ॥
ಆಢ್ಯಸ್ತು ಕಾರಯೇದ್ವಿಷ್ಣೋರ್ಮಂದಿರಾಣಿ ದೃಢಾನಿ ಚ ।
ಪೂಜಾಪ್ರವಾಹಸಿದ್ಧ್ಯರ್ಥಂ ತದ್ವೃತ್ತೀಶ್ಚಾಪಿ ಕಾರಯೇತ್ ॥ ೩೮ ॥
ಜಲಾಶಯಾನ್ವಾಟಿಕಾಶ್ಚ ವಿಷ್ಣ್ವರ್ಥಮುಪಕಲ್ಪಯೇತ್ ।
ಸದನ್ನೈಃ ಸುರಸೈಃ ಸಾಧೂನ್ ಬ್ರಾಹ್ಮಣಾಂಶ್ಚೈವ ತರ್ಪಯೇತ್॥ ೩೯ ॥

---

ಮತ್ತು ತನ್ನ ಹೆಂಡತಿಮಕ್ಕಳ ಸಂಸ್ಕಾರ ಮತ್ತು ಅಭ್ಯುದಯಕಾಲಗಳು, ಸತ್ಪಾತ್ರಲಾಭಕಾಲ—ಇವು ಪುಣ್ಯತಮಗಳಾದ ಕಾಲಗಳು.

೩೪. ದೇವತೆಗಳು, ಪಿತೃಗಳು, ದ್ವಿಜರು, ಸಜ್ಜನರು—ಇವರಿಗೆ ಶಕ್ತ್ಯನುಸಾರವಾಗಿ ಅರ್ಚನೆಮಾಡುವುದು, ಸ್ನಾನದಾನ ಜಪಾದಿಗಳು—ಇವು ಅನಂತ ಫಲವನ್ನು ಕೊಡುವುವಾಗುವುವು.

೩೫. ಎಲೈ ನಾರದನೇ! ಸತ್ಪಾತ್ರವಾದರೋ ಸಾಕ್ಷಾದ್ಭಗವಂತನೇ ಹೌದು. ಬೇರಿಗೆ ಎರೆದ ನೀರು ಕೊಂಬೆಗಳಿಗೆ ತೃಪ್ತಿಕೊಡುವಂತೆ ಸತ್ಪಾತ್ರದಲ್ಲಿ ದಾನಮಾಡಿದ್ದು ಸರ್ವರಿಗೂ ಸಂತುಷ್ಟಿಯನ್ನುಂಟುಮಾಡುವುದು.

೩೬. ಯಾರು ಅಹಿಂಸೆ ಮತ್ತು ವೇದವಿದ್ಯೆಗಳಿಂದ ಕೂಡಿದವರಾಗಿಯೂ ಸಂತುಷ್ಟರಾಗಿಯೂ ಸದ್ಧರ್ಮವನ್ನಾಚರಿಸುತ್ತ ಭಕ್ತಿಯಿಂದ ಹೃದಯದಲ್ಲಿ ವಿಷ್ಣುವನ್ನು ಧರಿಸಿರುವರೋ ಆ ದ್ವಿಜರೇ ಸತ್ಪಾತ್ರರು.

೩೭. ಏಕಾಂತಿಕರಾದ ಭಗವದ್ಭಕ್ತರು (ಸಂಸಾರದಲ್ಲಿ) ಬದ್ಧರಾದವರನ್ನು ವಿಮೋಚನೆಹೊಂದಿಸುವಂಥವರು; ಅವರೇ ಸತ್ಪಾತ್ರರೆಂದು ತಿಳಿದುಕೊ. ಅವರಲ್ಲಿ ಭಗವಂತನು ತಾನೇ ಬಂದು ನೆಲಸಿರುತ್ತಾನೆ.

೩೮. ಆಢ್ಯ (ಸಂಪತ್ತುಳ್ಳವ)ನಾದವನು ದೃಢವಾದ ವಿಷ್ಣುಮಂದಿರಗಳನ್ನು ನಿರ್ಮಿಸಬೇಕು. ಎಡೆಬಿಡದೆ ಪೂಜೆ ನಡೆಯುತ್ತಿರುವಂತೆ ಮಾಡುವುದಕ್ಕಾಗಿ ಅದಕ್ಕೆ ತಕ್ಕ ವೃತ್ತಿಗಳನ್ನು ಕೂಡ ಏರ್ಪಡಿಸಬೇಕು.

೩೯. ವಿಷ್ಣುಪ್ರೀತ್ಯರ್ಥವಾಗಿ ಜಲಾಶಯಗಳನ್ನೂ, ಉದ್ಯಾನಗಳನ್ನೂ

ಅಹಿಂಸಾನ್ವೈಷ್ಣವಾನ್ಯಜ್ಞಾನ್ ಕುರ್ಯಾಚ್ಛಕ್ತ್ಯಾ ಯಥಾವಿಧಿ ।
ವ್ರತಜನ್ಮೋತ್ಸವಾನ್ವಿಷ್ಣೋಃ ಸಂಭಾರೇಣ ಚ ಭೂಯಸಾ ॥ ೪೦ ॥
ಪ್ರೌಷ್ಠಪದಾ ಸಿತೇ ಪಕ್ಷೇ ಕ್ಷಯಾಹೇ ತೀರ್ಥಪರ್ವಸು ।
ಪಿತ್ರೋಃ ಶ್ರಾದ್ಧಂ ಪ್ರಕುರ್ವೀತ ತದ್ಬಂಧೂನಾಂ ಚ ಶಕ್ತಿತಃ ॥ ೪೧ ॥
ದೈವೇ ಕರ್ಮಣಿ ಪಿತ್ರ್ಯೇ ಚ ಭಕ್ತಾನ್ ಭಾಗವತೋ ದ್ವಿಜಾನ್ ।
ಪೂಜಯೇತ ಸ್ವಧರ್ಮಸ್ಥಾನ್ ಭೋಜಯೇದ್ಭಗವದ್ಧಿಯಾ ॥ ೪೨ ॥
ದೈವೇ ದ್ವೌ ಭೋಜಯೇದ್ವಿಪ್ರೌ ತ್ರೀಂಶ್ಚ ಪಿತ್ರ್ಯೇ ಯಥಾವಿಧಿ ।
ಏಕೈಕಂ ವೋಭಯತ್ರಾಪಿ ನೈವ ಶ್ರಾದ್ಧೇ ತು ವಿಸ್ತರೇತ್ ॥ ೪೩ ॥
ದೇಶಕಾಲದ್ರವ್ಯಪಾತ್ರಪೂಜೋಪಕರಣಾನಿ ಚ ।
ವಿಸ್ತರೇಣ ಯಥಾಶಾಸ್ತ್ರಂ ನ ಸ್ಯಾದೇವೇತಿ ನಿಶ್ಚಿತಂ ॥ ೪೪ ॥
ನ ಶ್ರಾದ್ಧೇ ಕ್ವಾಪಿ ಮಾಂಸಂ ತು ದದ್ಯಾನ್ನಾಽದ್ಯಾಚ್ಚ ಮಾನವಃ ।
ಮುನ್ಯನ್ನೈಃ ಕ್ಷೀರಸರ್ಪಿರ್ಭ್ಯಾಂ ತೃಪ್ಯಂತಿ ಪಿತರೋ ಭೃಶಂ ॥ ೪೫ ॥

---

ನಿರ್ಮಿಸಬೇಕು. ರಸವತ್ತಾದ ಉತ್ತಮಾನ್ನಗಳಿಂದ ಸಾಧುಗಳನ್ನೂ, ಬ್ರಾಹ್ಮಣರನ್ನೂ ತೃಪ್ತಿಪಡಿಸಬೇಕು.

೪೦. ತನ್ನ ಶಕ್ತ್ಯನುಸಾರವಾಗಿ ಅಹಿಂಸಾತ್ಮಕವಾದ ವೈಷ್ಣವಯಜ್ಞವನ್ನು ವಿಧಿಪ್ರಕಾರವಾಗಿ ನಡೆಸಬೇಕು. ಬಹುಸಾಮಗ್ರಿಗಳಿಂದ ಕೂಡಿದ ವಿಷ್ಣುವ್ರತಗಳನ್ನೂ, ವಿಷ್ಣುವಿನ ಜನ್ಮೋತ್ಸವಗಳನ್ನೂ ನಡೆಸಬೇಕು.

೪೧. ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ, ಕ್ಷಯತಿಥಿಯಲ್ಲಿ, ತೀರ್ಥಪರ್ವಗಳಲ್ಲಿ—ಪಿತೃಗಳಿಗೂ ಅವರ ಬಂಧುಗಳಿಗೂ ಶಕ್ತ್ಯನುಸಾರವಾಗಿ ಶ್ರಾದ್ಧವನ್ನು ಮಾಡಬೇಕು.

೪೨. ದೈವಕರ್ಮದಲ್ಲಿಯೂ, ಪಿತೃಸಂಬಂಧವಾದ ಕರ್ಮದಲ್ಲಿಯೂ ಸ್ವಧರ್ಮದಲ್ಲಿ ನೆಲಸಿ ಭಗವಂತನಿಗೆ ಭಕ್ತರಾಗಿರುವ ದ್ವಿಜರನ್ನು ಪೂಜಿಸಬೇಕು; ಅವರು ಭಗವಂತನೆಂಬ ಭಾವನೆಯಿಂದಲೇ ಅವರಿಗೆ ಭೋಜನಮಾಡಿಸಬೇಕು.

೪೩. ದೇವಸಂಬಂಧವಾದ ಕರ್ಮಗಳಲ್ಲಿ ಇಬ್ಬರು ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಪಿತೃಕರ್ಮದಲ್ಲಿ ಮೂರು ಮಂದಿ ಬ್ರಾಹ್ಮಣರಿಗೆ ವಿಧಿವತ್ತಾಗಿ ಭೋಜನಮಾಡಿಸಬೇಕು. ಅಥವಾ ಎರಡು ಸಂದರ್ಭಗಳಲ್ಲಿಯೂ ಒಬ್ಬೊಬ್ಬನಿಗಾದರೂ ಭೋಜನಮಾಡಿಸಬೇಕು. ಶ್ರಾದ್ಧದಲ್ಲಾದರೊ ಬ್ರಾಹ್ಮಣರಿಗೆ ಭೋಜನಮಾಡಿಸುವುದನ್ನು ಮರೆಯಲೇಬಾರದು.

೪೪. ದೇಶ, ಕಾಲ, ದ್ರವ್ಯ, ಪಾತ್ರ, ಪೂಜೋಪಕರಣಗಳು—ಇವು ಶಾಸ್ತ್ರದಲ್ಲಿ ಹೇಳಿರುವಷ್ಟು ಮಟ್ಟಿಗೆ ವಿಸ್ತಾರವಾಗಿ ಇನ್ನೆಲ್ಲಿಯೂ ಹೇಳಿಯೇ ಇಲ್ಲವೆಂದು ನಿಶ್ಚಯವಾಗಿದೆ.

೪೫. ಮಾನವನು ಶ್ರಾದ್ಧದಲ್ಲಿ ಎಂದೂ ಮಾಂಸವನ್ನು ನೀಡಬಾರದು;

ಅಹಿಂಸಾ ಪ್ರಾಣಿಮಾತ್ರಸ್ಯ ಮನೋವಾಕ್ತನುಭಿಸ್ತು ಯಾ ।
ತಯೈವ ಪಿತರಃ ಸರ್ವೇ ತೃಪ್ಯಂತ್ಯತಿದಯಾಲವಃ ॥ ೪೬ ॥
ತಸ್ಮಾತ್ಕುಸಂಗತಃ ಕ್ವಾಪಿ ಶಾಸ್ತ್ರಹಾರ್ದಮಬುಧ್ಯ ಚ ।
ಶ್ರಾದ್ಧೇ ಮಾಂಸಂ ನೈವ ದದ್ಯಾದ್ವಾಸುದೇವಪರಃ ಪುಮಾನ್ ॥ ೪೭ ॥
ವ್ರತಾನಿ ಕುರ್ಯಾದ್ವಿಷ್ಣೋಶ್ಚ ಬ್ರಹ್ಮಚರ್ಯಾದಿಭಿರ್ಯುತೈಃ ।
ಸಹೈವ ತತ್ಪರೋ ನಾನ್ಯತ್ ಕಾರ್ಯಂ ಕುರ್ಯಾಚ್ಚ ತದ್ದಿನೇ ॥ ೪೮ ॥
ಸ್ವಸಂಬಂಧಿಜನಾನಾಂ ಚ ಅಪ್ಯಾಶೌಚಂ ವಿನಾಶಯೋಃ ।
ಯಥಾಶಾಸ್ತ್ರಂ ಪಾಲಯೇತ ಗ್ರಹಣೇ ಚಾರ್ಕಚಂದ್ರಯೋಃ ॥ ೪೯ ॥
ವ್ಯಾವಹಾರಿಕಕಾರ್ಯಾಣಾಂ ವಿವಾದೇ ನಿರ್ಣಯೇಽಪಿ ಚ ।
ಗೃಹೀತರಾಸ್ತ್ಯಾಗಿನೋ ಯೇ ತೇನ ಕಾರ್ಯಾ ನಚಾಧವಾಃ ॥ ೫೦ ॥
ಯತ್ರೈತೇ ಸ್ಯುರ್ನ್ನ ತತ್ಕಾರ್ಯಂ ಸಿದ್ಧ್ಯೇತ್ಕ್ವಾಪಿ ದ್ವಿಜೋತ್ತಮ ।
ಸರ್ವಸ್ವನಾಶಸ್ತತ್ರಸ್ಯಾದಿತ್ಯೇವಂ ತ್ವಸ್ತಿ ನಿರ್ಣಯಃ । ॥ ೫೧ ॥

---

ತಿನ್ನಲೂಬಾರದು. ಮುನಿಯೋಗ್ಯವಾದ ಅನ್ನಗಳಿಂದಲೂ, ಹಾಲು ತುಪ್ಪಗಳಿಂದಲೂ ಪಿತೃಗಳು ಸಂಪೂರ್ಣವಾಗಿ ತೃಪ್ತರಾಗುತ್ತಾರೆ.

೪೬-೪೭. ಪ್ರಾಣಿಮಾತ್ರದ ವಿಷಯದಲ್ಲಿ ಮನೋವಾಕ್ಕಾಯಗಳಿಂದ ಅಹಿಂಸೆಯನ್ನು ಆಚರಿಸುವುದರಿಂದಲೇ ಅತಿ ದಯಾಳುಗಳಾದ ಪಿತೃಗಳು ಸರ್ವರೂ ತೃಪ್ತರಾಗುತ್ತಾರೆ. ಆದುದರಿಂದ ಶ್ರೀವಾಸುದೇವಪರನಾದ ಪುರುಷನು ದುಸ್ಸಂಗದಿಂದ ಶಾಸ್ತ್ರಹೃದಯವನ್ನರಿಯದೆ ಎಂದೂ ಶ್ರಾದ್ಧದಲ್ಲಿ ಮಾಂಸವನ್ನು ನೀಡಲೇಕೂಡದು.

೪೮. ಶ್ರಾದ್ಧದಿನದಲ್ಲಿ ಬ್ರಹ್ಮಚರ್ಯಾದಿ ನಿಯಮಗಳಿಂದ ಕೂಡಿ ವಿಷ್ಣು ಸಂಬಂಧವಾದ ವ್ರತಗಳನ್ನು ಮಾಡಬೇಕು. ವಿಷ್ಣುವ್ರತದಲ್ಲೇ ತತ್ಪರನಾಗಿದ್ದು ಬೇರೊಂದು ಕಾರ್ಯವನ್ನು ಮಾಡಬಾರದು.

೪೯. ತನ್ನ ಸಂಬಂಧಿಗಳಾದ ಜನರ ಜನನ ಮರಣಕಾಲಗಳಲ್ಲಿಯೂ, ಸೂರ್ಯಚಂದ್ರರ ಗ್ರಹಣದಲ್ಲಿಯೂ ಶಾಸ್ತ್ರೋಕ್ತರೀತಿಯಿಂದ ಆಶೌಚವನ್ನು ಪಾಲಿಸಬೇಕು.

೫೦. ವ್ಯಾವಹಾರಿಕ ಕಾರ್ಯಗಳ ವಿವಾದದಲ್ಲಿಯೂ ನಿರ್ಣಯದಲ್ಲಿಯೂ ಯಾರು ಗೃಹಸ್ಥರಲ್ಲವೋ, ಯಾರು ತ್ಯಾಗಿಗಳೋ, ಯಾರು ಅಧವರೋ (ಪತ್ನೀವಿಹೀನರೋ) ಅವರು ಮಾಡತಕ್ಕುದಲ್ಲ.

೫೧. ಎಲೈ ದ್ವಿಜೋತ್ತಮನೇ! ಎಲ್ಲಿ ವಿಧುರರಿರುವರೊ ಅಲ್ಲಿ ಆ ಕಾರ್ಯವು ಎಂದಿಗೂ ಸಿದ್ಧಿಸುವುದಿಲ್ಲ. ಅಲ್ಲಿ ಸರ್ವಸ್ವನಾಶವೇ ಉಂಟಾಗುತ್ತದೆ. ಈ ರೀತಿಯಾಗಿ ನಿರ್ಣಯವಿದೆ.

ಧರ್ಮಾ ಏತೇ ಗೃಹಸ್ಥಾನಾಂ ಮಯಾ ಸಂಕ್ಷೇಪತೋದಿತಾಃ ।
ಯದನುಷ್ಠಾನತೋ ನೄಣಾಂ ಸ್ಯಾತ್ಸ್ವೇಷ್ಟಸುಖಮಕ್ಷಯಂ ॥ ೫೨ ॥
ಶಿಲಾದಿಜೀವಿಕಾವೃತ್ತಿಭೇದೇನ ಗೃಹಿಣೋ ದ್ವಿಜಾಃ ।
ಚತುರ್ವಿಧಾಃ ಪ್ರಕೀರ್ತ್ಯಂತೇ ತತ್ತನ್ನಾಮ್ನಾ ಚ ನಾರದ ॥ ೫೩ ॥
ಸ್ತ್ರೀಣಾಮಥ ಪ್ರವಕ್ಷ್ಯಾಮಿ ಧರ್ಮಾನ್ಧರ್ಮವತಾಂ ವರ ।
ಯೇಷು ಸ್ಥಿತಾಃ ಸ್ತ್ರಿಯಃ ಸರ್ವಾಃ ಪ್ರಾಪ್ನುವಂತೀಪ್ಸಿತಂ ಸುಖಂ ॥೫೪॥
ಸುವಾಸಿನೀಭಿರ್ನಾರೀಭಿಃ ಸ್ವಪತಿರ್ದೇವವತ್ಸದಾ ।
ಸೇವನೀಯೋಽನುವರ್ತ್ಯಶ್ಚ ಜರನ್ನಗ್ಣೋಽಧನೋಽಪಿ ವಾ ॥ ೫೫ ॥
ತದ್ಬಂಧವಶ್ಚಾನುವರ್ತ್ಯಾಃ ಸೇವನೇನ ಯಥೋಚಿತಂ ।
ಉಜ್ಜ್ವಲಾನಿ ವಿಧೇಯಾನಿ ಗೃಹೋಪಕರಣಾನಿ ಚ ॥ ೫೬ ॥
ಗೃಹಂ ಮಾರ್ಜನಸೇಕಾದ್ಯೈಃ ಸ್ವಚ್ಛಂ ಕಾರ್ಯಂ ದಿನೇ ದಿನೇ ।
ಪ್ರಿಯಂ ಸತ್ಯಂ ಚ ವಕ್ತವ್ಯಂ ಸ್ಥೇಯಂ ಶುಚಿತಯಾ ಸದಾ ॥ ೫೭ ॥

---

೫೨. ಗೃಹಸ್ಥರ ಧರ್ಮಗಳನ್ನು ಸಂಕ್ಷೇಪವಾಗಿ ನಿನಗೆ ಹೇಳಿದ್ದೇನೆ. ಇವನ್ನು ಅನುಷ್ಠಾನಮಾಡುವುದರಿಂದ ಮನುಷ್ಯರಿಗೆ ತಮಗಿಷ್ಟವಾದ ಅಕ್ಷಯ ಸುಖವುಂಟಾಗುತ್ತದೆ.

೫೩. ಎಲೈ ನಾರದನೇ! ಶಿಲೆ (ಉಂಛವೃತ್ತಿ) ಮೊದಲಾದ ಜೀವನೋಪಾಯದ ವೃತ್ತಿಭೇದದಿಂದ ಗೃಹಸ್ಥರಾದ ದ್ವಿಜರು ನಾಲ್ಕು ವಿಧವಾಗಿರುವರು. ಅವರು ಆಯಾ ಹೆಸರುಗಳಿಂದಲೇ ಕರೆಯಲ್ಪಡುವರು.

೫೪. ಧರ್ಮವಂತರಲ್ಲಿ ಶ್ರೇಷ್ಠನಾದವನೇ! ಇನ್ನುಮುಂದೆ ಸ್ತ್ರೀಯರ ಧರ್ಮಗಳನ್ನು ವಿವರಿಸುತ್ತೇನೆ. ಆ ಧರ್ಮಗಳಲ್ಲಿ ನೆಲೆಗೊಂಡ ಸ್ತ್ರೀಯರೆಲ್ಲರೂ ತಾವು ಬಯಸುವ ಸುಖವನ್ನು ಪಡೆಯುತ್ತಾರೆ.

೫೫. ಸುವಾಸಿನಿಯರಾದ ನಾರಿಯರು ತಮ್ಮ ಪತಿಯು ಮುದುಕನೇ ಆಗಲಿ, ರೋಗಿಯೋ ಆಗಲಿ, ಧನಹೀನನೇ ಆಗಲಿ ಅವನನ್ನು ದೇವರಂತೆ ಸದಾ ಸೇವಿಸಬೇಕು, ಅನುವರ್ತಿಸಬೇಕು.

೫೬. ಪತಿಯ ಬಂಧುಗಳಿಗೆ ಯಥೋಚಿತವಾಗಿ ಸೇವೆ ಸಲ್ಲಿಸುವುದರಿಂದ ಅವರನ್ನೂ ಅನುವರ್ತಿಸಬೇಕು. ಗೃಹೋಪಕರಣಗಳನ್ನು ಉಜ್ಜ್ವಲವಾಗಿ ಬೆಳಗುವಂತೆ ಮಾಡಬೇಕು.

೫೭. ದಿನದಿನವೂ ಗುಡಿಸಿ ಸಾರಿಸುವುದು ಮೊದಲಾದುವುಗಳಿಂದ ಮನೆಯನ್ನು ಸ್ವಚ್ಛಮಾಡುತ್ತಿರಬೇಕು. ಪ್ರಿಯವಾಗಿಯೂ, ಸತ್ಯವಾಗಿಯೂ ಮಾತನಾಡಬೇಕು. ಸದಾ ಶುಚಿಯಾಗಿರಬೇಕು.

ಚಾಂಚಲ್ಯಮತಿಲೋಭಶ್ಚ ಕ್ರೋಧಃ ಸ್ತೇಯಂ ಚ ಹಿಂಸನಂ ।
ಅಧಾರ್ಮಿಕಾಣಾಂ ಸಂಗಶ್ಚ ವರ್ಜ್ಯಾಃ ಸ್ತ್ರೀಣಾಂ ತಥಾ ನೃಣಾಂ ॥ ೫೮ ॥
ಭವಿತವ್ಯಂ ತತ್ಪರಾಭಿರ್ಧರ್ಮಕಾರ್ಯೇಷು ಸರ್ವಥಾ ।
ತ್ಯಕ್ತ್ವೌದ್ಧತ್ಯಂ ವಿನೀತಾಭಿಃ ಸ್ಥೇಯಂ ಜಿತ್ವೇಂದ್ರಿಯಾಣಿ ಚ ॥ ೫೯ ॥
ಪಾತಿವ್ರತ್ಯೇ ಸ್ಥಿತಾಭಿಶ್ಚ ಧರ್ಮೇ ತಾಭೀ ರಮಾಪತೇಃ ।
ಭಕ್ತಿಃ ಕಾರ್ಯಾ ಸ್ವತಂತ್ರಾಭಿರ್ಭವಿತವ್ಯಂ ನ ಕುತ್ರಚಿತ್ ॥ ೬೦ ॥
ವಿಧವಾ ತು ಸದಾ ವಿಷ್ಣುಂ ಸೇವೇತ ಪತಿಭಾವತಃ ।
ಕಾಮಸಂಬಂಧಿನೀರ್ವಾರ್ತಾ ನ ಶೃಣ್ವೀತ ನ ಕೀರ್ತಯೇತ್ ॥ ೬೧ ॥
ಆಸನ್ನಸಂಬಂಧವತೋ ವಿನಾನ್ಯಾನ್ ಪುರುಷಾನ್ ಕ್ವಚಿತ್ ।
ಅನಾಪದಿ ಸ್ಪೃಶೇನ್ನೈವ ಪಶ್ಯೇನ್ನೈವ ಚ ಕಾಮತಃ ॥ ೬೨ ॥
ಸ್ತನಪಸ್ಯ ತನುಃಸ್ಪರ್ಶಾದ್ವೃದ್ಧಸ್ಯ ಚ ನ ದುಷ್ಯತಿ ।
ಕಾರ್ಯ ಆವಶ್ಯಕೇ ತಾಭ್ಯಾಂ ಭಾಷಣೇ ಚ ವಿಭರ್ತೃಕಾ ॥ ೬೩ ॥
ವ್ಯಾವಹಾರಿಕಕಾರ್ಯೇ ಚ ವಿವಾದಮಧಿಕಂ ನರೈಃ ।
ನ ಕುರ್ವೀತಾವಶ್ಯಕಾರ್ಯೇ ತೈರ್ಭಾಷೇತ ವಿನಾ ರಹಃ ॥ ೬೪ ॥

---

೫೮. ಚಾಂಚಲ್ಯ, ಅತಿಲೋಭ, ಕ್ರೋಧ, ಕಳ್ಳತನ, ಹಿಂಸೆಮಾಡುವುದು, ಅಧಾರ್ಮಿಕರ ಸಂಗ— ಇವನ್ನು ಸ್ತ್ರೀಯರು ತೊರೆಯಬೇಕು. ಪುರುಷರೂ ಇವನ್ನು ಬಿಟ್ಟುಬಿಡಬೇಕು.

೫೯. ಸರ್ವದಾ ಧರ್ಮಕಾರ್ಯಗಳಲ್ಲಿ ತತ್ಪರರಾಗಿರಬೇಕು. ಔದ್ಧತ್ಯವನ್ನು (ತಾನೇ ಹೆಚ್ಚೆಂಬ ಸೊಕ್ಕನ್ನು) ತೊರೆದು ವಿನಯವತಿಯರಾಗಿರಬೇಕು; ಇಂದ್ರಿಯಗಳನ್ನು ಜಯಿಸಿರಬೇಕು.

೬೦. ಪಾತಿವ್ರತ್ಯ ಧರ್ಮದಲ್ಲಿ ನೆಲಸಿದವರಾಗಿ ರಮಾಪತಿಯಲ್ಲಿ ಭಕ್ತಿಯನ್ನಿಟ್ಟು ನಡೆಯಬೇಕು. ಎಂದೆಂದೂ ಸ್ವತಂತ್ರರಾಗಿ ವರ್ತಿಸಬಾರದು.

೬೧–೬೨. ವಿಧವೆಯಾದರೋ, ಸದಾಕಾಲವೂ ವಿಷ್ಣುವನ್ನು ಪತಿಯೆಂಬ ಭಾವನೆಯಿಂದ ಸೇವಿಸಬೇಕು. ಕಾಮಸಂಬಂಧವಾದ ವಾರ್ತೆಗಳನ್ನು ಕೇಳಬಾರದು; ಹೇಳಬಾರದು. ಹತ್ತಿರದ ಸಂಬಂಧವುಳ್ಳವರನ್ನು ಹೊರತಾಗಿ ಉಳಿದ ಅನ್ಯಪುರುಷರನ್ನು ಆಪತ್ಸಮಯವಲ್ಲದಾಗ ಎಂದಿಗೂ ಮುಟ್ಟಲೇಬಾರದು; ಕಾಮಭಾವದಿಂದ ನೋಡಲೇಬಾರದು.

೬೩–೬೪. ಮೊಲೆ ಕುಡಿಯುವ ಮಗುವಿನ ಮತ್ತು ಮುದುಕನ ಸ್ಪರ್ಶದಿಂದ ದೋಷವುಂಟಾಗುವುದಿಲ್ಲ. ಗಂಡನಿಲ್ಲದವಳು ಪುರುಷರೊಡನೆ ಆವಶ್ಯಕವಾಗಿ ಮಾತಾಡಲೇಬೇಕಾದರೂ, ವ್ಯಾವಹಾರಿಕಕಾರ್ಯದಲ್ಲಿ ಅವರೊಡನೆ ಹೆಚ್ಚಾಗಿ ವಿವಾದಮಾಡಬಾರದು. ಆವಶ್ಯಕಾರ್ಯದಲ್ಲಿ ಮಾತ್ರ ಅವರೊಡನೆ ರಹಸ್ಯ

ನೇಕ್ಷೇತ ಮಿಥುನೀಭೂತಂ ಬುದ್ಧ್ಯಾ ಪಶ್ವಾದ್ಯಪಿ ಕ್ವಚಿತ್ ।
ತ್ಯಜೇಚ್ಚ ಸಕಲಾನ್‌ಭೋಗಾನ್ ಸ್ಯಾತ್ಸಕೃನ್ಮಿತಭುಕ್ತ್ತಥಾ ॥ ೬೫ ॥
ಸಾಧಾತುಸೂಕ್ಷ್ಮವಾಸಾಂಸಿ ನಾಲಂಕಾರಾಂಶ್ಚ ಧಾರಯೇತ್ ।
ನ ದಿವಾ ಶಯನಂ ಕುರ್ಯಾನ್ನಖಟ್ವಾಯಾಮನಾಪದಿ ॥ ೬೬ ॥
ತಾಂಬೂಲಭಕ್ಷಣಂ ನೈವ ಕುರ್ಯಾನ್ನಾಭ್ಯಂಗಮಂಜನಂ ।
ಪುಂಪ್ರಸಂಗಾಚ್ಚ ಬಿಭಿಯಾತ್ ಕೃಷ್ಣಾಹೇರಿವ ನಿತ್ಯದಾ ॥ ೬೭ ॥
ಸವಿೂಕ್ಷ್ಯ ಪುರುಷಂ ನಾರೀ ಯಾ ನಮೋಹಮುಪಾವ್ರಜೇತ್ ।
ತಾದೃಶೀ ತು ವಿನಾಲಕ್ಷ್ಮೀಮೇಕಾ ನಾನ್ಯಾಸ್ತಿ ಕುತ್ರಚಿತ್ ॥ ೬೮ ॥
ಧರ್ಮನಿಷ್ಠಾ ತತೋ ನಾರೀ ಸ್ವನಿಃಶ್ರೇಯಸಮಿಚ್ಛತೀ ।
ನೇಕ್ಷೇತ ಪುರುಷಾಕಾರಂ ಬುದ್ಧಿಪೂರ್ವಂ ಚ ನ ಸ್ಪೃಶೇತ್ ॥ ೬೯ ॥
ಕೃಚ್ಛ್ರಚಾಂದ್ರಾಯಣಾದೀನಿ ನೈರಂತರ್ಯೇಣ ಭಕ್ತಿತಃ ।
ವ್ರತಾನಿ ಕುರ್ಯಾಚ್ಚ ಸದಾ ಭವೇನ್ನಿಯಮತತ್ಪರಾ ॥ ೭೦ ॥

---

ವಿಲ್ಲದಂತೆ (ಎಂದರೆ ಏಕಾಂತಸ್ಥಳವಾಗದಂತೆ, ಬಹಿರಂಗದಲ್ಲಿ) ಮಾತನಾಡಬೇಕು.

೬೫. ಗಂಡು ಹೆಣ್ಣುಗಳು ಕೂಡಿರುವ ಪಶು ಮೊದಲಾದುವನ್ನು ಕೂಡ ಬುದ್ಧಿಪೂರ್ವಕವಾಗಿ ಒಮ್ಮೆಯೂ ನೋಡಬಾರದು. ಸಕಲ ಭೋಗಗಳನ್ನೂ ಬಿಟ್ಟುಬಿಡಬೇಕು. ಒಂದು ಸಲ ಮಾತ್ರ ಮಿತವಾಗಿ ಭೋಜನಮಾಡಬೇಕು.

೬೬. ಕೆಂಪು, ಹಳದಿ, ಹಸರು ಮೊದಲಾದ ಬಣ್ಣಗಳಿಂದ ಕೂಡಿದ ನವಿರು ಬಟ್ಟೆಗಳನ್ನೂ, ಅಲಂಕಾರಗಳನ್ನೂ ಧರಿಸಬಾರದು. ಹಗಲುಹೊತ್ತು ಮಲಗಬಾರದು. ಆಪತ್ತಿನಲ್ಲಿ ಹೊರತು ಬೇರೆಕಾಲದಲ್ಲಿ ಮಂಚದಮೇಲೆ ಮಲಗಬಾರದು.

೬೭. ತಾಂಬೂಲಭಕ್ಷಣವನ್ನು ಮಾಡಲೇಬಾರದು. ಅಭ್ಯಂಗಮಾಡಿಕೊಳ್ಳಬಾರದು; ಕಾಡಿಗೆಯನ್ನು ಹಚ್ಚಿಕೊಳ್ಳಬಾರದು. ಕೃಷ್ಣಸರ್ಪಕ್ಕೆ ಹೇಗೋ ಹಾಗೆ ಪುರುಷಪ್ರಸಂಗಕ್ಕೆ ಸದಾ ಹೆದರುತ್ತಿರಬೇಕು.

೬೮. ಪುರುಷನನ್ನು ನೋಡಿ ಮೋಹಗೊಳ್ಳದ ಸ್ತ್ರೀಯು ಲಕ್ಷ್ಮಿಯೊಬ್ಬಳನ್ನುಳಿದು ಬೇರೊಬ್ಬಳು ಎಲ್ಲಿಯೂ ಇರುವುದಿಲ್ಲ.

೬೯. ಆದುದರಿಂದ ಧರ್ಮನಿಷ್ಠಳಾಗಿ ತನಗೆ ಶ್ರೇಯಸ್ಸುಂಟಾಗಬೇಕೆಂದು ಅಪೇಕ್ಷಿಸುವ ನಾರಿಯು ಪುರುಷಾಕಾರವನ್ನು ಬುದ್ಧಿಪೂರ್ವಕವಾಗಿ ನೋಡಬಾರದು; ಸ್ಪರ್ಶಿಸಬಾರದು.

೭೦. ಕೃಚ್ಛ್ರ, ಚಾಂದ್ರಾಯಣವೇ ಮೊದಲಾದ ವ್ರತಗಳನ್ನು ಎಡೆಬಿಡದೆ ಭಕ್ತಿಯಿಂದ ಮಾಡುತ್ತಿರಬೇಕು. ಸದಾ ನಿಯಮಪರಾಯಣೆಯಾಗಿರಬೇಕು.

ಪಿತ್ರಾ ಪುತ್ರಾದಿನಾ ವಾಪಿ ತರುಣೀ ತರುಣೇ ನ ಚ ।
ಸಹ ತಿಷ್ಠೇನ್ನ ರಹಸಿ ಕುಸಂಗಂ ಸರ್ವಥಾ ತ್ಯಜೇತ್ ॥ ೭೧ ॥
ಸಧವಾ ವಿಧವಾ ವಾ ಸ್ತ್ರೀ ಸ್ವರಜೋದರ್ಶನಂ ಕ್ವಚಿತ್ ।
ನ ಗೋಪಯೇತ್ತ್ರಿರಾತ್ರಂ ತು ಮನುಷ್ಯಾದೀಂಶ್ಚ ನಸ್ಪೃಶೇತ್ ॥ ೭೨ ॥
ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಿನೀ ।
ತೃತೀಯೇ ರಜಕೀ ಪ್ರೋಕ್ತಾ ಸಾ ಚತುರ್ಥೇಽಹ್ನಿ ಶುದ್ಧ್ಯತಿ ॥ ೭೩ ॥
ಇತಿ ಸ್ತ್ರೀಣಾಂ ಧರ್ಮಾಃ ಸಂಕ್ಷೇಪಾತ್ಕಥಿತಾಸ್ತ್ವ ।
ಯುಕ್ತಾ ಯೈರ್ಯೋಷಿತೋ ವಿಯುರಿಹಾಮುತ್ರ ಮಹತ್ಸುಖಂ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಗೃಹಸ್ಥಧರ್ಮ ನಿರೂಪಣಂ" ನಾಮ ದ್ವಾವಿಂಶೋಽಧ್ಯಾಯಃ

---

೭೧. ತರುಣಿಯು ತಂದೆ, ಮಗ ಮೊದಲಾದವರೊಡನಾಗಲಿ, ತರುಣ ನೊಡನಾಗಲಿ ರಹಸ್ಯಸ್ಥಾನದಲ್ಲಿ ಇರಬಾರದು. ಸರ್ವಪ್ರಕಾರದಿಂದಲೂ ದುಷ್ಟ ಸಂಗವನ್ನು ತ್ಯಜಿಸಬೇಕು.

೭೨. ಸಧವೆಯೇ (ಗಂಡನುಳ್ಳವಳು) ಆಗಲಿ, ವಿಧವೆಯೇ ಆಗಲಿ ಸ್ತ್ರೀಯು ತನಗೆ ರಜೋದರ್ಶನವಾದುದನ್ನು ಎಂದೂ ಗುಟ್ಟುಮಾಡಬಾರದು. ಮೂರು ದಿನಗಳವರೆಗೆ ಮನುಷ್ಯಾದಿಗಳನ್ನು ಮುಟ್ಟಬಾರದು.

೭೩. ರಜಸ್ವಲೆಯಾದವಳು ಮೊದಲನೆಯ ದಿನ ಚಂಡಾಲಿಯೂ, ಎರಡ ನೆಯ ದಿನ ಬ್ರಹ್ಮಹತ್ಯೆ ಮಾಡಿದವಳೂ, ಮೂರನೆಯ ದಿನ ರಜಕಿ (ಅಗಸಿತಿ) ಯೂ ಆಗಿರುತ್ತಾಳೆಂದು ಹೇಳಿದೆ. ಅವಳು ನಾಲ್ಕನೆಯ ದಿನವೇ ಶುದ್ಧಳಾಗುತ್ತಾಳೆ.

೭೪. ಈ ರೀತಿಯಾಗಿ ಸ್ತ್ರೀಯರ ಧರ್ಮಗಳನ್ನು ಸಂಕ್ಷೇಪವಾಗಿ ನಿನಗೆ ತಿಳಿಸಿದ್ದೇನೆ. ಯಾವ ಹೆಂಗಸರು ಈ ಧರ್ಮಗಳನ್ನು ಅನುಸರಿಸುವರೊ ಅವರು ಇಹದಲ್ಲಿಯೂ, ಪರದಲ್ಲಿಯೂ ಮಹಾ ಸುಖವನ್ನೈದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಗೃಹಸ್ಥಧರ್ಮನಿರೂಪಣ" ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

## ವಾನಪ್ರಸ್ಥಯತಿಧರ್ಮನಿರೂಪಣಂ

ಶ್ರೀ ನಾರಾಯಣ ಉವಾಚ :—

ವಾನಪ್ರಸ್ಥಸ್ಯ ವಕ್ಷ್ಯಾಮಿ ನಿಯಮಾನಥ ತೇ ಮುನೇ ।
ತೃತೀಯ ಆಯುಷೋ ಭಾಗೇ ತೃತೀಯಾಶ್ರಮ ಈರಿತಃ ॥ ೧ ॥
ಅನುಕೂಲಾ ಸ್ವಸೇವಾಯಾಂ ವಿರಕ್ತಾ ಚ ತಪಃಪ್ರಿಯಾ ।
ಯದಿ ಪತ್ನೀ ಭವೇತ್ತರ್ಹಿ ತಯಾ ಸಹ ವನಂ ವಿಶೇತ್ ॥ ೨ ॥
ಅನ್ಯಥಾ ತು ಸುತಾದಿಭ್ಯಸ್ತಸ್ಯಾಃ ಪೋಷಣರಕ್ಷಣಂ ।
ಆದಿಶ್ಯ ಸ್ವಯಮೇಕಾಕೀ ವಿರಕ್ತೋ ವನಮಾವಿಶೇತ್ ॥ ೩ ॥
ನಿರ್ಭಯೋ ನಿವಸೇತ್ತತ್ರ ತಪೋರುಚಿರತಂದ್ರಿತಃ ।
ಕುರ್ಯಾದುಟಜಮಗ್ನ್ಯರ್ಥಂ ಸ್ವಯಂ ತು ಬಹಿರಾವಸೇತ್ ॥ ೪ ॥
ಭವೇತ್ಪಂಚತಪಾ ಗ್ರೀಷ್ಮ ಉದವಾಸಶ್ಚ ಶೈಶಿರೇ ।
ಆಸಾರಷಾಟ್ ಚ ವರ್ಷಾಸು ಜಿತಕ್ರೋಧೋ ಜಿತೇಂದ್ರಿಯಃ ॥ ೫ ॥

---

### ಕನ್ನಡದ ಅನುವಾದ

#### ವಾನಪ್ರಸ್ಥಯತಿಧರ್ಮನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ:—" ಎಲೈ ಮುನಿಯೇ! ಇನ್ನು ಮುಂದೆ ನಿನಗೆ ವಾನಪ್ರಸ್ಥಾಶ್ರಮದ ನಿಯಮಗಳನ್ನು ಹೇಳುತ್ತೇನೆ. ಆಯುಸ್ಸಿನ ಮೂರನೆಯ ಭಾಗದಲ್ಲಿ ಈ ಮೂರನೆಯ ಆಶ್ರಮವು ಹೇಳಲ್ಪಟ್ಟಿದೆ.

೨. ಈ ಆಶ್ರಮವನ್ನು ಕೈಕೊಂಡ ಮಾನವನು ಸ್ವಸೇವೆಯಲ್ಲಿ ಅನುಕೂಲೆಯೂ, ವಿರಕ್ತಳೂ, ತಪಸ್ಸಿನಲ್ಲಿ ಪ್ರೀತಿಯುಳ್ಳವಳೂ ಆದ ಪತ್ನಿಯಿದ್ದಲ್ಲಿ ಅವಳೊಡನೆ ವನಕ್ಕೆ ಹೋಗಬೇಕು.

೩. ಹಾಗಲ್ಲದಿದ್ದರೆ ಅವಳ (ಪತ್ನಿಯ) ಪೋಷಣೆ ರಕ್ಷಣೆಗಳನ್ನು ಮಕ್ಕಳು ಮೊದಲಾದವರಿಗೊಪ್ಪಿಸಿ ವಿರಕ್ತನಾಗಿ ತಾನೊಬ್ಬನೆಯೆ ವನವನ್ನು ಪ್ರವೇಶಿಸಬಹುದು.

೪. ನಿರ್ಭಯನಾಗಿ, ತಪಸ್ಸಿನಲ್ಲಿ ರುಚಿಯುಳ್ಳವನಾಗಿಯೂ, ಆಲಸ್ಯವಿಲ್ಲದವನಾಗಿಯೂ ವನದಲ್ಲಿ ವಾಸಮಾಡಬೇಕು. ಅಗ್ನಿಗಾಗಿ ಗುಡಿಸಲು ಕಟ್ಟಿಕೊಳ್ಳಬೇಕು. ತಾನುಮಾತ್ರ ಹೊರಗಡೆಯೇ ವಾಸಮಾಡಬೇಕು.

೫. ಗ್ರೀಷ್ಮ (ಬೇಸಗೆ) ಕಾಲದಲ್ಲಿ ಪಂಚಾಗ್ನಿಮಧ್ಯಗತನಾಗಿ ತಪಸ್ಸನ್ನೆಸಗಬೇಕು. ಶಿಶಿರ (ಚಳಿ) ಕಾಲದಲ್ಲಿ ನೀರಿನಲ್ಲಿ ವಾಸಮಾಡಬೇಕು. ಎಡೆಬಿಡದೆ

ವಾಸಶ್ಚ ತಾರ್ಣಂ ಪಾರ್ಣಂ ವಾ ವಸೀತಾಜಿನವಲ್ಕಲಂ ।
ಭುಂಜೀತ ಋಷಿಧಾನ್ಯಾನಿ ವನ್ಯಂ ಕಂದಫಲಾದಿ ವಾ ॥ ೬ ॥
ಅಗ್ನಿಪಕ್ವಂ ವಾರ್ಕಪಕ್ವಂ ಅಪಕ್ವಂ ವಾಪಿ ಭಕ್ಷಯೇತ್ ।
ಅಭಾವೇತ್ವೇಷ ದಂತಾನಾಮುಶ್ಮೋಲೂಖಲಕುಟ್ಟಿತಂ ॥ ೭ ॥
ಸ್ವಯಮೇವಾಹರೇದನ್ನಂ ಯಥಾಕಾಲಂ ದಿನೇ ದಿನೇ ।
ಕಾಲೇ ಪರಾಹೃತಂ ವಾಪಿ ಗೃಹ್ಣೀಯಾನ್ನಾನ್ಯದಾ ಕ್ವಚಿತ್ ॥ ೮ ॥
ಕಾಲೇಪಿ ಕೃಷ್ಟಪಚ್ಯಂ ತು ನಗೃಹ್ಣೀಯಾದನಾಪದಿ ।
ವನ್ಯೈರೇವಾಗ್ನಿಕಾರ್ಯಂ ಚ ಧಾನ್ಯೈಃ ಕುರ್ವೀತ ಪೂರ್ವವತ್ ॥ ೯ ॥
ರಕ್ಷೇತ್ಕಮಂಡಲುಂ ದಂಡಮಗ್ನಿಹೋತ್ರಪರಿಚ್ಛದಾನ್ ।
ಕೇಶರೋಮಶ್ಮಶ್ರುನಖಾನ್ ಧಾರಯೇನ್ಮಲಿನಾನ್ ದತಃ ॥ ೧೦ ॥
ಅಂಗಾನ್ಯಮರ್ದಯನ್ ಸ್ನಾಯಾದ್ಭೂತಲೇ ಚ ಶಯೀತ ಸಃ ।
ದೇಶಕಾಲಬಲಾವಸ್ಥಾನುಸಾರೇಣ ತಪಶ್ಚರೇತ್ ॥ ೧೧ ॥

---

ಸುರಿಯುವ ಮಳೆಗಾಲದಲ್ಲಿ ಜಿತೇಂದ್ರಿಯನಾಗಿ ಕ್ರೋಧವನ್ನು ಜಯಿಸಿ ಧಾರಾಕಾರವಾಗಿ ಬೀಳುತ್ತಿರುವ ಆ ಮಳೆಯಲ್ಲಿಯೇ ವಾಸಮಾಡಬೇಕು.

೬. ತೊಗಟೆ, ನಾರು ಅಥವಾ ಎಲೆಗಳಿಂದ ಮಾಡಿದ ಬಟ್ಟೆಯನ್ನೊ, ಅಜಿನ (ಚರ್ಮ), ವಲ್ಕಲ (ತೊಗಟೆಯ ಬಟ್ಟೆ)ಗಳನ್ನೊ ಉಡಬೇಕು. ಋಷಿಧಾನ್ಯಗಳನ್ನಾಗಲಿ, ಕಾಡಿನ ಕಂದಮೂಲಫಲಗಳನ್ನಾಗಲೀ ತಿನ್ನಬೇಕು.

೭. ಬೆಂಕಿಯಲ್ಲಿ ಬೆಂದುದು, ಬಿಸಿಲಲ್ಲಿ ಪಕ್ವವಾದುದು, ಅಪಕ್ವವಾದುದು—ಏನೇ ಆದರೂ ಅದನ್ನೆ ಭಕ್ಷಿಸಬೇಕು. ಹಲ್ಲಿಲ್ಲದೆಹೋದಾಗ ಕಲ್ಲು ಒರಳುಗಳಲ್ಲಿ ಕುಟ್ಟಿದ ಆಹಾರವನ್ನು ತಿನ್ನಬೇಕು.

೮. ಸರಿಯಾದ ಕಾಲದಲ್ಲಿ ದಿನದಿನವೂ ತಾನೇ ಅನ್ನವನ್ನು ತಂದುಕೊಳ್ಳಬೇಕು. ಸಕಾಲದಲ್ಲಿ ಬೇರೆಯವರು ತಂದುದನ್ನಾದರೂ ತೆಗೆದುಕೊಳ್ಳಬಹುದು. ಬೇರೆಕಾಲಗಳಲ್ಲಿ ಎಂದಿಗೂ ಆಹಾರವನ್ನು ತೆಗೆದುಕೊಳ್ಳಲಾಗದು.

೯. ಸಕಾಲದಲ್ಲಿ ಕೂಡ ಕೃಷಿಮಾಡಿ ಬೆಳಸಿದ್ದನ್ನು ಆಪತ್ತಲ್ಲದ ಸಂದರ್ಭಗಳಲ್ಲಿ ತೆಗೆದುಕೊಳ್ಳಲಾಗದು. ಕಾಡಿನಲ್ಲಿ (ತಾನಾಗಿ) ಬೆಳೆಯುವ ಧಾನ್ಯಗಳಿಂದಲೆ ಮೊದಲಿನಂತೆ ಅಗ್ನಿಕಾರ್ಯವನ್ನು ನೆರವೇರಿಸಬೇಕು.

೧೦. ಕಮಂಡಲು, ದಂಡ, ಅಗ್ನಿಹೋತ್ರ, ಹೊದಕೆಯ ಸಲಕರಣೆಗಳು—ಇವನ್ನು ರಕ್ಷಿಸಿಕೊಳ್ಳಬೇಕು. ಜುಟ್ಟು, ಎದೆಕೊಂಕುಳುಗಳ ಕೂದಲು, ಮೀಸೆ, ಉಗುರುಗಳು ಇವುಗಳನ್ನು ಕತ್ತರಿಸದೆ ಇಟ್ಟುಕೊಂಡೇ ಇರಬೇಕು. ಹಲ್ಲುಗಳನ್ನು ಮಲಿನವಾಗಿದ್ದರೂ ತೊಳೆಯಬಾರದು.

೧೧. ವಾನಪ್ರಸ್ಥನಾದವನು ಅಂಗಗಳನ್ನು ಉಜ್ಜಿಕೊಳ್ಳದೆಯೆ ಸ್ನಾನ

ಫೇನಪಾಶ್ಚೌದುಂಬರಾಶ್ಚ ವಾಲಖಿಲ್ಯಾಸ್ತಥೈವ ಚ ।
ವೈಖಾನಸೇತಿ ಕಥಿತಾಶ್ಚತುರ್ಧಾ ವನವಾಸಿನಃ ॥ ೧೨ ॥
ಯಥಾಶಕ್ತಿ ದ್ವಾದಶಾಬ್ದಾನಷ್ಟೌ ವಾ ಚತುರೋ ವನೇ ।
ವಸೇದ್ವಾವೇಕಮೇವಾಪಿ ತತಃ ಸಂನ್ಯಾಸಮಾಶ್ರಯೇತ್ ॥ ೧೩ ॥
ಯದಿ ಸ್ಯಾತ್ತೀವ್ರ ವೈರಾಗ್ಯಂ ತರ್ಹಿ ನ್ಯಾಸೋ ಹಿತಾವಹಃ ।
ವಸೇತ್ತತ್ರೈವಾನ್ಯಥಾ ತು ಯಾವಜ್ಜೀವಂ ವನೇ ದ್ವಿಜಃ ॥ ೧೪ ॥
ಯಥಾವಿಧಿ ಕೃತತ್ಯಾಗಸ್ತುರೀಯಾಶ್ರಮಮಾಸ್ಥಿತಃ ।
ಸಾಚ್ಛಾದನಂ ತು ಕೌಪೀನಂ ಕಂಥಾಮೇಕಾಂ ಚ ಧಾರಯೇತ್ ॥ ೧೫ ॥
ದಂಡಂ ಕಮಂಡಲುಂ ಚಾಂಬುಗಾಲನಂ ಬಿಭೃಯಾಚ್ಚ ಸಃ ।
ಸದಾಚಾರದ್ವಿಜಗೃಹೇ ಕಾಲೇ ಭಿಕ್ಷಾಂ ಸಮಾಚರೇತ್ ॥ ೧೬ ॥
ನ ಕುರ್ಯಾತ್ಪ್ರತ್ಯಹಂ ಬಿಕ್ಷಾಮೇಕಸ್ಯೈವ ಗೃಹೇ ಯತಿಃ ।
ರಸಲುಬ್ಧೋ ಭವೇನ್ನೈವ ಸಕೃಚ್ಚ ಮಿತಭುಗ್ಭವೇತ್ ॥ ೧೭ ॥

---

ಮಾಡಬೇಕು. ಭೂಮಿಯ ಮೇಲೆಯೇ ಮಲಗಬೇಕು. ದೇಶ, ಕಾಲ, ಬಲ, ಅವಸ್ಥೆಗಳಿಗೆ ಅನುಸಾರವಾಗಿ ತಪಸ್ಸನ್ನು ಮಾಡಬೇಕು.

೧೨. ವನವಾಸಿಗಳಾದವರು ಫೇನಪರು, ಔದುಂಬರರು, ವಾಲಖಿಲ್ಯರು, ವೈಖಾನಸರು — ಎಂದು ನಾಲ್ಕುಬಗೆಯವರೆಂದು ಹೇಳಲ್ಪಟ್ಟಿದ್ದಾರೆ.

೧೩. ತನ್ನ ಶಕ್ತಿಗನುಸಾರವಾಗಿ ಹನ್ನೆರಡುವರ್ಷ, ಎಂಟುವರ್ಷ, ನಾಲ್ಕು ವರ್ಷ, ಎರಡುವರ್ಷ, ಕಡೆಗೆ ಒಂದೇ ಒಂದು ವರ್ಷವಾದರೂ ಸರಿ, ವನದಲ್ಲಿ ವಾಸಮಾಡಬೇಕು. ಆ ಬಳಿಕ ಸನ್ಯಾಸವನ್ನು ಅವಲಂಬಿಸಬೇಕು.

೧೪. ತೀವ್ರ ವೈರಾಗ್ಯವಿರುವುದಾದರೆ ಸಂನ್ಯಾಸವು ಹಿತಕಾರಿಯಾಗಿರುವುದು. ಹಾಗಿಲ್ಲವಾದಪಕ್ಷದಲ್ಲಿ ಆ ದ್ವಿಜನು ಜೀವವಿರುವವರೆಗೂ ಅಲ್ಲಿಯೇ ವನದಲ್ಲಿ ವಾಸಮಾಡತಕ್ಕುದು.

೧೫. ಯಥಾವಿಧಿಯಾಗಿ ಸಮಸ್ತವನ್ನೂ ತ್ಯಾಗಮಾಡಿ ನಾಲ್ಕನೆಯ ಆಶ್ರಮವನ್ನವಲಂಬಿಸಿದವನು ಹೊದಕೆಯೊಡನೆ ಕೌಪೀನವೊಂದನ್ನೂ ಕಂಥೆಯೊಂದನ್ನೂ ಧರಿಸಬೇಕು.

೧೬. ಸನ್ಯಾಸಿಯು ದಂಡ, ಕಮಂಡಲು, ನೀರಿನ ಕೊಳವೆ ಇವನ್ನು ಮಾತ್ರ ಧರಿಸಿರಬೇಕು. ಸದಾಚಾರವಂತನಾದ ದ್ವಿಜನ ಮನೆಯಲ್ಲಿ ಸಕಾಲದಲ್ಲಿ ಭಿಕ್ಷಾಚರಣೆಮಾಡಬೇಕು.

೧೭. ಯತಿಯು ಪ್ರತಿದಿನವೂ ಒಬ್ಬನ ಮನೆಯಲ್ಲೇ ಭಿಕ್ಷಮಾಡಬಾರದು. ಯಾವುದೊಂದು ಸಲವೂ ರಸಲುಬ್ಧನಾಗಲೇಬಾರದು. ಮಿತವಾಗಿ ಭೋಜನ ಮಾಡುವವನಾಗಬೇಕು.

ವನಸ್ಥಾಶ್ರಮಿಣೋ ಭಿಕ್ಷಾಂ ಪ್ರಾಯೋ ಗೃಹ್ಣೀತ ಭಿಕ್ಷುಕಃ ।
ತದಂಧಸಾತಿಶುದ್ಧೇನ ಶುದ್ಧ್ಯತ್ಯೇವಾಽಸ್ಯ ಯನ್ಮನಃ ॥ ೧೮ ॥
ಘ್ರಾಣೇಪಿ ಮಾಂಸಸುರಯೋಃ ಪಾರಾಕಂ ವ್ರತಮಾಚರೇತ್ ।
ಶೌಚಾಚಾರವಿಶುದ್ಧಃ ಸ್ಯಾಚ್ಛೂದ್ರಾದೀಂಶ್ಚಾಪಿ ನ ಸ್ಪೃಶೇತ್ ॥ ೧೯ ॥
ನಿತ್ಯಂ ಕುರ್ಯಾದ್ವಿಷ್ಣುಪೂಜಾಮದ್ಯಾದ್ವಿಷ್ಣೋರ್ನಿವೇದಿತಂ ।
ದ್ವಾದಶಾರ್ಣಂ ಜಪೇದ್ವಿಷ್ಣೋರಷ್ಟಾಕ್ಷರಮನುಂ ಚ ವಾ ॥ ೨೦ ॥
ಅಸದ್ವಾದಂ ನ ಕುರ್ವೀತ ವೃತ್ತ್ಯರ್ಥಂ ನಾಚರೇತ್ಕಥಾಂ ।
ಅಸಚ್ಛಾಸ್ತ್ರೇ ನ ಸಕ್ತಃ ಸ್ಯಾನ್ನೋಪಜೀವೇಚ್ಚ ಜೀವಿಕಾಂ ॥ ೨೧ ॥
ಸಚ್ಛಾಸ್ತ್ರಮಭ್ಯಸೇಚ್ಚಾಸೌ ಬಂಧಮೋಕ್ಷಾನುದರ್ಶನಂ ।
ಮಠಾದೀನ್ನೈವ ಬಧ್ನೀಯಾದಹಂತಾಮಮತೇ ತ್ಯಜೇತ್ ॥ ೨೨ ॥
ಚಾತುರ್ಮಾಸ್ಯಂ ವಿನೈಕತ್ರ ವಸೇನ್ನಾಽಸಾವನಾಪದಿ ।
ಆತ್ಮನಶ್ಚ ಹರೇರೂಪಂ ವಿದ್ಯಾಜ್ಜ್ಞಾನೇನ ತತ್ವತಃ ॥ ೨೩ ॥

---

೧೮. ಭಿಕ್ಷೆಮಾಡುವವನಾದ ಯತಿಯು ವಾನಪ್ರಸ್ಥಾಶ್ರಮದಲ್ಲಿರುವವನು ನೀಡಿದ ಭಿಕ್ಷವನ್ನು ಹೆಚ್ಚಾಗಿ ತೆಗೆದುಕೊಳ್ಳಬಹುದು. ಅತಿ ಶುದ್ಧವಾದ ಆ ಅನ್ನದಿಂದ ಅವನ ಮನಸ್ಸು ಶುದ್ಧಿ ಹೊಂದಿಯೇ ಹೊಂದುವುದು.

೧೯. ಮಾಂಸ ಸುರೆಗಳನ್ನು ಮೂಸಿದರೂ ಪರಾಕವ್ರತವನ್ನಾಚರಿಸಬೇಕು. ಶೌಚಾಚಾರಗಳಲ್ಲಿ ಬಹು ಶುದ್ಧನಾಗಿರಬೇಕು. ಶೂದ್ರಾದಿಗಳನ್ನು ಸ್ಪರ್ಶಮಾಡ ಬಾರದು.

೨೦. ನಿತ್ಯವೂ ವಿಷ್ಣುಪೂಜೆಯನ್ನು ಮಾಡಬೇಕು. ವಿಷ್ಣುವಿಗೆ ನಿವೇದಿಸಿದ್ದನ್ನು ತಿನ್ನಬೇಕು. ವಿಷ್ಣುವಿನ ಅಷ್ಟಾಕ್ಷರ (ಮಂತ್ರ)ವನ್ನಾಗಲಿ, ದ್ವಾದಶಾಕ್ಷರ ಮಂತ್ರವನ್ನಾಗಲಿ ಜಪಿಸಬೇಕು.

೨೧. ಅಸದ್ವಾದವನ್ನು (ಅಲ್ಲಸಲ್ಲದ ಹರಟೆ), ಅಸತ್ಯಸ್ಥಾಪನೆ ಮಾಡಬಾರದು. ಜೀವನೋಪಾಯಕ್ಕಾಗಿ (ವೃತ್ತಿಗೋಸ್ಕರ) ಮಾತಾಡಬಾರದು. ಅಸಚ್ಛಾಸ್ತ್ರದಲ್ಲಿ ಆಸಕ್ತನಾಗಬಾರದು. ಯಾವುದಾದರೊಂದು ವೃತ್ತಿಯನ್ನು ಅವಲಂಬಿಸಿ ಜೀವಿಸಬಾರದು.

೨೨. ಸಂನ್ಯಾಸಿಯು ಬಂಧಮೋಕ್ಷಗಳ ಸ್ವರೂಪವನ್ನು ತೋರಿಸಿಕೊಡುವ ಸಚ್ಛಾಸ್ತ್ರವನ್ನು ಅಭ್ಯಾಸಮಾಡಬೇಕು. ಮಠಾದಿಗಳನ್ನೆಂದಿಗೂ ಕಟ್ಟಲೇ ಬಾರದು. ಅಹಂಕಾರ ಮಮಕಾರಗಳನ್ನು ತ್ಯಜಿಸಬೇಕು.

೨೩. ಚಾತುರ್ಮಾಸ್ಯಕಾಲ ಹೊರತು ಬೇರೆ ಯಾವಾಗಲೂ ಆಪತ್ತಿಲ್ಲದಾಗ ಒಂದೇ ಕಡೆ ವಾಸಮಾಡಬಾರದು. ಸ್ವಸ್ವರೂಪವನ್ನೂ, ಶ್ರೀಹರಿಯ ಸ್ವರೂಪವನ್ನೂ ಜ್ಞಾನದಿಂದ ಯಥಾವತ್ತಾಗಿ ಅರಿತುಕೊಳ್ಳಬೇಕು.

ಕಾಮಂ ಕ್ರೋಧಂ ಭಯಂ ವೈರಂ ಧನಧಾನ್ಯಾದಿಸಂಗ್ರಹಂ ।
ನೈವ ಕುರ್ಯಾತ್ಪಾಲಯೇತ ಯಮಾಂಶ್ಚ ನಿಯಮಾನ್ಯತಿಃ ॥ ೨೪ ॥
ತೀವ್ರಜ್ಞಾನವಿರಾಗಾಭ್ಯಾಂ ಸಂಪನ್ನೋಽಪಿ ಯತಿರ್ಧ್ರುವಂ ।
ಸ್ತ್ರೀವಿತ್ತಭೂಷಾಸದ್ವಸ್ತ್ರ ಸಂಸರ್ಗಾದ್ಭ್ರಷ್ಟತಾಂ ವ್ರಜೇತ್ ॥ ೨೫ ॥
ಪುಷ್ಪಚಂದನತೈಲಾದಿ ಸುಗಂಧಿ ದ್ರವ್ಯವರ್ಜನಂ ।
ತ್ಯಾಗೀ ಕುರ್ವೀತಾನ್ಯಥಾ ತು ಭವೇದ್ದೇಹಾತ್ಮಧೀಃ ಸವೈ ॥ ೨೬ ॥
ಆಹಾರೋ ಯಸ್ಯ ಯಾವಾಂಸ್ತಂ ತಾವಾಂಸ್ತ್ರೀಕಾಮ ಆವಿಶೇತ್ ।
ಅತೋ ಮಿತಂ ನೀರಸಂ ಚ ಭೋಜನಂ ತ್ಯಾಗಿನೋ ಹಿತಂ ॥ ೨೭ ॥
ನ ಶ್ರಾವ್ಯಾ ಗ್ರಾಮ್ಯವಾರ್ತಾ ಚ ಮೋಕ್ಷಸಿದ್ಧಿಮಭೀಪ್ಸತಾ ।
ನಶ್ಯೇದ್ಯಚ್ಛ್ರವಣಾನ್ನೄಣಾಂ ಸದ್ಯೋ ವಿಷ್ಣುಕಥಾರುಚಿಃ ॥ ೨೮ ॥
ಅಪಿ ಚಿತ್ರಮಯೀಂ ನಾರೀಂ ತ್ಯಾಗೀ ನೇಕ್ಷೇತ ನ ಸ್ಪೃಶೇತ್ ।
ಸ್ತ್ರ್ಯಾಕಾರದರ್ಶನಾದೇವ ಭ್ರಷ್ಟಾ ಭೂರಿ ತಪಸ್ವಿನಃ ॥ ೨೯ ॥

---

೨೪. ಕಾಮ, ಕ್ರೋಧ, ಭಯ, ವೈರ ಇವುಗಳನ್ನು ತೊರೆಯಬೇಕು. ಧನಧಾನ್ಯಾದಿಗಳನ್ನು ಸಂಗ್ರಹಿಸಬಾರದು. ಯಮನಿಯಮಗಳನ್ನು ಸತತವೂ ಪಾಲಿಸಬೇಕು.

೨೫. ನಿಜವಾಗಿಯೂ ತೀವ್ರವಾದ ಜ್ಞಾನವೈರಾಗ್ಯಗಳಿಂದ ತುಂಬಿದವನೇ ಆದರೂ ಯತಿಯು ಸ್ತ್ರೀ, ವಿತ್ತ (ಹಣ), ಭೂಷಣ, ಒಳ್ಳೆಯ ವಸ್ತ್ರ— ಇವುಗಳ ಸಂಸರ್ಗ (ಸಹವಾಸ)ದಿಂದ ಭ್ರಷ್ಟತ್ವವನ್ನು ಹೊಂದುತ್ತಾನೆ.

೨೬. ಪುಷ್ಪ, ಚಂದನ, ತೈಲ ಇವೇ ಮೊದಲಾದ ಸುಗಂಧದ್ರವ್ಯಗಳನ್ನು ತ್ಯಾಗಿಯು (ಸನ್ಯಾಸಿಯು) ವರ್ಜನಮಾಡಬೇಕು. ಹಾಗಲ್ಲದಿದ್ದರೆ ಅವನು ದೇಹವೇ ಆತ್ಮವೆಂಬ ಬುದ್ಧಿಯುಳ್ಳವನಾಗುತ್ತಾನೆ.

೨೭. ಆಹಾರವು ಯಾವನಿಗೆ ಎಷ್ಟಿರುವುದೋ ಅವನಿಗೆ ಅಷ್ಟುಮಟ್ಟಿಗೆ ಸ್ತ್ರೀಕಾಮವುಂಟಾಗುವುದು. ಆದುದರಿಂದ (ಆಹಾರಪ್ರಮಾಣಕ್ಕನುಸಾರವಾಗಿ ಸ್ತ್ರೀಕಾಮಾವೇಶವಾಗುವುದರಿಂದ) ನೀರಸವಸ್ತುಗಳ ಮಿತಭೋಜನವು ತ್ಯಾಗಿಗೆ (ಸನ್ಯಾಸಿಗೆ) ಹಿತಕರವಾಗುವುದು.

೨೮. ಮೋಕ್ಷಸಿದ್ಧಿಯನ್ನು ಬಯಸುವವನು ಗ್ರಾಮ್ಯವಾರ್ತೆಗಳನ್ನು ಕೇಳಬಾರದು. ಅದನ್ನು ಕೇಳುವುದರಿಂದ ನರರಿಗೆ ವಿಷ್ಣುಕಥೆಯಲ್ಲಿರುವ ರುಚಿಯು ತಕ್ಷಣವೇ ನಾಶವಾಗಿಹೋಗುವುದು.

೨೯. ತ್ಯಾಗಿಯು ಚಿತ್ರದಲ್ಲಿರುವ ಸ್ತ್ರೀಯನ್ನೇ ಆದರೂ ನೋಡಬಾರದು, ಮುಟ್ಟಬಾರದು. ಸ್ತ್ರೀಯ ಆಕಾರವನ್ನು ನೋಡಿದಮಾತ್ರದಿಂದಲೇ ಬಹುಜನ ತಪಸ್ವಿಗಳು ಭ್ರಷ್ಟರಾದರು.

ಕುಟೀಚಕೋ ಬಹೂದಶ್ಚ ಹಂಸಃ ಪರಮಹಂಸಕಃ ।
ಏವಂ ಚತುರ್ಧಾ ಕಥಿತೋ ಯತಿರ್ವೈರಾಗ್ಯಭೇದತಃ ॥ ೩೦ ॥
ಕಾಷಾಯವಾಸಸೋ ಯೇ ಮೇ ಭವಿಷ್ಯಾಃ ಸಾಧವಶ್ಚ ತೈಃ ।
ಕಾರ್ಯಂ ಮದರ್ಥಪಾಕಾದಿ ತುರ್ಯಾಶ್ರಮಸ್ಥಿತೈರಪಿ ॥ ೩೧ ॥
ಶ್ರೀವಾಸುದೇವಭಕ್ತಾ ಯೇ ತೀವ್ರವೈರಾಗ್ಯಶಾಲಿನಃ ।
ತೇಷಾಂ ಧರ್ಮಸ್ತು ತತ್ಸೇವಾ ಪ್ರೋಕ್ತಾಹಸ್ಸು ಚ ರಾತ್ರಿಷು ॥ ೩೨ ॥
ಏಕೋಽಪಿ ಚ ಕ್ಷಣಸ್ತೇಷಾಂ ಜ್ಞಾನವಿಜ್ಞಾನಭೂಯಸಾಂ ।
ಭಕ್ತಿಂ ನವವಿಧಾಂ ವಿಷ್ಣೋರ್ವಿನಾ ವ್ಯರ್ಥೋ ನ ವೈ ಭವೇತ್ ॥ ೩೩ ॥
ಸರ್ವೈರ್ಗುಣೈರುಪೇತೋಽಪಿ ಭಗವದ್ವಿಮುಖೋ ಯದಿ ।
ಸ್ವಜನೋಽಪಿ ಭವೇತ್ತಂ ತು ಜಹ್ಯುರೇವ ಹಿ ವೈಷ್ಣವಾಃ ॥ ೩೪ ॥
ಪ್ರಾಸಾದಿಕಂ ಹರೇರನ್ನಂ ಪ್ರೋಕ್ಷಿತಂ ತತ್ಪದಾಂಬುನಾ ।
ಭುಂಜೀರಂಸ್ತುಲಸೀಮಿಶ್ರಂ ಪ್ರತ್ಯಹಂ ಸಾತ್ವತಾ ಜನಾಃ ॥ ೩೫ ॥
ಸ್ತ್ರೀಣಾಂ ಚ ಸ್ತ್ರೀಷು ಸಕ್ತಾನಾಂ ಪ್ರಸಂಗೋ ವಿಷ್ಣುಚಿಂತಕೈಃ ।
ಸರ್ವಥೈವ ಪರಿತ್ಯಾಜ್ಯೋ ಭವೇತ್ತದ್ಧ್ಯಾನಮುದ್ಯಥಾ ॥ ೩೬ ॥

---

೩೦. ಕುಟೀಚಕ, ಬಹೂದಕ, ಹಂಸ, ಪರಮಹಂಸ ಎಂದು ಯತಿಯು ವೈರಾಗ್ಯಭೇದದಿಂದ ನಾಲ್ಕುಬಗೆಯಾಗಿ ಹೇಳಲ್ಪಟ್ಟಿದ್ದಾನೆ.

೩೧. ಕಾಷಾಯವಸ್ತ್ರಗಳನ್ನು ಧರಿಸಿ ಯಾರು ಸಾಧುಗಳಾಗುವರೋ ಅವರೂ, ನಾಲ್ಕನೆಯ ಆಶ್ರಮದಲ್ಲಿ ನೆಲಸಿರುವವರೂ ಕೂಡ ನನಗೋಸ್ಕರ ಪಾಕಾದಿಗಳನ್ನು ಮಾಡಬೇಕು.

೩೨. ಯಾರು ತೀವ್ರವಾದ ವೈರಾಗ್ಯವನ್ನು ಹೊಂದಿ ಶ್ರೀವಾಸುದೇವನ ಭಕ್ತರಾಗಿರುವರೋ ಅವರಿಗೆ ಹಗಲೂ ರಾತ್ರಿಯೂ ಸೇವೆಮಾಡುವುದೇ ಧರ್ಮವೆಂದು ಹೇಳಲ್ಪಟ್ಟದೆ.

೩೩. ಜ್ಞಾನವಿಜ್ಞಾನಗಳಿಂದ ಪೂರ್ಣರಾಗಿರುವ ಅವರಿಗೆ ಮಹಾವಿಷ್ಣುವಿನ ನವವಿಧಭಕ್ತಿಯನ್ನುಳಿದು ಒಂದುಕ್ಷಣವೂ ವ್ಯರ್ಥವಾಗಿ ಕಾಲವು ಕಳೆಯುವುದಿಲ್ಲ.

೩೪. ಸರ್ವಗುಣಗಳಿಂದಲೂ ಕೂಡಿರುವವನೇ ಆದರೂ, ಸ್ವಜನವೇ ಆದರೂ ಭಗವಂತನಲ್ಲಿ ವಿಮುಖನಾಗಿದ್ದಪಕ್ಷದಲ್ಲಿ ಅವನನ್ನು ವೈಷ್ಣವರು ತ್ಯಜಿಸಿಯೇ ಬಿಡುವರು.

೩೫. ಸಾತ್ವತರಾದ ಜನರು ಪ್ರತಿದಿನವೂ ಶ್ರೀಹರಿಯ ಪ್ರಸಾದರೂಪವಾದ ಅನ್ನವನ್ನೂ, ಶ್ರೀಹರಿಯ ಪಾದ ತೊಳೆದ ಜಲದಿಂದ ಪ್ರೋಕ್ಷಿಸಿ ತುಲಸೀ ಮಿಶ್ರವಾದ ಅನ್ನವನ್ನೂ ಭೋಜನಮಾಡುವರು.

೩೬. ಸ್ತ್ರೀಯರ ಮತ್ತು ಸ್ತ್ರೀಯರಲ್ಲಿ ಆಸಕ್ತರಾದವರ ಪ್ರಸಂಗವು ವಿಷ್ಣು

ಭಗವಂತಂ ವಾಸುದೇವಂ ವಿನ್ನೈಕವಿನಿತರಃ ಪುಮಾನ್ ।
ಕೋಽಪಿ ನಾಸ್ತ್ಯೇವ ಯೋ ನಾರೀಂ ಸವಿಾಕ್ಷ್ಯ ನ ವಿಮುಹ್ಯತಿ ॥ ೩೭ ॥
ಯತ್ರ ಸ್ಥಿತ್ವಾ ಮುಹುಃ ಸ್ತ್ರೀಣಾಂ ಸ್ಯಾತಾಂ ಶ್ರುತಿರವೇಕ್ಷಣೇ ।
ತ್ಯಾಗೀ ತತ್ರ ವಸೇನ್ನೈವ ವಸನ್ ಧರ್ಮಚ್ಯುತೋ ಭವೇತ್ ॥ ೩೮ ॥
ಕಾಮೋ ಲೋಭೋ ರಸಾಸ್ವಾದಃ ಸ್ನೇಹೋ ಮಾನಸ್ತಥಾ ಚ ರುಟ್ ।
ಏತೇ ತ್ಯಾಜ್ಯಾಃ ಪ್ರಯತ್ನೇನ ಷಡ್ ದೋಷಾಃ ಸಂಸೃತಿಪ್ರದಾಃ ॥ ೩೯ ॥
ಪ್ರೋಕ್ತೇಷು ಧರ್ಮೇಷ್ವೇತೇಷು ಯಸ್ಯ ಯಸ್ಯ ಚ್ಯುತಿರ್ಭವೇತ್ ।
ಯಥಾಶಕ್ತಿ ಯಥಾಶಾಸ್ತ್ರಂ ಕಾರ್ಯಾ ತತ್ತಸ್ಯ ನಿಷ್ಕೃತಿಃ ॥ ೪೦ ॥
ಇತ್ಥಂ ಚತುರ್ಣಾಂ ವರ್ಣಾನಾಮಾಶ್ರಮಾಣಾಂ ಚ ನಾರದ ।
ಧರ್ಮಾಃ ಸಂಕ್ಷೇಪತಃ ಪ್ರೋಕ್ತಾ ವೈಷ್ಣವಾನಾಂ ಚ ತೇ ಮಯಾ ॥೪೧॥
ವರ್ಣೀ ಯತಿಶ್ಚ ಧರ್ಮಸ್ಥೋ ಬ್ರಹ್ಮಲೋಕಮುಪೈತಿ ವೈ ।
ಋಷಿಲೋಕಂ ವನಸ್ಥಶ್ಚ ಗೃಹಸ್ಥಃ ಸ್ವರ್ಗಮಾಪ್ನುಯಾತ್ ॥ ೪೨ ॥

---

ಚಿಂತನೆಮಾಡುವವರಿಗೆ ಸರ್ವವಿಧದಿಂದಲೂ ಪರಿತ್ಯಾಜ್ಯವಾಗಿರುವುದು. ಅದನ್ನು ತ್ಯಾಗಮಾಡದಿದ್ದರೆ ಅವರ ಧ್ಯಾನವು ಬೇರೆ ಬಗೆಯಾಗಿಹೋಗುವುದು.

೩೭. ನಾರಿಯನ್ನು ನೋಡಿ ಮೋಹಗೊಳ್ಳದಂಥ ಪುರುಷನು ಭಗವಂತನಾದ ವಾಸುದೇವನೊಬ್ಬನು ಹೊರತಾಗಿ ಯಾವನೊಬ್ಬನೂ ಇಲ್ಲವೇ ಇಲ್ಲವು.

೩೮. ಎಲ್ಲಿ ನೆಲಸುವುದರಿಂದ ಮತ್ತೆ ಮತ್ತೆ ಸ್ತ್ರೀಯರ ಧ್ವನಿಯು ಕೇಳಬರುವುದೋ, ಸ್ತ್ರೀಯರ ದರ್ಶನವಾಗುತ್ತಿರುವುದೋ ಅಲ್ಲಿ ತ್ಯಾಗಿಯು ವಾಸಮಾಡಲೇಬಾರದು. ವಾಸಮಾಡುವನಾದರೆ ಧರ್ಮಚ್ಯುತನಾಗುತ್ತಾನೆ.

೩೯-೪೦. ಕಾಮ, ಲೋಭ, ರಸಾಸ್ವಾದ, ಸ್ನೇಹ, ಮಾನ (ಅಹಂಕಾರ), ಮತ್ತು ರೋಷ-ಈ ಆರು ದೋಷಗಳು ಸಂಸಾರವನ್ನು (ಹುಟ್ಟುಸಾವುಗಳನ್ನು) ಉಂಟುಮಾಡುತ್ತವೆ. ತ್ಯಾಗಿಯಾದವನು ಇವನ್ನು ಪ್ರಯತ್ನಪೂರ್ವಕವಾಗಿ ತೊರೆಯಬೇಕು. ಇಲ್ಲಿ ಹೇಳಲ್ಪಟ್ಟಿರುವ ಈ ಧರ್ಮಗಳಲ್ಲಿ ಯಾವಯಾವುದಕ್ಕೆ ಚ್ಯುತಿಯುಂಟಾಗುವುದೋ ಅದಕ್ಕೆಲ್ಲ ಶಕ್ತ್ಯನುಸಾರವಾಗಿ ಶಾಸ್ತ್ರಕ್ಕೆ ತಕ್ಕಂತೆ ಪರಿಹಾರ (ಪ್ರಾಯಶ್ಚಿತ್ತ) ಮಾಡಬೇಕು.

೪೧. ಎಲೈ ನಾರದನೇ! ಈ ಪ್ರಕಾರವಾಗಿ ನಾನು ನಿನಗೆ ನಾಲ್ಕು ವರ್ಣಗಳ, ನಾಲ್ಕು ಆಶ್ರಮಗಳ ಮತ್ತು ವೈಷ್ಣವಧರ್ಮಗಳನ್ನೆಲ್ಲ ಸಂಕ್ಷೇಪವಾಗಿ ಹೇಳಿದ್ದೇನೆ.

೪೨. ತನ್ನ ಧರ್ಮದಲ್ಲಿ ನೆಲಸಿದ ವರ್ಣಿಯೂ (ಬ್ರಹ್ಮಚಾರಿಯೂ), ಯತಿಯೂ ಬ್ರಹ್ಮಲೋಕವನ್ನೈದುತ್ತಾರೆ. ವಾನಪ್ರಸ್ಥನು ಸಪ್ತರ್ಷಿಲೋಕವನ್ನು ಪಡೆಯುತ್ತಾನೆ. ಗೃಹಸ್ಥನು ಸ್ವರ್ಗವನ್ನು ಪಡೆಯುತ್ತಾನೆ.

**ಭಕ್ತ್ಯಾ ಸಹೈತಾಂಶ್ಚ್ರೀವಿಷ್ಣೋರಾಚರೇಯುಸ್ತು ಯೇ ಜನಾಃ ।**
**ತೇ ತು ಸರ್ವೇಽಪಿ ದೇಹಾಂತೇ ವಿಷ್ಣುಲೋಕಮವಾಪ್ನುಯುಃ ॥ ೪೩ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ವಾನಪ್ರಸ್ಥಯತಿಧರ್ಮನಿರೂಪಣಂ" ನಾಮ ತ್ರಯೋವಿಂಶೋಽಧ್ಯಾಯಃ

---

೪೩. ಯಾವ ಜನರು ಶ್ರೀವಿಷ್ಣುವಿನಲ್ಲಿ ಭಕ್ತಿಯಿಂದ ಕೂಡಿದವರಾಗಿ ಈ ಧರ್ಮಗಳನ್ನು ಆಚರಿಸುವರೋ ಅವರೆಲ್ಲರೂ ದೇಹತ್ಯಾಗ ಮಾಡಿದ ಬಳಿಕ ವಿಷ್ಣುಲೋಕವನ್ನು ಪಡೆಯುವರು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ವಾನಪ್ರಸ್ಥಯತಿಧರ್ಮನಿರೂಪಣ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ವಿಂಶೋಽಧ್ಯಾಯಃ

## ಜ್ಞಾನಸ್ವರೂಪನಿರೂಪಣಂ

ಶ್ರೀ ನಾರಾಯಣ ಉವಾಚ :—

**ಅಥ ಜ್ಞಾನಸ್ವರೂಪಂ ತೇ ವಚ್ಮಿ ಸಾಂಖ್ಯೇನ ನಿಶ್ಚಿತಂ ।**
**ಕ್ಷೇತ್ರಾದಿ ಜ್ಞಾಯತೇ ಯೇನ ತಜ್ಜ್ಞಾನಂ ಹಿ ನಿರುಚ್ಯತೇ ॥ ೧ ॥**
**ವಾಸುದೇವಃ ಪರಂಬ್ರಹ್ಮ ಬೃಹತ್ಯಕ್ಷರಧಾಮನಿ ।**
**ಆದಾವೇಕೋಽದ್ವಿತೀಯೋಽಭೂನ್ನಿರ್ಗುಣೋ ದಿವ್ಯವಿಗ್ರಹಃ ॥ ೨ ॥**
**ಸಕಾರ್ಯಮೂಲಪ್ರಕೃತಿಃ ಸ ಕಾಲಾಕ್ಷರತೇಜಸಿ ।**
**ಪ್ರಕಾಶೇಽರ್ಕಸ್ಯ ರಾತ್ರೀವ ತಿರೋಭೂತಾ ತದಾಽಭವತ್ ॥ ೩ ॥**
**ಸಿಸೃಕ್ಷಾಥಾಭವತ್ತಸ್ಯ ಬ್ರಹ್ಮಾಂಡಾನಾಂ ಯದಾ ತದಾ ।**
**ಸಕಾಲಾವಿರ್ಬಭೂವಾದೌ ಮಹಾಮಾಯಾ ತತೋ ಹಿ ಸಾ ॥ ೪ ॥**
**ತಾಂ ಕಾಲಶಕ್ತಿಮಾದಾಯ ವಾಸುದೇವೋಕ್ಷರಾತ್ಮನಾ ।**
**ಸಿಸೃಕ್ಷಯೈಕ್ಷತ ಯದಾ ಸಾ ಚುಕ್ಷೋಭ ತದೈವ ಹಿ ॥ ೫ ॥**

---

## ಕನ್ನಡದ ಅನುವಾದ

### ಜ್ಞಾನಸ್ವರೂಪನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ :—"ಇನ್ನುಮೇಲೆ ಸಾಂಖ್ಯದಿಂದ ನಿಶ್ಚಯವಾಗಿರುವ ಜ್ಞಾನಸ್ವರೂಪವನ್ನು ನಿನಗೆ ಹೇಳುತ್ತೇನೆ. ಯಾವುದರಿಂದ ಕ್ಷೇತ್ರ (ಶರೀರ, ಆತ್ಮ, ಪರಮಾತ್ಮಸ್ವರೂಪಾದಿ)ಗಳು ತಿಳಿಯಲ್ಪಡುವುವೋ ಅದು ಜ್ಞಾನ; ಇದು ಜ್ಞಾನ ಶಬ್ದದ ನಿರುಕ್ತಾರ್ಥ.

೨. ವಾಸುದೇವನು ಪರಬ್ರಹ್ಮವು. ಆದಿಯಲ್ಲಿ ದೊಡ್ಡದಾದ ಅಕ್ಷರ ಧಾಮದಲ್ಲಿ ಆ ವಾಸುದೇವನು ನಿರ್ಗುಣನಾಗಿ ದಿವ್ಯವಿಗ್ರಹಶರೀರಧಾರಿಯಾಗಿ ತಾನೊಬ್ಬನೇ ಅದ್ವಯನಾಗಿ ನೆಲಸಿದ್ದನು.

೩. ಆಗ ಕಾರ್ಯದಿಂದೊಡಗೂಡಿದ ಮೂಲಪ್ರಕೃತಿಯು ಕಾಲಸಮೇತ ವಾದ ಅಕ್ಷರತೇಜಸ್ಸಿನಲ್ಲಿ, ಸೂರ್ಯಪ್ರಕಾಶದಲ್ಲಿ ರಾತ್ರಿಯು ಹೇಗೋ ಹಾಗೆ ಪರಮಾತ್ಮನಿಂದ ಮರೆಯಾಗಿಹೋಗಿದ್ದಿತು. ಆತನು ಮಾಯಾತೀತನೂ, ಮಾಯಾದೂರನೂ ಆಗಿದ್ದನು.

೪. ಆ ಪರಬ್ರಹ್ಮನಿಗೆ ಬ್ರಹ್ಮಾಂಡಗಳನ್ನು ಸೃಜಿಸಬೇಕೆಂಬ ಇಚ್ಛೆ ಯುಂಟಾದಾಗ ಮೊದಲು ಆ ಮೂಲಪ್ರಕೃತಿಯು ಆವಿರ್ಭವಿಸಿದಳು. ಅವಳೇ ಮಹಾಮಾಯೆಯು.

೫. ಆ ಕಾಲಶಕ್ತಿ (ಮೂಲಪ್ರಕೃತಿ)ಯನ್ನು ಸ್ವೀಕರಿಸಿ ಶ್ರೀವಾಸುದೇವನು

**ತಸ್ಯಾಃ ಪ್ರಧಾನಪುರುಷಕೋಟಯೋ ಜಜ್ಞಿರೇ ಮುನೇ ।**
**ಯುಜ್ಯಂತೇ ಸ್ಮ ಪ್ರಧಾನೈಸ್ತೇ ಪುರುಷಾಶ್ಚೇಚ್ಛಯಾ ಪ್ರಭೋಃ ॥ ೬ ॥**
**ಪುಮಾಂಸೋ ನಿದಧುರ್ಗರ್ಭಾಂಸ್ತೇಷು ತೇಭ್ಯಶ್ಚ ಜಜ್ಞಿರೇ ।**
**ಬ್ರಹ್ಮಾಂಡಾನಿ ಹ್ಯಸಂಖ್ಯಾನಿ ತತ್ರೈಕಂ ತು ವಿವಿಚ್ಯತೇ ॥ ೭ ॥**
**ಆದೌ ಜಜ್ಞೇ ಮಹಾಂಸ್ತಸ್ಮಾತ್ಪುಂಸೋ ವೀರ್ಯಾದ್ಧಿರಣ್ಮಯಾತ್ ।**
**ಅಹಂಕಾರಸ್ತತಸ್ತಸ್ಮಾದ್ಗುಣಾಃ ಸತ್ತ್ವಾದಯಸ್ತ್ರಯಃ ॥ ೮ ॥**
**ತಮಸಃ ಪಂಚ ತನ್ಮಾತ್ರಾ ಮಹಾಭೂತಾನಿ ಜಜ್ಞಿರೇ ।**
**ದಶೇಂದ್ರಿಯಾಣಿ ರಜಸೋ ಬುದ್ಧ್ಯಾ ಸಹ ಮಹಾನಸುಃ ॥ ೯ ॥**
**ಸತ್ತ್ವಾದಿಂದ್ರಿಯದೇವಾಶ್ಚ ಜಾಯಂತೇ ಸ್ಮ ಮನಸ್ತಥಾ ।**
**ಸಾಮಾನ್ಯತಸ್ತತ್ತ್ವಸಂಜ್ಞಾ ಏತೇ ದೇವಾಃ ಪ್ರಕೀರ್ತಿತಾಃ ॥ ೧೦ ॥**
**ಪ್ರೇರಿತಾ ವಾಸುದೇವೇನ ಸ್ವಸ್ವಾಂಶೈರೈಶ್ವರಂ ವಪುಃ ।**
**ಅಜೀಜನನ್ವಿರಾಟ್‌ಸಂಜ್ಞಂ ತೇ ಚರಾಚರಸಂಶ್ರಯಂ ॥ ೧೧ ॥**

---

ಅಕ್ಷರಾತ್ಮನಾಗಿ ಬ್ರಹ್ಮಾಂಡವನ್ನು ಸೃಜಿಸಬೇಕೆಂಬ ಉದ್ದೇಶದಿಂದ ಆ ಶಕ್ತಿಯನ್ನೊಮ್ಮೆ ನೋಡಿದನು. ಆ ಕೂಡಲೇ ಅವಳು ಕ್ಷೋಭೆಗೊಂಡಳು.

೬. ಎಲೈ ಮುನಿಯೇ! ಅವಳಲ್ಲಿ ಕೋಟ್ಯನುಕೋಟಿ ಸಂಖ್ಯೆಯ ಪ್ರಧಾನ ಪುರುಷರು ಜನಿಸಿದರು. ಆ ಪುರುಷರು ಪ್ರಭುವಿನ ಇಚ್ಛೆಯಂತೆ ಪ್ರಧಾನರೊಡನೆ ಸಂಯೋಗಹೊಂದಿದನು.

೭. ಪುರುಷರು ಅವರಲ್ಲಿ ಗರ್ಭವನ್ನು ಇಟ್ಟರು. ಅವರಿಂದ ಅಸಂಖ್ಯಾತ ಬ್ರಹ್ಮಾಂಡಗಳು ಹುಟ್ಟಿದವು. ಇದೀಗ ಅವುಗಳಲ್ಲಿ ಒಂದನ್ನುಮಾತ್ರ ವಿವೇಚಿಸಿ ನೋಡಲಾಗುತ್ತದೆ.

೮. ಆ ಪುರುಷನ ಹಿರಣ್ಮಯವಾದ ವೀರ್ಯದಿಂದ ಆದಿಯಲ್ಲಿ ಮಹತ್ತಾದ ಅಹಂಕಾರವು ಜನಿಸಿತು. ಆ ಬಳಿಕ ಅದರಿಂದ ಸತ್ತ್ವವೇ ಮೊದಲಾದ ಮೂರು ಗುಣಗಳು ಜನಿಸಿದವು.

೯. ತಮಸ್ಸಿನಿಂದ ಪಂಚತನ್ಮಾತ್ರೆಗಳೂ, ಮಹಾಭೂತಗಳೂ ಹುಟ್ಟಿದವು. ದಶೇಂದ್ರಿಯಗಳು (ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯಗಳು) ಏಕಾದಶೇಂದ್ರಿಯವೆನಿಸಿದ ಬುದ್ಧಿ ಮತ್ತು ಮಹತ್ತಾದ ಪ್ರಾಣ ಇವು ರಜಸ್ಸಿನಿಂದ ಉದಿಸಿದುವು.

೧೦. ಸತ್ತ್ವದಿಂದ ಇಂದ್ರಿಯದ ಅಭಿಮಾನದೇವತೆಗಳೂ, ಮನಸ್ಸೂ ಜನಿಸಿದವು. ಈ ದೇವತೆಗಳು ಸಾಮಾನ್ಯತಃ ತತ್ತ್ವಗಳೆಂಬ ಹೆಸರಿನಿಂದ ಕರೆಯಲ್ಪಡುತ್ತಾರೆ.

೧೧. ವಾಸುದೇವನಿಂದ ಪ್ರೇರಿತರಾಗಿ ತಮ್ಮತಮ್ಮ ಅಂಶಗಳಿಂದ ಚರಾ

ಸ ಚ ವೈ ರಾಜಪುರುಷಃ ಸ್ವಸೃಷ್ಟಾಸ್ವಪ್ಸ್ವಶೇತ ಯತ್ ।
ತೇನ ನಾರಾಯಣ ಇತಿ ಪ್ರೋಚ್ಯತೇ ನಿಗಮಾದಿಭಿಃ ॥ ೧೨ ॥
ತನ್ನಾಭಿಪದ್ಮಾದ್ಬ್ರಹ್ಮಾಸೀದ್ರಜಸೋಽಥ ಹೃದಂಬುಜಾತ್ ।
ಜಜ್ಞೇ ವಿಷ್ಣುಃ ಸತ್ವಗುಣೋ ಲಲಾಟಾತ್ತಾಮಸೋ ಹರಃ ॥ ೧೩ ॥
ಏತೇಭ್ಯ ಏವ ಸ್ಥಾನೇಭ್ಯಸ್ತಿಸ್ರ ಆಸಂಶ್ಚ ಶಕ್ತಯಃ ।
ತತ್ರಾಸೀತ್ತಾಮಸೀ ದುರ್ಗಾ ಸಾವಿತ್ರೀ ರಾಜಸೀ ತಥಾ ।
ಸಾತ್ವಿಕೀ ಶ್ರೀಶ್ಚೇತಿ ಸರ್ವಾ ವಸ್ತ್ರಾಲಂಕಾರಶೋಭಿತಾಃ ॥ ೧೪ ॥
ತಾ ವೈ ರಾಜಾಜ್ಞಯಾ ತ್ರೀಂಶ್ಚ ಬ್ರಹ್ಮಾದೀನ್ ಪ್ರತಿಪೇದಿರೇ ।
ದುರ್ಗಾ ರುದ್ರಂ ಚ ಸಾವಿತ್ರೀ ಬ್ರಹ್ಮಾಣಂ ವಿಷ್ಣುಮಂತಿಮಾ ॥ ೧೫ ॥
ಚಂಡಿಕಾದ್ಯಾಶ್ಚ ದುರ್ಗಾಯಾ ಅಂಶೇನಾಸನ್ ಸಹಸ್ರಶಃ ।
ತ್ರಯೀ ಮುಖ್ಯಾಶ್ಚ ಸಾವಿತ್ರ್ಯಾಃ ಶಕ್ತಯೋಂಶೇನ ಜಜ್ಞಿರೇ ।
ದುಸ್ಸಹಾ ಪ್ರಮುಖಾಶ್ಚಾಸನ್ನಂಶೇನೈವ ಶ್ರಿಯೋ ಮುನೇ ॥ ೧೬ ॥

---

ಚರಗಳಿಗೆ ಆಶ್ರಯವಾಗಿ 'ವಿರಾಟ್' ಎಂಬ ಹೆಸರನ್ನು ಹೊಂದಿರುವ ಈಶ್ವರ ಶರೀರವನ್ನು ಸೃಜಿಸಿದನು.

೧೨. ಆ ವೈರಾಜಪುರುಷನು ತನ್ನಿಂದ ಸೃಜಿಸಲ್ಪಟ್ಟ ನೀರಿನಲ್ಲಿ ಮಲಗಿದನಾದುದರಿಂದ ನಿಗಮಾದಿ ಪ್ರಮಾಣಗಳಿಂದ ನಾರಾಯಣನೆಂದು ಹೇಳಲ್ಪಡುತ್ತಾನೆ.

೧೩. ಆ ನಾರಾಯಣನ ರಜೋಗುಣದಿಂದ ಕೂಡಿದ ನಾಭಿಪದ್ಮದಿಂದ ಬ್ರಹ್ಮನು ಹುಟ್ಟಿದನು. ಹೃದಯಕಮಲದಿಂದ ಸತ್ತ್ವಗುಣವುಳ್ಳ ವಿಷ್ಣುವು ಜನಿಸಿದನು. ಹಣೆಯ ಮೂಲಕ ತಮೋಗುಣದಿಂದ ಹರನು ಜನಿಸಿದನು.

೧೪. ಈ ಸ್ಥಾನಗಳಿಂದಲೇ ಮೂರು ಶಕ್ತಿಗಳು ಮೂಡಿದವು. ಅವರಲ್ಲಿ ತಮೋಗುಣದವಳು ದುರ್ಗೆಯಾದಳು; ರಜೋಗುಣದವಳು ಸಾವಿತ್ರಿಯಾದಳು. ಸಾತ್ತ್ವಿಕ ಗುಣದವಳೇ ಶ್ರೀದೇವಿಯಾದಳು. ಇವರೆಲ್ಲರೂ ವಸ್ತ್ರಾಲಂಕಾರಗಳಿಂದ ಶೋಭಿತರಾಗಿದ್ದರು.

೧೫. ಈ ಶಕ್ತಿದೇವಿಯರು ವಿರಾಟ್‌ಪುರುಷನ ಆಜ್ಞೆಯಿಂದ ಬ್ರಹ್ಮನೇ ಮೊದಲಾದ ಮೂವರನ್ನೂ ವರಿಸಿ ಸೇರಿದರು. ದುರ್ಗೆಯು ರುದ್ರನನ್ನೂ, ಸಾವಿತ್ರಿಯು ಬ್ರಹ್ಮನನ್ನೂ, ಕೊನೆಯವಳಾದ ಶ್ರೀಯು ವಿಷ್ಣುವನ್ನೂ ಸೇರಿದರು.

೧೬. ಎಲೈ ಮುನಿಯೇ! ದುರ್ಗೆಯ ಅಂಶದಿಂದ ಚಂಡಿಕೆ ಮೊದಲಾದ ಸಾವಿರಾರು ಮಂದಿ ಶಕ್ತಿದೇವಿಯರು ಜನಿಸಿದರು. ಸಾವಿತ್ರಿಯ ಅಂಶದಿಂದ ತ್ರಯೀ ಮೊದಲಾದ ಶಕ್ತಿದೇವತೆಗಳು ಜನಿಸಿದರು. ಶ್ರೀಯ ಅಂಶದಿಂದ 'ದುಸ್ಸಹಾ' ಮೊದಲಾದ ದೇವಿಯರು ಉದಿಸಿದರು.

**ತತ್ರಾದಿತೋ ಯೋ ಬ್ರಹ್ಮಾಸೀದ್ವೈರಾಜನಾಭಿಪದ್ಮತಃ ।**
**ಏಕಾರ್ಣವೇ ತದಬ್ಜಸ್ಥಃ ಸ ಕಂಚಿದಪಿ ನೈಕ್ಷತ ॥ ೧೭ ॥**
**ವಿಸರ್ಗಬುದ್ಧಿಮಪ್ರಾಪ್ತೋ ನಾತ್ಮಾನಂ ಚ ವಿವೇದ ಸಃ ।**
**ಕೋಽಹಂ ಕುತ ಇತಿ ಧ್ಯಾಯನ್ ತದ್ವಿದ್ಯಕ್ಷತ್ಕಜಾಶ್ರಯಂ ॥ ೧೮ ॥**
**ನಾಲಂ ಪ್ರವಿಶ್ಯಾಽಥೋ ಯಾತುಸ್ತನ್ಮೂಲಂ ಚ ವಿಚಿನ್ವತಃ ।**
**ಸಂವತ್ಸರಶತಂ ಯಾತಂ ತಸ್ಯ ನಾಂತಂ ತು ಸೋಽಲಭತ್ ॥ ೧೯ ॥**
**ಊರ್ಧ್ವಂ ಪುನರುಪೇತ್ಯಾಽಥ ಶ್ರಾಂತಶ್ಚ ನಿಷಸಾದ ಸಃ ।**
**ಅದೃಶ್ಯಮೂರ್ತಿರ್ಭಗವಾನೂಚೇ ತಪತಪೇತಿ ತಂ ॥ ೨೦ ॥**
**ತಚ್ಛ್ರುತ್ವಾ ತತ್ಪ್ರವಕ್ತಾರಮದೃಷ್ಟ್ವಾ ಚ ಸ ಸರ್ವತಃ ।**
**ಗುರೂಪದಿಷ್ಟವತ್ತೇಪೇ ದಿವ್ಯಂ ವರ್ಷಸಹಸ್ರಕಂ ॥ ೨೧ ॥**
**ಪದ್ಮೇ ತಪಸ್ಯತೇ ತಸ್ಮೈ ತಪಃ ಶುದ್ಧಾತ್ಮನೇ ತತಃ ।**
**ಸಮಾಧೌ ದರ್ಶಯಾಮಾಸ ಧಾಮ ವೈಕುಂಠಮಚ್ಯುತಃ ॥ ೨೨ ॥**

---

೧೭. ಮೊದಲು ವಿರಾಟ್ ಪುರುಷನ ನಾಭಿಪದ್ಮದಿಂದ ಯಾವ ಬ್ರಹ್ಮನು ಉದಿಸಿಬಂದನೋ ಅವನೇ ಎಲ್ಲೆಲ್ಲಿಯೂ ಏಕರೂಪವಾಗಿ ವ್ಯಾಪಿಸಿರುವ ಮಹಾಸಾಗರದಲ್ಲಿ ಆ ನಾಭಿಪದ್ಮದಮೇಲೆ ನೆಲಸಿ ಏನೊಂದನ್ನೂ ಕಾಣಲಿಲ್ಲ.

೧೮. ಸೃಷ್ಟಿಮಾಡಬೇಕೆಂಬ ಬುದ್ಧಿಯೂ ಅವನಿಗೆ ಉಂಟಾಗಲಿಲ್ಲ. ತನ್ನನ್ನೂ ತಾನು ಅರಿಯಲಿಲ್ಲ. 'ನಾನು ಯಾರು? ಏಕೆ ಬಂದೆ?' ಎಂದು ಯೋಚಿಸುತ್ತ ಆ ಸಾಗರದಲ್ಲಿ ಎಲ್ಲಿಯೂ ಆಶ್ರಯವನ್ನೇ ಕಾಣದವನಾದನು.

೧೯. ಅವನು ಆ ಪದ್ಮದ ನಾಳವನ್ನು ಪ್ರವೇಶಿಸಿ ಅದರ ಮೂಲವನ್ನು ಹುಡುಕುತ್ತ ಕೆಳಮುಖವಾಗಿ ಹೋಗತೊಡಗಿದನು. ಹೋಗಹೋಗುತ್ತ ನೂರಾರು ವರ್ಷಗಳು ಕಳೆಯಿತು; ಅದರ ತುದಿಯನ್ನು ಮಾತ್ರ ಕಾಣಲಿಲ್ಲ.

೨೦. ಮತ್ತೆ ಮೇಲಕ್ಕೆ ಹತ್ತಿಬಂದು ಆಯಾಸದಿಂದ ಬಳಲಿ ಅಲ್ಲಿಯೇ ಕುಳಿತುಕೊಂಡನು. ಆಗ ಭಗವಂತನು ಅದೃಶ್ಯಮೂರ್ತಿಯಾಗಿ 'ತಪಸ್ಸು ಮಾಡು, ತಪಸ್ಸುಮಾಡು' ಎಂದು ಅವನಿಗೆ ಹೇಳಿದನು.

೨೧. ಅದನ್ನಾಲಿಸಿ ಸುತ್ತಮುತ್ತ ಎಲ್ಲಿಯೂ ಆ ನುಡಿಗಳನ್ನಾಡಿದವನನ್ನು ಕಾಣದೆ ಆ ಅದೃಶ್ಯಗುರುವಿನಿಂದ ಉಪದೇಶವಾದ ರೀತಿಯಲ್ಲಿಯೇ ಸಹಸ್ರ ದಿವ್ಯ ವರ್ಷಗಳವರೆಗೆ ತಪಸ್ಸುಮಾಡಿದನು.

೨೨. ಆ ಪದ್ಮದಲ್ಲಿಯೆ ಕುಳಿತು ತಪಸ್ಸುಮಾಡುತ್ತ, ಆ ತಪಸ್ಸಿನಿಂದಲೇ ಶುದ್ಧಾತ್ಮನಾದ ಆ ಬ್ರಹ್ಮನಿಗೆ ಅನಂತರದಲ್ಲಿ ಅಚ್ಯುತನು ಸಮಾಧಿಯಲ್ಲಿ ವೈಕುಂಠಧಾಮವನ್ನು ಕಾಣಿಸಿಕೊಂಡನು.

ಪ್ರಾಧಾನಿಕಾ ಗುಣಾ ಯತ್ರ ತ್ರಯೋ ಅಪಿ ರಜಾದಯಃ ।
ನ ಭವಂತ್ಯಲ್ಪಮಪಿ ಯತ್ ಕಾಲಮಾಯಾಭಯಂ ನ ಚ ॥ ೨೩ ॥
ಸಹೋದಿತಾ ಕಾರ್ಯಯುತವದ್ಭಾಸ್ವರೇ ತತ್ರ ತೇಜಸಿ ।
ವಾಸುದೇವಂ ದದರ್ಶಾಽಸೌ ರಮ್ಯದಿವ್ಯಸಿತಾಕೃತಿಂ ॥ ೨೪ ॥
ಚತುರ್ಭುಜಂ ಗದಾಪದ್ಮಶಂಖಚಕ್ರಧರಂ ವಿಭುಂ ।
ಪೀತಾಂಬರಂ ಮಹಾರತ್ನಕಿರೀಟಾದಿವಿಭೂಷಣಂ ॥ ೨೫ ॥
ನಂದತಾರ್ಕ್ಷ್ಯಾದಿಭಿರ್ಜುಷ್ಟಂ ಪಾರ್ಷದೈಶ್ಚ ಚತುರ್ಭುಜೈಃ ।
ಸಿದ್ಧಿಭಿಶ್ಚಾಷ್ಟಭಿಃ ಷಡ್ಭಿರ್ಬದ್ಧಾಂಜಲಿಪುಟೈರ್ಭಗೈಃ ॥ ೨೬ ॥
ಸಿಂಹಾಸನೇ ಶ್ರಿಯಾ ಸಾಕಮುಪವಿಷ್ಟಂ ತಮೀಶ್ವರಂ ।
ಪ್ರಣಮ್ಯ ಪ್ರಾಂಜಲಿಸ್ತಸ್ಥೌ ವಿರಿಂಚೋ ಹೃಷ್ಟಮಾನಸಃ ॥ ೨೭ ॥
ತಂ ಪ್ರಾಹ ಭಗವಾನ್ ಬ್ರಹ್ಮನ್ ತುಷ್ಟೋಽಹಂ ತಪಸಾ ತವ ।
ವರಂ ವರಯ ಮತ್ತಸ್ತ್ವಂ ಸ್ವಾಭೀಷ್ಟಂ ಯತ್ಪ್ರಿಯೋಽಸಿ ಮೇ ॥ ೨೮ ॥
ಇತ್ಯುಕ್ತಸ್ತೇನ ತಂ ಜಾನಂಸ್ತಪಸಿ ಪ್ರೇರಕಂ ಪ್ರಭುಂ ।
ಸ್ವಂ ಚ ವಿಶ್ವಸೃಜಂ ಬ್ರಹ್ಮಾ ಯಯಾಚೇಽಭಿಮತಂ ವರಂ ॥ ೨೯ ॥

---

೨೩. ಆ ವೈಕುಂಠಧಾಮದಲ್ಲಿ ರಜಸ್ಸೇ ಮೊದಲಾದ ಪ್ರಧಾನಗುಣಗಳು ಮೂರೂ ಸ್ವಲ್ಪವೂ ಇರುವುದಿಲ್ಲ. ಕಾಲಮಾಯೆಯ (ಮೂಲಪ್ರಕೃತಿಯ) ಭಯವು ಕೂಡ ಇರುವುದಿಲ್ಲ.

೨೪. ಅಲ್ಲಿ ಒಟ್ಟಿಗೆ ಉದಿಸಿದ ಅಯುತ (ಹತ್ತುಸಾವಿರ) ಸೂರ್ಯರಂತೆ ಬಹು ಪ್ರಕಾಶದಿಂದ ಹೊಳೆಯುವ ತೇಜಸ್ಸಿನಲ್ಲಿ ನೀಲವರ್ಣವೂ, ರಮ್ಯವೂ ಆದ ದಿವ್ಯಾಕೃತಿಯುಳ್ಳ ಆ ವಾಸುದೇವನನ್ನು ಅವನು ಕಂಡನು.

೨೫–೨೭. ಚತುರ್ಭುಜನಾಗಿ, ಗದೆ, ಪದ್ಮ, ಶಂಖ ಚಕ್ರಗಳನ್ನು ಧರಿಸಿ ಪೀತಾಂಬರವನ್ನುಟ್ಟು ಮಹಾರತ್ನಕಿರೀಟವೇ ಮೊದಲಾದ ಭೂಷಣಗಳಿಂದ ಅಲಂಕೃತನಾಗಿ, ನಾಲ್ಕುನಾಲ್ಕು ತೋಳುಗಳುಳ್ಳವರಾದ ನಂದ, ತಾರ್ಕ್ಷ್ಯ ಮೊದಲಾದ ಪಾರ್ಷದರಿಂದ ಸುತ್ತುವರೆಯಲ್ಪಟ್ಟವನಾಗಿ, ಕೈಮುಗಿದುಕೊಂಡು ನಿಂತ ಅಷ್ಟಸಿದ್ಧಿಗಳಿಂದಲೂ, ಆರು ಭಗವದ್ಗುಣಗಳಿಂದಲೂ ಸೇವಿತನಾಗಿ, ಶ್ರೀಯೊಡನೆ ಸಿಂಹಾಸನದಲ್ಲಿ ಮಂಡಿಸಿದವನಾಗಿಯೂ ಇದ್ದ ವಿಭುವಾದ ಆ ಈಶ್ವರನನ್ನು ಕಂಡನು. ಕಂಡು ಆ ವಿರಿಂಚನು ಪ್ರಣಾಮಮಾಡಿ ಕೈಜೋಡಿಸಿ ಕೊಂಡು ಹರ್ಷದಿಂದ ತುಂಬಿದ ಮನಸ್ಸುಳ್ಳವನಾಗಿ ನಿಂತುಕೊಂಡನು.

೨೮. ಭಗವಂತನು ಅವನನ್ನು ಕುರಿತು, '' ಎಲೈ ಬ್ರಹ್ಮನೇ! ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನೀನು ನನಗೆ ಪ್ರಿಯನಾಗಿರುವೆಯಾದುದರಿಂದ ನಿನಗಿಷ್ಟವಾದ ವರವನ್ನು ಕೇಳಿಕೊ'' ಎಂದು ಹೇಳಿದನು.

೨೯. ಆ ಭಗವಂತನಿಂದ ಹೀಗೆ ಹೇಳಲ್ಪಟ್ಟ ಆ ಬ್ರಹ್ಮನು, ತನ್ನ ತಪಸ್ಸಿಗೆ

**ಪ್ರಜಾವಿಸರ್ಗಶಕ್ತಿಂ ಮೇ ದೇಹಿ ತುಭ್ಯಂ ನಮಃ ಪ್ರಭೋ ।**
**ತತ್ರಾಪಿ ಚ ನ ಬದ್ಧೇಯಂ ಯಥಾ ಕುರು ತಥಾ ಕೃಪಾಂ ॥ ೩೦ ॥**
**ತತಸ್ತಂ ಭಗವಾನೂಚೇ ಸೇತ್ಸ್ಯತೇ ತೇ ಮನೋರಥಃ ।**
**ವೈರಾಜೇನ ಮಯಾತ್ಮೈಕ್ಯಂ ಭಾವಯಿತ್ವಾ ಸಮಾಧಿನಾ ।**
**ಪ್ರಜಾಃ ಸೃಜಾಽಥ ಸ್ವಾಸಾಧ್ಯೇ ಕಾರ್ಯೇ ಸ್ಮರ್ಯೋಽಹಮಿಷ್ಟದಃ ॥೩೧॥**
**ಇತ್ಯುಕ್ತ್ವಾಂತರ್ದಧೇ ವಿಷ್ಣುರ್ಬ್ರಹ್ಮಾಪ್ಯೇಕಸಮಾಧಿನಾ ।**
**ವೈರಾಜೇನಾಥ ಲೋಕಾನ್ ಪ್ರಾಗ್ಲೀನಾನ್ ಸರ್ವಾನ್ಸ್ವ ಐಕ್ಷತ ॥ ೩೨ ॥**
**ವಿಸರ್ಗಶಕ್ತಿಂ ಸಂಪ್ರಾಪ್ಯ ಸ ಸರ್ಗಾಯ ಮನೋ ದಧೇ ।**
**ಬ್ರಹ್ಮಜ್ಯೋತಿರ್ಮಯಸ್ತಾವದಾದಿತ್ಯಃ ಪ್ರಾದುರಾಸ ಹ ॥ ೩೩ ॥**
**ಸ್ಥಾಪಯಿತ್ವಾಂಡಮಧ್ಯೇ ತಂ ತತಃ ಸ ಮನಸಾಽಸೃಜತ್ ।**
**ತಪೋಭಕ್ತಿವಿಶುದ್ಧೇನ ಮುನೀನಾದ್ಯಾಂಶ್ಚತುಃಸನಾನ್ ॥ ೩೪ ॥**

---

ಪ್ರೇರಕನಾದ ಪ್ರಭುವೇ ಅವನೆಂದು ತಿಳಿದುಕೊಂಡು ತನಗೆ ಅಭಿಮತವಾದ ವರವನ್ನು ಬೇಡಿಕೊಂಡನು.

೩೦. "ಪ್ರಭುವೇ! ನಿನಗೆ ನಮಸ್ಕಾರವು! ಪ್ರಜೆಗಳನ್ನು ಸೃಜಿಸುವ ಶಕ್ತಿಯನ್ನು ನನಗೆ ದಯಪಾಲಿಸು. ಅದರಲ್ಲಿ ಕೂಡ ನಾನು ಸಿಲುಕಿಕೊಳ್ಳದಹಾಗೆ ಕೃಪೆಮಾಡು" ಎಂದು ಬೇಡಿದನು.

೩೧. ಬಳಿಕಲಾ ಭಗವಂತನು ಅವನನ್ನು ಕುರಿತು, "ನಿನ್ನ ಮನೋರಥವು ಸಿದ್ಧಿಸುತ್ತದೆ. ವಿರಾಟ್ಸ್ವರೂಪನಾದ ನನ್ನೊಡನೆ ಸಮಾಧಿಯಿಂದ ಆತ್ಮೈಕ್ಯವನ್ನು ಭಾವಿಸಿ ಪ್ರಜೆಗಳನ್ನು ಸೃಷ್ಟಿಮಾಡು. ಹಾಗೆ ಮಾಡುವಾಗ ನಿನಗೆ ಅಸಾಧ್ಯವಾದ ಕಾರ್ಯದಲ್ಲಿ ನನ್ನನ್ನು ಸ್ಮರಿಸು. ಹಾಗೆ ಸ್ಮರಿಸಿದಲ್ಲಿ ನಿನ್ನ ಇಷ್ಟವನ್ನು ನೆರವೇರಿಸಿಕೊಡುತ್ತೇನೆ" ಎಂದು ಹೇಳಿದನು.

೩೨. ಹೀಗೆ ನುಡಿದು ಆ ವಿಷ್ಣುವು ಅಂತರ್ಧಾನವನ್ನು ಹೊಂದಿದನು. ಬ್ರಹ್ಮನೂ ಹಿಂದೆ ಇದ್ದು ಈಗ ಲೀನವಾಗಿಹೋಗಿದ್ದ ಸರ್ವಲೋಕಗಳನ್ನೂ ಅಖಂಡ ವಿರಾಟ್ಸಂಬಂಧವಾದ ಸಮಾಧಿಯಿಂದ ತನ್ನಲ್ಲಿಯೆ ಕಂಡುಕೊಂಡನು.

೩೩. ಅವನು ಸೃಷ್ಟಿಶಕ್ತಿಯನ್ನು ಪಡೆದು ಸೃಷ್ಟಿಮಾಡಲು ಮನಸ್ಸಿಟ್ಟನು. ಅಷ್ಟರಲ್ಲಿ ಬ್ರಹ್ಮಜ್ಯೋತಿರ್ಮಯನಾದ ಆದಿತ್ಯನು (ಸೂರ್ಯನು) ಉದಿಸಿ ಬಂದನು.

೩೪. ಬಳಿಕ ಆ ಸೂರ್ಯನನ್ನು ಅಂಡದ ಮಧ್ಯದಲ್ಲಿ ಸ್ಥಾಪಿಸಿ, ಅವನು ತಪಸ್ಸಿನಿಂದಲೂ, ಭಕ್ತಿಯಿಂದಲೂ, ಪರಿಶುದ್ಧವಾದ ಮನಸ್ಸಿನಿಂದ ಆದ್ಯರಾದ ಸನ, ಸನಕ, ಸನಂದನ, ಸನತ್ಸುಜಾತರೆಂಬ ನಾಲ್ವರು ಮುನಿಗಳನ್ನು ಸೃಜಿಸಿದನು.

ಪ್ರಜಾಃ ಸೃಜತ ಚೇತ್ಯೂಚೇ ತಾಂಸ್ತದಾ ತೇ ತು ತದ್ವಚಃ ।
ನ ಜಗೃಹುರ್ನೈರ್ಷ್ಠಿಕೇಂದ್ರಾಸ್ತೇಭ್ಯಶ್ಚುಕ್ರೋಧ ವಿಶ್ವಸೃಟ್ ॥ ೩೫ ॥
ಕ್ರುದ್ಧಸ್ಯ ತಸ್ಯ ಭಾಲಾಚ್ಚ ರುದ್ರ ಆಸೀತ್ತಮೋಮಯಃ ।
ಮನ್ಯುಂ ನಿಯಮ್ಯ ಮನಸಾ ಪ್ರಜೇಶಾನ್ ಸೋಽಸೃಜತ್ತತಃ ॥ ೩೬ ॥
ಮರೀಚಿಮತ್ರಿಂ ಪುಲಹಂ ಪುಲಸ್ತ್ಯಂ ಚ ಭೃಗುಂ ಕ್ರತುಂ ।
ವಸಿಷ್ಠಂ ಕರ್ದಮಂ ಚೈವ ದಕ್ಷಮಂಗಿರಸಂ ತಥಾ ॥ ೩೭ ॥
ಧರ್ಮಂ ತತಃ ಸ ಹೃದಯಾದಧರ್ಮಂ ಪೃಷ್ಠತಸ್ತಥಾ ।
ಮನಸಃ ಕಾಮಮಾಸ್ಯಾಚ್ಚ ವಾಣೀಂ ಕ್ರೋಧಂ ಭ್ರುವೋಽಸೃಜತ್ ॥ ೩೮ ॥
ಶೌಚಂ ತಪೋ ದಯಾ ಸತ್ಯಮಿತಿ ಧರ್ಮಪದಾನಿ ಚ ।
ಚತುರ್ಭ್ಯೋ ವದನೇಭ್ಯಶ್ಚ ಚತ್ವಾರಿ ಸಸೃಜೇ ತತಃ ॥ ೩೯ ॥
ಋಗ್ವೇದಂ ವದನಾತ್ಪೂರ್ವಾದ್ಯಜುರ್ವೇದಂ ಚ ದಕ್ಷಿಣಾತ್ ।
ಸಸರ್ಜ ಪಶ್ಚಿಮಾತ್ಸಾಮ ಸೌಮ್ಯಾಚ್ಚಾಥರ್ವಸಂಜ್ಞಿತಂ ॥ ೪೦ ॥
ಇತಿಹಾಸ ಪುರಾಣಾನಿ ಯಜ್ಞಾನ್ವಿಪ್ರಶತಂ ತಥಾ ।
ವಸ್ವಾದಿತ್ಯ ಮರುದ್ವಿಶ್ವಾನ್ಸಾಧ್ಯಾಂಶ್ಚ ಮುಖತೋಽಸೃಜತ್ ॥ ೪೧ ॥

---

೩೫. ಅವರನ್ನು ಕುರಿತು 'ಪ್ರಜೆಗಳನ್ನು ಸೃಜಿಸಿರಿ' ಎಂದು ನುಡಿದನು. ಆಗ ನೈಷ್ಠಿಕಶ್ರೇಷ್ಠರಾದ ಅವರು ಆ ಮಾತನ್ನು ಗ್ರಹಿಸಲಿಲ್ಲ. ಆಗ ವಿಶ್ವಸೃಷ್ಟಿಕರ್ತನಾದ ಬ್ರಹ್ಮದೇವನು ಅವರಮೇಲೆ ಕೋಪಗೊಂಡನು.

೩೬–೩೭. ಕ್ರುದ್ಧನಾದ ಅವನ ಹಣೆಯಿಂದ ತಮೋಮಯನಾದ ರುದ್ರನುದ್ಭವಿಸಿದನು. ಬಳಿಕ ಆ ಕೋಪವನ್ನು ಅಂತೆಯೆ ಅಡಗಿಸಿಕೊಂಡು ಅವನು ಮರೀಚ, ಅತ್ರಿ, ಪುಲಹ, ಪುಲಸ್ತ್ಯ, ಭೃಗು, ಕ್ರತು, ವಸಿಷ್ಠ, ಕರ್ದಮ, ದಕ್ಷ, ಅಂಗಿರಸ ಎಂಬ ಈ ಪ್ರಜೇಶ್ವರರನ್ನು ಸೃಜಿಸಿದನು.

೩೮. ಬಳಿಕ ಅವನು ಹೃದಯದಿಂದ ಧರ್ಮವನ್ನೂ, ಬೆನ್ನಿನಿಂದ ಅಧರ್ಮವನ್ನೂ, ಮನಸ್ಸಿನಿಂದ ಕಾಮವನ್ನೂ, ಬಾಯಿಯಿಂದ ವಾಣಿಯನ್ನೂ, ಹುಬ್ಬುಗಳಿಂದ ಕ್ರೋಧವನ್ನೂ ಸೃಜಿಸಿದನು.

೩೯. ಶೌಚ, ತಪಸ್ಸು, ದಯೆ, ಸತ್ಯ ಇವು ಧರ್ಮದ ನಾಲ್ಕು ಪಾದಗಳು. ಈ ನಾಲ್ಕನ್ನೂ ಆತನು ತನ್ನ ನಾಲ್ಕು ಮುಖಗಳಿಂದ ಸೃಷ್ಟಿಮಾಡಿದನು.

೪೦. ಪೂರ್ವಮುಖದಿಂದ ಋಗ್ವೇದವನ್ನೂ, ದಕ್ಷಿಣಮುಖದಿಂದ ಯಜುರ್ವೇದವನ್ನೂ, ಪಶ್ಚಿಮಮುಖದಿಂದ ಸಾಮವೇದವನ್ನೂ, ಉತ್ತರಮುಖದಿಂದ ಅಥರ್ವವೇದವನ್ನೂ ಸೃಜಿಸಿದನು.

೪೧. ಆಮೇಲೆ, ಇತಿಹಾಸಪುರಾಣಗಳನ್ನೂ, ಯಜ್ಞಗಳನ್ನೂ, ನೂರ್ವರು

**ಬಾಹುಭ್ಯಃ ಕ್ಷತ್ರಿಯಶತಮೂರುಭ್ಯಾಂ ಚ ವಿಶಃ ಶತಂ ।**
**ಪದ್ಭ್ಯಾಂ ಶೂದ್ರಶತಂ ಚೈತಾನ್ ಸಸರ್ಜ ಸಹವೃತ್ತಿಭಿಃ ॥ ೪೨ ॥**
**ಬ್ರಹ್ಮಚರ್ಯಂ ಚ ಹೃದಯಾತ್ ಗಾರ್ಹಸ್ಥ್ಯಂ ಜಘನಸ್ಥಲಾತ್ ।**
**ವನಾಶ್ರಮಂ ತಥೋರಸ್ತಃ ಸಂನ್ಯಾಸಂ ಶಿರಸೋಽಸೃಜತ್ ॥ ೪೩ ॥**
**ವಕ್ಷಃಸ್ಥಲಾತ್ಪಿತೃಗಣಾನಸುರಾನ್ ಜಘನಸ್ಥಲಾತ್ ।**
**ಸಸರ್ಜ ಚ ಗುದಾನ್ಮೃತ್ಯುಂ ನಿರ್ಋತಿಂ ನಿರಯಾಂಶ್ಚ ಸಃ ॥ ೪೪ ॥**
**ಗಂಧರ್ವಾಂಶ್ಚಾರಣಾನ್ಸಿದ್ಧಾನ್ ಸರ್ಪಾನ್ಯಕ್ಷಾಂಶ್ಚ ರಾಕ್ಷಸಾನ್ ।**
**ನಗಾನ್ಮೇಘಾನ್ವಿದ್ಯುತಶ್ಚ ಸಮುದ್ರಾನ್ ಸರಿತಸ್ತಥಾ ॥ ೪೫ ॥**
**ವೃಕ್ಷಾನ್ ಪಶೂನ್ ಪಕ್ಷಿಣಶ್ಚ ಸರ್ವಾಂಸ್ಥಾವರಜಂಗಮಾನ್ ।**
**ಸ್ವಾಂಗೇಭ್ಯ ಏವ ಸೋಽಸ್ರಾಕ್ಷೀತ್ ಬ್ರಹ್ಮಾ ನಾರಾಯಣಾತ್ಮಕಃ ॥ ೪೬ ॥**
**ಸೃಷ್ಟಿಮೇತಾಂ ವಿಲೋಕ್ಯಾಪಿ ನಾತಿಪ್ರೀತೋ ಯದಾ ತದಾ ।**
**ಹರಿಂ ಧ್ಯಾತ್ವಾ ಸ ಸಸೃಜೇ ತಪೋವಿದ್ಯಾಸಮಾಧಿಭಿಃ ।**
**ಋಷೀನ್ಸ್ವಾಯಂಭುವಾದೀಂಶ್ಚ ಮನೂಂಶ್ಚ ಮನುಜಾನಪಿ ॥ ೪೭ ॥**

---

ಬ್ರಾಹ್ಮಣರನ್ನೂ, ವಸುಗಳು, ಆದಿತ್ಯರು, ಮರುತರು, ವಿಶ್ವೇದೇವತೆಗಳು, ಸಾಧ್ಯರು ಇವರನ್ನೂ ಮುಖದಿಂದ ಸೃಜಿಸಿದನು.

೪೨. ಬಾಹುಗಳಿಂದ ನೂರ್ವರು ಕ್ಷತ್ರಿಯರನ್ನೂ, ತೊಡೆಗಳಿಂದ ನೂರು ಮಂದಿ ವೈಶ್ಯರನ್ನೂ, ಪಾದಗಳಿಂದ ನೂರು ಮಂದಿ ಶೂದ್ರರನ್ನೂ, ಅವರವರಿಗೆ ತಕ್ಕ ವೃತ್ತಿಸಮೇತವಾಗಿ ಸೃಜಿಸಿದನು.

೪೩. ಬ್ರಹ್ಮಚರ್ಯವನ್ನು ಹೃದಯದಿಂದಲೂ, ಗಾರ್ಹಸ್ಥ್ಯವನ್ನು ಜಘನ ಸ್ಥಳದಿಂದಲೂ, ವಾನಪ್ರಸ್ಥಾಶ್ರಮವನ್ನು ವಕ್ಷಸ್ಥಳದಿಂದಲೂ, ಸಂನ್ಯಾಸವನ್ನು ಶಿರಸ್ಸಿನಿಂದಲೂ ಸೃಜಿಸಿದನು.

೪೪. ವಕ್ಷಸ್ಥಳದಿಂದ ಪಿತೃಗಣಗಳನ್ನೂ, ಜಘನಸ್ಥಳದಿಂದ ಅಸುರರನ್ನೂ, ಗುದದಿಂದ ಮೃತ್ಯು, ನಿರ್ಋತಿ ಮತ್ತು ನರಕಗಳನ್ನೂ ಸೃಜಿಸಿದನು.

೪೫–೪೬. ಗಂಧರ್ವರು, ಚಾರಣರು, ಸಿದ್ಧರು, ಸರ್ಪರು, ಯಕ್ಷರು, ರಾಕ್ಷಸರು, ನಾಗರು, ಮೇಘಗಳು, ವಿದ್ಯುತ್ತುಗಳು, ಸಮುದ್ರಗಳು, ನದಿಗಳು, ವೃಕ್ಷಗಳು, ಪಶುಗಳು, ಪಕ್ಷಿಗಳು, ಸರ್ವಸ್ಥಾವರಜಂಗಮಗಳು ಇವೆಲ್ಲವನ್ನೂ ನಾರಾಯಣಾತ್ಮಕನಾದ ಆ ಬ್ರಹ್ಮನು ತನ್ನ ಅಂಗಗಳಿಂದಲೇ ಸೃಜಿಸಿದನು.

೪೭. ಈ ಸೃಷ್ಟಿಯನ್ನು ನೋಡಿ ಕೂಡ ಅವನು ಸುಪ್ರೀತನಾಗಲಿಲ್ಲ. ಆಗ ಶ್ರೀಹರಿಯನ್ನು ನೆನೆದು, ತಪಸ್ಸು ವಿದ್ಯೆ ಸಮಾಧಿಗಳಿಂದ ಕೂಡಿದ ಋಷಿಗಳನ್ನೂ, ಸ್ವಾಯಂಭುವಾದಿ ಮನುಗಳನ್ನೂ, ಮನುಷ್ಯರನ್ನೂ ಸೃಷ್ಟಿಮಾಡಿದನು.

ತತಃ ಪ್ರೀತಃ ಸ ಸರ್ವೇಷಾಂ ನಿವಾಸಾಯ ಯಥೋಚಿತಂ ।
ಸ್ವರ್ಲೋಕಂ ಚ ಭುವರ್ಲೋಕಂ ಭೂಲೋಕಂ ಸಮಕಲ್ಪಯತ್ ॥
ಯೇಷಾಂ ತು ಯಾದೃಶಂ ಕರ್ಮ ಪ್ರಾಕ್ಕಾಲೀನಂ ಹಿತಾನ್ವಿಧಿಃ ।
ಸಂಸ್ಥಾಪ್ಯ ತಾದೃಶೇ ಸ್ಥಾನೇ ವೃತ್ತೀಸ್ತೇಷಾಮಕಲ್ಪಯತ್ ॥ ೪೯ ॥
ದೇವಾನಾಮಮೃತಂ ನೄಣಾಂ ಋಷೀಣಾಂ ಚಾನ್ನಮೋಷಧೀಃ ।
ಯಕ್ಷರಕ್ಷೋಽಸುರವ್ಯಾಘ್ರಸರ್ಪಾದೀನಾಂ ಸುರಾಮಿಷಂ ।
ಚಕ್ಲೃಪ್ತೇ ಗೋಮೃಗಾದೀನಾಂ ವೃತ್ತಿಂ ಸ ಯವಸಾದಿ ಚ ॥ ೫೦ ॥
ಸ ದೇವಾನಾಂ ತು ವಿಶ್ವೇಷಾಂ ಹವ್ಯಂ ವೃತ್ತಿಮಕಲ್ಪಯತ್ ।
ಅಮೂರ್ತಾನಾಂ ಚ ಮೂರ್ತಾನಾಂ ಪಿತೄಣಾಂ ಕವ್ಯಮೇವ ಚ ॥
ದುರ್ಗೋದ್ಭವಾನಾಂ ಶಕ್ತೀನಾಂ ತದುಪಾಸನತತ್ಪರೈಃ ।
ದೈತ್ಯರಕ್ಷಃಪಿಶಾಚಾದ್ಯೈರ್ದತ್ತಂ ಮದ್ಯಾಮಿಷಾದಿ ಚ ॥ ೫೧ ॥
ತಥಾ ಸಾವಿತ್ರ್ಯುದ್ಭವಾನಾಂ ಶಕ್ತೀನಾಂ ತದುಪಾಸಕೈಃ ।
ದತ್ತಮೃಷ್ಯಾದಿಭಿರ್ಯಜ್ಞೇ ಮುನ್ಯನ್ನಂ ಚಾನ್ನಮೋಷಧೀಃ ॥ ೫೨ ॥

---

೪೮. ಬಳಿಕ ಅವನು ಪ್ರೀತನಾಗಿ ಅವರೆಲ್ಲರಿಗೂ ನಿವಾಸಕ್ಕಾಗಿ ಯಥೋಚಿತವಾದ ಸ್ವರ್ಲೋಕ, ಭುವರ್ಲೋಕ ಮತ್ತು ಭೂಲೋಕಗಳನ್ನು ನಿರ್ಮಿಸಿದನು.

೪೯. ಯಾರಿಗೆ ಯಾವ ರೀತಿಯ ಪೂರ್ವಕರ್ಮವಿದ್ದಿತೋ ಅವರವರನ್ನು ಆಯಾ ರೀತಿಯ ಸ್ಥಾನದಲ್ಲಿಯೇ ಸ್ಥಾಪಿಸಿ ಆ ಬ್ರಹ್ಮನು ಅವರವರಿಗೆ ಉಚಿತವಾದ ವೃತ್ತಿಗಳನ್ನು ಕಲ್ಪಿಸಿಕೊಟ್ಟನು.

೫೦. ದೇವತೆಗಳಿಗೆ ಅಮೃತ; ನರರಿಗೆ ಅನ್ನ; ಋಷಿಗಳಿಗೆ ಓಷಧಿ (ಕಂದಮೂಲಫಲಾದಿ)ಗಳು; ಯಕ್ಷರು, ರಾಕ್ಷಸರು, ಅಸುರರಿಗೂ, ಹುಲಿ, ಸರ್ಪ ಮೊದಲಾದುವಕ್ಕೆ ಸುರೆ ಮತ್ತು ಮಾಂಸ; ಗೋವು, ಮೃಗ ಮೊದಲಾದುವುಗಳಿಗೆ ಯವಸ (ಹುಲ್ಲು) ಮೊದಲಾದುವನ್ನು ಜೀವನವೃತ್ತಿಯನ್ನಾಗಿ ಕಲ್ಪಿಸಿದನು.

೫೧. ಸಮಸ್ತ ದೇವತೆಗಳಿಗೂ ಯಜ್ಞ ಹವ್ಯವನ್ನು ವೃತ್ತಿಯಾಗಿ ವಿಧಿಸಿದನು. ಅಮೂರ್ತರೂ, ಮೂರ್ತರೂ ಆದ ಪಿತೃಗಳಿಗೆ ಹವ್ಯವನ್ನು ವೃತ್ತಿಯಾಗಿ ಕಲ್ಪಿಸಿದನು.

೫೨. ದುರ್ಗೆಯಿಂದ ಉದ್ಭವಿಸಿದವರಾದ ಶಕ್ತಿಗಳಿಗೆ ಆಯಾ ಶಕ್ತಿಗಳ ಉಪಾಸನೆಯಲ್ಲಿ ನಿರತರಾದ ದೈತ್ಯರು, ರಾಕ್ಷಸರು, ಪಿಶಾಚರು, ಮೊದಲಾದವರಿಂದ ಅರ್ಪಿಸಲ್ಪಡುವ ಮದ್ಯಮಾಂಸಾದಿಗಳನ್ನು ವೃತ್ತಿಯಾಗಿ ವಿಧಿಸಿದನು.

೫೩. ಅದೇ ರೀತಿಯಲ್ಲಿಯೆ ಸಾವಿತ್ರಿಯಿಂದುದ್ಭವಿಸಿದವರಾದ ಶಕ್ತಿಗಳಿಗೆ ಅವರವರನ್ನು ಉಪಾಸಿಸುವ ಋಷಿಗಳೇ ಮೊದಲಾದವರಿಂದ ಯಜ್ಞದಲ್ಲಿ ಕೊಡಲ್ಪಟ್ಟ ಮುನ್ಯನ್ನ, ಅನ್ನ, ಔಷಧಿಗಳು— ಇವನ್ನು ವೃತ್ತಿಯಾಗಿ ಕಲ್ಪಿಸಿದನು.

ಶ್ರೀಜಾತಾನಾಂ ಚ ಶಕ್ತೀನಾಂ ತದುಪಾಸ್ತಿಪರಾಯಣೈಃ ।
ದತ್ತಂ ದೇವಾಸುರನರೈಃ ಪಾಯಸಾಜ್ಯಸಿತಾದಿ ಚ ॥ ೫೪ ॥
ಪ್ರಜಾಪತೀನಾಂ ಸ ಪತಿಸ್ತತಃ ಪ್ರಾಹಾಖಿಲಾಃ ಪ್ರಜಾಃ ।
ಇಜ್ಯಾ ದೇವಾಶ್ಚ ಪಿತರೋ ಹವ್ಯಕವ್ಯಾತ್ಮಕೈರ್ಮಖೈಃ ॥ ೫೫ ॥
ಇಷ್ಟಾಃ ಸಂಪೂರಯಿಷ್ಯಂತಿ ಹ್ಯೇತೇ ಯುಷ್ಮನ್ಮನೋರಥಾನ್ ।
ಏತಾನ್ಯೇ ನಾರ್ಚಯಿಷ್ಯಂತಿ ತೇ ವೈ ನಿರಯಗಾಮಿನಃ ॥ ೫೬ ॥
ಇತ್ಥಂ ಕೃತಾ ಹಿ ಮರ್ಯಾದಾ ತೇನ ನಾರಾಯಣಾತ್ಮನಾ ।
ದೈವಂ ಪಿತ್ರ್ಯಮತೋ ನಿತ್ಯಂ ಜನೈಃ ಕಾರ್ಯಂ ಯಥಾವಿಧಿ ॥ ೫೭ ॥
ತತೋ ಬ್ರಹ್ಮಾ ಸ ಸರ್ವೇಷಾಂ ಧರ್ಮಸೇತ್ವವನಾಯ ಚ ।
ತತ್ತಜ್ಜಾತಿಷು ಯೇ ಮುಖ್ಯಾಂಸ್ತಾನ್ಮನೂಂಶ್ಚಾಪ್ರತಿಷ್ಠಪತ್ ॥ ೫೮ ॥
ವಾಸುದೇವೇಚ್ಛಯೈವೇತ್ಥಂ ವೈರಾಜಾದ್ಬ್ರಹ್ಮರೂಪಿಣಃ ।
ಕಲ್ಪೇ ಕಲ್ಪೇ ಭವತ್ಯೇವ ಸೃಷ್ಟಿರ್ಬಹುವಿಧಾ ಮುನೇ ॥ ೫೯ ॥

---

೫೪. ಶ್ರೀಯಿಂದ ಜನಿಸಿದ ಶಕ್ತಿಗಳಿಗೆ ಅವರವರ ಉಪಾಸನೆಯಲ್ಲಿ ಪರಾಯಣರಾದ ದೇವಾಸುರ ಮನುಷ್ಯರುಗಳಿಂದ ಕೊಡಲ್ಪಟ್ಟ ಪಾಯಸ, ತುಪ್ಪ, ಸಿತ (ಹಾಲು) ಮೊದಲಾದುವನ್ನು ವೃತ್ತಿಯಾಗಿ ವಿಧಾಯಕವಮಾಡಿದನು.

೫೫. ಆ ಬಳಿಕ ಪ್ರಜಾಪತಿಗಳಿಗೆಲ್ಲ ಒಡೆಯನಾದ ಬ್ರಹ್ಮನು ಸಕಲಪ್ರಜೆಗಳನ್ನೂ ಕುರಿತು ಹೀಗೆ ಹೇಳಿದನು:— "ದೇವತೆಗಳನ್ನೂ, ಪಿತೃಗಳನ್ನೂ, ಹವ್ಯಕವ್ಯಾತ್ಮಕಗಳಾದ ಯಜ್ಞಗಳಿಂದ ನೀವು ಪೂಜಿಸಬೇಕು.

೫೬. ಯಜ್ಞದಲ್ಲಿ ಪೂಜೆಗೊಂಡ ಇವರು ನಿಮ್ಮ ಮನೋರಥಗಳನ್ನು ಸಂಪೂರ್ಣಗೊಳಿಸುತ್ತಾರೆ. ಇವರನ್ನು ಯಾರು ಅರ್ಚಿಸುವುದಿಲ್ಲವೋ ಅವರು ನರಕಕ್ಕೆ ಹೋಗುತ್ತಾರೆ."

೫೭. ನಾರಾಯಣಾತ್ಮಕನಾದ ಆ ಬ್ರಹ್ಮನಿಂದ ದೇವತೆಗಳಿಗೂ, ಪಿತೃಗಳಿಗೂ ಸಂಬಂಧಿಸಿದಂತೆ ಈ ರೀತಿಯಲ್ಲಿ ನಡವಳಿಕೆಯ ಎಲ್ಲೆಕಟ್ಟು ವಿಧಾಯಕವಾಯಿತು. ಈ ವ್ಯವಸ್ಥೆಯನ್ನು ಜನರು ವಿಧಿಪ್ರಕಾರವಾಗಿ ಸದಾ ನಡೆಸಬೇಕು.

೫೮. ಬಳಿಕ ಆ ಬ್ರಹ್ಮನು ಅವರೆಲ್ಲರ ಧರ್ಮ (ಸೇತು) ರಕ್ಷಣೆಗಾಗಿಯೂ ಆಯಾ ಜಾತಿಗಳಲ್ಲಿ ಯಾರು ಮುಖ್ಯರಾಗಿದ್ದರೋ ಅವರನ್ನು ಮನುಗಳಾಗಿ ನೆಲೆಗೊಳಿಸಿದನು.

೫೯. ಎಲೈ ಮುನಿಯೇ! ಕಲ್ಪಕಲ್ಪದಲ್ಲಿಯೂ ಇದೇ ರೀತಿಯಾಗಿ ವಾಸುದೇವನ ಇಚ್ಛೆಯಿಂದಲೇ ಬ್ರಹ್ಮರೂಪಿಯಾದ ವಿರಾಟ್ಪುರುಷನಿಂದ ಬಹುವಿಧವಾಗಿ ಸೃಷ್ಟಿಯು ನಡೆದೇ ನಡೆಯುವುದು.

ಪ್ರಾಕ್ಕಲ್ಪೇ ಯಾದೃಶೀ ಸಂಜ್ಞಾ ವೇದಾಃ ಶಾಸ್ತ್ರಾಣಿ ಚ ಕ್ರಿಯಾಃ ।
ಕಲ್ಪೇಽನ್ಯೇ ತಾದೃಶಾಃ ಸರ್ವೇ ಧರ್ಮಾಃ ಸ್ಯುಶ್ಚಾಧಿಕಾರಿಣಃ ॥ ೬೦ ॥
ವಿಷ್ಣುರ್ಯಃ ಕಥಿತಃ ಸೋಽಪಿ ವೈರಾಜಪುರುಷಾತ್ಮಕಃ ।
ಪೋಷಯತ್ಯಖಿಲಾನ್‌ಲ್ಲೋಕಾನ್ ಮರ್ಯಾದಾಃ ಪರಿಪಾಲಯನ್ ॥
ಮನ್ವಾದಿಭಿಃ ಪಾಲ್ಯಮಾನಾಃ ಸೇತವಸ್ತ್ವಸುರೈರ್ಯದಾ ।
ಕಾಮರೂಪೈರ್ವಿಭಿದ್ಯಂತೇ ವಾಸುದೇವಸ್ತದಾ ಸ್ವಯಂ ।
ಬ್ರಹ್ಮಾದಿಭಿಃ ಪ್ರಾರ್ಥ್ಯಮಾನಃ ಪ್ರಾದುರ್ಭವತಿ ಭೂತಲೇ ॥ ೬೨ ॥
ಅವತಾರಾ ಭಗವತೋ ಭೂತಾ ಭಾವಾಶ್ಚ ಸಂತಿ ಯೇ ।
ಕರ್ತುಂ ನ ಶಕ್ಯತೇ ತೇಷಾಂ ಸಂಖ್ಯಾಂ ಸಂಖ್ಯಾವಿಶಾರದೈಃ ॥ ೬೩ ॥
ಸದ್ಧರ್ಮದೇವಸಾಧೂನಾಂ ಗುಪ್ತ್ಯೈ ತದ್ದ್ರೋಹಿಮೃತ್ಯವೇ ।
ಶ್ರೇಯಸೇ ಸರ್ವಭೂತಾನಾಮಾವಿರ್ಭಾವೋಽಸ್ತಿ ಸತ್ಪತೇಃ ॥ ೬೪ ॥
ಸ ವಾಸುದೇವಃ ಪ್ರಕೃತೌ ಪುಂಸಿ ಕಾರ್ಯೇಷು ಚೈತಯೋಃ ।
ಅನ್ವಿತಶ್ಚ ಪೃಥಕ್ ಚಾಸ್ತೇ ಸರ್ವಾಧೀಶಃ ಸ್ವಧಾಮನಿ ॥ ೬೫ ॥

---

೬೦. ಸಂಜ್ಞೆ, ವೇದಗಳು, ಶಾಸ್ತ್ರಗಳು, ಕ್ರಿಯೆಗಳು, ಧರ್ಮಗಳು, ಅಧಿಕಾರಿಗಳು ಎಲ್ಲವೂ ಪೂರ್ವಕಲ್ಪದಲ್ಲಿ ಯಾವ ರೀತಿ ಇದ್ದುವೋ, ಬೇರೆ ಕಲ್ಪದಲ್ಲಿಯೂ ಅದೇ ರೀತಿ ಇರುವುವು.

೬೧. ವಿಷ್ಣುವೆಂದು ಯಾರು ಹೇಳಲ್ಪಟ್ಟಿರುವನೋ ಅವನು ಕೂಡ ವಿರಾಟ್ಪುರುಷಾತ್ಮಕನಾದವನು. ಅವನು ಮರ್ಯಾದೆ (ವ್ಯವಸ್ಥೆಯ ಎಲ್ಲೆ ಕಟ್ಟು)ಗಳನ್ನು ಪರಿಪಾಲಿಸುತ್ತ ಅಖಿಲಲೋಕಗಳನ್ನೂ ಪೋಷಿಸುತ್ತಾನೆ.

೬೨. ಮನು ಮೊದಲಾದವರಿಂದ ರಕ್ಷಿಸಲ್ಪಡುತ್ತಿರುವ (ಧರ್ಮ) ಸೇತುಗಳು ಕಾಮರೂಪಿಗಳಾದ ಅಸುರರಿಂದ ಯಾವಾಗ ಭಿನ್ನವಾಗುವುವೋ ಆಗ ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಡುವವನಾಗಿ ಸ್ವಯಂ ವಾಸುದೇವನೇ ಭೂತಲದಲ್ಲಿ ಅವತಾರಮಾಡಿ ಬರುವನು.

೬೩. ಭಗವಂತನ ಎಷ್ಟು ಅವತಾರಗಳು ಮೊದಲೆ ಆಗಿಹೋದುವೋ ಮುಂದೆ ಎಷ್ಟು ಆಗಲಿರುವುವೊ ಅವುಗಳನ್ನು ಲೆಕ್ಕಮಾಡಲು ಗಣಿತವಿಶಾರದರಿಗೂ ಶಕ್ಯವಲ್ಲವು.

೬೪. ಸದ್ಧರ್ಮ, ದೇವತೆಗಳು, ಸಾಧುಗಳು—ಇವರ ರಕ್ಷಣೆಗೂ, ಇವರ ದ್ರೋಹಿಗಳಾದವರಿಗೆ ಮೃತ್ಯುವನ್ನುಂಟುಮಾಡುವುದಕ್ಕೂ, ಸರ್ವಭೂತಗಳ ಶ್ರೇಯಸ್ಸಿಗಾಗಿಯೂ ಸತ್ಪತಿಯ (ಸಜ್ಜನರೊಡೆಯನಾದ ಭಗವಂತನ) ಅವತಾರವಾಗುತ್ತದೆ.

೬೫. ಆ ವಾಸುದೇವನು ಪ್ರಕೃತಿಯಲ್ಲಿಯೂ, ಪುರುಷನಲ್ಲಿಯೂ ಅವರಿಬ್ಬರ

ವ್ಯಾಪ್ಯ ಸ್ವಾಂಶೈರಿಮಾನ್‌ಲ್ಲೋಕಾನ್ಯಥಾಗ್ನಿವರುಣಾದಯಃ ।
ಸ್ವಸ್ಥಾಃಸತೇ ಸ್ವಸ್ವಲೋಕೇ ತಥೈಷ ಭಗವಾನ್ ಮುನೇ ॥ ೬೬ ॥
ಸರ್ಗಾತ್ಪ್ರಾಕ್ಸಚ್ಚಿದಾನಂದಃ ಶುದ್ಧ ಏಕಶ್ಚ ನಿರ್ಗುಣಃ ।
ಯಥಾಸೀತ್ತಾದೃಗೇವಾಸಾವನ್ವಿತೋಽಪ್ಯಸ್ತಿ ನಿರ್ಮಲಃ ॥ ೬೭ ॥
ವಾಯುತೇಜೋಜಲಕ್ಷ್ಮಾಸು ತತ್ತತ್ಕಾರ್ಯೇಷು ಖಂ ಯಥಾ ।
ಅನ್ವೀಯಾಪ್ಯಸ್ತಿ ನಿರ್ಲೇಪಂ ಯಥಾಪೂರ್ವಂ ತಥೈಷ ಹಿ ॥ ೬೮ ॥
ಸರ್ವೋಪಾಸ್ಯೋ ನಿಯಂತಾ ಚ ವ್ಯಾಪಕಶ್ಚೈಷ ಕೀರ್ತಿತಃ ।
ಆತ್ಯಂತಿಕೇ ಲಯೇಽಥೈಷ ಭವತ್ಯೇವ ಯಥಾ ಪುರಾ ॥ ೬೯ ॥
ವೈರಾಜಃ ಪುರುಷೋ ಯೋಽತ್ರ ಪ್ರೋಕ್ತೋಽಸಾವೀಶ್ವರಾಭಿಧಃ ।
ಜ್ಞೇಯಃ ಸ್ವತಂತ್ರಃ ಸರ್ವಜ್ಞೋ ವಶ್ಯಮಾಯಶ್ಚ ನಾರದ ॥ ೭೦ ॥
ಏತಸ್ಯೈವ ಸ್ವರೂಪಾಣಿ ಬ್ರಹ್ಮವಿಷ್ಣುಶಿವಾಸ್ತ್ರಯಃ ।
ರಜ ಆದಿ ಗುಣೋಪೇತಾಃ ಸ್ವಗುಣಾನುಗುಣಕ್ರಿಯಾಃ ॥ ೭೧ ॥

---

ಕಾರ್ಯಗಳಲ್ಲಿಯೂ ಸೇರಿಕೊಂಡಿರುವನು. ಸರ್ವಾಧೀಶನಾದ ಅವನು ತನ್ನ ದಿವ್ಯಧಾಮದಲ್ಲಿ (ಯಾವುದಕ್ಕೂ ಅಂಟದೆ) ಪ್ರತ್ಯೇಕವಾಗಿಯೆ ಇರುವನು.

೬೬. ಎಲೈ ಮುನಿಯೇ! ಅಗ್ನಿ, ವರುಣ ಮೊದಲಾದವರು ಈ ಲೋಕಗಳನ್ನು ತಮ್ಮ ಅಂಶಗಳಿಂದ ವ್ಯಾಪಿಸಿಕೊಂಡು ಹೇಗೆ ತಮ್ಮತಮ್ಮ ಲೋಕಗಳಲ್ಲಿ ಸುಖವಾಗಿರುವರೋ ಹಾಗೆಯೇ ಈ ಭಗವಂತನೂ ಕೂಡ ಇರುತ್ತಾನೆ.

೬೭. ಆತನು ಸೃಷ್ಟಿಗೆ ಮೊದಲು ಹೇಗೆ ಸಚ್ಚಿದಾನಂದಸ್ವರೂಪನೂ, ಶುದ್ಧನೂ, ನಿರ್ಗುಣನೂ, ಏಕೈಕನೂ ಆಗಿದ್ದನೋ ಹಾಗೆಯೇ ಸೃಷ್ಟಿಯೊಡನೆ ಸೇರಿದಾಗಲೂ ನಿರ್ಮಲನಾಗಿಯೇ ಇದ್ದಾನೆ.

೬೮. ವಾಯು, ತೇಜಸ್ಸು, ಅಗ್ನಿ ಮತ್ತು ಭೂಮಿಗಳಲ್ಲಿಯೂ ಅವುಗಳ ಕಾರ್ಯಗಳಲ್ಲಿಯೂ ಸೇರಿಕೊಂಡಿದ್ದರೂ ಆಕಾಶವು ಹೇಗೆ ಮೊದಲಿನಂತೆಯೇ ನಿರ್ಲೇಪವಾಗಿರುವುದೋ ಹಾಗೆಯೇ ಭಗವಂತನೂ ಎಂದು ತಿಳಿ.

೬೯. ಈ ಭಗವಂತನು ಸರ್ವರಿಗೂ, ಉಪಾಸ್ಯನಾದವನು; ಸರ್ವವನ್ನೂ ನಡಸತಕ್ಕವನು; ಎಲ್ಲ ಕಡೆಯೂ ವ್ಯಾಪಿಸಿರುವವನು ಎಂದು ಹೇಳಲ್ಪಟ್ಟಿರುವನು. ಕೊಟ್ಟಕೊನೆಯ ಸಂಪೂರ್ಣ ಪ್ರಲಯದಲ್ಲಿ ಪೂರ್ವದಂತೆಯೇ ಆಗಿಬಿಡುತ್ತಾನೆ.

೭೦. ಎಲೈ ನಾರದನೇ! ಯಾವ ವಿರಾಟ್‌ಪುರುಷನು ಇಲ್ಲಿ ಈಶ್ವರನೆಂದು ಹೇಳಲ್ಪಟ್ಟಿರುವನೋ ಅವನು ಸ್ವತಂತ್ರನೆಂದೂ, ಸರ್ವಜ್ಞನೆಂದೂ, ಮಾಯೆಯನ್ನು ತನ್ನ ವಶದಲ್ಲಿಟ್ಟುಕೊಂಡಿರುವವನೆಂದೂ ತಿಳಿಯತಕ್ಕುದು.

೭೧. ರಜೋಗುಣ ಮೊದಲಾದ ಗುಣಗಳಿಂದ ಕೂಡಿ, ತಮ್ಮ ಗುಣ

ಬ್ರಹ್ಮಣೋ ಯೇ ಸಮುತ್ಪನ್ನಾ ದೇವಾಸುರನರಾದಯಃ ।
ತೇ ಜೀವಸಂಜ್ಞಾ ಹ್ಯಲ್ಪಜ್ಞಾಃ ಪರತಂತ್ರಾ ಭವಂತಿ ಚ ॥ ೭೨ ॥
ಜೀವಾನಾಮೀಶ್ವರಾಣಾಂ ಚ ತನವಃ ಕ್ಷೇತ್ರಸಂಜ್ಞಕಾಃ ।
ಮಹದಾದಿತತ್ತ್ವಮಯ್ಯಃ ಕ್ಷೇತ್ರಜ್ಞಾ ಖ್ಯಾಸ್ತು ತದ್ವಿದಃ ॥ ೭೩ ॥
ಕ್ಷೇತ್ರಾಣಾಂ ಚ ಕ್ಷೇತ್ರವಿದಾಂ ಪ್ರಧಾನಪುರುಷಸ್ಯ ಚ ।
ಮಾಯಾಯಾಃ ಕಾಲಶಕ್ತೇಶ್ಚ ಅಕ್ಷರಸ್ಯ ಪರಾತ್ಮನಃ ।
ಪೃಥಕ್ ಪೃಥಗ್ಲಕ್ಷಣೈರ್ಯಜ್ಜ್ಞಾನಂ ತಜ್ಜ್ಞಾನಮುಚ್ಯತೇ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಜ್ಞಾನಸ್ವರೂಪನಿರೂಪಣಂ" ನಾಮ ಚತುರ್ವಿಂಶೋಽಧ್ಯಾಯಃ

---

ಗಳಿಗೆ ಅನುಗುಣವಾದ ಕ್ರಿಯೆಗಳುಳ್ಳವರಾದ ಬ್ರಹ್ಮ, ವಿಷ್ಣು, ಶಿವ — ಎಂಬ ಈ ಮೂವರೂ ಇವನ ಸ್ವರೂಪಗಳೇ.

೭೨. ದೇವ, ಅಸುರ, ನರರೇ ಆದಿಯಾಗಿ ಯಾರು ಯಾರು ಬ್ರಹ್ಮನಿಂದ ಉತ್ಪನ್ನರಾದರೋ ಅವರು 'ಜೀವ' ಎಂಬ ಹೆಸರುಳ್ಳವರೂ, ಅಲ್ಪಜ್ಞರೂ, ಪರತಂತ್ರರೂ ಆಗಿದ್ದಾರೆ.

೭೩. ಜೀವರ ಮತ್ತು ಈಶ್ವರರ ದೇಹಗಳು 'ಕ್ಷೇತ್ರ' ಎಂಬ ಸಂಜ್ಞೆಯುಳ್ಳವು; 'ಮಹತ್ತು' ಮೊದಲಾದ ತತ್ತ್ವಮಯವಾಗಿರುವುವು. ಆ ಕ್ಷೇತ್ರವನ್ನು ಬಲ್ಲವರು ಕ್ಷೇತ್ರಜ್ಞರು.

೭೪. ಕ್ಷೇತ್ರಗಳು, ಕ್ಷೇತ್ರಜ್ಞರು, ಪ್ರಧಾನಪುರುಷ, ಮಾಯೆ, ಕಾಲಶಕ್ತಿ, ಅಕ್ಷರ, ಮತ್ತು ಪರಮಾತ್ಮ — ಇವರ ಬೇರೆ ಬೇರೆ ಲಕ್ಷಣಗಳಿಂದ ಇವನ್ನೆಲ್ಲ ತಿಳಿಯುವ ಜ್ಞಾನವು ಯಾವುದೋ ಅದೇ ಜ್ಞಾನವೆಂದು ಹೇಳಲ್ಪಡುತ್ತದೆ."

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಜ್ಞಾನಸ್ವರೂಪನಿರೂಪಣ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶೋಽಧ್ಯಾಯಃ

## ವೈರಾಗ್ಯಭಕ್ತಿನಿರೂಪಣಂ

ಶ್ರೀ ನಾರಾಯಣ ಉವಾಚ :—

ವೈರಾಗ್ಯಸ್ಯಾಥ ತೇ ವಚ್ಮಿ ಲಕ್ಷಣಂ ಮುನಿಸತ್ತಮ ।
ಕ್ಷಯಿಷ್ಣುವಸ್ತುಷ್ವರುಚಿಃ ಸರ್ವಥೇತಿ ತದೀರಿತಂ ॥ ೧ ॥
ಆರಭ್ಯ ಮಾಯಾಪುರುಷಾತ್ ಸರ್ವಾ ಹ್ಯಾಕೃತಯಸ್ತು ಯಾಃ ।
ಕಾಲಶಕ್ತ್ಯಾ ಭಗವತೋ ನಾಶ್ಯಂತೇ ತಾಶ್ಚ ತದ್ವಶಾಃ ॥ ೨ ॥
ಪ್ರತ್ಯಕ್ಷೇಣಾನುಮಾನೇನ ಶಾಬ್ದೇನ ಚ ವಿವೇಕಿಭಿಃ ।
ಅಸತ್ಯತಾ ಕೃತೀನಾಂ ಚ ನಿಶ್ಚಿತಾ ಸತ್ಯತಾತ್ಮನಾಂ ॥ ೩ ॥
ನಿತ್ಯೇನ ಪ್ರಲಯೇ ನೈಷ ಕಾಲೋ ನೈಮಿತ್ತಿಕೇನ ಚ ।
ಪ್ರಾಕೃತಿಕೇನ ರೂಪೇಣ ಚರತ್ಯಾತ್ಯಂತಿಕೇನ ಚ ॥ ೪ ॥
ದೇಹಿದೇಹಾ ಇಮೇ ನಿತ್ಯಂ ಕ್ಷೀಯಂತೇ ಪರಿಣಾಮಿನಃ ।
ಕ್ರಮೇಣ ದೃಶ್ಯತೇ ಯತ್ರ ಬಾಲ್ಯತಾರುಣ್ಯವಾರ್ಧಕಂ ॥ ೫ ॥

---

## ಕನ್ನಡದ ಅನುವಾದ

### ವೈರಾಗ್ಯಭಕ್ತಿನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ :— “ಎಲೈ ಮುನಿಶ್ರೇಷ್ಠನೇ ! ಇನ್ನು ನಿನಗೆ ವೈರಾಗ್ಯದ ಲಕ್ಷಣವನ್ನು ಹೇಳುತ್ತೇನೆ. ನಾಶವಾಗಿಹೋಗುವ ವಸ್ತುಗಳಲ್ಲಿ ಸರ್ವಪ್ರಕಾರದಿಂದಲೂ ರುಚಿಯಿಲ್ಲದಿರುವುದೇ ವೈರಾಗ್ಯಲಕ್ಷಣ ವೆಂದು ಹೇಳಿದೆ.

೨. ಮಾಯಾಪುರುಷನನ್ನು ಮೊದಲುಗೊಂಡು ಆಕಾರಹೊಂದಿದ ವಸ್ತುಗಳು ಯಾವುವಿರುವುವೋ ಅವೆಲ್ಲವೂ ಭಗವಂತನ ಕಾಲಶಕ್ತಿಯಿಂದ ನಾಶ ಗೊಳಿಸಲ್ಪಡುತ್ತವೆ; ಅವು ಆ ಕಾಲಶಕ್ತಿಗೆ ವಶವಾಗಿರುವುವು.

೩. ವಿವೇಕಿಗಳಾದವರು ಪ್ರತ್ಯಕ್ಷ, ಅನುಮಾನ, ಶಬ್ದ—ಈ ಮೂರು ಪ್ರಮಾಣಗಳಿಂದಲೂ, ಕೃತಿಗಳ ಅಸತ್ಯತೆಯನ್ನೂ, ಆತ್ಮರ ಸತ್ಯತೆಯನ್ನೂ ನಿಶ್ಚಯಿಸಿದ್ದಾರೆ.

೪. ಈ ಕಾಲವು ನಿತ್ಯರೂಪದಿಂದಲೂ, ನೈಮಿತ್ತಿಕರೂಪದಿಂದಲೂ, ಪ್ರಳಯರೂಪದಿಂದಲೂ, ಪ್ರಾಕೃತಿಕರೂಪದಿಂದಲೂ, ಆತ್ಯಂತಿಕರೂಪದಿಂದಲೂ ಚಲಿಸುತ್ತಿರುವುದು.

೫. ದೇಹಿಗಳ ದೇಹಗಳು ನಿತ್ಯವೂ ಪರಿಣಾಮಹೊಂದುವುದಾಗಿ ಕ್ಷೀಣಿ

ಸೂಕ್ಷ್ಮತ್ವಾನ್ನೇಕ್ಷ್ಯತೇ ತತ್ತು ಗತಿರ್ದೀಪಾರ್ಚಿಷೋ ಯಥಾ ।
ಫಲವೃದ್ಧಿರ್ವಾಽನುಪದಂ ಜಾಯಮಾನಾ ದ್ರುಮೇ ಯಥಾ ॥ ೬ ॥
ತಸ್ಯಾಂತಸ್ಯಾಮವಸ್ಥಾಯಾಂ ದುಃಖಂ ಚ ಮಹದೀಕ್ಷ್ಯತೇ ।
ಜಾಗ್ರದಾದಿಷ್ವವಸ್ಥಾಸು ದುಃಖಂ ಚೈವ ಪುನಃ ಪುನಃ ॥ ೭ ॥
ದುಃಖಮಾಧ್ಯಾತ್ಮಿಕಂ ಭೂರಿ ದೃಶ್ಯತೇ ಚಾಧಿಭೌತಿಕಂ ।
ಆಧಿದೈವಿಕಮಪ್ಯತ್ರ ದುಃಖಮೇವಾಸ್ತಿ ದೇಹಿನಾಂ ॥ ೮ ॥
ಹಾ ಹಾ ಮಮಾರ ಮತ್ಪುತ್ರೋ ಹಾ ಪತ್ನೀ ಮ್ರಿಯತೇ ಮಮ ।
ತಾತಂ ಮೇಽಭಕ್ಷಯದ್ವ್ಯಾಘ್ರೋ ದಷ್ಟಾ ಸರ್ಪೇಣ ಮೇ ವಧೂಃ ॥ ೯ ॥
ಮಹಾಸೌಧೋಗ್ನಿನಾ ದಗ್ಧೋ ಹಾಹಾ ಸೋಪಸ್ಕರೋಽದ್ಯ ಮೇ ।
ಸ್ವಕುಟುಂಬಂ ಕಥಂ ಪ್ರೋಷ್ಯೇ ನಾವರ್ಷತ್ಪಾಕಶಾಸನಃ ॥ ೧೦ ॥
ಸಸ್ಯೈಃ ಸಮೃದ್ಧಂ ಮತ್ಕ್ಷೇತ್ರಂ ಹಾಹಾ ದಗ್ಧಂ ಹಿಮಾಗ್ನಿನಾ ।
ಹ್ರಿಯಂತೇ ತಸ್ಕರೈರ್ಗಾವಃ ಸರ್ವಸ್ವಂ ಮಮ ಲುಂಠಿತಂ ॥ ೧೧ ॥

---

ಸುತ್ತಲೇ ಇರುತ್ತವೆ. ಅವುಗಳಲ್ಲಿ ಬಾಲ್ಯ, ತಾರುಣ್ಯ, ವಾರ್ಧಕ್ಯಗಳು ಕ್ರಮವಾಗಿ ಕಾಣಿಸಿಕೊಳ್ಳುತ್ತವೆ.

೬. ದೀಪದ ಬೆಳಕಿನ ಪರಿಣಾಮದಂತೆಯೂ, ಮರದಲ್ಲಿ ಹೆಜ್ಜೆಹೆಜ್ಜೆಗೂ ಉಂಟಾಗುತ್ತಿರುವ ಫಲವೃದ್ಧಿಯಂತೆಯೂ ಸೂಕ್ಷ್ಮವಾಗಿರುವುದರಿಂದ ಆ ಗತಿಯು ಯಾರಿಗೂ ಗೋಚರವಾಗುವುದಿಲ್ಲ.

೭. ಆಯಾಯ ಅವಸ್ಥೆಯಲ್ಲಿ ಮಹತ್ತಾದ ದುಃಖವು ಕಂಡುಬರುತ್ತದೆ. ಜಾಗ್ರತ್ತೇ (ಎಚ್ಚರ) ಮೊದಲಾದ ಅವಸ್ಥೆಗಳಲ್ಲಿಯೂ ದುಃಖವೇ ಮತ್ತೆ ಮತ್ತೆ ತೋರಿಬರುತ್ತದೆ.

೮. ದೇಹಿಗಳಿಗೆ ಆಧ್ಯಾತ್ಮಿಕವಾದ ದುಃಖವೂ, ಆಧಿಭೌತಿಕವಾದ ದುಃಖವೂ ಇದ್ದೇ ಇರುವುದು.

೯. 'ಅಯ್ಯೋ ನನ್ನ ಮಗನು ಸತ್ತನು! ಅಯ್ಯೋ ನನ್ನ ಹೆಂಡತಿಯು ಸಾಯುತ್ತಾಳೆ! ನನ್ನ ತಂದೆಯನ್ನು ಹುಲಿ ತಿಂದಿತು! ನನ್ನ ಪತ್ನಿಯನ್ನು ಹಾವು ಕಚ್ಚಿತು!

೧೦. ಹಾಹಾ! ಸಮಸ್ತ ಸಲಕರಣೆಗಳಿಂದಲೂ ತುಂಬಿದ ನನ್ನ ಮಹಾಸೌಧವು ಈಗ ಬೆಂಕಿಯಲ್ಲಿ ಸುಟ್ಟುಹೋಯಿತೇ! ಮಳೆಯು ಬರಲಿಲ್ಲ, ಬೆಳೆಗಳು ಆಗಲಿಲ್ಲವಲ್ಲಾ; ನನ್ನ ಕುಟುಂಬವನ್ನು ಹೇಗೆ ಪೋಷಿಸಲಿ?

೧೧. ಅಯ್ಯೋ! ಸಸ್ಯಗಳಿಂದ ಸಮೃದ್ಧವಾಗಿದ್ದ ನನ್ನ ಹೊಲಗದ್ದೆಗಳು ಹಿಮಾಗ್ನಿಯಿಂದ ಸುಟ್ಟುಹೋದುವು! ಕಳ್ಳರು ಗೋವುಗಳನ್ನು ಕದ್ದು ಹೊಡೆದುಕೊಂಡು ಹೋಗುತ್ತಿದ್ದಾರೆ! ನನ್ನ ಸರ್ವಸ್ವವೂ ಲೂಟಿಯಾಯಿತು!

**ನೃಪೇಣ ದಂಡಿತೋಽತ್ಯರ್ಥಂ ಶತ್ರುಣಾ ಹಾಽತಿತಾಡಿತಃ ।**
**ಕಿಂ ಕರೋಮಿ ಚ ಕಂ ಬ್ರೂಯಾಂ ಮಾತಾ ಮೇ ವ್ಯಭಿಚಾರಿಣೀ ॥ ೧೨ ॥**
**ವಿಷಂ ಪಾಸ್ಯಾಮಿ ಹಾಹಾಽದ್ಯ ಮತ್ಪತ್ನೀಂ ಶತ್ರುರಾಕೃಷತ್ ।**
**ಹಾ ಸ್ವಸಾ ಮೇ ಹೃತಾ ಮ್ಲೇಚ್ಛೈರ್ಹಾ ಹಾಽರಿಃ ಪ್ರಾಪ ಮರ್ಮಭಿತ್ ॥**
**ಮ್ರಿಯೇ ಜ್ವರಾತಿವ್ಯಥಯಾ ಯಮದೂತಾ ಇಮೇ ಹಹಾ ।**
**ಇತ್ಥಂ ರೋರೂಯಮಾಣಾ ಹಿ ದೃಶ್ಯಂತೇ ಸರ್ವತೋ ಜನಾಃ ॥ ೧೪ ॥**
**ಅವಸ್ಥಾನಾಂ ಶರೀರಸ್ಯ ಜನ್ಮಮೃತ್ಯ್ವೋಃ ಪ್ರತಿಕ್ಷಣಂ ।**
**ಕಾಲೇನ ಪ್ರಾಪ್ನುವದ್ಭಿಃ ಸ್ವಂ ಪ್ರಾರಬ್ಧಂ ದುಃಖಮುಶ್ಯತೇ ॥ ೧೫ ॥**
**ಪ್ರಾರಬ್ಧಾಂತೇ ಮೃತ್ಯುದುಃಖಂ ಭವತ್ಯಪ್ರತಿಮಂ ಹಿ ತತ್ ।**
**ಮೃತ್ವಾಪಿ ಚ ಮಹದ್ದುಃಖಂ ಪ್ರಾಪ್ಯತೇ ಯಮಯಾತನಾಃ ॥ ೧೬ ॥**
**ತತೋ ಜರಾಯುಜೋದ್ಭಿಜ್ಜಸ್ವೇದಜಾಂಡಜಯೋನಿಷು ।**
**ಭೂತ್ವಾ ಭೂತ್ವಾ ಯಥಾ ಕರ್ಮ ಮ್ರಿಯತೇ ದುಃಖಿತೈಃ ಪುನಃ॥ ೧೭ ॥**

---

೧೨. ರಾಜನಿಂದ ಅತಿಯಾಗಿ ದಂಡಿಸಲ್ಪಟ್ಟಿದ್ದೇನೆ! ಅಯ್ಯೋ, ಶತ್ರುವು ನನ್ನನ್ನು ಅತಿಯಾಗಿ ಹೊಡೆದುಬಿಟ್ಟನು! ಏನುಮಾಡಲಿ? ನನ್ನ ತಾಯಿಯು ವ್ಯಭಿಚಾರಿಯಾಗಿದ್ದಾಳೆ! ಯಾರಿಗೆ ಹೇಳಿಕೊಳ್ಳಲಿ?

೧೩. ಅಯ್ಯೋ, ಅಯ್ಯೋ, ನನ್ನ ಹೆಂಡತಿಯನ್ನು ಶತ್ರುವು ಎಳೆದುಕೊಂಡು ಹೋದನು! ನನ್ನ ಸೋದರಿಯನ್ನು ಮ್ಲೇಚ್ಛರು ಅಪಹರಿಸಿಕೊಂಡುಹೋದರು! ಹಾಹಾ! ಶತ್ರುವು ನನ್ನ ಮರ್ಮಕ್ಕೆ ಹೊಡೆದುಬಿಟ್ಟನು! ಈಗ ವಿಷವನ್ನು ಕುಡಿದುಬಿಡುತ್ತೇನೆ.

೧೪. ಜ್ವರದ ಅತಿವ್ಯಥೆಯಿಂದ ಸಾಯುತ್ತೇನೆ. ಅಯ್ಯೋ, ಯಮದೂತರು ಇಲ್ಲಿಗೆ ಬಂದಿದ್ದಾರೆ!'—ಈ ರೀತಿಯಾಗಿ ಜನರು ಎಲ್ಲೆಲ್ಲಿಯೂ ಬಗೆ ಬಗೆಯಾಗಿ ಗೋಳಾಡುತ್ತಿರುವುದೇ ಕಾಣಿಸುವುದು.

೧೫. ಶರೀರದ ಬೇರೆಬೇರೆ ಅವಸ್ಥೆಗಳನ್ನೂ, ಜನ್ಮಮೃತ್ಯುಗಳನ್ನೂ ಪ್ರತಿ ಕ್ಷಣದಲ್ಲಿಯೂ ಕಾಲವಶದಿಂದ ಪಡೆಯುತ್ತ ತಮ್ಮ ತಮ್ಮ ಪ್ರಾರಬ್ಧದುಃಖ ವನ್ನು ಅನುಭವಿಸುತ್ತಾರೆ.

೧೬. ಪ್ರಾರಬ್ಧದುಃಖವು ಮುಗಿದಮೇಲೆ ಮರಣದುಃಖವುಂಟಾಗುತ್ತದೆ. ಆ ದುಃಖಕ್ಕೆ ಎಣೆಯಿಲ್ಲ. ಮರಣಹೊಂದಿದಮೇಲೂ ಯಮಯಾತನೆಗಳ ಮಹಾದುಃಖವುಂಟಾಗುತ್ತದೆ.

೧೭. ಆಮೇಲೆ ಜರಾಯುಜ (ಗರ್ಭಕೋಶದಲ್ಲಿ ಹುಟ್ಟುವ ಪ್ರಾಣಿಗಳು), ಉದ್ಭಿಜ್ಜ (ನೆಲವನ್ನು ಚೀಳಿಕೊಂಡುಬರುವ ಸಸ್ಯಾದಿ ಜೀವಿಗಳು), ಸ್ವೇದಜ (ಬೆವರಿನಿಂದ ಹುಟ್ಟುಜೀವಿಗಳು), ಅಂಡಜ (ಮೊಟ್ಟೆಯಿಂದ ಹುಟ್ಟುವ ಪ್ರಾಣಿ

ನಿತ್ಯಃ ಪ್ರಲಯ ಏವಂ ತೇ ಕೀರ್ತಿತಃ ಸೂಕ್ಷ್ಮಯಾ ದೃಶಾ ।
ಸ ಜ್ಞೇಯೋಽಥ ಮುನೇ ವಚ್ಮಿ ಲಯಂ ನೈಮಿತ್ತಿಕಾಭಿಧಂ ॥ ೧೮ ॥
ನಿಮಿತ್ತೀಕೃತ್ಯ ರಜನೀಂ ಭವೇದ್ವಿಶ್ವಸೃಜಸ್ತು ಯಃ ।
ನೈಮಿತ್ತಿಕಃ ಸ ಕಥಿತೋ ಲಯೋ ದೈನಂದಿನಶ್ಚ ಸಃ ॥ ೧೯ ॥
ಚತುರ್ಯುಗಾನಾಂ ಸಾಹಸ್ರಂ ದಿನಂ ವಿಶ್ವಸೃಜೋ ಮುನೇ ।
ನಿಶಾ ಚ ತಾವತೀ ತಸ್ಯ ತದ್ದ್ವಯಂ ಕಲ್ಪ ಉಚ್ಯತೇ ॥ ೨೦ ॥
ಏಕೈಕಸ್ಮಿನ್ ದಿನೇ ತಸ್ಯ ಚತುರ್ದಶ ಚತುರ್ದಶ ।
ಭವಂತಿ ಮನವೋ ಬ್ರಹ್ಮನ್ ಧರ್ಮಸೇತ್ವಭಿರಕ್ಷಕಾಃ ॥ ೨೧ ॥
ಆದ್ಯಃ ಸ್ವಾಯಂಭುವಸ್ತತ್ರ ಮನುಃ ಸ್ವಾರೋಚಿಷಸ್ತತಃ ।
ಉತ್ತಮಸ್ತಾಮಸಶ್ಚಾಽಥ ರೈವತಶ್ಚಾಕ್ಷುಷಸ್ತತಃ ॥ ೨೨ ॥
ಶ್ರಾದ್ಧದೇವಶ್ಚ ಸಾವರ್ಣಿರ್ಭೌತ್ಯೋ ರೌಚ್ಯಸ್ತತಃ ಪರಂ ।
ಬ್ರಹ್ಮಸಾವರ್ಣಿನಾಮಾ ಚ ರುದ್ರಸಾವರ್ಣಿರೇವ ಚ ॥ ೨೩ ॥

---

ಗಳು)— ಈ ಜನ್ಮಗಳಲ್ಲಿ ತಮ್ಮ ತಮ್ಮ ಕರ್ಮಕ್ಕನುಸಾರವಾಗಿ ಹುಟ್ಟಿ ಹುಟ್ಟಿ ದುಃಖಿತರಾಗಿ ಮತ್ತೆ ಮತ್ತೆ ಸಾಯುತ್ತಾರೆ.

೧೮. ಸೂಕ್ಷ್ಮದೃಷ್ಟಿಯಿಂದ ಈ ರೀತಿಯಾಗಿ ನಿತ್ಯಪ್ರಳಯವನ್ನು ನಿನಗೆ ವಿವರಿಸಿದ್ದೇನೆ. ಮುನಿಯೇ! ಇನ್ನುಮೇಲೆ ನೈಮಿತ್ತಿಕವೆನ್ನಿಸಿಕೊಳ್ಳುವ ಪ್ರಳಯವನ್ನು ತಿಳಿದುಕೊಳ್ಳಬೇಕಷ್ಟೆ; ಅದನ್ನು ಹೇಳುತ್ತೇನೆ; ಕೇಳು.

೧೯. ವಿಶ್ವಸೃಷ್ಟಿಕರ್ತನ ರಾತ್ರಿಯನ್ನು ನಿಮಿತ್ತವಾಗಿಟ್ಟುಕೊಂಡು ಯಾವ ಪ್ರಳಯವುಂಟಾಗುವುದೋ ಅದು ನೈಮಿತ್ತಿಕಪ್ರಳಯವೆನಿಸಿಕೊಳ್ಳುತ್ತದೆ. ದೈನಂದಿನ ಪ್ರಳಯವೆಂಬುದೂ ಅದೇ.

೨೦. ಎಲೈ ಮುನಿಯೇ! ನಾಲ್ಕು ಯುಗಗಳೂ ಸಾವಿರಸಾರಿ ಬಂದರೆ ವಿಶ್ವಸೃಷ್ಟಿಕರ್ತನಾದ ಬ್ರಹ್ಮನಿಗೆ ಒಂದು ದಿನವಾಗುವುದು. ಅವನ ರಾತ್ರಿಯೂ ಅಷ್ಟೇ ಅಳವುಳ್ಳದ್ದು (ಎಂದರೆ ಅದೂ ಒಂದುಸಾವಿರ ಚತುರ್ಯುಗಕಾಲ ವ್ಯಾಪಿಸುವುದು). ಆ ಹಗಲು ರಾತ್ರಿಗಳೆರಡೂ ಸೇರಿ ಒಂದು ಕಲ್ಪವೆನಿಸುತ್ತದೆ.

೨೧. ಎಲೈ ಬ್ರಾಹ್ಮಣನೇ, ಅವನ ಒಂದೊಂದು ದಿನದಲ್ಲಿಯೂ ಧರ್ಮಸೇತುವಿಗೆ ರಕ್ಷಕರಾಗಿ ಹದಿನಾಲ್ಕು ಹದಿನಾಲ್ಕು ಮಂದಿ ಮನುಗಳು ಉಂಟಾಗುತ್ತಾರೆ.

೨೨–೨೪. ಅವರಲ್ಲಿ ಮೊದಲನೆಯವನು ಸ್ವಾಯಂಭುವಮನುವು. ಆಮೇಲೆ ಸ್ವಾರೋಚಿಷನು; ಆಮೇಲೆ ಉತ್ತಮನು; ಬಳಿಕ ತಾಮಸನು; ಆಮೇಲೆ ರೈವತನು; ಅವನಾದಬಳಿಕ ಚಾಕ್ಷುಷಮನುವು; ಬಳಿಕ ಶ್ರಾದ್ಧದೇವನು; ಅನಂತರ ಸಾವರ್ಣಿಯು; ಆ ತರುವಾಯ ಭೌತ್ಯನು; ಅವನಾದ ಬಳಿಕ

ಮೇರುಸಾವರ್ಣಿ ಸಂಜ್ಞೋಽಥ ದಕ್ಷಸಾವರ್ಣಿರಂತಿಮಃ ।
ಚತುರ್ದಶೈತೇ ಮನವಃ ಪ್ರೋಕ್ತಾ ಬ್ರಹ್ಮೈಕವಾಸರೇ ॥ ೨೪ ॥
ಏಕೈಕಸ್ಯ ಮನೋಃ ಕಾಲೋ ಯುಗಾನಾಂ ಚೈಕಸಪ್ತತಿಃ ।
ದಿವ್ಯೈರ್ದ್ವಾದಶಸಾಹಸ್ರೈರ್ಯುಗಕಾಲಶ್ಚ ವತ್ಸರೈಃ ॥ ೨೫ ॥
ಚತುರ್ದಶಸ್ಯೈವ ಮನೋರಂತರೇಂತಮುಪೇಯುಷಿ ।
ಸಾಯಂಸಂಧ್ಯಾ ವಿಶ್ವಸೃಜೋ ಜಾಯತೇ ಮುನಿಸತ್ತಮ ॥ ೨೬ ॥
ದಿನಾವಸಾನೇ ವೈರಾಜಃ ಶಕ್ತೀರಾಕರ್ಷತಿ ಸ್ಥಿತೇಃ ।
ವೈರಾಜಾತ್ಮಾ ತದಾ ರುದ್ರಸ್ತ್ರಿಲೋಕೀಂ ಹರ್ತುಮೀಹತೇ ॥ ೨೭ ॥
ಆದೌ ಭವತ್ಯನಾವೃಷ್ಟಿರತ್ಯುಗ್ರಾ ಶತವಾರ್ಷಿಕೀ ।
ತದಾಲ್ಪಸಾರಸತ್ವಾನಿ ಕ್ಷೀಯಂತೇ ಸರ್ವಶೋ ಭುವಿ ॥ ೨೮ ॥
ಸಾಂವರ್ತಕಸ್ಯ ಚಾರ್ಕಸ್ಯ ರಶ್ಮಯೋಽತ್ಯುಲ್ಬಣಾ ರಸಂ ।
ಆಪಾತಾಲಾತ್ಪಿಬಂತ್ಯಾಶು ಧರಣ್ಯಾಂ ಸರ್ವಮೇವ ಹಿ ॥ ೨೯ ॥
ಸಾರಸಂ ಚೈವ ನಾದೇಯಂ ಸಾಮುದ್ರಂ ಚಾಂಬುಸರ್ವಶಃ ।
ಶೋಷಯಿತ್ವಾಽಖಿಲಾನ್ ಲೋಕಾನ್ ಸೋಽರ್ಕೋ ನಯತಿ ಸಂಕ್ಷಯಂ॥

---

ರೌಚ್ಯನು; ಆಮೇಲೆ ಬ್ರಹ್ಮಸಾವರ್ಣಿಯು, ಆ ಬಳಿಕ ರುದ್ರಸಾವರ್ಣಿಯು, ಅನಂತರ ಮೇರುಸಾವರ್ಣಿಯು, ಕೊನೆಯವನಾಗಿ ದಕ್ಷಸಾವರ್ಣಿಯು— ಈ ಹದಿನಾಲ್ಕುಮಂದಿ ಮನುಗಳು ಬ್ರಹ್ಮನ ಒಂದು ದಿನದಲ್ಲಿ ತಲೆದೋರುವವ ರೆಂದು ಹೇಳಲ್ಪಟ್ಟಿದೆ.

೨೫. ಒಬ್ಬೊಬ್ಬ ಮನುವಿನ ಕಾಲವೂ ಎಪ್ಪತ್ತೊಂದು ಯುಗದಷ್ಟು. ಹನ್ನೆರಡುಸಾವಿರ ದಿವ್ಯವರ್ಷಗಳಕಾಲಕ್ಕೆ ಒಂದು ಯುಗವೆನಿಸುವುದು.

೨೬. ಎಲೈ ಮುನಿಶ್ರೇಷ್ಠನೇ! ಹದಿನಾಲ್ಕನೆಯ ಮನ್ವಂತರವು ಕೊನೆ ಯಾಗಲಾಗಿ ವಿಶ್ವಸೃಷ್ಟಿಕರ್ತನಿಗೆ ಸಾಯಂಸಂಧ್ಯೆಯಾಗುತ್ತದೆ.

೨೭. ದಿನಮುಗಿಯಲು ವೈರಾಜನು (ವಿರಾಟ್ಪುರುಷನು) ಸ್ಥಿತಿಶಕ್ತಿ ಗಳನ್ನು ಆಕರ್ಷಿಸಿಕೊಳ್ಳುತ್ತಾನೆ. ಆಗ ವೈರಾಜಾತ್ಮನಾದ ರುದ್ರನು ಮೂರು ಲೋಕಗಳನ್ನೂ ಸಂಹರಿಸಲೆಳಸುತ್ತಾನೆ.

೨೮–೨೯. ಮೊದಲು ನೂರುವರ್ಷಕಾಲ ಅತ್ಯುಗ್ರವಾದ ಅನಾವೃಷ್ಟಿಯು ಉಂಟಾಗುತ್ತದೆ. ಆಗ ಭೂಮಿಯಲ್ಲಿ ಎಲ್ಲೆಲ್ಲಿಯೂ ಅಲ್ಪಸಾರವುಳ್ಳ ಜೀವಿಗಳು ನಾಶವಾಗುತ್ತವೆ. ಸಾಂವರ್ತಕನೆಂಬ ಸೂರ್ಯನ ರಶ್ಮಿಗಳು ಅತ್ಯುಲ್ಬಣಹೊಂದಿ ಪಾತಾಳದಿಂದ ಮೊದಲುಮಾಡಿಕೊಂಡು ಭೂಮಿಯಲ್ಲಿರುವ ಸರ್ವರಸವನ್ನೂ ಹೀರಿಬಿಡುತ್ತವೆ.

೩೦. ಸರೋವರಗಳ ನೀರು, ನದಿಗಳ ನೀರು, ಸಮುದ್ರದ ನೀರು—

**ತತೋ ಭವತಿ ನಿಃಸ್ನೇಹಾ ನಷ್ಟಸ್ಥಾವರಜಂಗಮಾ ।**
**ಕೂರ್ಮಪೃಷ್ಠೋಪಮಾ ಭೂಮಿಃ ಶುಷ್ಕಾ ಸಂಕುಚಿತಾ ಭೃಶಂ ॥ ೩೧ ॥**
**ಕಾಲಾಗ್ನಿರುದ್ರಃ ಶೇಷಸ್ಯ ಮುಖಾದುತ್ಪದ್ಯತೇ ತತಃ ।**
**ಅಧೋಲೋಕಾನ್ ಸಪ್ತ ಭೂಮಿಂ ಭುವಃ ಸ್ವಶ್ಚ ದಹತ್ಯಸೌ ॥ ೩೨ ॥**
**ನಿರ್ದಗ್ಧಲೋಕದಶಕೋ ಜ್ವಾಲಾವರ್ತಭಯಂಕರಃ ।**
**ಉದ್ವಾಸಿತಮಹರ್ಲೋಕಃ ಕಾಲಾಗ್ನಿಃ ಪರಿವರ್ತತೇ ॥ ೩೩ ॥**
**ಗತಾಧಿಕಾರಾಸ್ತ್ರಿದಶಾ ಭುವಃ ಸ್ವರ್ಗನಿವಾಸಿನಃ ।**
**ಮಹರ್ಲೋಕಾಜ್ಜನಂ ಯಾಂತಿ ವಹ್ನಿಜ್ವಾಲಾಭೃಶಾರ್ದಿತಾಃ ॥ ೩೪ ॥**
**ನಿವೃತ್ತಿಧರ್ಮಾ ಋಷಯಃ ಪ್ರಾಪ್ತಾಃ ಸಿದ್ಧದಶಾಂ ತು ಯೇ ।**
**ಭೂತಲಾತ್ತೇಽಪಿ ತರ್ಹ್ಯೇವ ಋಷಿಲೋಕಂ ಪ್ರಯಾಂತಿ ಚ ॥ ೩೫ ॥**
**ಉತ್ತಿಷ್ಠಂತಿ ತತೋ ಘೋರಾ ವ್ಯೋಮ್ನಿ ಸಾಂವರ್ತಕಾ ಘನಾಃ ।**
**ಮಹಾಗಜಕುಲಪ್ರಖ್ಯಾಸ್ತಡಿತ್ವಂತೋಽತಿನಾದಿನಃ ॥ ೩೬ ॥**

---

ಎಲ್ಲವನ್ನೂ ಇಂಗಿಸಿ ಒಣಗಿಸಿ ಆ ಸೂರ್ಯನು ಅಖಿಲಲೋಕಗಳನ್ನೂ ಪೂರ್ಣವಾಗಿ ನಾಶಮಾಡುತ್ತಾನೆ.

೩೧. ಆ ಬಳಿಕ ಭೂಮಿಯು ಸ್ನೇಹ (ಜಿಡ್ಡು) ರಹಿತವಾಗಿ ಸ್ಥಾವರ ಜಂಗಮಗಳೆಲ್ಲವೂ ನಾಶವಾಗಿಹೋಗಿ ಆಮೆಯ ಬೆನ್ನಿನಂತೆ ಒಣಗಿ ಶುಷ್ಕವಾಗಿ ಬಹಳ ಸಂಕುಚಿತವಾಗುತ್ತದೆ.

೩೨. ಆ ಬಳಿಕ ಆದಿಶೇಷನ ಮುಖದಿಂದ ಕಾಲಾಗ್ನಿರುದ್ರನು ಉದ್ಭವಿಸುತ್ತಾನೆ. ಅಧೋಲೋಕಗಳನ್ನೂ, ಸಪ್ತಭೂಮಿಗಳನ್ನೂ, ಭುವರ್ಲೋಕವನ್ನೂ, ಸ್ವರ್ಲೋಕವನ್ನೂ ಅವನು ದಹಿಸುತ್ತಾನೆ.

೩೩. ಹತ್ತುಲೋಕಗಳನ್ನೂ ಸಂಪೂರ್ಣವಾಗಿ ಸುಟ್ಟುಹಾಕಿ, ಸುತ್ತಿ ಉರುಳುತ್ತಿರುವ ಜ್ವಾಲೆಯ ಸುಳಿಗಳಿಂದ ಭಯಂಕರವಾಗಿ ಮಹರ್ಲೋಕವನ್ನು ತೊಡೆದುಹಾಕಿ ಆ ಕಾಲಾಗ್ನಿಯು ಸುತ್ತುತ್ತಿರುತ್ತದೆ.

೩೪. ಭುವರ್ಲೋಕ ಸ್ವರ್ಗಲೋಕಗಳ ನಿವಾಸಿಗಳಾದ ದೇವತೆಗಳು ತಮ್ಮ ಅಧಿಕಾರಗಳನ್ನು ಕಳೆದುಕೊಂಡು ಬೆಂಕಿಯ ಜ್ವಾಲೆಯಿಂದ ಬಹುಬಾಧೆ ಪಡುವವರಾಗಿ ಮಹರ್ಲೋಕದಿಂದ ಜನೋಲೋಕಕ್ಕೆ ಹೋಗುತ್ತಾರೆ.

೩೫–೩೬. ನಿವೃತ್ತಿಧರ್ಮವನ್ನವಲಂಬಿಸಿದ ಋಷಿಗಳು ಯಾರು ಸಿದ್ಧದಶೆಯನ್ನು ಪಡೆದಿರುವರೋ ಅವರೂ ಕೂಡ ಆಗಲೇ ಭೂತಲದಿಂದ ಋಷಿಲೋಕವನ್ನು ಹೋಗಿ ಸೇರುತ್ತಾರೆ. ಆ ಬಳಿಕ ಆಕಾಶದಲ್ಲಿ ಮಹಾಗಜಸಮೂಹಗಳಂತೆ ಬಹಳ ದೊಡ್ಡದಾಗಿ ಮಿಂಚುಹೊಳೆಯಿಸುತ್ತ ಅತಿಯಾಗಿ ಗರ್ಜಿಸುತ್ತಾ ಘೋರವಾದ ಸಾಂವರ್ತಕ ಮೇಘಗಳೇಳುತ್ತವೆ.

ಧೂಮ್ರವರ್ಣಾಃ ಪೀತವರ್ಣಾಃ ಕೇಚಿತ್ಕುಮುದಸನ್ನಿಭಾಃ ।
ಲಾಕ್ಷಾರಸನಿಭಾಃ ಕೇಚಿಚ್ಚಾಪಪತ್ರನಿಭಾಸ್ತಥಾ ॥ ೩೭ ॥
ಶಮಯಿತ್ವಾ ಮಹಾವಹ್ನಿಂ ಶತಂ ವರ್ಷಾಣ್ಯಹರ್ನಿಶಂ ।
ವರ್ಷಮಾಣಾಃ ಸ್ಥೂಲಧಾರಾಃ ಸ್ತನಂತಸ್ತೇ ಘನಾಘನಾಃ ।
ಬ್ರಹ್ಮಾಂಡಸ್ಯಾಂತರಾಲಂ ಚ ಪೂರಯಂತಿ ಧ್ರುವಾವಧಿ ॥ ೩೮ ॥
ಏಕಾರ್ಣವಜಲೇ ತಸ್ಮಿನ್ ವೈರಾಜಪುರುಷಃ ಸ ತು ।
ಅನಿರುದ್ಧಾತ್ಮಕಃ ಶೇತೇ ನಾಗೇಂದ್ರಶಯನೇ ಪ್ರಭುಃ ॥ ೩೯ ॥
ತದಾ ದೇವಾಶ್ಚ ಋಷಯೋ ರಜಃಸತ್ವತಮೋವಶಾಃ ।
ಯೇ ತೇ ಸಹವಿರಿಂಚೇನ ಸ್ವಕೀಯಗುಣಕರ್ಷಿತಾಃ ।
ಪ್ರವಿಶ್ಯ ತಸ್ಯ ಜಠರೇ ಶೇರತೇ ದೀರ್ಘನಿದ್ರಯಾ ॥ ೪೦ ॥
ಯೇ ತು ಬ್ರಹ್ಮಾತ್ಮೈಕ್ಯಭಾವಾ ವಶೀಕೃತ ಗುಣತ್ರಯಾಃ ।
ನಿವೃತ್ತೇನೈವ ಧರ್ಮೇಣ ವಾಸುದೇವಮುಪಾಸತೇ ॥ ೪೧ ॥

---

೩೭. ಅವುಗಳಲ್ಲಿ ಕೆಲವು ಧೂಮ್ರವರ್ಣದವು; ಕೆಲವು ಪೀತ (ಹಳದಿ) ವರ್ಣದವು; ಕೆಲವು ಕುಮುದಕ್ಕೆ ಸಮಾನವಾಗಿ ನೀಲವಾಗಿರುವುವು. ಕೆಲವು ಲಾಕ್ಷಾ (ಅರಗಿನ) ರಸದಂತಿರುವುವು; ಮತ್ತೆ ಕೆಲವು ಚಾಪಪತ್ರಕ್ಕೆ (ಬಾಣದ ರೆಕ್ಕೆಯ ಬಣ್ಣಕ್ಕೆ) ಸಮಾನವಾಗಿರುವುವು.

೩೮. ಬಹು ದೊಡ್ಡವಾದ ಆ ಮೇಘಗಳು ಆ ಮಹಾವಹ್ನಿಯನ್ನಾರಿಸಿ, ನೂರುವರ್ಷಗಳವರೆಗೆ ಹಗಲಿರುಳೂ ಗುಡುಗು ಸಿಡಿಲುಗಳಿಂದ ಮೊಳಗುತ್ತ ಸ್ಥೂಲಧಾರೆಯಿಂದ ಮಳೆಸುರಿಸುತ್ತ ಬ್ರಹ್ಮಾಂಡದ ಅಂತರಾಳವನ್ನು ಧ್ರುವ ಮಂಡಲದವರೆಗೂ ತುಂಬಿಬಿಡುತ್ತವೆ.

೩೯. ಏಕಾರ್ಣವವಾಗಿರುವ ಆ ಜಲದಲ್ಲಿ ಪ್ರಭುವಾದ ಆ ವೈರಾಜ ಪುರುಷನು ಅನಿರುದ್ಧಾತ್ಮಕನಾಗಿ ನಾಗೇಂದ್ರಶಯನದಲ್ಲಿ (ಸರ್ಪದ ಹಾಸಿಗೆಯ ಮೇಲೆ) ಮಲಗಿರುವನು.

೪೦. ಆಗ ರಜಸ್ಸತ್ವತಮೋಗುಣಗಳಿಗೆ ವಶರಾಗಿರುವ ಆ ದೇವತೆಗಳೂ, ಋಷಿಗಳೂ ಎಲ್ಲರೂ ಬ್ರಹ್ಮನಿಂದೊಡಗೂಡಿ ತಮ್ಮ ತಮ್ಮ ಗುಣಗಳಿಂದ ಆಕರ್ಷಿತರಾಗಿ ಆ ಪುರುಷನ ಹೊಟ್ಟೆಯನ್ನು ಪ್ರವೇಶಿಸಿ ದೀರ್ಘನಿದ್ರೆಯಲ್ಲಿ ತೊಡಗುತ್ತಾರೆ.

೪೧–೪೨. ಯಾರು ಬ್ರಹ್ಮಾತ್ಮೈಕ್ಯಭಾವವುಳ್ಳವರಾಗಿ ಗುಣತ್ರಯಗಳನ್ನೂ ವಶಪಡಿಸಿಕೊಂಡು ನಿವೃತ್ತಿಧರ್ಮದಿಂದಲೇ ವಾಸುದೇವನನ್ನು ಉಪಾಸನೆ ಮಾಡುವರೋ, ಅವರು ಮಹರ್ಲೋಕ ಮೊದಲಾದ ನಾಲ್ಕು ಲೋಕಗಳಲ್ಲಿ

ಮಹರಾದಿಷು ಲೋಕೇಷು ತೇ ಚತುರ್ಷು ಕೃತಾಲಯಾಃ ।
ತಂ ವೈರಾಜಂ ಸಂಸ್ತುವಂತೋ ನಿವಸಂತಿ ಯಥಾಸುಖಂ ॥ ೪೨ ॥
ನಾರಾಯಣಃ ಸ ಭಗವಾನ್ ಸ್ವರೂಪಂ ಪರಮಾತ್ಮನಃ ।
ಚಿಂತಯನ್ ವಾಸುದೇವಾಖ್ಯಂ ಶೇತೇ ವೈ ಯೋಗನಿದ್ರಯಾ ॥ ೪೩ ॥
ನಿಶಾಂತೇ ಬ್ರಹ್ಮಣಾ ಸಾಕಂ ಸರ್ವೇ ತೇ ತಸ್ಯ ಜಾಠರಾಃ ।
ಉತ್ಪದ್ಯಂತೇ ಯಥಾಪೂರ್ವಂ ಯಥಾಕರ್ಮಾಧಿಕಾರಿಣಃ ॥ ೪೪ ॥
ಏವಂ ನೈಮಿತ್ತಿಕೋ ನಾಮ ತ್ರಿಲೋಕೀಕ್ಷಯಲಕ್ಷಣಃ ।
ಪ್ರಲಯಃ ಕಥಿತಸ್ತುಭ್ಯಂ ಪ್ರಾಕೃತಂ ಕೀರ್ತಯಾಮ್ಯಥ ॥ ೪೫ ॥
ಯ ಏಷಕಲ್ಪಃ ಕಥಿತಸ್ತಾದೃಶಾನಾಂ ಶತತ್ರಯಂ ।
ಷಷ್ಟ್ಯಧಿಕಂ ಚ ಯಃ ಕಾಲೋ ವೈಧಸಃ ಸ ತು ವತ್ಸರಃ ॥ ೪೬ ॥
ಪಂಚಾಶತಾ ತೈಃ ಪರಾರ್ಧೋ ಬ್ರಹ್ಮಾಯುಸ್ತದ್ದ್ವಯಂ ಮತಂ ।
ಪರಾಖ್ಯಕಾಲೇ ಸಂಪೂರ್ಣೇ ಮಹಾನ್ ಭವತಿ ಸಂಕ್ಷಯಃ ॥ ೪೭ ॥
ಸಂಹಾರ ರುದ್ರರೂಪೇಣ ಸಂಹೃತ್ಯ ಸ್ವಂ ವಿರಾಡ್ವಪುಃ ।
ಸ್ವಪರಂ ನಿರ್ಗುಣಂ ರೂಪಂ ವೈರಾಜೋ ಯಾತುಮಿಚ್ಛತಿ ॥ ೪೮ ॥

---

ನೆಲೆಗೊಂಡವರಾಗಿ ಆ ವೈರಾಜಪುರುಷನನ್ನು ಸ್ತುತಿಸುತ್ತ ಮೊದಲಿನಂತೆಯೆ ಸುಖವಾಗಿ ವಾಸಮಾಡುವರು.

೪೩. ಭಗವಂತನಾದ ಆ ನಾರಾಯಣನು ಪರಮಾತ್ಮನಾದ ವಾಸುದೇವ ಸ್ವರೂಪವನ್ನು ನೆನೆಯುತ್ತ ಯೋಗನಿದ್ರೆಮಾಡುತ್ತ ಮಲಗಿರುವನು.

೪೪. ರಾತ್ರಿಯು ಮುಗಿದಮೇಲೆ ಅವನ ಜಠರದಲ್ಲಿ ನೆಲಸಿದ ಅವರೆಲ್ಲರೂ ಬ್ರಹ್ಮನೊಡನೆ ಮೊದಲಿನಂತೆಯೇ ಉತ್ಪತ್ತಿಹೊಂದುತ್ತಾರೆ. ಮೊದಲಿನ ಕರ್ಮಕ್ಕನುಗುಣವಾದ ಅಧಿಕಾರಗಳನ್ನೇ ಅವರು ಪಡೆಯುತ್ತಾರೆ.

೪೫. ಹೀಗೆ ಮೂರು ಲೋಕಗಳ ಕ್ಷಯಸ್ವರೂಪವಾದ ನೈಮಿತ್ತಿಕವೆಂಬ ಹೆಸರಿನ ಪ್ರಳಯವನ್ನು ನಿನಗೆ ಹೇಳಲಾಯಿತು. ಇನ್ನು ಪ್ರಾಕೃತ ಪ್ರಳಯವನ್ನು ವಿವರಿಸುತ್ತೇನೆ.

೪೬. ಯಾವ ಕಾಲಕ್ಕೆ ಕಲ್ಪವೆಂದು ಹೇಳಿರುವುದೊ ಅಂಥವು ಮುನ್ನೂರ ಅರುವತ್ತು ಆಗುವುದಕ್ಕೆ ಎಷ್ಟುಕಾಲ ಬೇಕೋ ಆ ಕಾಲವು ಬ್ರಹ್ಮನಿಗೆ ಒಂದು ವರ್ಷವೆನಿಸುವುದು.

೪೭. ಅಂಥ ಐವತ್ತು ವರ್ಷಗಳಿಗೆ ಒಂದು ಪರಾರ್ಧವೆಂದು ಹೆಸರು. ಬ್ರಹ್ಮನ ಆಯುಸ್ಸು ಅಂಥ ಎರಡು ಪರಾರ್ಧಗಳೆಂದು ಹೇಳಿದೆ. 'ಪರಾ' ಎಂಬ ಕಾಲವು ಸಂಪೂರ್ಣವಾದಲ್ಲಿ ಆಗ ಮಹಾಪ್ರಳಯವುಂಟಾಗುತ್ತದೆ.

೪೮. ಆಗ ಸಂಹಾರರುದ್ರನ ಸ್ವರೂಪದಿಂದ ತನ್ನ ವಿರಾಟ್‌ಸ್ವರೂಪ ದೇಹವನ್ನು ಸಂಹರಿಸಿ ವೈರಾಜನು ನಿರ್ಗುಣರೂಪವನ್ನೈದಲು ಇಚ್ಛಿಸುತ್ತಾನೆ.

ತದಾ ಭವತ್ಯನಾವೃಷ್ಟಿಃ ಪೂರ್ವವಚ್ಛತವಾರ್ಷಿಕೀ ।
ಸಾಂಕರ್ಷಣಶ್ಚ ಕಾಲಾಗ್ನಿರ್ದಹತ್ಯಂಡಮಶೇಷತಃ ॥ ೪೯ ॥
ಸಾಂವರ್ತಕಾಸ್ತತೋ ಮೇಘಾ ವರ್ಷಂತ್ಯತಿಭಯಾನಕಾಃ ।
ಶತಂ ವರ್ಷಾಣಿ ಧಾರಾಭಿರ್ಮುಸಲಾಕೃತಿಭಿರ್ಮುನೇ ॥ ೫೦ ॥
ಮಹದಾದೇರ್ವಿಕಾರಸ್ಯ ವಿಶೇಷಾಂತಸ್ಯ ಸಂಕ್ಷಯಃ ।
ಸರ್ವಸ್ಯಾಪಿ ಭವತ್ಯೇವ ವಾಸುದೇವೇಚ್ಛಯಾ ತತಃ ॥ ೫೧ ॥
ಆಪೋ ಗ್ರಸಂತಿ ವೈ ಪೂರ್ವಂ ಭೂಮೇರ್ಗಂಧಾತ್ಮಕಂ ಗುಣಂ ।
ಆತ್ತಗಂಧಾ ತತೋ ಭೂಮಿಃ ಪ್ರಲಯತ್ವಾಯ ಕಲ್ಪತೇ ॥ ೫೨ ॥
ಗ್ರಸತೇಂಬುಗುಣಂ ತೇಜೋ ರಸಂ ತಲ್ಲೀಯತೇ ತತಃ ।
ರೂಪಂ ತೇಜೋಗುಣಂ ವಾಯುರ್ಗ್ರಸತೇ ಲೀಯತೇಽಥ ತತ್ ॥ ೫೩ ॥
ವಾಯೋರಪಿ ಗುಣಂ ಸ್ಪರ್ಶಮಾಕಾಶೋ ಗ್ರಸತೇ ತತಃ ।
ಪ್ರಶಾಮ್ಯತಿ ತದಾ ವಾಯುಃ ಖಂ ತು ತಿಷ್ಠತ್ಯನಾವೃತಂ ॥ ೫೪ ॥

---

೪೯. ಆಗ ಪೂರ್ವದಂತೆಯೇ ನೂರುವರ್ಷಗಳವರೆಗೂ ಅನಾವೃಷ್ಟಿಯುಂಟಾಗುತ್ತದೆ. ಸಂಕರ್ಷಣ ಸಂಬಂಧವಾದ ಕಾಲಾಗ್ನಿಯು ಬ್ರಹ್ಮಾಂಡವನ್ನೆಲ್ಲ ಸಂಪೂರ್ಣವಾಗಿ ಸುಟ್ಟುಬಿಡುತ್ತದೆ.

೫೦. ಎಲೈ ಮುನಿಯೇ! ಬಳಿಕ ಅತಿ ಭಯಂಕರಗಳಾದ ಸಾಂವರ್ತಕ ಮೇಘಗಳು ಒನಕೆಯಾಕಾರದ ಜಲಧಾರೆಗಳನ್ನು ಸುರಿಸುತ್ತ ನೂರುವರ್ಷಗಳವರೆಗೆ ಮಳೆಗರೆಯುತ್ತವೆ.

೫೧. ಆ ಬಳಿಕ ವಾಸುದೇವನ ಇಚ್ಛೆಯಿಂದ ವಿಶೇಷಾಂತವುಳ್ಳ ಮಹದ್ವಿಕಾರಗಳೆಲ್ಲಕ್ಕೂ ಸಂಪೂರ್ಣ ಕ್ಷಯವು ಆಗಿಯೇ ತೀರುತ್ತದೆ.

೫೨. ಮೊದಲು ನೀರು ಭೂಮಿಯ ಗಂಧಾತ್ಮಕವಾದ ಗುಣವನ್ನು ನುಂಗಿಬಿಡುತ್ತದೆ. ಗಂಧಗುಣವನ್ನು ಕಳೆದುಕೊಂಡ ಭೂಮಿಯು ಆ ಬಳಿಕ ಪ್ರಳಯಕ್ಕೆ ಈಡಾಗುತ್ತದೆ.

೫೩. ಆಮೇಲೆ ತೇಜಸ್ಸು ನೀರಿನ ಗುಣವಾದ ರಸವನ್ನು ಗ್ರಾಸಮಾಡುತ್ತದೆ. ಆ ತರುವಾಯ ಅದು (ಎಂದರೆ ನೀರು, ಅಪ್) ಲಯವಾಗುತ್ತದೆ. ವಾಯುವು ತೇಜಸ್ಸಿನ ಗುಣವಾದ ರೂಪವನ್ನು ನುಂಗುತ್ತದೆ. ಆಮೇಲೆ ಆ ತೇಜಸ್ಸೂ ಲಯವಾಗುತ್ತದೆ.

೫೪. ಆ ಬಳಿಕ ವಾಯುವಿನ ಗುಣವಾದ ಸ್ಪರ್ಶವನ್ನು ಕೂಡ ಆಕಾಶವು ಗ್ರಾಸಮಾಡುತ್ತದೆ. ಆಗ ವಾಯುವು ತಣ್ಣಗಾಗಿ ನಿಂತೇಹೋಗುತ್ತದೆ. ಆಕಾಶವೊಂದು ಮಾತ್ರ ತೆರೆದು ನಿಂತಿರುತ್ತದೆ.

ಭೂತಾದಿಸ್ತದ್ಗುಣಂ ಶಬ್ದಂ ಗ್ರಸತೇ ಲೀಯತೇ ಚ ಖಂ ।
ಇಂದ್ರಿಯಾಣಿ ವಿಲೀಯಂತೇ ತೈಜಸಾಹಂಕೃತೌ ತತಃ ॥ ೫೫ ॥
ಅಹಂಕಾರೇ ವಿಲೀಯಂತೇ ಸಾತ್ತ್ವಿಕೇ ದೇವತಾ ಮನಃ ।
ಯದ್ಯದ್ಯಸ್ಮಾತ್ ಸಮುತ್ಪನ್ನಂ ತತ್ತತ್ತಸ್ಮಿನ್ಹಿ ಲೀಯತೇ ॥ ೫೬ ॥
ಅಹಂಕಾರೋ ಮಹತ್ತತ್ತ್ವೇ ತ್ರಿವಿಧೋಽಪಿ ಪ್ರಲೀಯತೇ ।
ತತ್ಪ್ರಧಾನೇ ಚ ತತ್ಪುಂಸಿ ಸ ಮೂಲಪ್ರಕೃತೌ ತತಃ ॥ ೫೭ ॥
ಏಷ ಪ್ರಾಕೃತಿಕೋ ನಾಮ ಪ್ರಲಯಃ ಪರಿಗೀಯತೇ ।
ತಿರೋಭವಂತಿ ಜೀವೇಶಾ ಯತ್ರಾಽವ್ಯಕ್ತೇ ಹರೀಚ್ಛಯಾ ॥ ೫೮ ॥
ಯದಾ ಚ ಮಾಯಾಪುರುಷೌ ಕಾಲೋಽತ್ಯಕ್ಷರತೇಜಸಿ ।
ತದಿಚ್ಛಯಾ ತಿರೋ ಯಾಂತಿ ಸ ತ್ವೇಕೋ ವರ್ತತೇ ಪ್ರಭುಃ ॥ ೫೯ ॥
ತದಾ ಸ ಪ್ರಲಯೋ ಜ್ಞೇಯೋ ನಾರದಾತ್ಯಂತಿಕಾಭಿಧಃ ।
ಇತ್ಥಂ ಪ್ರಭೋಃ ಕಾಲಶಕ್ತ್ಯಾ ಲಯೈರೇತೈಶ್ಚತುರ್ವಿಧೈಃ ॥ ೬೦ ॥

---

೫೫. ಭೂತಾದಿಯು ಅದರ ಗುಣವಾದ ಶಬ್ದವನ್ನು ಗ್ರಾಸಮಾಡುತ್ತದೆ. ಆಗ ಆಕಾಶವು ಲಯಹೊಂದುತ್ತದೆ. ಇಂದ್ರಿಯಗಳು ತೇಜೋರೂಪವಾದ ಅಹಂಕಾರದಲ್ಲಿ ಲಯಹೊಂದುತ್ತವೆ.

೫೬. ಸಾತ್ತ್ವಿಕವಾದ ಅಹಂಕಾರದಲ್ಲಿ ದೇವತೆಗಳೂ, ಮನಸ್ಸೂ ಲಯ ಹೊಂದುತ್ತವೆ. ಯಾವಯಾವುದು ಯಾವಯಾವುದರಿಂದ ಉತ್ಪತ್ತಿಯಾಯಿತೋ ಅದದು ಅದದರಲ್ಲೇ ಲೀನವಾಗುತ್ತದೆ.

೫೭. ಮೂರು ವಿಧವಾದ ಅಹಂಕಾರವೂ ಕೂಡ ಮಹತ್ತತ್ತ್ವದಲ್ಲಿ ಲಯ ಹೊಂದುತ್ತದೆ. ಅದು ಪ್ರಧಾನದಲ್ಲಿ, ಪ್ರಧಾನವು ಪುರುಷನಲ್ಲಿ, ಆ ಪುರುಷನು ಮೂಲಪ್ರಕೃತಿಯಲ್ಲಿ — ಹೀಗೆ ಲಯವಾಗುತ್ತವೆ.

೫೮. ಇದು ಪ್ರಾಕೃತಿಕವೆಂಬ ಪ್ರಳಯವೆಂದು ಹೇಳಲ್ಪಟ್ಟಿದೆ. ಈ ಪ್ರಾಕೃತಿಕ ಪ್ರಳಯದಲ್ಲಿ ಶ್ರೀಹರಿಯ ಇಚ್ಛೆಯಿಂದ ಜೀವೇಶ್ವರರೆಲ್ಲರೂ ಅವ್ಯಕ್ತದಲ್ಲಿ ಮರೆಯಾಗಿಹೋಗುವರು.

೫೯. ಯಾವಾಗ ಮಾಯೆ, ಪುರುಷ—ಇಬ್ಬರೂ, ಕಾಲವೂ ಅತ್ಯಕ್ಷರ ತೇಜಸ್ಸಿನಲ್ಲಿ ಪ್ರಭುವಿನ ಇಚ್ಛೆಯಿಂದ ಮರೆಯಾಗಿಹೋಗುವುವೋ, ಯಾವಾಗ ಪ್ರಭುವೊಬ್ಬನೇ ಉಳಿದಿರುವನೋ, ಆಗ ಎಲೈ ನಾರದನೇ! ಅದು ಆತ್ಯಂತಿಕವೆಂಬ ಪ್ರಳಯವೆಂದು ತಿಳಿಯಬೇಕು.

೬೦–೬೧. ಹೀಗೆ ಪ್ರಭುವಿನ ಕಾಲಶಕ್ತಿಯಿಂದ ಉಂಟಾಗುವ ಈ ನಾಲ್ಕು ಬಗೆಯ ಪ್ರಳಯಗಳಿಂದ ಸಮಸ್ತವೂ ಅಸತ್ತೆಂದು (ನಿಜವಾಗಿ, ಇರುವುದಲ್ಲವೆಂದು) ತಿಳಿದು ಅದರಲ್ಲಿ ರುಚಿಯಿಲ್ಲದಿರುವುದೇ ವೈರಾಗ್ಯವೆನಿಸಿಕೊಳ್ಳುತ್ತದೆ.

ಅಸದ್ಬುದ್ಧ್ಯಾಖಿಲಂ ತತ್ರಾರುಚಿರ್ವೈರಾಗ್ಯಮುಚ್ಯತೇ ।
ವಾಸುದೇವೇತರಾನ್‌ದೇವಾನ್ ಕಾಲಮಾಯಾವಶೀಕೃತಾನ್ ॥
ವಿದಿತ್ವಾ ತೇಷು ಚ ಪ್ರೀತಿಂ ಹಿತ್ವಾ ತಸ್ಯೈವ ನಿತ್ಯದಾ ।
ಗಾಢಸ್ನೇಹೇನ ಯಾ ಸೇವಾ ಸಾ ಭಕ್ತಿರತಿ ಗೀಯತೇ ॥ ೬೦ ॥
ಶ್ರವಣಂ ಕೀರ್ತನಂ ತಸ್ಯ ಸ್ಮೃತಿಶ್ಚರಣಸೇವನಂ ।
ಪೂಜಾ ಪ್ರಣಾಮೋ ದಾಸ್ಯಂ ಚ ಸಖ್ಯಂ ಚಾತ್ಮನಿವೇದನಂ ॥ ೬೨ ॥
ಇತ್ಯೇತೈರ್ನ್ನವಭಿರ್ಭಾವೈರ್ಯಃ ಸೇವೇತ ತಮಾದರಾತ್ ।
ಅನನ್ಯಯಾ ಧಿಷಣಯಾ ಸ ಹಿ ಭಕ್ತ ಇತೀರ್ಯತೇ ॥ ೬೩ ॥
ತ್ರಿಭಿಃಸ್ವಧರ್ಮಪ್ರಮುಖೈಃ ಯುಕ್ತಾ ಭಕ್ತಿರಿಯಂ ಮುನೇ ।
ಧರ್ಮ ಏಕಾಂತಿಕ ಇತಿ ಪ್ರೋಕ್ತೋ ಭಾಗವತಶ್ಚ ಸಃ ॥ ೬೪ ॥
ಸಾಕ್ಷಾದ್ಭಗವತಃ ಸಂಗಾತ್ ತದ್ಭಕ್ತಾನಾಂ ಭವಾದೃಶಾಂ ।
ಧರ್ಮೋ ಹ್ಯೇಕಾಂತಿಕಃ ಪುಂಭಿಃ ಪ್ರಾಪ್ಯತೇ ನಾನ್ಯಥಾ ಕ್ವಚಿತ್ ॥ ೬೫ ॥
ನೈತಾದೃಶಂ ಪರಂ ಕಿಂಚಿತ್ ಸಾಧನಂ ಹಿ ಮುಮುಕ್ಷತಾಂ ।
ನಿಃಶ್ರೇಯಸಕರಂ ಪುಂಸಾಂ ಸರ್ವಾಭದ್ರವಿನಾಶನಂ ॥ ೬೬ ॥

---

ವಾಸುದೇವನಲ್ಲದ ಇತರ ದೇವತೆಗಳು ಕಾಲಕ್ಕೂ, ಮಾಯೆಗೂ ವಶವಾಗಿ ಹೋಗಿರುವರೆಂಬುದನ್ನು ತಿಳಿದು ಅವರಲ್ಲಿ ಪ್ರೀತಿಯನ್ನಿಡದೆ ಅವನಲ್ಲಿಯೇ (ವಾಸುದೇವನಲ್ಲಿಯೇ) ಗಾಢವಾದ ಸ್ನೇಹದಿಂದ ನಿತ್ಯವೂ ಸೇವೆಮಾಡುತ್ತಿರುವುದು ಯಾವುದೋ ಅದೇ ಭಕ್ತಿಯೆಂದು ಹೇಳಲ್ಪಡುತ್ತದೆ.

೬೨–೬೩. ಶ್ರವಣ, ಕೀರ್ತನ, ಸ್ಮರಣೆ, ಚರಣಸೇವೆ, ಪೂಜೆ, ಪ್ರಣಾಮ, ದಾಸ್ಯ, ಸಖ್ಯ ಮತ್ತು ಆತ್ಮನೀವೇದನ ಈ ಒಂಬತ್ತು ವಿಧವಾದ ಭಾವಗಳಿಂದ ಯಾವನು ಆದರದಿಂದಲೂ, ಅನನ್ಯಬುದ್ಧಿಯಿಂದಲೂ ಅವನನ್ನು (ವಾಸುದೇವನನ್ನು) ಸೇವಿಸುವನೋ ಅವನೇ ಭಕ್ತನೆಂದು ಹೇಳಲ್ಪಡುತ್ತಾನೆ.

೬೪. ಎಲೈ ಮುನಿಯೇ! ಸ್ವಧರ್ಮವೇ ಮೊದಲಾದ ಮೂರರಿಂದಲೂ ಕೂಡಿದ ಈ ಭಕ್ತಿಯು ಏಕಾಂತಿಕಧರ್ಮವೆಂದು ಹೇಳಲ್ಪಟ್ಟಿದೆ; ಭಾಗವತ ಧರ್ಮವೂ ಅದೇ.

೬೫. ಸಾಕ್ಷಾತ್ ಭಗವಂತನ ಸಂಗದಿಂದಲೂ, ಈ ರೀತಿಯಿರುವವರಾದ ನಿಮ್ಮಂತಹ ಅವನ ಭಕ್ತರ ಸಂಗದಿಂದಲೂ ಈ ಏಕಾಂತಿಕಧರ್ಮವು ಪುರುಷರಿಗೆ ಪ್ರಾಪ್ತವಾಗುತ್ತದೆ. ಹಾಗಲ್ಲದೆ ಎಂದೆಂದಿಗೂ ದೊರೆಯುವುದಿಲ್ಲ.

೬೬. ಮೋಕ್ಷವನ್ನು ಪಡೆಯಬೇಕೆಂದು ಬಯಸುವ ಪುರುಷರಿಗೆ ಸಮಸ್ತ ಅಮಂಗಳಗಳನ್ನೂ ವಿನಾಶಗೊಳಿಸುವುದೂ, ಶ್ರೇಯಸ್ಸನ್ನುಂಟುಮಾಡುವುದೂ ಆದ ಇದರಂಥ ಬೇರೊಂದು ಸಾಧನವು ಇಲ್ಲವೇ ಇಲ್ಲ.

ಏಕಾಂತ ಧರ್ಮಸಿದ್ಧ್ಯರ್ಥಂ ಕ್ರಿಯಾಯೋಗಪರೋ ಭವೇತ್ ।
ಪುಮಾನ್ ಸ್ಯಾದ್ಯೇನ ನೈಷ್ಕರ್ಮ್ಯಂ ಕರ್ಮಣಾಂ ಮುನಿಸತ್ತಮ ॥ ೬೭ ॥
ಏತನ್ಮಯಾ ವೇದಪುರಾಣ ಗುಹ್ಯಂ
ತತ್ತ್ವಂ ಪರಂ ಪ್ರೋಕ್ತಮಘೌಘನಾಶನಂ ।
ಏಕಾಗ್ರಯಾ ಶುದ್ಧಧಿಯಾವಧಾರ್ಯಂ
ಸಚ್ಛ್ರದ್ಧಯಾ ಚೇತಸಿ ತೇ ಮಹರ್ಷೇ ॥ ೬೮ ॥
ನ ವಾಸುದೇವಾತ್ಪರಮಸ್ತಿ ಪಾವನಂ
ನ ವಾಸುದೇವಾತ್ಪರಮಸ್ತಿ ಮಂಗಲಂ ।
ನ ವಾಸುದೇವಾತ್ಪರಮಸ್ತಿ ದೈವತಂ
ನ ವಾಸುದೇವಾತ್ಪರಮಸ್ತಿ ವಾಂಛಿತಂ ॥ ೬೯ ॥
ಯನ್ನಾಮಧೇಯಂ ಸಕೃದಪ್ಯಬುದ್ಧ್ಯಾ
ದೇಹಾವಸಾನೇಽಪಿ ಗೃಣಾತಿ ಯೋಽತ್ರ ।
ಸಪುಷ್ಕಸೋಽಪ್ಯಾಶುಭವಪ್ರವಾಹಾ
ದ್ವಿಮುಚ್ಯತೇ ತಂ ಭಜ ವಾಸುದೇವಂ ॥ ೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ ''ವೈರಾಗ್ಯಭಕ್ತಿ ನಿರೂಪಣಂ''ನಾಮ ಪಂಚವಿಂಶೋಽಧ್ಯಾಯಃ

---

೬೭. ಎಲೈ ಮುನಿಶ್ರೇಷ್ಠನೇ! ಏಕಾಂತಧರ್ಮವು ಸಿದ್ಧಿಸುವುದಕ್ಕಾಗಿ ಪುರುಷನು ಕ್ರಿಯೆ ಮತ್ತು ಯೋಗಗಳಲ್ಲಿ ನಿರತನಾಗಬೇಕು. ಇದರಿಂದ ನೈಷ್ಕರ್ಮ್ಯವುಂಟಾಗುತ್ತದೆ.

೬೮. ಪಾಪಸಮೂಹಗಳನ್ನು ನಾಶಪಡಿಸುವುದೂ, ವೇದಪುರಾಣಗಳ ರಹಸ್ಯವೂ ಆದ ಈ ಪರಮತತ್ತ್ವವನ್ನು ನಾನು ನಿನಗೆ ಹೇಳಿದ್ದೇನೆ. ಎಲೈ ಮಹರ್ಷಿಯೇ! ಏಕಾಗ್ರವಾದ ಶುದ್ಧಬುದ್ಧಿಯಿಂದಲೂ, ಒಳ್ಳೆಯ ಶ್ರದ್ಧೆಯಿಂದಲೂ ಇದನ್ನು ನೀನು ಚೆನ್ನಾಗಿ ಮನಸ್ಸಿನಲ್ಲಿ ಅರಿತುಕೊಳ್ಳಬೇಕು.

೬೯. ವಾಸುದೇವನಿಗಿಂತಲೂ ಮೇಲಾದ ಪಾವನವಸ್ತುವು ಮತ್ತೊಂದಿಲ್ಲ. ವಾಸುದೇವನಿಗಿಂತಲೂ ಬೇರಾದ ಮಂಗಳವಿಲ್ಲ. ವಾಸುದೇವನಿಗಿಂತ ಶ್ರೇಷ್ಠವಾದ ದೇವರಿಲ್ಲ. ವಾಸುದೇವನಿಗಿಂತ ಬೇರೆಯಾದ ವಾಂಛಿತವಿಲ್ಲ.

೭೦. ಯಾರ ನಾಮವನ್ನು ಒಂದೇ ಸಲವಾದರೂ, ಬುದ್ಧಿಪೂರ್ವಕವಾಗಿ ಅಲ್ಲದಿದ್ದರೂ, ಮರಣಕಾಲದಲ್ಲಿಯೇ ಆದರೂ ಯಾವನು ಸ್ಮರಿಸುವನೋ ಅವನು ಚಂಡಾಲನೇ ಆದರೂ ಸಂಸಾರಪ್ರವಾಹದಿಂದ ಬಹುಬೇಗನೆಯೆ ಬಿಡುಗಡೆ ಹೊಂದಿಸಲ್ಪಡುತ್ತಾನೆಯೋ ಅಂಥ ವಾಸುದೇವನನ್ನು ಭಜಿಸು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀ ವಾಸುದೇವ ಮಾಹಾತ್ಮ್ಯದಲ್ಲಿ ''ವೈರಾಗ್ಯಭಕ್ತಿನಿರೂಪಣ''ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ವಿಂಶೋಽಧ್ಯಾಯಃ

## ಕ್ರಿಯಾಯೋಗಾಧಿಕಾರನಿರೂಪಣಂ

ಸ್ಕಂದ ಉವಾಚ :—

ಏಕಾಂತಧರ್ಮವಿವೃತಿಂ ಶ್ರುತ್ವಾ ಭಗವತೋದಿತಾಂ ।
ಪ್ರಹೃಷ್ಟಮಾನಸೋ ಭೂಯಸ್ತಂ ಪಪ್ರಚ್ಛ ಸ ನಾರದಃ ॥ ೧ ॥

ನಾರದ ಉವಾಚ :—

ಧರ್ಮ ಏಕಾಂತಿಕಃ ಸ್ವಾಮಿಂಸ್ತ್ವಯಾ ಸಮ್ಯಗುದೀರಿತಃ ।
ತಮಾಶ್ರುತ್ಯ ಮಹಾನ್ ಹರ್ಷೋ ಜಾತೋಽಸ್ತಿ ಮಮ ಮಾನಸೇ ॥ ೨ ॥
ಸಿದ್ಧಯೇ ತಸ್ಯ ಭವತಾ ಕ್ರಿಯಾಯೋಗೋ ಯ ಉಚ್ಯತೇ ।
ತಮಹಂ ಬೋದ್ಧುಮಿಚ್ಛಾಮಿ ಭಗವಂಸ್ತವ ಸಮ್ಮತಂ ॥ ೩ ॥

ಶ್ರೀನಾರಾಯಣ ಉವಾಚ :—

ಪೂಜಾವಿಧಿಃ ಕ್ರಿಯಾಯೋಗೋ ವಾಸುದೇವಸ್ಯ ಕೀರ್ತ್ಯತೇ ।
ಸ ತು ವೇದೇಷು ತಂತ್ರೇಷು ಬಹುಧೈವಾಸ್ತಿ ವರ್ಣಿತಃ ॥ ೪ ॥
ಭಕ್ತಾನಾಂ ರುಚಿವೈಚಿತ್ರ್ಯಾತ್ತಥಾ ಬಹುವಿಧತ್ವತಃ ।
ವಾಸುದೇವಸ್ಯ ಮೂರ್ತೀನಾಂ ಬಹುಧಾ ಸೋಽಸ್ತಿ ವಿಸ್ತೃತಃ ॥ ೫ ॥

---

### ಕನ್ನಡದ ಅನುವಾದ

#### ಕ್ರಿಯಾಯೋಗಾಧಿಕಾರನಿರೂಪಣ

೧. ಸ್ಕಂದನು ಹೇಳುತ್ತಾನೆ:—ಭಗವಂತನಿಂದ ಹೇಳಲ್ಪಟ್ಟ ಏಕಾಂತ ಧರ್ಮದ ವಿವರಣೆಯನ್ನಾಲಿಸಿ ಮನಸ್ಸಿನಲ್ಲಿ ಬಹಳ ಹರ್ಷಹೊಂದಿದವನಾಗಿ ಆ ನಾರದನು ಮತ್ತೆ ಆತನನ್ನು ಪ್ರಶ್ನಿಸಿದನು.

೨. ನಾರದನಿಂತೆಂದನು :—"ಎಲೈ ಸ್ವಾಮಿಯೆ! ಏಕಾಂತಿಕಧರ್ಮವನ್ನು ನೀನು ಚೆನ್ನಾಗಿ ಹೇಳಿದೆ. ಅದನ್ನಾಲಿಸಿ ನನ್ನ ಮನಸ್ಸಿನಲ್ಲಿ ಮಹತ್ತಾದ ಹರ್ಷವುಂಟಾಯಿತು.

೩. ಎಲೈ ಭಗವಂತನೇ! ಆ ಏಕಾಂತಿಕಧರ್ಮದ ಸಿದ್ಧಿಗಾಗಿ ಯಾವ ಕ್ರಿಯಾಯೋಗವು ಹೇಳಲ್ಪಟ್ಟಿದೆಯೋ ನಿನಗೆ ಸಮ್ಮತವಾಗಿರುವ ಅದನ್ನು ಕೇಳಲಿಚ್ಛಿಸುತ್ತೇನೆ."

೪. ಶ್ರೀನಾರಾಯಣನು ಹೇಳುತ್ತಾನೆ:— "ನಾರದ! ವಾಸುದೇವನ ಪೂಜಾವಿಧಿಯೆ ಕ್ರಿಯಾಯೋಗವೆನಿಸುತ್ತದೆ. ಅದು ವೇದಗಳಲ್ಲಿಯೂ ತಂತ್ರಗಳಲ್ಲಿಯೂ ಅನೇಕಪ್ರಕಾರವಾಗಿ ವರ್ಣಿತವಾಗಿದೆ.

೫. ಭಕ್ತರ ರುಚಿವೈಚಿತ್ರ್ಯದಿಂದಲೂ, ವಾಸುದೇವನ ಮೂರ್ತಿಗಳು

ಸಾಕಲ್ಯೇನೋಚ್ಯಮಾನಸ್ಯ ಪಾರೋ ನಾಯಾತಿ ತಸ್ಯ ವೈ ।
ಅತಃ ಸಙ್ಕ್ಷೇಪತಸ್ತುಭ್ಯಂ ವಚ್ಮಿ ಭಕ್ತಿವಿವರ್ಧನಮ್ ॥ ೬ ॥
ಪ್ರಾಪ್ತಾ ಯೋ ವೈಷ್ಣವೀಂ ದೀಕ್ಷಾಂ ವರ್ಣಾಶ್ಚತ್ವಾರ ಆಶ್ರಮಾಃ ।
ಚಾತುರ್ವರ್ಣ್ಯಸ್ತ್ರಿಯಶ್ಚೈತೇ ಪ್ರೋಕ್ತಾ ಅತ್ರಾಧಿಕಾರಿಣಃ ॥ ೭ ॥
ವೇದತಂತ್ರಪುರಾಣೋಕ್ತೈರ್ಮಂತ್ರೈರ್ಮೂಲೇನ ಚ ದ್ವಿಜಾಃ ।
ಪೂಜೇಯುರ್ದೀಕ್ಷಿತಾ ಯೋಷಾಃ ಸಚ್ಛೂದ್ರಾ ಮೂಲಮಂತ್ರತಃ ॥
ಮೂಲಮಂತ್ರಸ್ತು ವಿಜ್ಞೇಯಃ ಶ್ರೀಕೃಷ್ಣಸ್ಯ ಷಡಕ್ಷರಃ ।
ಸ್ವಸ್ವಧರ್ಮಂ ಪಾಲಯದ್ಭಿಃ ಸರ್ವೈರೇತೈರ್ಯಥಾವಿಧಿ ।
ಪೂಜನೀಯೋ ವಾಸುದೇವೋ ಭಕ್ತ್ಯಾ ನಿಷ್ಕಪಟಾಂತರೈಃ ॥ ೯ ॥
ಆದೌ ತು ವೈಷ್ಣವೀಂ ದೀಕ್ಷಾಂ ಗೃಹ್ಣೀಯಾತ್ಸದ್ಗುರೋಃ ಪುಮಾನ್ ।
ಸದೈಕಾಂತಿಕಧರ್ಮಸ್ಥಾದ್ಬ್ರಹ್ಮಜಾತೇರ್ದಯಾನಿಧೇಃ ॥ ೧೦ ॥
ಸಂಪನ್ನೋ ಜ್ಞಾನಭಕ್ತಿಭ್ಯಾಂ ಸ್ವಧರ್ಮರಹಿತಸ್ತು ಯಃ ।
ಸ ಗುರುರ್ನೈವ ಕರ್ತವ್ಯಃ ಸ್ತ್ರೀಹೃತಾತ್ಮಾ ಚ ಕರ್ಹಿಚಿತ್ ॥ ೧೧ ॥

---

ಬಹುವಿಧಗಳಾಗಿರುವುದರಿಂದಲೂ, ಆ ಕ್ರಿಯಾಯೋಗವು ಬಹು ಪ್ರಕಾರವಾಗಿ ವಿಸ್ತರಿಸಲ್ಪಟ್ಟಿದೆ.

೬. ಅದನ್ನೆಲ್ಲವನ್ನೂ ಹೇಳುತ್ತಾಹೋದರೆ ಅದಕ್ಕೆ ಪಾರವೇ (ಕೊನೆಯೇ) ಇಲ್ಲ. ಆದ್ದರಿಂದ ಭಕ್ತಿಯನ್ನು ವೃದ್ಧಿಗೊಳಿಸುವ ಆ ಪೂಜಾವಿಧಿಯನ್ನು ಸಂಕ್ಷೇಪವಾಗಿ ನಿನಗೆ ಹೇಳುತ್ತೇನೆ.

೭. ನಾಲ್ಕುವರ್ಣಗಳವರೂ ನಾಲ್ಕುಆಶ್ರಮಗಳವರೂ ನಾಲ್ಕುವರ್ಣಗಳ ಸ್ತ್ರೀಯರೂ ಯಾರು ವೈಷ್ಣವದೀಕ್ಷೆಯನ್ನು ಪಡೆದಿರುವರೋ ಅವರೆಲ್ಲರೂ ಈ ವಿಷಯದಲ್ಲಿ ಅಧಿಕಾರಿಗಳೆಂದು ಹೇಳಲ್ಪಟ್ಟಿದೆ.

೮. ದೀಕ್ಷೆ ಹೊಂದಿರುವ ದ್ವಿಜರು ವೇದ, ತಂತ್ರ, ಪುರಾಣ ಇವುಗಳಲ್ಲಿ ಉಕ್ತವಾದ ಮಂತ್ರಗಳಿಂದಲೂ, ಮೂಲಮಂತ್ರಗಳಿಂದಲೂ ಪೂಜಿಸಬೇಕು. ಸ್ತ್ರೀಯರೂ ಶೂದ್ರರೂ ಮೂಲಮಂತ್ರದಿಂದ ಪೂಜಿಸಬೇಕು. ಮುಖ್ಯ ಮಂತ್ರವೆಂಬುದು ಶ್ರೀಕೃಷ್ಣನ ಷಡಕ್ಷರ ಮಂತ್ರವೆಂದು ತಿಳಿಯತಕ್ಕುದು.

೯. ಸರ್ವರೂ ತಮ್ಮ ತಮ್ಮ ಧರ್ಮಗಳನ್ನು ಯಥಾವಿಧಿಯಾಗಿ ಪಾಲಿಸುತ್ತಾ ನಿಷ್ಕಪಟವಾದ ಅಂತರಂಗವುಳ್ಳವರಾಗಿ ಶ್ರೀವಾಸುದೇವನನ್ನು ಪೂಜಿಸಬೇಕು.

೧೦. ಸದಾ ಏಕಾಂತಿಕಧರ್ಮದಲ್ಲಿರುವವನೂ, ದಯಾನಿಧಿಯೂ, ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನೂ ಆದ ಸದ್ಗುರುವಿನಿಂದ ಪುರುಷನು ಮೊದಲು ವೈಷ್ಣವ ದೀಕ್ಷೆಯನ್ನು ತೆಗೆದುಕೊಳ್ಳಬೇಕು.

೧೧. ಜ್ಞಾನಭಕ್ತಿಗಳಿಂದ ಕೂಡಿದವನಾದರೂ, ಯಾವನು ಸ್ವಧರ್ಮ

**ಪ್ರಾಪ್ತಾಸ್ತ್ರೈಣಾದ್ಗುರೋರ್ದೀಕ್ಷಾಂ ಜ್ಞಾನಂ ಭಕ್ತಿಂ ಚ ಕರ್ಹಿಚಿತ್ ।**
**ಫಲೇನ್ನೈವ ಯಥಾಽಪತ್ಯಂ ಯುವತಿಃ ಷಂಢಸಂಗಿನೀ ॥ ೧೨ ॥**
**ಪ್ರಾಪ್ಯಾತಃ ಸದ್ಗುರೋರ್ದೀಕ್ಷಾಂ ತುಲಸೀಮಾಲಿಕಾಂ ಗಲೇ ।**
**ಲಲಾಟಾದೌ ಚೋರ್ಧ್ವಪುಂಡ್ರಂ ಗೋಪೀಚಂದನತೋ ಧರೇತ್ ॥ ೧೩ ॥**
**ವಿಷ್ಣುಪೂಜಾರುಚಿರ್ಭಕ್ತೋ ಗುರೋರೇವಾಗಮೋದಿತಂ ।**
**ಪೂಜಾವಿಧಿಂ ಸುವಿಜ್ಞಾಯ ತತಃ ಪೂಜನಮಾರಭೇತ್ ॥ ೧೪ ॥**
**ರಾತ್ರ್ಯಂತಯಾಮ ಉತ್ಥಾಯ ಭಕ್ತೋ ಬ್ರಾಹ್ಮೇ ಕ್ಷಣೇಽಥವಾ ।**
**ಮುಹೂರ್ತಾರ್ಧಂ ಹೃದಿ ಧ್ಯಾಯೇತ್ ಕೇಶವಂ ಕ್ಲೇಶನಾಶನಂ ॥ ೧೫ ॥**
**ಕೀರ್ತಯಿತ್ವಾಽಭಿಧಾಸ್ತಸ್ಯ ತದೀಯಾನಾಂ ಚ ನಾಡಿಕಾಂ ।**
**ತತಃ ಶೌಚವಿಧಿಂ ಕೃತ್ವಾ ದಂತಧಾವನಮಾಚರೇತ್ ॥ ೧೬ ॥**
**ಅಂಗಶುದ್ಧಿಸ್ನಾನಮಾದೌ ಕೃತ್ವಾ ಸ್ನಾಯಾತ್ ಸಮಂತ್ರಕಂ ।**
**ಗೃಹೀತ್ವಾ ಶುಚಿಮೃತ್ಸ್ನಾದೀನ್ ಕುರ್ಯಾತ್ ಸ್ನಾನಾಂಗತರ್ಪಣಂ ॥**

---

ರಹಿತನಾಗಿರುವನೋ, ಸ್ತ್ರೀಗೆ ಮನತೆತ್ತಿರುವನೋ ಅಂಥವನನ್ನು ಎಂದಿಗೂ ಗುರುವಾಗಿ ಮಾಡಿಕೊಳ್ಳಬಾರದು.

೧೨. ಷಂಡನ ಸಂಗಮಾಡುವ ಯುವತಿಯು ಮಗುವನ್ನು ಹೇಗೆ ಪಡೆಯಲಾರಳೋ, ಹಾಗೆಯೇ ಸ್ತ್ರೈಣನಾದ (ಸ್ತ್ರೀಯರಲ್ಲಿ ಸಕ್ತನಾದ) ಗುರುವಿನಿಂದ ದೀಕ್ಷೆಯೂ ಪಡೆದ ಜ್ಞಾನವನ್ನೂ ಭಕ್ತಿಯನ್ನೂ ಎಂದಿಗೂ ಪಡೆಯಲಾರದು.

೧೩. ಆದುದರಿಂದ ಸದ್ಗುರುವಿನಿಂದ ದೀಕ್ಷೆಯನ್ನು ಪಡೆದು ಕೊರಳಲ್ಲಿ ತುಲಸೀಮಾಲಿಕೆಯನ್ನೂ, ಹಣೆ ಮೊದಲಾದುವುಗಳಲ್ಲಿ ಗೋಪೀಚಂದನದಿಂದ ಊರ್ಧ್ವಪುಂಡ್ರಗಳನ್ನೂ ಧರಿಸಬೇಕು.

೧೪. ವಿಷ್ಣುಪೂಜೆಯಲ್ಲಿ ರುಚಿಯುಳ್ಳವನಾದ ಭಕ್ತನು ಗುರುವಿನಿಂದಲೇ ಆಗಮೋಕ್ತವಾದ ಪೂಜಾವಿಧಾನವನ್ನು ಚೆನ್ನಾಗಿ ತಿಳಿದುಕೊಂಡು ಆ ಬಳಿಕ ಪೂಜೆಮಾಡುವುದಕ್ಕೆ ಪ್ರಾರಂಭಿಸಬೇಕು.

೧೫. ಭಕ್ತನು ರಾತ್ರಿಯ ಕೊನೆಯ ಜಾವದಲ್ಲಿ ಅಥವಾ ಬ್ರಾಹ್ಮ ಮುಹೂರ್ತದಲ್ಲಿ ನಿದ್ದೆಬಿಟ್ಟೆದ್ದು ಕ್ಲೇಶನಾಶಕನಾದ ಕೇಶವನನ್ನು ಅರ್ಧ ಮುಹೂರ್ತದವರೆಗೆ ಹೃದಯದಲ್ಲಿ ಧ್ಯಾನಮಾಡಬೇಕು.

೧೬. ಅವನ (ವಾಸುದೇವನ) ಹೆಸರುಗಳನ್ನು ಅವನ ಭಕ್ತರ ನಾಡಿಕೆಯನ್ನೂ ಕೀರ್ತಿಸಿ ಆ ಬಳಿಕ ಶೌಚವಿಧಿಯನ್ನು ಮಾಡಿ ಹಲ್ಲುಜ್ಜಿಕೊಳ್ಳಬೇಕು.

೧೭. ಮೊದಲು ಅಂಗಶುದ್ಧಿಸ್ನಾನವನ್ನು ಮಾಡಿ ಆಮೇಲೆ ಮಂತ್ರಪೂರ್ವಕವಾಗಿ ಸ್ನಾನಮಾಡಬೇಕು. ಶುಚಿಯಾದ ಮೃತ್ತಿಕೆ ಮೊದಲಾದುವನ್ನು ತೆಗೆದುಕೊಂಡು ಸ್ನಾನಾಂಗವಾದ ತರ್ಪಣವನ್ನು ಮಾಡಬೇಕು.

ಪರಿಧಾಯಾಂಶುಕೇ ಧೌತೇ ಉಪವಿಶ್ಯಾಸನೇ ಶುಚೌ ।
ಕೃತ್ವೋರ್ಧ್ವಪುಂಡ್ರಂ ಕುರ್ವೀತ ಸಂಧ್ಯಾಂ ಹೋಮಂ ಜಪಾದಿ ಚ ॥
ವಸ್ತ್ರಚಂದನಪುಷ್ಪಾದೀನುಪಹಾರಾಂಸ್ತತೋಽಖಿಲಾನ್ ।
ಆಹರೇನ್ಮಾಂಸಮದಿರಾದ್ಯಶುಚಿಸ್ಪರ್ಶವರ್ಜಿತಾನ್ ॥ ೧೯ ॥
ದೇವೇಭ್ಯೋ ವಾ ಪಿತೃಭ್ಯಶ್ಚಾಪ್ಯನ್ಯೇಭ್ಯೋ ನ ನಿವೇದಿತಾನ್ ।
ಅನಾಘ್ರಾತಾಂಶ್ಚ ಮನುಜೈಃ ಕಿರೀಟಾದಿವಿವರ್ಜಿತಾನ್ ॥ ೨೦ ॥
ಸಂಸ್ಥಾಪ್ಯ ತಾನ್ ದಕ್ಷಪಾರ್ಶ್ವೇ ಪೂಜೋಪಕರಣಾನಿ ಚ ।
ಉದ್ವರ್ತ್ಯ ದೀಪಮಾಜ್ಯೇನ ಕುರ್ಯಾತ್ತೈಲೇನ ವಾ ತತಃ ॥ ೨೧ ॥
ಕೌಶೇಯೌರ್ಣೇ ಚ ವಸ್ತ್ರಾದೌ ವಿಕಾಷ್ಠೇ ಶುದ್ಧ ಆಸನೇ ।
ಉಪಾವಿಶೇದ್ವಾಸುದೇವಪ್ರತಿಮಾಸನ್ನಿಧೌ ತತಃ ॥ ೨೨ ॥
ಶೈಲೀ ಧಾತುಮಯೀ ದಾರ್ವೀ ಲೇಖ್ಯಾ ಮಣಿಮಯೀ ಚ ವಾ ।
ಪ್ರತಿಮಾ ಸ್ಯಾತ್ಸಿತಾ ರಕ್ತಾ ಪೀತಾ ಕೃಷ್ಣಾಽಥವಾ ಮುನೇ ॥ ೨೩ ॥

---

೧೮. ಒಗೆದ ಬಟ್ಟೆಗಳೆರಡನ್ನುಟ್ಟು ಶುಚಿಯಾದ ಆಸನದಲ್ಲಿ ಕುಳಿತು ಊರ್ಧ್ವಪುಂಡ್ರಗಳನ್ನಿಟ್ಟುಕೊಂಡು ಸಂಧ್ಯಾವಂದನೆ, ಹೋಮ, ಜಪ ಮೊದಲಾದುವನ್ನು ಮಾಡಬೇಕು.

೧೯. ಬಳಿಕ ವಸ್ತ್ರ, ಚಂದನ, ಪುಷ್ಪ ಮೊದಲಾದ ಸಮಸ್ತ ಉಪಹಾರಗಳನ್ನೂ (ದೇವರಿಗೆ ಅರ್ಪಿಸಬಹುದಾದ ಕಾಣಿಕೆಗಳನ್ನೂ), ಮಾಂಸ, ಹೆಂಡ ಮೊದಲಾದ ಅಶುಚಿ ಪದಾರ್ಥಗಳ ಸ್ಪರ್ಶವಿಲ್ಲದುವನ್ನು ನೋಡಿ ತಂದುಕೊಳ್ಳಬೇಕು.

೨೦. ದೇವತೆಗಳಿಗಾಗಲಿ, ಪಿತೃಗಳಿಗಾಗಲಿ, ಬೇರೆಯವರಿಗಾಗಲಿ ಅವನ್ನು ನಿವೇದಿಸಬಾರದು; ಮನುಷ್ಯರು ಮೂಸಿರಬಾರದು; ಕೂದಲು ಕೀಟ ಮೊದಲಾದುವು ಅವುಗಳಲ್ಲಿ ಸೇರಿರಬಾರದು. ಇಂಥ ಉಪಕರಣಗಳನ್ನು ಸಂಗ್ರಹಿಸಿ ತರಬೇಕು.

೨೧. ಆ ಪೂಜೋಪಕರಣಗಳನ್ನು ಬಲಭಾಗದಲ್ಲಿಟ್ಟುಕೊಂಡು ಬಳಿಕ ತುಪ್ಪದಿಂದಾಗಲಿ ಎಣ್ಣೆಯಿಂದಾಗಲಿ ದೀಪವನ್ನು ಹೊತ್ತಿಸಬೇಕು.

೨೨. ಆಮೇಲೆ ವಾಸುದೇವನ ಪ್ರತಿಮೆಯ ಸನ್ನಿಧಿಯಲ್ಲಿ ರೇಷ್ಮೆಯ ಅಥವಾ ಉಣ್ಣೆಯ ಬಟ್ಟೆಯಿಂದ ಮಾಡಿದುದೂ, ಕಾಷ್ಠರಹಿತವಾದುದೂ ಆದ ಪೀಠದಲ್ಲಿ ಕುಳಿತುಕೊಳ್ಳಬೇಕು.

೨೩. ಎಲೈ ಮುನಿಯೇ! ಪ್ರತಿಮೆಯು ಕಲ್ಲಿನದೊ, ಧಾತುಗಳಿಂದ ಮಾಡಿದುದೊ, ಮರದ್ದೋ, ಬರೆದುದೊ ಅಥವಾ ಮಣಿಮಯವಾದುದೋ ಆಗಿರಬೇಕು. ಬಿಳುಪು, ಕೆಂಪು, ಹಳದಿ ಅಥವಾ ಕಪ್ಪು ಬಣ್ಣವುಳ್ಳದಾಗಿರಬೇಕು.

ಕೃಷ್ಣಸ್ಯ ಸಾ ತು ಕರ್ತವ್ಯಾ ದ್ವಿಭುಜಾ ವಾ ಚತುರ್ಭುಜಾ ।
ಮುರಲೀಂ ಧಾರಯೇತ್ತತ್ರ ದ್ವಿಭುಜಾಯಾಃ ಕರದ್ವಯೇ ॥ ೨೪ ॥
ಅಥವಾ ದಕ್ಷಹಸ್ತೇ ಸ್ಯಾಚ್ಚಕ್ರಂ ಶಂಖಂ ತಥೇತರೇ ।
ಪದ್ಮಂ ವಾ ಧಾರಯೇದ್ದಕ್ಷೇ ಪಾಣಾವಭಯಮುತ್ತರೇ ॥ ೨೫ ॥
ದ್ವಿತೀಯಾಯಾಸ್ತು ಹಸ್ತೇಷು ದಕ್ಷಿಣಾಧಃಕರಕ್ರಮಾತ್ ।
ಗದಾಬ್ಜದರಚಕ್ರಾಣಿ ಧಾರಯೇನ್ಮುನಿಸತ್ತಮ ॥ ೨೬ ॥
ದ್ವಿವಿಧಾಯಾ ಅಪಿ ಹರೇರ್ಮೂರ್ತೇರ್ವಾಮೇ ಶ್ರಿಯಂ ನ್ಯಸೇತ್ ।
ಮುರಲೀಧರವಾಮೇ ತು ರಾಧಾಂ ರಾಸೇಶ್ವರೀಂ ನ್ಯಸೇತ್ ॥ ೨೭ ॥
ಅಪ್ಯೇಷಾ ದ್ವಿವಿಧಾ ಮೂರ್ತಿರಖಂಡಾ ಶುಭಲಕ್ಷಣಾ ।
ಸರ್ವಾವಯವಸಂಪನ್ನಾ ಭವೇದರ್ಚಕಸಿದ್ಧಿದಾ ॥ ೨೮ ॥
ಲಕ್ಷ್ಮೀಸ್ತು ದ್ವಿಭುಜಾ ಕಾರ್ಯಾ ವಾಸುದೇವಸ್ಯ ಸನ್ನಿಧೌ ।
ದಧತೀ ಪಂಕಜಂ ಹಸ್ತೇ ವಸ್ತ್ರಾಲಂಕಾರಶೋಭನಾ ॥ ೨೯ ॥

---

೨೪. ಶ್ರೀಕೃಷ್ಣನ ಪ್ರತಿಮೆಯನ್ನು ಎರಡು ಭುಜವುಳ್ಳುದಾಗಿಯೊ ನಾಲ್ಕು ಭುಜವುಳ್ಳುದಾಗಿಯೊ ಮಾಡಬೇಕು. ಎರಡು ಭುಜಗಳುಳ್ಳ ಮೂರ್ತಿಯ ಕೈಗಳೆರಡರಲ್ಲಿಯೂ ಮುರಳಿಯನ್ನು (ಕೊಳಲನ್ನು) ಧರಿಸಬೇಕು.

೨೫. ಅಥವಾ ಆ ಮೂರ್ತಿಯ ಬಲಗೈಯಲ್ಲಿ ಚಕ್ರವನ್ನೂ, ಎಡಗೈಯಲ್ಲಿ ಶಂಖವನ್ನೂ ಧರಿಸಬೇಕು. ಅದೂ ಇಲ್ಲದಿದ್ದರೆ ಬಲಗೈಯಲ್ಲಿ ಪದ್ಮವನ್ನೂ, ಎಡಗೈಯಲ್ಲಿ ಅಭಯಮುದ್ರೆಯನ್ನೂ ಧರಿಸಬೇಕು.

೨೬. ಎಲೈ ಮುನಿಶ್ರೇಷ್ಠನೇ! ಎರಡನೆಯ ಬಗೆಯ (ಚತುರ್ಭುಜ) ಮೂರ್ತಿಯ ಕೈಗಳಲ್ಲಿ ಬಲಭಾಗದ ಕೆಳಗಡೆಯ ಕೈಯಿಂದ ಮೊದಲುಮಾಡಿಕೊಂಡು ಕ್ರಮವಾಗಿ ಗದೆ, ಪದ್ಮ, ಶಂಖ, ಚಕ್ರಗಳನ್ನು ಧರಿಸಬೇಕು.

೨೭. ಎರಡೂ ಬಗೆಯ ಹರಿಮೂರ್ತಿಯ ಎಡಭಾಗದಲ್ಲಿ ಶ್ರೀಯನ್ನಿರಿಸಬೇಕು. ಮುರಲೀಧರಮೂರ್ತಿಯ ಎಡಪಕ್ಕದಲ್ಲಿ ರಾಸೇಶ್ವರಿಯಾದ ರಾಧೆಯನ್ನಿರಿಸಬೇಕು.

೨೮. ಈ ಎರಡೂ ಬಗೆಯ ಮೂರ್ತಿಯು ಅಖಂಡವಾಗಿಯೂ, ಶುಭಲಕ್ಷಣವುಳ್ಳುದಾಗಿಯೂ, ಸಮಸ್ತಾವಯವಗಳಿಂದ ಕೂಡಿದುದಾಗಿಯೂ ಇದ್ದಲ್ಲಿ ಅರ್ಚಕರಿಗೆ ಸಿದ್ಧಿದಾಯಕವಾಗುವುದು.

೨೯. ವಾಸುದೇವನ ಸನ್ನಿಧಿಯಲ್ಲಿ ಲಕ್ಷ್ಮಿಯನ್ನು ಎರಡು ಭುಜವುಳ್ಳವಳನ್ನಾಗಿ ಮಾಡಿಡಬೇಕು. ಅದನ್ನು ಕೈಯಲ್ಲಿ ತಾವರೆಯನ್ನು ಹಿಡಿದು ವಸ್ತ್ರಾಲಂಕಾರಗಳಿಂದ ಶೋಭಿಸುತ್ತಿರುವಂತೆ ನಿರ್ಮಿಸಬೇಕು.

ಲಕ್ಷ್ಮೀವದ್ರಾಧಿಕಾಪಿ ಸ್ಯಾದ್ದ್ವಿಭುಜಾ ಚಾರುಹಾಸಿನೀ ।
ಪಂಕಜಂ ಪುಷ್ಪಮಾಲಾಂ ವಾ ದಧತೀ ಪಾಣಿಪಂಕಜೇ ॥ ೩೦ ॥
ಅಚಲಾ ಚ ಚಲಾ ಚೇತಿ ದ್ವಿವಿಧಾ ಪ್ರತಿಮಾ ಹರೇಃ ।
ತತ್ರಾದ್ಯಾಯಾಂ ನ ಕರ್ತವ್ಯಮಾವಾಹನವಿಸರ್ಜನಂ ॥ ೩೧ ॥
ತದಂಗದೇವತಾನಾಂ ಚ ಕಾರ್ಯಂ ನಾವಾಹನಾದ್ಯಪಿ ।
ನ ಚ ದಿಙ್ನಿಯಮೋಽರ್ಚಾಯಾಂ ತಸ್ಯಾಂ ಸ್ಥೇಯಂ ತು ಸಮ್ಮುಖೇ ॥
ಶಾಲಗ್ರಾಮೇಽಪ್ಯೇವಮೇವ ಕಾರ್ಯಮಾವಾಹನಾದಿ ಚ ।
ಅನ್ಯತ್ರ ಚಲಮೂರ್ತೌ ತು ಕರ್ತವ್ಯಂ ತತ್ತ್ವದರ್ಚಕೈಃ ॥ ೩೩ ॥
ತತ್ರಾಪಿ ದಾರ್ವ್ಯಾಂ ಲೇಖ್ಯಾಯಾಂ ಜಲಸ್ಪರ್ಶೋಽನುಲೇಪನಂ ।
ನೈವ ಕಾರ್ಯಂ ಪೂಜಕೇನ ಕರ್ತವ್ಯಂ ಪರಿಮಾರ್ಜನಂ ॥ ೩೪ ॥
ಉದಙ್‌ಮುಖಃ ಪ್ರಾಙ್‌ಮುಖೋ ವಾ ಚಲಾಯಾಂ ಸಮ್ಮುಖೋಽಥವಾ
ಯಥಾಶಕ್ತಿ ಯಥಾಲಬ್ಧೈರುಪಹಾರೈರ್ಯಜೇದ್ಧರಿಂ ॥ ೩೫ ॥

---

೩೦. ಲಕ್ಷ್ಮಿಯಂತೆಯೇ ರಾಧಿಕೆಯು ಕೂಡ ಎರಡು ಭುಜಗಳುಳ್ಳವಳಾಗಿರಬೇಕು. ಮನೋಹರವಾದ ನಸುನಗೆಯಿಂದ ಕೂಡಿರಬೇಕು. ಕರಕಮಲದಲ್ಲಿ ಕಮಲವನ್ನಾಗಲಿ, ಪುಷ್ಪಮಾಲೆಯನ್ನಾಗಲಿ ಹಿಡಿದಿರಬೇಕು.

೩೧. ಶ್ರೀಹರಿಯ ಪ್ರತಿಮೆಯು ಅಚಲವೆಂದೂ, ಚಲವೆಂದೂ ಎರಡು ಬಗೆಯಾಗಿರುವುದು. ಅದರಲ್ಲಿ ಮೊದಲನೆಯದಕ್ಕೆ ಆವಾಹನವಿಸರ್ಜನಗಳನ್ನು ಮಾಡಲಾಗದು.

೩೨. ಆ ಮೂರ್ತಿಯ ಅಂಗದೇವತೆಗಳಿಗೂ ಕೂಡ ಆವಾಹನಾದಿಗಳನ್ನು ಮಾಡಬಾರದು. ಆ ಮೂರ್ತಿಯ ಅರ್ಚನೆಗೆ ದಿಕ್ಕಿನ ನಿಯಮವೂ ಇಲ್ಲ. ಅಭಿಮುಖವಾಗಿಯೆ ಕುಳಿತು ಪೂಜಿಸಬೇಕು.

೩೩. ಇದೇ ರೀತಿ ಸಾಲಗ್ರಾಮದಲ್ಲಿ ಕೂಡ ಆವಾಹನಾದಿಗಳನ್ನು ಮಾಡಬಾರದು. ಇವು ಹೊರತು ಬೇರೆ ಕಡೆ ಚಲಮೂರ್ತಿಗಾದರೊ ಅರ್ಚಕರು ಆವಾಹನವಿಸರ್ಜನಗಳನ್ನು ಮಾಡಬೇಕು.

೩೪. ಅದರಲ್ಲೂ ಮರದಿಂದ ಮಾಡಿದ ಅಥವಾ ಚಿತ್ರದಲ್ಲಿ ಬರೆದ ಮೂರ್ತಿಗೆ ಪೂಜಕನು ಜಲಸ್ಪರ್ಶ, ಅನುಲೇಪನಗಳನ್ನು ಮಾಡಲೇಬಾರದು. ಸುಮ್ಮನೆ ಮಾರ್ಜನ ಮಾಡಬೇಕು.

೩೫. ಚಲಮೂರ್ತಿಯ ಪೂಜೆಯಲ್ಲಿ ಉತ್ತರಮುಖನಾಗಿ, ಪೂರ್ವಮುಖನಾಗಿ ಅಥವಾ ಅಭಿಮುಖನಾಗಿ ಕುಳಿತುಕೊಂಡು ತನ್ನ ಶಕ್ತಿಗೆ ತಕ್ಕಂತೆ, ದೊರೆತಷ್ಟು ಉಪಕರಣಗಳಿಂದ ಶ್ರೀಹರಿಯನ್ನು ಪೂಜಿಸಬೇಕು

ಶ್ರದ್ಧಾನಿಶ್ಛದ್ಮಭಕ್ತಿಭ್ಯಾಮರ್ಪಿತೇನಾಂಬುನಾಪಿ ಸಃ ।
ಪ್ರೀತಸ್ತುಷ್ಯತಿ ವಿಶ್ವಾತ್ಮಾ ಕಿಮುತಾಽಖಿಲಪೂಜಯಾ ॥ ೩೬ ॥
ಪುಂಸಾ ಶ್ರದ್ಧಾದಿಹೀನೇನ ರತ್ನಹೇಮಾದ್ಯಲಂಕ್ರಿಯಾಃ ।
ಚತುರ್ವಿಧಂ ಚಾಪ್ಯನ್ನಾದ್ಯಂ ದತ್ತಂ ಗೃಹ್ಣಾತಿ ನೋ ಮುದಾ ॥ ೩೭ ॥
ತಸ್ಮಾದ್ಭಕ್ತಿಮತಾ ಕಾರ್ಯಂ ಪುಂಸಾ ಸ್ವಶ್ರೇಯಸೇ ಮುನೇ ।
ಶ್ರೀಕೃಷ್ಣಸ್ಯಾರ್ಚನಂ ನಿತ್ಯಂ ಸರ್ವಾಭೀಷ್ಟಾಶುದಾಯಿ ನಃ ॥ ೩೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಕ್ರಿಯಾಯೋಗಾಧಿಕಾರ ನಿರೂಪಣಂ"ನಾಮ ಷಡ್ವಿಂಶೋಽಧ್ಯಾಯಃ

---

೩೬. ಶ್ರದ್ಧೆ ಮತ್ತು ನಿಷ್ಕಪಟವಾದ ಭಕ್ತಿಗಳಿಂದ ಕೂಡಿ ಅರ್ಪಿಸಿದ ನೀರಿನಿಂದಲಾದರೂ ಆ ವಿಶ್ವಾತ್ಮನು ಪ್ರೀತನಾಗಿ ತೃಪ್ತಿಹೊಂದುತ್ತಾನೆ. ಅಖಿಲ ಸಾಮಗ್ರಿಗಳಿಂದೊಡಗೂಡಿದ ಪೂಜೆಯಿಂದ ಸಂತುಷ್ಟನಾಗುವನೆಂದು ಹೇಳ ಬೇಕಾದುದೇನು.

೩೭. ಶ್ರದ್ಧಾದಿಗಳಿಲ್ಲದ ಪುರುಷನು ಅರ್ಪಿಸಿದ ರತ್ನ, ಹೇಮ (ಚಿನ್ನ) ಮೊದಲಾದ ಅಲಂಕಾರಗಳನ್ನೂ, ಚತುರ್ವಿಧವಾದ ಅನ್ನವನ್ನೂ ಶ್ರೀಹರಿಯು ಸಂತೋಷದಿಂದ ಸ್ವೀಕರಿಸುವುದಿಲ್ಲ.

೩೮. ಆದುದರಿಂದ ಎಲೈ ಮುನಿಯೇ! ಭಕ್ತನಾದವನು ಸರ್ವಾಭೀಷ್ಟ ಗಳನ್ನೂ ಬೇಗನೆಯೆ ನೆರವೇರಿಸಿಕೊಡುವವನಾದ ಶ್ರೀಕೃಷ್ಣನ ಅರ್ಚನೆಯನ್ನು ಶ್ರೇಯಸ್ಸಾಧನೆಗಾಗಿ ನಿತ್ಯವೂ ಭಕ್ತಿಯಿಂದ ನಡೆಸಬೇಕು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಕ್ರಿಯಾಯೋಗಾಧಿಕಾರನಿರೂಪಣ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

### ಪೂಜಾಮಂಡಲವಿಧಿನಿರೂಪಣಂ

**ಶ್ರೀ ನಾರಾಯಣ ಉವಾಚ :—**

**ಖನನೋಕ್ಷಣಲೇಪಾದ್ಯೈಃ ಶೋಧಿತೈರ್ಧರಣೀತಲೇ ।**
**ಚತುಷ್ಪಾದಂ ನ್ಯಸೇತ್ಪೀಠಂ ನಾನಾರಂಗಸುಶೋಭಿತೇ ॥ ೧ ॥**
**ಅರ್ಚಕಃ ಪ್ರಾಙ್ಮುಖಃ ಪೀಠಪಾದಾನ್ ಕೋಣೇಷು ಕಾರಯೇತ್ ।**
**ಚತುರ್ಷು ತೇಷು ಧರ್ಮಾದೀನ್ ಸ್ಥಾಪಯೇತ್ಸಿಂಹರೂಪಿಣಃ ॥ ೨ ॥**
**ಆಗ್ನೌ ಧರ್ಮಂ ನ್ಯಸೇಚ್ಛ್ವೇತಂ ಜ್ಞಾನಂ ಶೋಣಂ ಚ ನೈರ್ಋತೇ ।**
**ವಾಯೌ ತು ಪೀತಂ ವೈರಾಗ್ಯಂ ಶ್ಯಾಮಮೈಶ್ವರ್ಯಮೈಶಕೇ ॥ ೩ ॥**
**ಮನೋಧೀಚಿತ್ತಾಹಂಕಾರಾನ್ ಕ್ರಮಾತ್ಪೂರ್ವಾದಿದಿಕ್ಷ್ವಥ ।**
**ವಿನ್ಯಸೇತ್ಪೀಠಗಾತ್ರೇಷು ಹರಿದ್ರಕ್ತಸಿತಾಸಿತಾನ್ ॥ ೪ ॥**
**ಸ್ಥಾಪ್ಯಾ ರಕ್ತಸಿತಶ್ಯಾಮಾ ರಜಃಸತ್ತ್ವತಮೋಗುಣಾಃ ।**
**ಪೀಠಸ್ಯ ಪಟ್ಟಿಕಾಯಾಂ ತು ತ್ರಯೋಽಪಿ ಮುನಿಸತ್ತಮ ॥ ೫ ॥**

---

### ಕನ್ನಡದ ಅನುವಾದ

#### ಪೂಜಾಮಂಡಲವಿಧಿನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ :—"ಅಗೆಯುವುದು, ಸಾರಿಸುವುದು ಮೊದಲಾದುವುಗಳಿಂದ ಶೋಧಿಸಿದುದೂ, ನಾನಾ ಬಗೆಯ ಅಲಂಕಾರಗಳಿಂದ ಶೋಭಿಸುತ್ತಿರುವ ಭೂಮಿಯ ಮೇಲೆ ನಾಲ್ಕು ಕಾಲುಗಳುಳ್ಳ ಪೀಠವನ್ನಿಡಬೇಕು.

೨. ಅರ್ಚಕನು ಪೂರ್ವಾಭಿಮುಖನಾಗಿ ಕುಳಿತುಕೊಳ್ಳಬೇಕು. ನಾಲ್ಕು ಮೂಲೆಗಳಲ್ಲಿಯೂ ಸಿಂಹದ ರೂಪವುಳ್ಳ ಪೀಠಪಾದಗಳನ್ನು ಮಾಡಿಸಿಡಬೇಕು. ಅವುಗಳಲ್ಲಿ ಧರ್ಮಾದಿಗಳನ್ನು ಸ್ಥಾಪಿಸಬೇಕು.

೩. ಆಗ್ನೇಯಮೂಲೆಯಲ್ಲಿ ಬಿಳಿಯ ಬಣ್ಣವುಳ್ಳದಾದ ಧರ್ಮಮೂರ್ತಿಯನ್ನು ಸ್ಥಾಪಿಸಬೇಕು. ನೈರ್ಋತ್ಯಮೂಲೆಯಲ್ಲಿ ಕೆಂಪುಬಣ್ಣದ ಜ್ಞಾನಮೂರ್ತಿಯನ್ನು ನೆಲೆಗೊಳಿಸಬೇಕು. ವಾಯುವ್ಯಮೂಲೆಯಲ್ಲಿ ಹಳದಿಬಣ್ಣದ್ದಾದ ವೈರಾಗ್ಯಮೂರ್ತಿಯನ್ನು ಇಡಬೇಕು. ಈಶಾನ್ಯಮೂಲೆಯಲ್ಲಿ ಶ್ಯಾಮಲವರ್ಣದ ಐಶ್ವರ್ಯಾಭಿಮಾನದೇವತೆಯನ್ನು ಸ್ಥಾಪಿಸಬೇಕು.

೪. ಹಸುರು, ಕೆಂಪು, ಬಿಳುಪು ಮತ್ತು ಕಪ್ಪುಬಣ್ಣದುವಾದ ಮನಸ್ಸು, ಧೀ (ಬುದ್ಧಿ), ಚಿತ್ತ, ಅಹಂಕಾರಗಳನ್ನು ಪೂರ್ವವೇ ಮೊದಲಾದ ದಿಕ್ಕುಗಳಲ್ಲಿ ಕ್ರಮವಾಗಿ ಪೀಠದ ಮೈಗಳಲ್ಲಿ ಸ್ಥಾಪನೆಮಾಡಬೇಕು.

೫. ಎಲೈ ಮುನಿಶ್ರೇಷ್ಠನೇ! ಪೀಠದ ಪಟ್ಟಿಕೆಯಲ್ಲಿ ಕ್ರಮವಾಗಿ ರಕ್ತವರ್ಣ

ಅಂತಃಕರಣರೂಪೇಷು ಗಾತ್ರೇಷ್ವಥ ಚತುರ್ಷ್ವಪಿ ।
ವಿಮಲಾದ್ಯಾನ್ನ್ಯಸೇಚ್ಛಕ್ತೀರ್ದ್ವೇ ದ್ವೇ ಏಕೈಕಗಾತ್ರಕೇ ॥ ೬ ॥
ವಿಮಲೋತ್ಕರ್ಷಿಣೀತಿ ದ್ವೇ ಗೌರಾಂಗ್ಯೌ ಪೂರ್ವತೋ ನ್ಯಸೇತ್ ।
ವಾದಯಂತ್ಯೌ ಶುಭಾಂ ವೀಣಾಂ ಹರಿದ್ವಸ್ತ್ರೇ ಸ್ವಲಂಕೃತೇ ॥ ೭ ॥
ಜ್ಞಾನಕ್ರಿಯೇ ನ್ಯಸೇದ್ಯಾಮ್ಯೇ ಪೀತವಸ್ತ್ರೇಽರುಣದ್ಯುತೀ ।
ಏಕಾ ತಾಲಂ ವಾದಯಂತೀ ಮೃದಂಗಮಪರಾ ತಥಾ ॥ ೮ ॥
ಯೋಗಾಪ್ರಥ್ಯೌ ನ್ಯಸೇತ್ ಪಶ್ಚಾತ್ ಶ್ಯಾಮೇ ಅರುಣವಾಸಸೌ ।
ಸಹೈವ ಮುರಲೀಂ ಚೋಭೇ ವಾದಯಂತ್ಯೌ ಪೃಥಕ್ ಪೃಥಕ್ ॥ ೯ ॥
ಸತ್ಯೇಶಾನೇ ಹೇಮವರ್ಣೇ ಉತ್ತರಸ್ಯಾಂ ತತೋ ನ್ಯಸೇತ್ ।
ಶ್ಯಾಮಾಂಶುಕೇ ವಾದಯಂತ್ಯಾವುಭೇ ತೇ ಪರಿವಾದಿನೀಂ ॥ ೧೦ ॥
ಅನುಗ್ರಹಾಖ್ಯಪಟ್ಟಿಕಾಯಾಂ ಸ್ಥಾಪ್ಯೈಕಾ ಚ ಕೃತಾಂಜಲಿಃ ।
ಸರ್ವಾ ಏತಾಸ್ತು ಕರ್ತವ್ಯಾ ದ್ವಿಭುಜಾಃ ಸುವಿಭೂಷಣಾಃ ॥ ೧೧ ॥

---

ಬಿಳುಪು ಮತ್ತು ಶ್ಯಾಮಲವರ್ಣಗಳಿಂದ ಕೂಡಿದ ಸತ್ತ್ವ, ರಜಸ್, ತಮೋ ಗುಣಗಳು ಮೂರನ್ನೂ ಸ್ಥಾಪಿಸಬೇಕು.

೬. ಅಂತಃಕರಣರೂಪಗಳಾದ ನಾಲ್ಕುಮೈಗಳಲ್ಲಿಯೂ ಕೂಡ ಒಂದೊಂದು ಮೈಯಲ್ಲಿ ಎರಡೆರಡರಂತೆ ವಿಮಲಾ ಮೊದಲಾದ ಶಕ್ತಿಗಳನ್ನು ಸ್ಥಾಪನೆಮಾಡಬೇಕು.

೭. ಗೌರಾಂಗಿಯರೂ, ಶುಭಕರವಾದ ವೀಣೆಯನ್ನುನುಡಿಸುತ್ತಿರುವವರೂ, ಹಳದಿ ಬಟ್ಟೆಗಳನ್ನು ಧರಿಸಿ ಚೆನ್ನಾಗಿ ಅಲಂಕರಿಸಿಕೊಂಡಿರುವವರೂ ಆದ ವಿಮಲಾ, ಉತ್ಕರ್ಷಿಣೀ ಎಂಬ ಇಬ್ಬರು ಶಕ್ತಿಯರನ್ನು ಪೂರ್ವದಿಕ್ಕಿನಲ್ಲಿ ಇಡಬೇಕು.

೮. ಹಳದಿ ವಸ್ತ್ರಗಳನ್ನುಟ್ಟು ಅರುಣವರ್ಣದಿಂದ ಬೆಳಗುವವರಾದ ಜ್ಞಾನ ಮತ್ತು ಕ್ರಿಯಾಶಕ್ತಿಗಳನ್ನು ದಕ್ಷಿಣದಿಕ್ಕಿನಲ್ಲಿ ಸ್ಥಾಪಿಸಬೇಕು. ಅವರಲ್ಲಿ ಒಬ್ಬಳು ತಾಳವನ್ನೂ, ಮತ್ತೊಬ್ಬಳು ಮೃದಂಗವನ್ನೂ ಬಾಜಿಸುತ್ತಿರಬೇಕು.

೯. ಪಶ್ಚಿಮದಿಕ್ಕಿನಲ್ಲಿ ಯೋಗಾ ಮತ್ತು ಪ್ರಥ್ಯಾ ಎಂಬ ಶಕ್ತಿಯರನ್ನು ಸ್ಥಾಪಿಸಬೇಕು. ಅವರಿಬ್ಬರೂ ಶ್ಯಾಮಲವರ್ಣದವರು. ಅರುಣ (ಕೆಂಪು)ವರ್ಣದ ಉಡುಪನ್ನು ಧರಿಸಿದವರು. ಇಬ್ಬರೂ ಬೇರೆ ಬೇರೆಯಾಗಿ ಕೊಳಲನ್ನು ನುಡಿಸುತ್ತಿರಬೇಕು.

೧೦. ಬಳಿಕ ಉತ್ತರದಿಕ್ಕಿನಲ್ಲಿ ಸತ್ಯಾ ಮತ್ತು ಈಶಾನವೆಂಬ ಶಕ್ತಿಯರನ್ನು ಸ್ಥಾಪಿಸಬೇಕು. ಅವರು ಹೊಂಬಣ್ಣವುಳ್ಳವರು; ಶ್ಯಾಮಲವರ್ಣದ ಬಟ್ಟೆಯುಟ್ಟವರು; ಅವರಿಬ್ಬರೂ ಪರಿವಾದಿನಿಯನ್ನು ಬಾಜಿಸುತ್ತಿರಬೇಕು.

೧೧. ಪಟ್ಟಿಕೆಯಲ್ಲಿ ಕೈಮುಗಿದುಕೊಂಡು ಒಂಟಿಯಾಗಿರುವ ಅನುಗ್ರಹಾ

ಪೀಠೋಪರಿ ಸಿತದ್ವೀಪಂ ಕುರ್ವೀತ ಶ್ವೇತವಾಸಸಾ ।
ತನ್ಮಧ್ಯೇಽಷ್ಟದಲಂ ಪದ್ಮಂ ಕುರ್ವೀತೋಜ್ಜ್ವಲಕರ್ಣಿಕಂ ॥ ೧೨ ॥
ದ್ವಾದಶಾಂಶಂ ಪರಿತ್ಯಜ್ಯ ಪದ್ಮಕ್ಷೇತ್ರಸ್ಯ ಬಾಹ್ಯತಃ ।
ವೃತ್ತೈಸ್ತ್ರಿಭಿಸ್ತಸ್ಯಮಧ್ಯಂ ವಿಭಜೇತ್ಸಮಭಾಗತಃ ॥ ೧೩ ॥
ತತ್ರಾದ್ಯಂ ಕರ್ಣಿಕಾಸ್ಥಾನಂ ಕೇಸರಾಣಾಂ ತು ಮಧ್ಯಮಂ ।
ಪತ್ರಾಣಾಂ ತು ತೃತೀಯಂ ಸ್ಯಾತ್ ದಲಾಗ್ರಾಣಿತು ಬಾಹ್ಯತಃ ॥ ೧೪ ॥
ಪರಿತಸ್ತಸ್ಯ ಚ ಪುರಂ ಚತುರ್ದ್ವಾರಂ ಪ್ರಕಲ್ಪಯೇತ್ ।
ರಂಗದ್ರವ್ಯೈರ್ಬಹುವಿಧೈರ್ಹರಿದ್ರಾಕುಂಕುಮಾದಿಭಿಃ ॥ ೧೫ ॥
ಕುರ್ವೀತ ತಂಡುಲೈರ್ವಾಪಿ ತತ್ರ ಪದ್ಮಾದಿಶೋಭನಂ ।
ಪದ್ಮಸ್ಯ ಕರ್ಣಿಕಾಂ ಮಧ್ಯೇ ಹೇಮವರ್ಣಾಂ ಸುಶೋಭಯೇತ್ ॥ ೧೬ ॥
ಶೋಣವರ್ಣಾನಿ ಪತ್ರಾಣಿ ಪರಿತಸ್ತಸ್ಯ ಚಾರ್ಚಕಃ ।
ಕುರ್ಯಾದಷ್ಟಾಪ್ಯಷ್ಟದಿಕ್ಷು ಸ್ವರ್ಣವರ್ಣಾನಿ ವಾ ಮುನೇ ॥ ೧೭ ॥

---

ಎಂಬ ಹೆಸರಿನ ಶಕ್ತಿಯನ್ನು ಸ್ಥಾಪಿಸಬೇಕು. ಈ ಎಲ್ಲರನ್ನೂ ಎರಡು ತೋಳುಳ್ಳವರನ್ನಾಗಿಯೂ, ಚೆನ್ನಾಗಿ ಅಲಂಕರಿಸಿಕೊಂಡವರನ್ನಾಗಿಯೂ ನಿರ್ಮಿಸಬೇಕು.

೧೨. ಪೀಠದ ಮೇಲೆ ಬಿಳಿಯ ಬಟ್ಟೆಯಿಂದ ಶ್ವೇತದ್ವೀಪವನ್ನು ನಿರ್ಮಿಸಬೇಕು. ಅದರ ಮಧ್ಯದಲ್ಲಿ ಉಜ್ವಲವಾಗಿ ಬೆಳಗುವ ಕರ್ಣಿಕೆಯಿಂದೊಡಗೂಡಿದ ಅಷ್ಟದಲಪದ್ಮವನ್ನು ರಚಿಸಬೇಕು.

೧೩. ಪದ್ಮಕ್ಷೇತ್ರದ ಹೊರಭಾಗದಲ್ಲಿ ಹನ್ನೆರಡನೆಯ ಒಂದು ಅಂಶವನ್ನು ತ್ಯಜಿಸಿಬಿಟ್ಟು, ಅದರ ಮಧ್ಯಭಾಗವನ್ನು ಸಮಭಾಗವಾಗುವಂತೆ ಮೂರು ವೃತ್ತಗಳನ್ನು ರಚಿಸಿ ವಿಭಾಗಿಸಬೇಕು.

೧೪–೧೫. ಅದರಲ್ಲಿ ಮೊದಲನೆಯದು ಕರ್ಣಿಕೆಯ ಸ್ಥಾನ. ಮಧ್ಯದ್ದು ಕೇಸರಗಳ ಸ್ಥಾನವೆನಿಸುವುದು. ಮೂರನೆಯದು ಪತ್ರಗಳ ಸ್ಥಾನವು. ಹೊರಗಿನದು ದಳದ ಅಗ್ರಭಾಗಗಳು. ಅದರ ಸುತ್ತಲೂ ಅರಿಸಿನ ಕುಂಕುಮ ಮೊದಲಾದ ಬಹು ಬಗೆಯ ರಂಗದ್ರವ್ಯಗಳಿಂದ ನಾಲ್ಕು (ಹೊರ) ಬಾಗಿಲುಗಳಿಂದೊಪ್ಪುವ ಪಟ್ಟಣವನ್ನು ರಚಿಸಬೇಕು.

೧೬. ಬೇರೆ ಬೇರೆ ಬಣ್ಣದ ಅಕ್ಕಿಗಳಿಂದಲಾದರೂ ಆ ಪದ್ಮಾದಿಗಳನ್ನು ಸೊಗಸುಮಾಡಬೇಕು. ಪದ್ಮದ ಕರ್ಣಿಕೆಯನ್ನು ಮಧ್ಯದಲ್ಲಿ ಹೇಮವರ್ಣದಿಂದೆಸೆಯುವಂತೆ ಮನೋಹರಗೊಳಿಸಬೇಕು.

೧೭. ಅರ್ಚಕನು ಅದರ ಸುತ್ತಲೂ ಶೋಣ (ಕೆಂಪು) ವರ್ಣದ ಪತ್ರಗಳನ್ನು ನಿರ್ಮಿಸಬೇಕು. ಅಥವಾ ಎಂಟು ದಿಕ್ಕುಗಳಲ್ಲಿಯೂ ಸರ್ವವರ್ಣದಿಂದೆಸೆಯುವ ಎಂಟು ಪತ್ರಗಳನ್ನು ರಚಿಸಬೇಕು.

ಪೂರ್ವಂ ತು ಗೋಪುರಂ ಶೋಣಂ ಶ್ಯಾಮಂ ಕುರ್ಯಾಚ್ಚ ದಕ್ಷಿಣಂ ।
ಪೀತವರ್ಣಂ ಪಶ್ಚಿಮಂ ಚ ಸ್ಫಟಿಕಾಭಂ ತಥೋತ್ತರಂ ॥ ೧೮ ॥
ಅಂತರಾಲೇ ಚ ಪುಷ್ಪಾಣಿ ಚಿತ್ರಾಣಿ ಪುರಪದ್ಮಯೋಃ ।
ಕೃತ್ವಾ ಮಧ್ಯೇಽಥ ಶ್ರೀಕೃಷ್ಣಂ ತದ್ವಾಮೇ ರಾಧಿಕಾಂ ನ್ಯಸೇತ್ ॥ ೧೯ ॥
ರಾಧಾಕೃಷ್ಣಸ್ಯಾಸ್ಯ ತತಃ ಪೃಷ್ಠೇ ಸಂಕರ್ಷಣಂ ನ್ಯಸೇತ್ ।
ಚತುರ್ಬಾಹುಂ ಧೃತಚ್ಛತ್ರಂ ಗೌರಾಂಗಂ ನೀಲವಾಸಸಂ ॥ ೨೦ ॥
ದಕ್ಷೇ ನ್ಯಸೇದ್ಭಗವತಃ ಪ್ರದ್ಯುಮ್ನಂ ಪೀತವಾಸಸಂ ।
ಚತುರ್ಭುಜಂ ಘನಶ್ಯಾಮಂ ಧೃತ್ವಾ ಚಾಮರಮಾಸ್ಥಿತಂ ॥ ೨೧ ॥
ವಾಮೇಽನಿರುದ್ಧಂ ಚ ಹರೇರ್ನ್ಯಸೇದರುಣವಾಸಸಂ ।
ಇಂದ್ರನೀಲಮಣಿಶ್ಯಾಮಂ ಸಂಸ್ಥಿತಂ ಧೃತಚಾಮರಂ ॥ ೨೨ ॥
ತ್ರಯೋಽಪ್ಯೇತೇ ತು ಕರ್ತವ್ಯಾ ನಾನಾಲಂಕಾರಶೋಭಿತಾಃ ।
ಅನರ್ಘ್ಯರತ್ನಮುಕುಟಾಸ್ತಾರುಣ್ಯೇನ ಮನೋಹರಾಃ ॥ ೨೩ ॥

---

೧೮. ಎಲೈ ಮುನಿಯೇ! ಪೂರ್ವದ ಗೋಪುರವನ್ನು ಶೋಣ (ಕೆಂಪು) ವರ್ಣವಾಗಿಯೂ, ದಕ್ಷಿಣ ಗೋಪುರವನ್ನು ಶ್ಯಾಮಲವರ್ಣವುಳ್ಳುದಾಗಿಯೂ, ಪಶ್ಚಿಮ ದಿಕ್ಕಿನ ಗೋಪುರವನ್ನು ಹಳದಿಬಣ್ಣದ್ದನ್ನಾಗಿಯೂ, ಉತ್ತರ ಗೋಪುರವನ್ನು ಸ್ಫಟಿಕವರ್ಣವುಳ್ಳುದನ್ನಾಗಿಯೂ ನಿರ್ಮಿಸಬೇಕು.

೧೯. ಪುರ ಮತ್ತು ಪದ್ಮಗಳ ನಡುವಣೆಡೆಯಲ್ಲಿ ಬಗೆ ಬಗೆಯ ಪುಷ್ಪಗಳನ್ನು ರಚಿಸಬೇಕು. ಆಮೇಲೆ ಮಧ್ಯದಲ್ಲಿ ಶ್ರೀಕೃಷ್ಣನನ್ನೂ, ಅವನ ವಾಮಭಾಗದಲ್ಲಿ ರಾಧಿಕೆಯನ್ನೂ ಸ್ಥಾಪಿಸಬೇಕು.

೨೦. ಬಳಿಕ ಆ ರಾಧಾಕೃಷ್ಣರ ಹಿಂಭಾಗದಲ್ಲಿ ನಾಲ್ಕುಬಾಹುಗಳುಳ್ಳವನೂ, ಛತ್ರಿಯನ್ನು ಹಿಡಿದಿರುವವನೂ, ಗೌರವರ್ಣನೂ, ನೀಲವಸ್ತ್ರಧಾರಿಯೂ ಆದ ಸಂಕರ್ಷಣನನ್ನು ಸ್ಥಾಪಿಸಬೇಕು.

೨೧. ಆ ಭಗವಂತನ ಬಲಭಾಗದಲ್ಲಿ ಪೀತಾಂಬರಧಾರಿಯೂ, ಚತುರ್ಭುಜನೂ, ಮೇಘದಂತೆ ಶ್ಯಾಮವರ್ಣನೂ ಆಗಿ ಚಾಮರವನ್ನು ಹಿಡಿದು ನಿಂತಿರುವ ಪ್ರದ್ಯುಮ್ನನನ್ನು ನೆಲೆಗೊಳಿಸಬೇಕು.

೨೨. ಹರಿಯ ಎಡಪಕ್ಕದಲ್ಲಿ ಅರುಣ ವಸ್ತ್ರಗಳನ್ನು ಧರಿಸಿದವನೂ, ಇಂದ್ರನೀಲಮಣಿಯಂತಹ ಶ್ಯಾಮಲವರ್ಣವುಳ್ಳವನೂ, ಚಾಮರವನ್ನು ಹಿಡಿದು ನಿಂತವನೂ ಆದ ಅನಿರುದ್ಧನನ್ನು ಸ್ಥಾಪಿಸಬೇಕು.

೨೩. ಈ ಮೂರು ಮೂರ್ತಿಗಳನ್ನೂ ನಾನಾಲಂಕಾರಗಳಿಂದ ಶೋಭಿತರನ್ನಾಗಿಯೂ, ಅನರ್ಘ್ಯವಾದ ರತ್ನಕಿರೀಟವುಳ್ಳವರನ್ನಾಗಿಯೂ, ತಾರುಣ್ಯದಿಂದ ಮನೋಹರರನ್ನಾಗಿಯೂ ರಚಿಸಬೇಕು.

ತತೋಽವತಾರಾಂಸ್ತು ಹರೇಃ ಕೇಸರೇಷ್ವಷ್ಟಸು ಕ್ರಮಾತ್ ।
ಏಕೈಕಸ್ಮಿನ್ನ್ಯಸೇದ್ ದ್ವೌದ್ವಾವಷ್ಟಷ್ವೇವಂ ಹಿ ಷೋಡಶ ॥ ೨೪ ॥
ಸ್ಥಾಪಯೇದ್ವಾಮನಂ ಬುದ್ಧಂ ಪೂರ್ವಸ್ಮಿನ್ ಕೇಸರೇಽಗ್ರತಃ ।
ಘನಶ್ಯಾಮಾವುಭೌ ಹ್ಯೇತೌ ತರುಣೌ ಬ್ರಹ್ಮಚಾರಿಣೌ ॥ ೨೫ ॥
ಶಿತಾಂಶುಕೌ ಕರೇ ದಕ್ಷೇ ಬಿಭ್ರತೌ ಫುಲ್ಲಪಂಕಜಂ ।
ಅಭಯಂ ವಾಮಹಸ್ತೇ ಚ ಶಾಂತೌ ಯಜ್ಞೋಪವೀತಿನೌ ॥ ೨೬ ॥
ಕಲ್ಕಿನಂ ಪರಶುರಾಮಂ ಚ ವಹ್ನಿಕೋಣೇಽಥ ವಿನ್ಯಸೇತ್ ।
ಖಡ್ಗಪಾಣಿಸ್ತತ್ರಕಲ್ಕೀ ಪರ್ಶುಪಾಣಿಸ್ತಥಾಽಪರಃ ॥ ೨೭ ॥
ಉಭೌ ಗೌರೌ ಚ ತಾಮ್ರಾಕ್ಷೌ ಜಟಿಲೌ ಸಿತವಾಸಸೌ ।
ಯಜ್ಞೋಪವೀತಿನೌ ಕಾರ್ಯೌ ತ್ಯಕ್ತಕ್ರೋಧಮಹಾರಯೌ ॥ ೨೮ ॥
ಹಯಗ್ರೀವವರಾಹೌ ಚ ಸ್ಥಾಪಯೇದ್ಯಾಮ್ಯಕೇಸರೇ ।
ಹಯಗ್ರೀವೋ ಹಯಾಸ್ಯಃ ಸ್ಯಾನ್ನರಾಂಗಶ್ಚ ಚತುರ್ಭುಜಃ ॥ ೨೯ ॥

---

೨೪. ಬಳಿಕ ಪದ್ಮದ ಎಂಟು ಕೇಸರಗಳಲ್ಲಿಯೂ ಒಂದೊಂದರಲ್ಲಿ ಎರಡೆರಡರಂತೆ ಶ್ರೀಹರಿಯ ಅವತಾರಗಳನ್ನು ಸ್ಥಾಪಿಸಬೇಕು. ಹೀಗೆ ಎಂಟು ದಳಗಳಲ್ಲಿ ಒಟ್ಟು ಹದಿನಾರು ಅವತಾರಗಳಾಗುತ್ತವೆ.

೨೫. ಪೂರ್ವಭಾಗದ ಕೇಸರದ ಅಗ್ರಭಾಗದಲ್ಲಿ ವಾಮನನನ್ನೂ, ಬುದ್ಧನನ್ನೂ ಸ್ಥಾಪಿಸಬೇಕು. ಇವರಿಬ್ಬರೂ ಮೇಘಶ್ಯಾಮಲವರ್ಣವುಳ್ಳವರು; ತರುಣರು ಮತ್ತು ಬ್ರಹ್ಮಚಾರಿಗಳು.

೨೬. ಇವರು ಬಿಳಿಯ ಬಟ್ಟೆಯನ್ನುಟ್ಟಿರುವರು; ಬಲಗೈಯಲ್ಲಿ ಅರಳಿದ ತಾವರೆಯನ್ನೂ, ಎಡಗೈಯಲ್ಲಿ ಅಭಯಮುದ್ರೆಯನ್ನೂ ತಾಳಿರುವವರು. ಶಾಂತರು ಮತ್ತು ಯಜ್ಞೋಪವೀತವನ್ನು ಧರಿಸಿರುವವರು.

೨೭. ಆಮೇಲೆ ಆಗ್ನೇಯಕೋಣದಲ್ಲಿ ಕಲ್ಕಿಯನ್ನೂ, ಪರಶುರಾಮನನ್ನೂ ಇಡಬೇಕು. ಕಲ್ಕಿಯು ಖಡ್ಗಪಾಣಿಯೂ, ಪರಶುರಾಮನು ಪರಶುಪಾಣಿಯೂ (ಕೈಯಲ್ಲಿ ಕೊಡಲಿಯನ್ನು ಧರಿಸಿದವನೂ) ಆಗಿರುವರು.

೨೮. ಇಬ್ಬರೂ ಗೌರವರ್ಣದವರು; ಕೆಂಗಣ್ಣುಗಳುಳ್ಳವರು; ಜಡೆ ಧರಿಸಿದವರು; ಬಿಳಿಯ ಬಟ್ಟೆಗಳನ್ನುಟ್ಟಿರುವವರು; ಯಜ್ಞೋಪವೀತವನ್ನು ಧರಿಸಿರುವವರಲ್ಲದೆ, ಕ್ರೋಧದ ಮಹಾವೇಗವನ್ನು ತ್ಯಜಿಸಿರುವವರು. ಇವರನ್ನು ಈ ರೀತಿ ರಚಿಸಬೇಕು.

೨೯. ದಕ್ಷಿಣದಿಕ್ಕಿನ ಕೇಸರದಲ್ಲಿ ಹಯಗ್ರೀವ ಮತ್ತು ವರಾಹರನ್ನು ಸ್ಥಾಪಿಸಬೇಕು. ಹಯಗ್ರೀವನು ಮನುಷ್ಯಶರೀರ ಮತ್ತು ಕುದುರೆಯ ಮುಖಗಳಿಂದ ಕೂಡಿ ಚತುರ್ಭುಜಗಳುಳ್ಳವನಾಗಿರಬೇಕು.

ಶಂಖಾದಿಭೃತ್ಸ್ವರ್ಣವರ್ಣೋ ಧೃತದಿವ್ಯಸಿತಾಂಬರಃ ।
ವರಾಹಸ್ತು ವರಾಹಾಸ್ಯೋ ನರಾಂಗಃ ಸ್ಯಾಚ್ಚತುರ್ಭುಜಃ ॥ ೩೦ ॥
ಶಂಖಚಕ್ರಗದಾಬ್ಜಾನಿ ದಧತ್ಪೀತಾಂಬರಂ ತಥಾ ।
ಮಧುಪಿಂಗಲವರ್ಣಶ್ಚ ಕರ್ತವ್ಯೋ ದ್ವಿಭುಜೋಽಥವಾ ॥ ೩೧ ॥
ಮತ್ಸ್ಯಕೂರ್ಮೌ ನೈರ್ಋತೇ ಚ ಸ್ಥಾಪಯೇತ್ಕೇಸರೇ ತತಃ ।
ಕಟೇರಧಸ್ತದಾಕಾರಾವೂರ್ಧ್ವಂ ತೌ ತು ನರಾಕೃತೀ ॥ ೩೨ ॥
ವಾಮೇ ಶಂಖಂ ಗದಾಂ ದಕ್ಷೇ ಪಾಣೌ ಚ ದಧತಾವುಭೌ ।
ಶ್ಯಾಮಸುಂದರದೇಹೌ ಚ ಕರ್ತವ್ಯೌ ಧೃತಭೂಷಣೌ ॥ ೩೩ ॥
ಧನ್ವಂತರಿಂ ನೃಸಿಂಹಂ ಚ ಪಶ್ಚಿಮೇ ಕೇಸರೇ ನ್ಯಸೇತ್ ।
ಧನ್ವಂತರಿಃ ಶುಕ್ಲವಾಸಾ ಗೌರಾಂಗೋಽಮೃತಕುಂಭಧೃತ್ ॥ ೩೪ ॥
ಸಿಂಹವಕ್ತ್ರೋ ನೃಸಿಂಹಸ್ತು ನೃದೇಹಃ ಕೇಸರಾನ್ವಿತಃ ।
ನೀಲೋತ್ಪಲಾಭೋ ದ್ವಿಭುಜೋ ಗದಾಚಕ್ರಧರೋ ಭವೇತ್ ॥ ೩೫ ॥

---

೩೦. ಆ ನಾಲ್ಕು ಕೈಗಳಲ್ಲಿ ಶಂಖ ಮೊದಲಾದುವನ್ನು ಧರಿಸಿರಬೇಕು. ಹೊಂಬಣ್ಣವುಳ್ಳವನಾಗಿ ದಿವ್ಯವಾದ ಬಿಳಿಯ ಬಟ್ಟೆಗಳನ್ನುಟ್ಟಿರಬೇಕು. ವರಾಹನು ನರಶರೀರ ಮತ್ತು ವರಾಹ (ಹಂದಿ)ಮುಖವುಳ್ಳವನಾಗಿ ಚತುರ್ಭುಜನಾಗಿರಬೇಕು.

೩೧. ಶಂಖ, ಚಕ್ರ, ಗದೆ, ಪದ್ಮಗಳನ್ನು ಕೈಗಳಲ್ಲಿ ಹಿಡಿದು ಪೀತಾಂಬರವನ್ನುಟ್ಟು ಮಧುವಿನಂತೆ (ಜೇನಿನಂತೆ) ಪಿಂಗಳವರ್ಣವುಳ್ಳವನಾಗಿರಬೇಕು. ಅಥವಾ ಎರಡು ಭುಜಗಳುಳ್ಳವನನ್ನಾಗಿ ರಚಿಸಬೇಕು.

೩೨. ನೈರ್ಋತ್ಯಮೂಲೆಯ ಕೇಸರದಲ್ಲಿ ಮತ್ಸ್ಯಕೂರ್ಮರನ್ನು ಸ್ಥಾಪಿಸಬೇಕು. ಅವರು ಸೊಂಟದಿಂದ ಕೆಳಕ್ಕೆ ಮತ್ಸ್ಯಕೂರ್ಮಾಕೃತಿಗಳುಳ್ಳವರು, ಸೊಂಟದಿಂದ ಮೇಲಕ್ಕೆ ನರಾಕೃತಿಯುಳ್ಳವರು.

೩೩. ಎಡಗೈಯಲ್ಲಿ ಶಂಖವನ್ನೂ, ಬಲಗೈಯಲ್ಲಿ ಗದೆಯನ್ನೂ ಧರಿಸಿರುವವರಾಗಿಯೂ, ಶ್ಯಾಮಲವರ್ಣದಿಂದೆಸೆಯುತ್ತ ಸುಂದರವಾದ ದೇಹವುಳ್ಳವರಾಗಿಯೂ, ಭೂಷಣಗಳನ್ನು ಧರಿಸಿದವರಾಗಿಯೂ ಇರುವಂತೆ ಅವರಿಬ್ಬರನ್ನೂ ನಿರ್ಮಿಸಬೇಕು.

೩೪. ಪಶ್ಚಿಮಕೇಸರದಲ್ಲಿ ಧನ್ವಂತರಿಯನ್ನೂ, ನೃಸಿಂಹನನ್ನೂ ಸ್ಥಾಪಿಸಬೇಕು. ಧನ್ವಂತರಿಯು ಬಿಳಿಯ ಬಟ್ಟೆಯನ್ನುಟ್ಟಿರುವವನು; ಗೌರಾಂಗನು ಅಮೃತಕುಂಭವನ್ನು ಧರಿಸಿರುವವನು.

೩೫. ನೃಸಿಂಹನಾದರೋ, ಸಿಂಹದ ಮುಖ ಮತ್ತು ಮನುಷ್ಯದೇಹಗಳಿಂದ ಕೂಡಿದವನು; ಕೇಸರಗಳಿಂದ ಆವೃತನಾದವನು; ನೀಲೋತ್ಪಲದಂತೆ

ವಾಯೌ ನ್ಯಸೇದುಭೌ ಹಂಸದತ್ತಾತ್ರೇಯೌ ಜಟಾಧರೌ ।
ಯೋಗಿವೇಷೌ ಸಿತೌ ದಂಡಕಮಂಡಲುಕರೌ ತಥಾ ॥ ೩೬ ॥
ಉತ್ತರೇ ಕೇಸರೇ ವ್ಯಾಸಂ ನ್ಯಸೇದ್ಗಣಪತಿಂ ತತಃ ।
ತತ್ರ ವ್ಯಾಸೋ ವಿಶಾಲಾಕ್ಷಃ ಕೃಷ್ಣವರ್ಣಃ ಸಿತಾಂಬರಃ ॥ ೩೭ ॥
ದ್ವಿಭುಜೋ ಧೃತವೇದಶ್ಚ ಸುಪಿಶಂಗಜಟಾಧರಃ ।
ಸಿತಯಜ್ಞೋಪವೀತಶ್ಚ ಕರ್ತವ್ಯಃ ಸಪವಿತ್ರಕಃ ॥ ೩೮ ॥
ಗಜಾಸ್ಯ ಏಕದಂತಶ್ಚ ರಕ್ತೋ ಗಣಪತಿರ್ಭವೇತ್ ।
ರಕ್ತಾಂಬರಧರಶ್ಚೈವ ನಾಗಯಜ್ಞೋಪವೀತವಾನ್ ॥ ೩೯ ॥
ತುಂದಿಲಶ್ಚ ಚತುರ್ಬಾಹುಃ ಪಾಶಾಂಕುಶವರಾನ್ ದಧತ್ ।
ಕರೇಣೈಕೇನ ಚ ದಧತ್ ರಮ್ಯಾಂ ಪುಸ್ತಕಲೇಖನೀಂ ॥ ೪೦ ॥
ನ್ಯಸೇತ್ಕೇಸರ ಈಶಾನೇ ಕಪಿಲಂ ಪೂಜಕಸ್ತತಃ ।
ಸನತ್ಕುಮಾರಂ ಚ ಮುನಿಂ ನೈಷ್ಠಿಕಬ್ರಹ್ಮಚಾರಿಣಂ ॥ ೪೧ ॥

---

ನೈಬಣ್ಣವುಳ್ಳವನು ಮತ್ತು ಎರಡು ಭುಜಗಳುಳ್ಳವನಾಗಿ ಗದಾಚಕ್ರಗಳನ್ನು ಹಿಡಿದಿರುವವನು.

೩೬. ವಾಯುವ್ಯದಳದಲ್ಲಿ ಜಟಾಧಾರಿಗಳಾಗಿ ಯೋಗಿವೇಷವನ್ನು ತಳೆದು ಬಿಳಿಯ ಬಣ್ಣದಿಂದ ಬೆಳಗುತ್ತ ಕೈಯಲ್ಲಿ ದಂಡಕಮಂಡಲುಗಳನ್ನು ಹಿಡಿದವರಾದ ಹಂಸ ಮತ್ತು ದತ್ತಾತ್ರೇಯರನ್ನೂ ಸ್ಥಾಪಿಸಬೇಕು.

೩೭–೩೮. ಉತ್ತರಕೇಸರದಲ್ಲಿ ವ್ಯಾಸನನ್ನೂ, ಗಣಪತಿಯನ್ನೂ ನೆಲೆಗೊಳಿಸಬೇಕು. ಅವರಲ್ಲಿ ವ್ಯಾಸನು ವಿಶಾಲಾಕ್ಷನೂ, ಕೃಷ್ಣವರ್ಣ (ಕಪ್ಪುಬಣ್ಣ) ವುಳ್ಳವನೂ, ಬಿಳಿಯ ಬಟ್ಟೆಯನ್ನುಟ್ಟವನೂ, ಎರಡು ತೋಳುಗಳುಳ್ಳವನೂ, ವೇದಗಳನ್ನು ಧರಿಸಿದವನೂ, ಪಿಶಂಗ (ಮಾಸಲು ಹಳದಿ)ವರ್ಣದ ಜಡೆಗಳನ್ನು ತಳೆದವನೂ, ಪವಿತ್ರದಿಂದೊಡಗೂಡಿ ಯಜ್ಞೋಪವೀತವನ್ನು ಧರಿಸಿದವನೂ ಆಗಿರುವಂತೆ ನಿರ್ಮಿಸಬೇಕು.

೩೯–೪೧. ಗಣಪತಿಯು ಆನೆಯ ಮುಖವುಳ್ಳವನು; ಏಕದಂತನು (ಒಂಟಿ ಹಲ್ಲುಳ್ಳವನು); ರಕ್ತವರ್ಣನು; ರಕ್ತವರ್ಣದ ಬಟ್ಟೆಯುಟ್ಟವನು; ನಾಗಯಜ್ಞೋಪವೀತಿಯು (ಹಾವನ್ನೆ ಯಜ್ಞೋಪವೀತವಾಗಿ ಹಾಕಿಕೊಂಡಿರುವವನು); ಸೊಂಡಿಲಿರುವವನು; ಚತುರ್ಭುಜಗಳುಳ್ಳವನು; ಮೂರು ಕೈಗಳಲ್ಲಿ ಪಾಶ, ಅಂಕುಶ, ವರದಮುದ್ರೆ—ಇವನ್ನೂ, ಮತ್ತೊಂದು ಕೈಯಲ್ಲಿ ರಮ್ಯವಾದ ಪುಸ್ತಕವನ್ನೂ, ಲೇಖನಿಯನ್ನೂ ಧರಿಸಿರುವನು. ಈ ರೀತಿ ಗಣಪತಿಯನ್ನು ರಚಿಸಿಡಬೇಕು. ಬಳಿಕ ಪೂಜಕನು ಈಶಾನ್ಯಭಾಗದ ಕೇಸರದಲ್ಲಿ ಕಪಿಲನನ್ನೂ, ನೈಷ್ಠಿಕ ಬ್ರಹ್ಮಚಾರಿಯಾದ ಸನತ್ಕುಮಾರಮುನಿಯನ್ನೂ ಸ್ಥಾಪಿಸಬೇಕು.

ಶುಕ್ಲಾಂಗಃ ಕಪಿಲಃ ಕಾರ್ಯೋ ಧೃತಚಾರುಸಿತಾಂಬರಃ ।
ದಧತ್ಕರಾಭ್ಯಾಮಂಭೋಜಮಭಯಂ ಶಾಂತವಿಗ್ರಹಂ ॥ ೪೩ ॥
ಪಂಚವಾರ್ಷಿಕಬಾಲಾಭೋ ದಿಗ್ವಸ್ತ್ರೋऽಲ್ಪಜಟಾಧರಃ ।
ಸನತ್ಕುಮಾರಶ್ಚ ಮುನಿಃ ಕರ್ತವ್ಯಃ ಪೂಜಕೇನ ತು ॥ ೪೪ ॥
ಸಂಸ್ಥಾಪ್ಯ ಕೇಸರೇಷ್ವಿತ್ಥಂ ದೇವತಾಃ ಪಂಕಜಸ್ಯ ತು ।
ನ್ಯಸೇಚ್ಚ ದಲಮಧ್ಯೇಷು ಪಾರ್ಷದಾನರ್ಚಕೋऽಷ್ಟಸು ॥ ೪೫ ॥
ವಿಷ್ವಕ್ಸೇನಂ ಚ ಗರುಡಂ ತತ್ರಾದೌ ಪೂರ್ವತೋ ನ್ಯಸೇತ್ ।
ತತೋ ದಕ್ಷಕ್ರಮೇಣೈವ ಪ್ರಬಲಂ ಚ ಬಲಂ ನ್ಯಸೇತ್ ॥ ೪೬ ॥
ಕುಮುದಂ ಕುಮುದಾಕ್ಷಂ ಚ ಸುನಂದಂ ನಂದಮೇವ ಚ ।
ಶೃತದೇವಂ ಜಯಂತಂ ಚ ವಿನ್ಯಸೇದ್ವಿಜಯಂ ಜಯಂ ॥ ೪೭ ॥
ತತಃ ಪ್ರಚಂಡಂ ಚಂಡಂ ಚ ಪುಷ್ಪದಂತಂ ಚ ಸಾತ್ವತಂ ।
ದ್ವೌದ್ವಾವೇವಂ ಕ್ರಮೇಣೈವ ಸ್ಥಾನೇಷ್ವಷ್ಟಸು ವಿನ್ಯಸೇತ್ ॥ ೪೮ ॥
ಚತುರ್ಭುಜಾಃ ಸರ್ವ ಏತೇ ಶಂಖಾರ್ಯಬ್ಜ ಗದಾಧರಾಃ ।
ಕಾರ್ಯಾಃ ಕಿರೀಟಿನಃ ಶ್ಯಾಮಾಃ ಪೀತವಸ್ತ್ರಾಃ ಸುಭೂಷಣಾಃ ॥ ೪೯ ॥

---

೪೩. ಕಪಿಲನು ಬಿಳಿಯ ಮೈಯುಳ್ಳವನಾಗಿಯೂ, ಮನೋಹರವಾದ ಬಿಳಿಯ ಬಟ್ಟೆಯನ್ನುಟ್ಟವನಾಗಿಯೂ, ಕೈಗಳಲ್ಲಿ ಕಮಲ ಮತ್ತು ಅಭಯ ಮುದ್ರೆಗಳನ್ನು ತಳೆದವನಾಗಿಯೂ, ಶಾಂತವಾದ ಶರೀರವುಳ್ಳವನಾಗಿಯೂ ಇರುವಂತೆ ನಿರ್ಮಿಸಬೇಕು.

೪೪. ಐದು ವರ್ಷದ ಬಾಲಕನಂತೆಸೆಯುತ್ತ ದಿಗಂಬರನಾಗಿ ಸ್ವಲ್ಪಮಾತ್ರ ಜಡೆಯನ್ನು ಧರಿಸಿದವನಾಗಿರುವಂತೆ ಸನತ್ಕುಮಾರಮುನಿಯನ್ನು ಪೂಜಕನು ನಿರ್ಮಿಸಬೇಕು.

೪೫. ಈ ರೀತಿಯಾಗಿ ಅರ್ಚಕನು ತಾವರೆಯ ಕೇಸರಗಳಲ್ಲಿ ದೇವತೆಗಳನ್ನು ಸ್ಥಾಪಿಸಿ, ದಳಮಧ್ಯಗಳೆಂಟರಲ್ಲಿಯೂ ಪಾರ್ಷದರನ್ನು ಸ್ಥಾಪಿಸಬೇಕು.

೪೬–೪೮. ಮೊದಲು ಪೂರ್ವದಿಕ್ಕಿನ ದಳಮಧ್ಯದಲ್ಲಿ ವಿಷ್ವಕ್ಸೇನನನ್ನೂ, ಗರುಡನನ್ನೂ ಇಡಬೇಕು. ಬಳಿಕ ಪ್ರದಕ್ಷಿಣಕ್ರಮವಾಗಿ ಈ ಮುಂದೆ ಹೇಳುವವರನ್ನು ಕ್ರಮವಾಗಿ ಸ್ಥಾಪಿಸಬೇಕು. ಪ್ರಬಲ, ಬಲ; ಕುಮುದ, ಕುಮುದಾಕ್ಷ; ಸುನಂದ, ನಂದ; ಶ್ರುತದೇವ, ಜಯಂತ; ವಿಜಯ, ಜಯ; ಬಳಿಕ ಪ್ರಚಂಡ, ಚಂಡ; ಪುಷ್ಪದಂತ, ಸಾತ್ವತ— ಇವರನ್ನು ಇಬ್ಬಿಬ್ಬರನ್ನು ಒಂದೊಂದು ಕಡೆಯಂತೆ ಕ್ರಮವಾಗಿ ಎಂಟು ಸ್ಥಾನಗಳಲ್ಲಿಯೂ ಸ್ಥಾಪಿಸಬೇಕು.

೪೯. ಇವರೆಲ್ಲರನ್ನೂ ಚತುರ್ಭುಜರೂ, ಶಂಖಚಕ್ರಗದಾಧಾರಿಗಳೂ, ಕಿರೀಟವನ್ನು ಧರಿಸಿದವರೂ, ಶ್ಯಾಮಲವರ್ಣವುಳ್ಳವರೂ, ಪೀತ(ಹಳದಿ) ವಸ್ತ್ರವನ್ನುಟ್ಟ

ದಲಮಧ್ಯಾಂತರಾಲೇಷು ಸಿದ್ಧೀರಷ್ಟಸು ವಿನ್ಯಸೇತ್ ।
ನಾನಾಮಂಗಲವಾದ್ಯಾನಾಂ ವಾದನೇ ನಿಪುಣಾಃ ಕ್ರಮಾತ್ ॥ ೪೯ ॥
ಅಣಿಮಾ ಲಘಿಮಾ ಪ್ರಾಪ್ತಿಃ ಪ್ರಾಕಾಮ್ಯಂ ಮಹಿಮಾ ತಥಾ ।
ಈಶಿತಾ ವಶಿತಾ ಚೈವಾಷ್ಟಮಿಾ ಕಾಮಾವಸಾಯಿಕಾ ॥ ೫೦ ॥
ಏತಾಃ ಸುವರ್ಣವರ್ಣಾಭಾಃ ಸರ್ವಾಭರಣಭೂಷಿತಾಃ ।
ವೇಣುವೀಣಾದಿ ಹಸ್ತಾಶ್ಚ ಕರ್ತವ್ಯಾಶ್ಚಿತ್ರವಾಸಸಃ ॥ ೫೧ ॥
ದಲಾಗ್ರೇಷ್ವಷ್ಟಸು ತತೋ ವೇದಾನ್ ಶಾಸ್ತ್ರಾಣಿ ಚ ನ್ಯಸೇತ್ ।
ತತ್ರ ವೇದಾನ್ನ್ಯಸೇದ್ದಿಕ್ಷು ಶಾಸ್ತ್ರಾಣಿ ತು ವಿದಿಕ್ಷು ಸಃ ॥ ೫೨ ॥
ಪೂರ್ವೇ ನ್ಯಸೇತ್ತು ಋಗ್ವೇದಮಕ್ಷಮಾಲಾಧರಂ ಸಿತಂ ।
ಖರ್ವಂ ಲಂಬೋದರಂ ಸೌಮ್ಯಂ ಪದ್ಮನೇತ್ರಂ ಸಿತಾಂಬರಂ ॥ ೫೩ ॥
ಯಾಮ್ಯೇ ನ್ಯಸೇದ್ಯಜುರ್ವೇದಂ ಮಧ್ಯಮಾಂಗಂ ಕೃಶೋದರಂ ।
ಪಿಂಗಾಕ್ಷಂ ಸ್ಥೂಲಕಂಠಂ ಚ ಪೀತಂ ಚಾರುಣವಾಸಸಂ ॥ ೫೪ ॥

---

ವರೂ, ಒಳ್ಳೆಯ ಭೂಷಣಗಳಿಂದ ಅಲಂಕೃತರಾದವರೂ ಆಗಿರುವಂತೆ ರಚಿಸಬೇಕು.

೪೯–೫೦. ದಳಮಧ್ಯದ ಅಂತರಾಳಗಳೆಂಟರಲ್ಲಿಯೂ ಬಗೆಬಗೆಯ ಮಂಗಳವಾದ್ಯಗಳನ್ನು ಬಾಜಿಸುವುದರಲ್ಲಿ ನಿಪುಣೆಯರಾದ ಅಣಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಮಹಿಮಾ, ಈಶಿತಾ, ವಶಿತಾ, ಕಾಮಾವಸಾಯಿಕಾ— ಎಂಬ ಈ ಸಿದ್ಧಿದೇವತೆಗಳನ್ನು ಕ್ರಮವಾಗಿ ಸ್ಥಾಪನೆಮಾಡಬೇಕು.

೫೧. ಇವರನ್ನು ಸುವರ್ಣವರ್ಣದ ಶರೀರಕಾಂತಿಯುಳ್ಳವರನ್ನಾಗಿಯೂ, ಸರ್ವಾಭರಣಗಳಿಂದ ಭೂಷಿತರನ್ನಾಗಿಯೂ, ಕೊಳಲು ವೀಣೆ ಮೊದಲಾದುವನ್ನು ಕೈಯಲ್ಲಿ ಹಿಡಿದಿರುವವರನ್ನಾಗಿಯೂ, ಬಗೆಬಗೆಯ ಚಿತ್ರವರ್ಣದ ಬಟ್ಟೆಯುಟ್ಟವರನ್ನಾಗಿಯೂ ನಿರ್ಮಿಸಬೇಕು.

೫೨. ಬಳಿಕ ಎಂಟು ದಳಾಗ್ರಗಳಲ್ಲಿಯೂ ವೇದಗಳನ್ನೂ, ಶಾಸ್ತ್ರಗಳನ್ನೂ ಇಡಬೇಕು. ವೇದಗಳನ್ನು ದಿಕ್ಕುಗಳಲ್ಲಿಯೂ, ಶಾಸ್ತ್ರಗಳನ್ನು ವಿದಿಕ್ಕುಗಳಲ್ಲಿಯೂ ನೆಲೆಗೊಳಿಸಬೇಕು.

೫೩. ಪೂರ್ವದಲ್ಲಿ ಅಕ್ಷಮಾಲಾ (ಜಪಸರ) ಧರನಾಗಿ, ಬಿಳಿಯ ಬಣ್ಣವುಳ್ಳವನಾಗಿ, ಕುಳ್ಳನೂ, ಲಂಬೋದರೂ, ಸೌಮ್ಯನೂ, ಪದ್ಮದಂತಿರುವ ನೇತ್ರಗಳುಳ್ಳವನೂ, ಬಿಳಿಯ ಬಟ್ಟೆಯನ್ನುಟ್ಟವನೂ ಆಗಿರುವ ಋಗ್ವೇದಮೂರ್ತಿಯನ್ನು ಸ್ಥಾಪಿಸಬೇಕು.

೫೪–೫೬. ದಕ್ಷಿಣದಿಕ್ಕಿನಲ್ಲಿ ಮಧ್ಯಮಾಂಗವುಳ್ಳವನೂ, ಕೃಶೋದರನೂ (ತೆಳುಹೊಟ್ಟೆಯುವನು) ಕೆಂಗಣ್ಣುಗಳುಳ್ಳವನೂ, ದಪ್ಪವಾದ ಕುತ್ತಿಗೆಯುಳ್ಳ

ಅಕ್ಷಸ್ರಜಂ ಕರೇ ವಾಮೇ ದಕ್ಷೇ ವಜ್ರಂ ಚ ಬಿಭ್ರತಂ ।
ಪಶ್ಚಿಮೇ ಸಾಮವೇದಂ ಚ ಪ್ರಾಂಶುಮಾದಿತ್ಯವರ್ಚಸಂ ॥ ೫೫ ॥
ದಕ್ಷೇಽಕ್ಷಮಾಲಾಂ ವಾಮೇ ಚ ಧೃತವಂತಂ ಕರೇ ದರಂ ।
ಸ್ವರ್ಣವಸ್ತ್ರಂ ವಿಶಾಲಾಕ್ಷಂ ವಿನ್ಯಸೇದ್ಗಾಯನೋದ್ಯತಂ ॥ ೫೬ ॥
ಅಥರ್ವಾಣಂ ನ್ಯಸೇತ್ಸೌಮ್ಯೇ ಸಿತಾಂಗಂ ನೀಲವಾಸಸಂ ।
ವಾಮೇಽಕ್ಷಸೂತ್ರಂ ದಕ್ಷೇ ಚ ಖಟ್ವಾಂಗಂ ಬಿಭ್ರತಂ ಕರೇ ।
ವಹ್ನ್ಯೋಜಸಂ ಚ ತಾಮ್ರಾಕ್ಷಂ ವಯಸಾ ಸ್ಥವಿರಂ ತಥಾ ॥ ೫೭ ॥
ಅಗ್ನಿಕೋಣೇ ಧರ್ಮಶಾಸ್ತ್ರಂ ನ್ಯಸೇಚ್ಚ ಕಮಲಾಸನಂ ।
ಶ್ವೇತಂ ಚ ಬಿಭ್ರತಂ ದೋರ್ಭ್ಯಾಂ ಮುಕ್ತಾಮಾಲಾಂ ತಥಾತುಲಾಂ ॥
ದೀರ್ಘಕೇಶನಖಂ ಸಾಂಖ್ಯಂ ನೈರ್ಋತೇ ತುಂದಿಲಂ ನ್ಯಸೇತ್ ।
ಜಪಮಾಲಾಂ ಚ ದಂಡಂ ಚ ಕರಾಭ್ಯಾಂ ಬಿಭ್ರತಂ ಸಿತಂ ॥ ೫೯ ॥
ನ್ಯಸೇದ್ವಾಯವ್ಯೇ ತತೋ ಯೋಗಂ ಸ್ವರ್ಣವರ್ಣಂ ಕೃಶೋದರಂ ।
ಊರುನ್ಯಸ್ತಕರದ್ವಂದ್ವಂ ಸ್ವನಾಸಾಗ್ರಕೃತೇಕ್ಷಣಂ ॥ ೬೦ ॥

---

ವನೂ, ಹಳದಿ ಬಣ್ಣದವನೂ, ಅರುಣವರ್ಣದ ವಸ್ತ್ರಗಳನ್ನು ಧರಿಸಿರುವವನೂ, ಎಡಗೈಯಲ್ಲಿ ಜಪಸರವನ್ನೂ ಬಲಗೈಯಲ್ಲಿ ವಜ್ರವನ್ನೂ ಹಿಡಿದಿರುವವನೂ ಆದ ಯಜುರ್ವೇದ ಪುರುಷನನ್ನು ಸ್ಥಾಪಿಸಬೇಕು. ಪಶ್ಚಿಮದಿಕ್ಕಿನಲ್ಲಿ ಬಹು ಎತ್ತರವಾದವನೂ, ಆದಿತ್ಯನಂತೆ ವರ್ಚಸ್ಸುಳ್ಳವನೂ, ಬಲಗೈಯಲ್ಲಿ ಜಪಸರವನ್ನೂ ಎಡಗೈಯಲ್ಲಿ ಶಂಖವನ್ನೂ ಧರಿಸಿ, ಹೊಂಬಣ್ಣದ ವಸ್ತ್ರಗಳನ್ನುಟ್ಟ ವಿಶಾಲಾಕ್ಷನಾಗಿಯೂ, ಗಾಯನದಲ್ಲಿ ತೊಡಗಿರುವವನೂ ಆದ ಸಾಮವೇದ ಪುರುಷನನ್ನು ಸ್ಥಾಪಿಸಬೇಕು.

೫೭. ಉತ್ತರದಿಕ್ಕಿನಲ್ಲಿ ಬಿಳಿ ಮೈಯಿನವನೂ, ನೀಲವಸ್ತ್ರಗಳನ್ನುಟ್ಟವನೂ, ಎಡಗೈಯಲ್ಲಿ ಅಕ್ಷಮಾಲೆಯನ್ನೂ, ಬಲಗೈಯಲ್ಲಿ ಖಟ್ವಾಂಗವನ್ನು ಧರಿಸಿದವನೂ, ಬೆಂಕಿಯಂತೆ ಕೆಂಪುಕಾಂತಿಯುಳ್ಳವನೂ, ತಾಮ್ರವರ್ಣದ ಕಣ್ಣುಗಳುಳ್ಳವನೂ, ವಯಸ್ಸಿನಲ್ಲಿ ಮುಪ್ಪಡಸಿದವನೂ ಆಗಿರುವ ಅಥರ್ವಪುರುಷನನ್ನು ಸ್ಥಾಪಿಸಬೇಕು.

೫೮. ಆಗ್ನೇಯಮೂಲೆಯ ಕಮಲಪೀಠದಲ್ಲಿ ಕುಳಿತು ಬಿಳಿಯ ಬಣ್ಣವುಳ್ಳವನಾಗಿ, ತೋಳುಗಳಲ್ಲಿ ಎಣೆಯಿಲ್ಲದ ಮುತ್ತಿನಮಾಲೆಯನ್ನು ತಳೆದು ಬೆಳಗುವ ಧರ್ಮಶಾಸ್ತ್ರಮೂರ್ತಿಯನ್ನು ಸ್ಥಾಪಿಸಬೇಕು.

೫೯. ಉದ್ದವಾದ ಕೂದಲು ಮತ್ತು ಉಗುರುಗಳನ್ನು ತಳೆದು ಕೈಗಳಲ್ಲಿ ಜಪಮಾಲೆಯನ್ನೂ, ದಂಡವನ್ನೂ ಹಿಡಿದು, ಬಿಳಿಯ ಬಣ್ಣವುಳ್ಳವನೂ, ದೊಡ್ಡ ಡೊಳ್ಳುವನೂ ಆದ ಸಾಂಖ್ಯಪುರುಷನನ್ನು ನೈರ್ಋತ್ಯಕೋಣದಲ್ಲಿ ಸ್ಥಾಪಿಸಬೇಕು.

೬೦. ಬಳಿಕ ವಾಯುವ್ಯಮೂಲೆಯಲ್ಲಿ ಹೊಂಬಣ್ಣವುಳ್ಳವನೂ, ತೆಳುಹೊಟ್ಟೆ

ಪಂಚರಾತ್ರಂ ತಥೇಶಾನೇ ಧವಲಂ ವನಮಾಲಿನಂ ।
ನ್ಯಸೇತ್ ಕರಾಭ್ಯಾಂ ದಧತಮಕ್ಷಮಾಲಾಂ ಚ ಲಾಂಗಲಂ ॥ ೬೧ ॥
ಏಷಾಂ ಚತುರ್ಣಾಂ ವಾಸಾಂಸಿ ಶ್ವೇತಸೂಕ್ಷ್ಮಘನಾನಿ ಚ ।
ಕರ್ತವ್ಯಾನಿ ತಥಾಕ್ಷೀಣಿ ಪದ್ಮಪತ್ರಾಯತಾನಿ ಚ ॥ ೬೨ ॥
ಅಗ್ರಾಣಾಮಂತರಾಲೇಷು ಮಹರ್ಷೀಂಶ್ಚ ಸಯೋಷಿತಃ ।
ವಿನ್ಯಸೇತ್ಪಠತೋ ವೇದಾನ್ ಪೂರ್ವಾಗ್ನೇಯಾದ್ಯನುಕ್ರಮಾತ್ ॥ ೬೩ ॥
ಮರೀಚಿಂ ಕಲಯಾ ಯುಕ್ತಮತ್ರಿಂ ಚಾಪ್ಯನಸೂಯಯಾ ।
ಶ್ರದ್ಧಯಾಂಗಿರಸಂ ಸಾಕಂ ಪುಲಸ್ತ್ಯಂ ಚ ಹವಿರ್ಭುವಾ ॥ ೬೪ ॥
ಗತ್ಯಾ ಯುಕ್ತಂ ಚ ಪುಲಹಂ ಕ್ರಿಯಯಾ ಚ ಸಹ ಕ್ರತುಂ ।
ಖ್ಯಾತ್ಯಾ ಭೃಗುಮರುಂಧತ್ಯಾ ವಸಿಷ್ಠಂ ಸಹ ವಿನ್ಯಸೇತ್ ॥ ೬೫ ॥
ದ್ವಿಭುಜಾಃ ಸರ್ವ ಏವೈತೇ ಜಟಾಶ್ಮಶ್ರುಧರಾಃ ಕೃಶಾಃ ।
ಕಾರ್ಯಾಸ್ತಪಸ್ವಿನೋ ದಂಡಾನ್ ದಧತಶ್ಚ ಕಮಂಡಲೂನ್ ॥ ೬೬ ॥

---

ಯುವನೂ, ತೊಡೆಯ ಮೇಲೆ ಕೈಗಳೆರಡನ್ನೂ ಇಟ್ಟುಕೊಂಡಿರುವವನೂ, ತನ್ನ ಮೂಗಿನ ತುದಿಯ ಮೇಲೆಯೇ ನೋಟವನ್ನು ನೆಟ್ಟಿರುವವನೂ ಆದ ಯೋಗ (ಪುರುಷ)ನನ್ನು ಸ್ಥಾಪನೆಮಾಡಬೇಕು.

೬೧–೬೨. ಈಶಾನ್ಯಮೂಲೆಯಲ್ಲಿ ಧವಳವರ್ಣನೂ, ವನಮಾಲೆಯನ್ನು ತಳೆದವನೂ, ಕೈಗಳಲ್ಲಿ ಜಪಸರ ಮತ್ತು ನೇಗಿಲುಗಳನ್ನು ಧರಿಸಿದವನೂ ಆದ ಪಂಚರಾತ್ರಪುರುಷನನ್ನು ಸ್ಥಾಪಿಸಬೇಕು. ಈ ನಾಲ್ವರಿಗೂ ಬಟ್ಟೆಗಳನ್ನು ಬಿಳಿಯವಾಗಿಯೂ, ತೆಳ್ಳಗೂ, ಗಟ್ಟಿಯಾಗಿಯೂ ಇರುವಂತೆ ಮಾಡಬೇಕು. ಕಣ್ಣುಗಳನ್ನು ಪದ್ಮಪತ್ರಗಳಂತೆ ವಿಶಾಲವಾಗಿ ಮಾಡಬೇಕು.

೬೩. ಅಗ್ರಗಳ ಅಂತರಾಳಗಳಲ್ಲಿ ವೇದಗಳನ್ನು ಪಠಿಸುತ್ತಿರುವ ಪತ್ನೀಸಮೇತರಾದ ಮಹರ್ಷಿಗಳನ್ನು ಪೂರ್ವ, ಆಗ್ನೇಯ ಮೊದಲಾದ ಅನುಕ್ರಮದಲ್ಲಿ ವಿನ್ಯಾಸಮಾಡಬೇಕು.

೬೪–೬೫. ಕಲೆಯಿಂದೊಡಗೂಡಿದ ಮರೀಚಿ, ಅನಸೂಯೆಯಿಂದೊಡಗೂಡಿದ ಅತ್ರಿ, ಶ್ರದ್ಧಾಸಮೇತನಾದ ಆಂಗಿರಸ, ಹವಿರ್ಭೂಸಹಿತನಾದ ಪುಲಸ್ತ್ಯ, ಗತಿಯಿಂದೊಡಗೂಡಿದ ಪುಲಹ, ಕ್ರಿಯೆಯಿಂದೊಡಗೂಡಿದ ಕ್ರತು, ಖ್ಯಾತಿಯೊಡನೆ ಭೃಗು, ಅರುಂಧತಿಯೊಡನೆ ವಶಿಷ್ಠ—ಈ ಮಹರ್ಷಿಗಳನ್ನು ಕ್ರಮವಾಗಿ ವಿನ್ಯಾಸಮಾಡಬೇಕು.

೬೬. ಈ ಎಲ್ಲರನ್ನೂ ಎರಡು ಭುಜಗಳುಳ್ಳವರೂ, ಜಡೆ ಮತ್ತು ಗಡ್ಡಮೀಸೆಗಳನ್ನು ಧರಿಸಿದವರೂ, ಕೃಶರೂ, ದಂಡಕಮಂಡಲಗಳನ್ನು ಧರಿಸಿದವರೂ, ತಪಸ್ವಿಗಳೂ ಆಗಿರುವಂತೆ ನಿರ್ಮಿಸಬೇಕು.

**ಪದ್ಮಾದ್ಬಹಿರ್ನ್ಯಸೇಚ್ಚಾಷ್ಟೌ ದಿಶಾಸು ವಿದಿಶಾಸು ಚ ।**
**ದಿಕ್ಪಾಲಾನಿಂದ್ರಪ್ರಮುಖಾನ್ ಸಹಯಾನಾನ್ಯಥಾ ದಿಶಂ ॥ ೬೭ ॥**
**ಪ್ರಾಚ್ಯಾಮೈರಾವತಾರೂಢಂ ನ್ಯಸೇದಿಂದ್ರಂ ಚತುರ್ಭುಜಂ ।**
**ವಜ್ರಾಂಕುಶಾಂಬುಜವರಾನ್ ದಧತಂ ಸ್ವರ್ಣಸನ್ನಿಭಂ ॥ ೬೮ ॥**
**ಕೌಸುಂಭರಮ್ಯವಸನಂ ನಾನಾಲಂಕಾರಶೋಭಿತಂ ।**
**ಶೋಣಾಪಾಂಗಂ ವಿಶಾಲಾಕ್ಷಂ ಸರ್ವಲಕ್ಷಣಲಕ್ಷಿತಂ ॥ ೬೯ ॥**
**ಅಗ್ನಿಕೋಣೇ ನ್ಯಸೇದಗ್ನಿಂ ತಾಮ್ರವರ್ಣಂ ಚತುರ್ಭುಜಂ ।**
**ದಧಾನಂ ಪಾಣಿಭಿಶ್ಚೈವ ಶೂಲಂ ಶಕ್ತಿಂ ಸೃಚಂ ಸೃವಂ ॥ ೭೦ ॥**
**ಚತುಃಶುಕೇ ಹೈಮರಥೇ ನಿಷಣ್ಣಂ ವಾಯುಸಾರಥಿಂ ।**
**ತ್ರಿನೇತ್ರಂ ಧೂಮ್ರವಸನಂ ಪಿಂಗಶ್ಮಶ್ರುಜಟೇಕ್ಷಣಂ ॥ ೭೧ ॥**
**ಯಮಂ ನ್ಯಸೇದ್ದಕ್ಷಿಣತಃ ಶ್ಯಾಮಂ ಚಾಮೀಕರಾಂಬರಂ ।**
**ಚತುರ್ಭುಜಂ ದಂಡಖಡ್ಗಪರಶುಂ ಪಾಶಧಾರಿಣಂ ।**
**ಉನ್ಮತ್ತಮಹಿಷಾರೂಢಂ ನಾನಾಭೂಷಣಭೂಷಿತಂ ॥ ೭೨ ॥**

---

೬೭. ಪದ್ಮದ ಹೊರಗಡೆಯಲ್ಲಿ ಅಷ್ಟದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಇಂದ್ರಾದಿ ಅಷ್ಟದಿಕ್ಪಾಲಕರನ್ನು ವಾಹನ ಸಮೇತರಾಗಿ ಅವರವರ ದಿಕ್ಕುಗಳಿಗೆ ಸರಿಯಾಗಿ ಸ್ಥಾಪಿಸಬೇಕು.

೬೮–೬೯. ಪೂರ್ವದಿಕ್ಕಿನಲ್ಲಿ ಐರಾವತಾರೂಢನಾಗಿ ಚತುರ್ಭುಜಗಳುಳ್ಳವನೂ, ವಜ್ರ, ಅಂಕುಶ, ಪದ್ಮ, ವರದಮುದ್ರೆಗಳನ್ನು ಧರಿಸಿದವನೂ, ಸ್ವರ್ಣಸಮಾನವಾದ ದೇಹಕಾಂತಿಯುಳ್ಳವನೂ, ರಮ್ಯವಾದ ಕೌಸುಂಭವಸ್ತ್ರವನ್ನು ಧರಿಸಿದವನೂ, ನಾನಾಲಂಕಾರಗಳಿಂದ ರಂಜಿಸುತ್ತಿರುವವನೂ, ಕೆಂಪಗಿರುವ ಕಡೆಗಣ್ಣುಗಳುಳ್ಳವನೂ, ವಿಶಾಲಾಕ್ಷನೂ, ಸರ್ವಲಕ್ಷಣಸಂಪನ್ನನೂ ಆದ ಇಂದ್ರನನ್ನು ನೆಲೆಗೊಳಿಸಬೇಕು.

೭೦–೭೧. ಆಗ್ನೇಯಮೂಲೆಯಲ್ಲಿ ತಾಮ್ರವರ್ಣನೂ, ಚತುರ್ಭುಜನೂ, ಕೈಗಳಲ್ಲಿ ಶೂಲ, ಶಕ್ತಿ, ಸೃಚ ಮತ್ತು ಸ್ರುವಗಳನ್ನು ಧರಿಸಿದವನೂ, ನಾಲ್ಕು ಗಿಣಿಗಳನ್ನು ಹೂಡಿದ ಹೊನ್ನರಥದಲ್ಲಿ ಕುಳಿತಿರುವವನೂ, ವಾಯುವೇ ಸಾರಥಿಯಾಗಿರುವವನೂ, ಮೂರು ಕಣ್ಣುಗಳುಳ್ಳವನೂ, ಧೂಮ್ರವರ್ಣದ ವಸ್ತ್ರಗಳನ್ನು ಧರಿಸಿದವನೂ, ಮಾಸಲು ಕೆಂಪುಬಣ್ಣದ ಗಡ್ಡಮೀಸೆಗಳೂ, ಜಡೆಯೂ, ಕಣ್ಣುಗಳೂ ಉಳ್ಳವನೂ ಆದ ಅಗ್ನಿಯನ್ನು ಸ್ಥಾಪಿಸಬೇಕು.

೭೨. ಶ್ಯಾಮಲವರ್ಣವುಳ್ಳವನಾಗಿಯೂ, ಸುವರ್ಣವಸ್ತ್ರಗಳನ್ನು ಧರಿಸಿದವನಾಗಿಯೂ, ಚತುರ್ಭುಜನಾಗಿಯೂ, ದಂಡ, ಖಡ್ಗ, ಪರಶು, ಪಾಶಗಳನ್ನು ಹಿಡಿದವನಾಗಿಯೂ, ನಾನಾಭೂಷಣಗಳಿಂದ ಭೂಷಿತನಾಗಿಯೂ, ಮದಿಸಿದ ಕೋಣವನ್ನೇರಿದವನಾಗಿಯೂ ಇರುವ ಯಮನನ್ನು ದಕ್ಷಿಣದಲ್ಲಿ ಸ್ಥಾಪಿಸಬೇಕು.

ಊರ್ಧ್ವಕೇಶಂ ವಿರೂಪಾಕ್ಷಂ ನೈರ್ಋತಂ ನೈರ್ಋತೇ ನ್ಯಸೇತ್ ।
ಖಡ್ಗಂ ಪಾಶಂ ಚ ದಧತಂ ದ್ವಿಭುಜಂ ನರವಾಹನಂ ॥ ೭೩ ॥
ಹರಿಶ್ಮಶ್ರುಂಧೂಮ್ರವರ್ಣಂ ಪರಿವೀತಂ ಸಿತಾಂಬರಂ ।
ಹಾಟಕಾನೇಕಭೂಷಾಢ್ಯಮವೈಷ್ಣವಭಯಂಕರಂ ॥ ೭೪ ॥
ತತಃ ಪ್ರತೀಚ್ಯಾಂ ವರುಣಮಿಂದ್ರನೀಲಮಣಿಪ್ರಭಂ ।
ಶ್ವೇತಾಂಬರಂ ಚತುರ್ಬಾಹುಂ ಮುಕ್ತಾಹಾರವಿಭೂಷಿತಂ ॥ ೭೫ ॥
ಸಪ್ತಹಂಸರಥಾರೂಢಂ ದೋರ್ಭ್ಯಾಂ ಪಾಶಂ ಚ ಬಿಭ್ರತಂ ।
ಅನ್ಯಾಭ್ಯಾಂ ರತ್ನಪಾತ್ರಂ ಚ ಶಂಖಂ ಚ ದಧತಂ ನ್ಯಸೇತ್ ॥ ೭೬ ॥
ವಾಯೌ ವಾಯುಂ ಹರಿದ್ವರ್ಣಂ ದ್ವಿಭುಜಂ ಕೃಷ್ಣವಾಸಸಂ ।
ಪೃಷತಸ್ಥಂ ಮುಕ್ತಕೇಶಂ ವ್ಯಾತ್ತಾಸ್ಯಂ ಧ್ವಜಿನಂ ನ್ಯಸೇತ್ ॥ ೭೭ ॥
ಸೌಮ್ಯೇ ನ್ಯಸೇತ್ಕುಬೇರಂ ಚ ಸ್ವರ್ಣವರ್ಣಂ ಚತುರ್ಭುಜಂ ।
ಗದಾಶಕ್ತಿತ್ರಿಶೂಲಾನಿ ರತ್ನಪಾತ್ರಂ ಚ ಬಿಭ್ರತಂ ॥ ೭೮ ॥
ನೀಲಾಂಬರಂ ಶ್ಮಶ್ರುಲಂಚ ಶಿಬಿಕಾಯಾಂ ಸಮಾಸ್ಥಿತಂ ।
ಪಿಶಂಗವಾಮನಯನಂ ನೈಕಭೂಷಂ ಚ ವರ್ಮಿಣಂ ॥ ೭೯ ॥

---

೭೩–೭೪. ಮೇಲೆ ನಿಮಿರೆದ್ದ ಕೂದಲುಗಳುಳ್ಳವನೂ, ವಿರೂಪಾಕ್ಷನೂ, ಎರಡು ಭುಜಗಳುಳ್ಳವನೂ, ಖಡ್ಗವನ್ನೂ ಪಾಶವನ್ನೂ ಧರಿಸಿದವನೂ, ನರವಾಹನನೂ, ಹಸುರು ಮೀಸೆಯುಳ್ಳವನೂ, ಧೂಮ್ರವರ್ಣನೂ, ಕಪ್ಪು ಬಟ್ಟೆಯನ್ನುಟ್ಟವನೂ, ಅನೇಕ ಹೊಂದೊಡವುಗಳಿಂದ ಅಲಂಕೃತನೂ, ವೈಷ್ಣವರಲ್ಲದವರಿಗೆ ಭಯಂಕರನೂ ಆದ ನೈರ್ಋತ್ಯನನ್ನು ನೈರ್ಋತ್ಯಮೂಲೆಯಲ್ಲಿ ಸ್ಥಾಪಿಸಬೇಕು.

೭೫–೭೬. ಬಳಿಕ ಪಶ್ಚಿಮದಿಕ್ಕಿನಲ್ಲಿ ಇಂದ್ರನೀಲಮಣಿಯಂತೆ ದೇಹಕಾಂತಿಯುಳ್ಳವನೂ, ಬಿಳಿಯ ಬಟ್ಟೆಯನ್ನುಟ್ಟವನೂ, ನಾಲ್ಕು ತೋಳುಗಳುಳ್ಳವನೂ, ಮುತ್ತಿನಹಾರಗಳಿಂದ ಅಲಂಕಾರಗೊಂಡವನೂ, ಏಳುಹಂಸಗಳನ್ನು ಹೂಡಿದ ರಥವನ್ನೇರಿದವನೂ, ಎರಡು ಕೈಗಳಲ್ಲಿಯೂ ಪಾಶವನ್ನೂ, ಮತ್ತೆರಡರಲ್ಲಿ ರತ್ನಪಾತ್ರೆ ಮತ್ತು ಶಂಖಗಳನ್ನು ಧರಿಸಿದವನೂ ಆದ ವರುಣನನ್ನು ಸ್ಥಾಪಿಸಬೇಕು.

೭೭. ವಾಯುವ್ಯಮೂಲೆಯಲ್ಲಿ ವಾಯುವನ್ನಿಡಬೇಕು. ಅವನು ಹಸುರು ಬಣ್ಣದವನು; ಎರಡು ಭುಜಗಳುಳ್ಳವನು; ಕೃಷ್ಣವಸ್ತ್ರಗಳನ್ನು ಧರಿಸಿದವನು; ಬಂಡೆಯಮೇಲೆ ನೆಲಸಿದವನು; ಬಿಚ್ಚಿದ ಕೂದಲುಳ್ಳವನು; ತೆರೆದ ಬಾಯುಳ್ಳವನು ಮತ್ತು ಧ್ವಜವನ್ನು ಹಿಡಿದಿರುವವನೂ ಆಗಿರಬೇಕು.

೭೮–೭೯. ಉತ್ತರದಿಕ್ಕಿನಲ್ಲಿ ಕುಬೇರನನ್ನಿಡಬೇಕು. ಅವನು ಹೊಂಬಣ್ಣದವನು; ಚತುರ್ಭುಜಗಳುಳ್ಳವನು; ಕೈಗಳಲ್ಲಿ ಗದೆ, ಶಕ್ತಿ, ತ್ರಿಶೂಲ, ರತ್ನ

**ಈಶಾನೇಽಥ ಮಹಾರುದ್ರಮರ್ಧನಾರೀಶ್ವರಂ ನ್ಯಸೇತ್ ।**
**ವಾಮಾರ್ಧೇ ಪಾರ್ವತೀ ಕಾರ್ಯಾ ದಕ್ಷಾರ್ಧೇ ತತ್ರ ಶಂಕರಃ ॥ ೮೦ ॥**
**ಈಶ್ವರಾರ್ಧೇ ಜಟಾಜೂಟಂ ಕರ್ತವ್ಯಂ ಚಂದ್ರಭೂಷಿತಂ ।**
**ಉಮಾರ್ಧೇ ತಿಲಕಂ ಕಾರ್ಯಂ ಸೀಮಂತಮಲಿಕೇ ತಥಾ ॥ ೮೧ ॥**
**ಭಸ್ಮನೋದ್ಧೂಲಿತಂ ಚಾರ್ಧಂ ಅರ್ಧಂ ಕುಂಕುಮಭೂಷಿತಂ ।**
**ನಾಗೋಪವೀತಂ ಚಾಪ್ಯರ್ಧಮರ್ಧಂ ಹಾರವಿಭೂಷಿತಂ ॥ ೮೨ ॥**
**ವಾಮಾರ್ಧೇ ಚ ಸ್ತನಃ ಪೀನಃ ಕರ್ತವ್ಯಃ ಕಂಚುಕೀವೃತಃ ।**
**ಕಟ್ಯಾಂ ಚ ರಶನಾ ಹೈಮೀ ಪಾದೇ ಕಾಂಚನನೂಪುರಂ ॥ ೮೩ ॥**
**ಕೌಸುಂಭಂ ವಸನಂ ಚೈವ ಕರೌ ಕಂಕಣಭೂಷಿತೌ ।**
**ತ್ರಿಶೂಲಮಕ್ಷಸೂತ್ರಂ ಚ ದಧತೌ ರತ್ನಮುದ್ರಿಕೌ ॥ ೮೪ ॥**
**ದಕ್ಷಾರ್ಧೇ ರಶನಾ ಸಾರ್ಪೀ ಕಾರ್ಯಾ ವಸ್ತ್ರಂ ಗಜಾಜಿನಂ ।**
**ಕರೌ ಚ ನಾಗವಲಯೌ ದರ್ಪಣೋತ್ಪಲಧಾರಿಣೌ ॥ ೮೫ ॥**

---

ಪಾತ್ರೆ — ಇವನ್ನು ಹಿಡಿದಿರುವನು; ನೀಲಿಯ ಬಣ್ಣದ ಬಟ್ಟೆಗಳನ್ನುಟ್ಟವನು; ಗಡ್ಡಮೀಸೆಗಳುಳ್ಳವನು; ಪಲ್ಲಕ್ಕಿಯಲ್ಲಿ ಕುಳಿತಿರುವವನು; ಪಿಶಂಗ (ಮಾಸಲು ಕೆಂಪು)ವರ್ಣದ ಎಡಗಣ್ಣುಳ್ಳವನು; ಅನೇಕ ಭೂಷಣಗಳನ್ನು ಧರಿಸಿದವನು ಮತ್ತು ಮೈಗಾಪು ತೊಟ್ಟವನು.

೮೦. ಬಳಿಕ ಈಶಾನ್ಯದಿಕ್ಕಿನಲ್ಲಿ ಅರ್ಧನಾರೀಶ್ವರನಾದ ಮಹಾರುದ್ರನನ್ನಿಡಬೇಕು. ಆ ಮೂರ್ತಿಯ ಎಡಗಡೆಯ ಅರ್ಧದಲ್ಲಿ ಪಾರ್ವತಿಯನ್ನು ರಚಿಸಬೇಕು. ಬಲಗಡೆಯ ಅರ್ಧದಲ್ಲಿ ಶಂಕರನನ್ನು ರಚಿಸಬೇಕು.

೮೧. ಈಶ್ವರಾರ್ಧದಲ್ಲಿ ಚಂದ್ರನಿಂದ ವಿಭೂಷಿತವಾದ ಜಟಾಜೂಟವನ್ನು ನಿರ್ಮಿಸಬೇಕು. ಉಮಾರ್ಧದಲ್ಲಿ ತಿಲಕವನ್ನಿಡಬೇಕು ಮತ್ತು ಬೈತಲೆಯನ್ನು ತಿದ್ದಬೇಕು.

೮೨—೮೪. ಅರ್ಧಭಾಗವು ಭಸ್ಮೋದ್ಧೂಲಿತವಾಗಿರುವುದು; ಅರ್ಧಭಾಗವು ಕುಂಕುಮದಿಂದ ಭೂಷಿತವಾಗಿರುವುದು. ಇನ್ನರ್ಧಭಾಗದಲ್ಲಿ ನಾಗೋಪವೀತವು (ಹಾವಿನ ಜನಿವಾರ) ಮೆರೆಯುವುದು, ಇನ್ನರ್ಧಭಾಗವು ಹಾರದಿಂದ ರಂಜಿಸುತ್ತಿರುವುದು. ಎಡಗಡೆಯ ಅರ್ಧದಲ್ಲಿ ರವಿಕೆಯಿಂದ ಮುಚ್ಚಿರುವ ದಪ್ಪವಾದ ಸ್ತನವನ್ನು ನಿರ್ಮಿಸಬೇಕು; ಸೊಂಟದಲ್ಲಿ ಚಿನ್ನದ ಡಾಬನ್ನೂ, ಪಾದದಲ್ಲಿ ಕಾಂಚನನೂಪುರವನ್ನೂ ರಚಿಸಬೇಕು. ಕಂಕಣಗಳಿಂದ ಅಲಂಕರಿಸಿರಬೇಕು; ಅವು ರತ್ನದುಂಗುರಗಳನ್ನು ಹಾಕಿಕೊಂಡು ತ್ರಿಶೂಲವನ್ನೂ, ಅಕ್ಷಮಾಲೆ ಜಪಮಾಲೆಗಳನ್ನೂ ಹಿಡಿದಿರಬೇಕು.

೮೫. ಬಲಗಡೆಯ ಅರ್ಧದಲ್ಲಿ ಸರ್ಪದ ಉಡಿದಾರವನ್ನು ಮಾಡಬೇಕು;

ಏವಂ ವಿಧಂ ಮಹಾದೇವಂ ನ್ಯಸೇದ್ವೃಷಭವಾಹನಂ ।
ಇತ್ಥಮಷ್ಟದಿಗೀಶಾನಾಂ ಕುರ್ಯಾತ್ ಸ್ಥಾಪನಮರ್ಚಕಃ ॥ ೮೬ ॥
ಪುರಾದ್ಬಹಿಸ್ತತಶ್ಚಾಷ್ಟೌ ಸ್ಥಾಪಯೇದರ್ಚಕೋ ಗ್ರಹಾನ್ ।
ಸ್ವಸ್ವ ದಿಕ್ಷು ಸ್ಥಿತಾನ್ ಸ್ವಸ್ವಾನ್ ಯಾನಾರೂಢಾನ್ ಸ್ಯಂದನಾನಿ ಚ ॥
ಪ್ರಾಚ್ಯಾಂ ದಿಶಿ ನ್ಯಸೇತ್ತತ್ರ ಭಾಸ್ಕರಂ ಪೀತವಾಸಸಂ ।
ಸಿಂಧೂರವರ್ಣಂ ದ್ವಿಭುಜಂ ಪದ್ಮಹಸ್ತಂ ರಥೇ ಸ್ಥಿತಂ ॥ ೮೮ ॥
ಏಕಂ ಚಕ್ರಂ ದ್ವಾದಶಾರಂ ರಥಸ್ಯಾಸ್ಯಾತಿತೇಜಸಃ ।
ಸಪ್ತಾಶ್ವಾಶ್ಚ ಹರಿದ್ವರ್ಣಾ ವಾಮೇ ಸಂತಿ ನಿಯೋಜಿತಾಃ ॥ ೮೯ ॥
ಅಗ್ನಿಕೋಣೇ ತತಃ ಸ್ಥಾಪ್ಯೋ ಭೃಗುಃ ಶ್ವೇತಃ ಸಿತಾಂಬರಃ ।
ದಂಡಂ ಕಮಂಡಲುಂ ಬಿಭ್ರತ್ ದ್ವಿಬಾಹುಃ ಸೌಮ್ಯದರ್ಶನಃ ॥ ೯೦ ॥

---

ಗಜಚರ್ಮವನ್ನು ಬಟ್ಟೆಯಾಗಿ ಉಡಿಸಬೇಕು. ಎರಡು ಕೈಗಳಿಗೂ ಹಾವುಗಳ ಕಂಕಣಗಳನ್ನಿಡಬೇಕು. ಕನ್ನಡಿ ಮತ್ತು ಉತ್ಪಲ (ನೈದಿಲೆ ಹೂವು)ಗಳನ್ನು ಹಿಡಿದಿರಬೇಕು.

೮೬. ಈ ರೀತಿಯಾದ ಮಹಾದೇವನನ್ನು ವೃಷಭವಾಹನವನ್ನೇರಿದವನನ್ನಾಗಿ ಸ್ಥಾಪಿಸಬೇಕು. ಹೀಗೆ ಅರ್ಚಕನು ಅಷ್ಟದಿಕ್ಪಾಲಕರ ಸ್ಥಾಪನೆಯನ್ನು ಮಾಡಬೇಕು.

೮೭. ಬಳಿಕ ಅರ್ಚಕನು ಪುರದ ಹೊರಗಡೆಯಲ್ಲಿ ಎಂಟು ಗ್ರಹಗಳನ್ನು ತಮ್ಮ ತಮ್ಮ ದಿಕ್ಕುಗಳಲ್ಲಿ ತಮ್ಮ ತಮ್ಮ ರಥಗಳನ್ನು ಹತ್ತಿ ನಿಂತವರಾಗಿ ಸ್ಥಾಪನೆಮಾಡಬೇಕು.

೮೮. ಪೂರ್ವದಿಕ್ಕಿನಲ್ಲಿ ಭಾಸ್ಕರ (ಸೂರ್ಯ)ನನ್ನು ಸ್ಥಾಪಿಸಬೇಕು. ಅವನು ಹಳದಿ ಬಟ್ಟೆಯನ್ನುಟ್ಟವನು; ಸಿಂಧೂರದಂತೆ ಮೈಬಣ್ಣವುಳ್ಳವನು; ಎರಡು ತೋಳುಗಳುಳ್ಳವನು; ಕೈಯಲ್ಲಿ ಪದ್ಮವನ್ನು ಹಿಡಿದಿರುವವನು; ರಥದಲ್ಲಿ ನೆಲಸಿರುವವನು.

೮೯. ಅತಿ ತೇಜಶ್ಶಾಲಿಯಾದ ಅವನ ರಥಕ್ಕೆ ಹನ್ನೆರಡು ಆರೇಕಾಲುಗಳುಳ್ಳ ಒಂದೇ ಗಾಲಿಯಿರುವುದು. ಹಸುರುಬಣ್ಣದ ಏಳು ಕುದುರೆಗಳನ್ನು ಎಡಗಡೆಯಲ್ಲಿ ಹೂಡಿರುವುದು.

೯೦–೯೨. ಆಗ್ನೇಯಮೂಲೆಯಲ್ಲಿ ಬಿಳಿಯ ಬಣ್ಣದವನೂ, ಬಿಳಿಯ ಬಟ್ಟೆಯನ್ನುಟ್ಟವನೂ, ದಂಡಕಮಂಡಲುಗಳನ್ನು ಧರಿಸಿದವನೂ, ಎರಡು ತೋಳುಗಳುಳ್ಳವನೂ, ಸೌಮ್ಯವಾದ ನೋಟವುಳ್ಳವನೂ, ಚಿತ್ರವರ್ಣದ ಹತ್ತು ಕುದುರೆಗಳನ್ನು ಹೂಡಿದ ಹೊಂದೇರಿನ ಮೇಲೇರಿರುವವನೂ ಆದ ಭೃಗುವನ್ನು (ಶುಕ್ರನನ್ನು) ಸ್ಥಾಪಿಸಬೇಕು. ದಕ್ಷಿಣಕ್ಕಿನಲ್ಲಿ ರಕ್ತವರ್ಣನೂ, ರಕ್ತಾಂಬರಧಾರಿಯೂ,

**ಚಿತ್ರವರ್ಣಾಶ್ವದಶಕೇ ಸ್ಥಿತೋ ಹೇಮಮಯೇ ರಥೇ ।**
**ದಕ್ಷಿಣೇ ಚ ನ್ಯಸೇದ್ಭೌಮಂ ರಕ್ತಂ ರಕ್ತಾಂಬರಂ ತಥಾ ॥ ೯೧ ॥**
**ಚತುರ್ಭುಜಂ ಗದಾಶಕ್ತಿತ್ರಿಶೂಲವರಧಾರಿಣಂ ।**
**ತಸ್ಯ ಹೈಮಂ ರಥಂ ಕುರ್ಯಾದರುಣಾಷ್ಟಹಯಾನ್ವಿತಂ ॥ ೯೨ ॥**
**ರಾಹುಶ್ಚ ನೈಋತೇ ಕೋಣೇ ನೀಲವಾಸಾಶ್ಚತುರ್ಭುಜಃ ।**
**ಕರಾಲಾಸ್ಯಸ್ತಮೋರೂಪಶ್ಚರ್ಮಾಸಿಶಕ್ತಿಶೂಲಧೃತ್ ॥ ೯೩ ॥**
**ಭೃಂಗವರ್ಣಾಷ್ಟತುರಗೇ ಸ್ಥಿತಃ ಕಾರ್ಷ್ಣಾಯಸೇ ರಥೇ ।**
**ಸೌರಿಶ್ಚ ಪಶ್ಚಿಮೇ ಸ್ಥಾಪ್ಯ ಇಂದ್ರನೀಲಸಮದ್ಯುತಿಃ ॥ ೯೪ ॥**
**ಧನ್ವೀ ತ್ರಿಶೂಲೀ ದ್ವಿಭುಜೋ ಮಂದಾಕ್ಷಶ್ಚಾಸಿತಾಂಬರಃ ।**
**ಶಬಲಾಷ್ಟಾಶ್ವಸಂಯುಕ್ತೇ ಸ್ಥಿತಃ ಕಾರ್ಷ್ಣಾಯಸೇ ರಥೇ ॥ ೯೫ ॥**
**ವಾಯುಕೋಣೇ ತತಶ್ಚಂದ್ರಂ ಸ್ಥಾಪಯೇಚ್ಚ ಸಿತಾಂಬರಂ ।**
**ಶ್ವೇತವರ್ಣಂ ಗದಾಹಸ್ತಂ ದ್ವಿಭುಜಂ ಚ ರಥೇ ಸ್ಥಿತಂ ॥ ೯೬ ॥**
**ಶತಾರಚಕ್ರಸಿತಯೇ ಸ್ಯಂದನೇ ತಸ್ಯ ಚಾಮ್ಮಯೇ ।**
**ಕುಂದಾಭಾಃ ಸಂತ್ಯುಭಯತೋ ಯೋಜಿತಾಸ್ತುರಗಾ ದಶ ॥ ೯೭ ॥**

---

ಚತುರ್ಭುಜಗಳುಳ್ಳವನೂ, ಅವುಗಳಲ್ಲಿ ಗದೆ, ಶಕ್ತಿ, ತ್ರಿಶೂಲ ಮತ್ತು ವರದಮುದ್ರೆಗಳನ್ನು ಧರಿಸಿರುವವನೂ ಆದ ಕುಜನನ್ನು ಸ್ಥಾಪಿಸಬೇಕು. ಅವನಿಗೆ ಅರುಣವರ್ಣದ ಎಂಟು ಕುದುರೆಗಳನ್ನು ಹೂಡಿದ ಚಿನ್ನದ ರಥವನ್ನು ಮಾಡಬೇಕು.

೯೩-೯೫. ನೈರುತ್ಯಮೂಲೆಯಲ್ಲಿ ರಾಹುವನ್ನು ನಿರ್ಮಿಸಬೇಕು. ಅವನು ನೀಲವಸ್ತ್ರಗಳನ್ನುಟ್ಟವನು; ಚತುರ್ಭುಜಗಳುಳ್ಳವನು; ಕರಾಳವಾದ ಮುಖವುಳ್ಳವನು; ತಮೋರೂಪನಾದವನು; ಕೈಗಳಲ್ಲಿ ಗುರಾಣಿ, ಕತ್ತಿ, ಶಕ್ತಿ ಮತ್ತು ಶೂಲಗಳನ್ನು ಹಿಡಿದಿರುವವನು. ಈ ರಾಹುವನ್ನು ಭೃಂಗವರ್ಣದ ಎಂಟು ಕುದುರೆಗಳು ಕಟ್ಟಿದ ಕಬ್ಬಿಣದ ರಥದಲ್ಲಿ ಕುಳಿತವನಂತೆ ನಿರ್ಮಿಸಬೇಕು. ಪಶ್ಚಿಮ ದಿಕ್ಕಿನಲ್ಲಿ ಸೂರ್ಯಪುತ್ರನಾದ ಶನಿಯನ್ನು ಸ್ಥಾಪಿಸಬೇಕು. ಅವನು ಇಂದ್ರನೀಲಕ್ಕೆ ಸಮನಾದ ದೇಹಕಾಂತಿಯುಳ್ಳವನು, ಎರಡು ಭುಜಗಳುಳ್ಳವನು, ಧನುಸ್ಸನ್ನೂ ತ್ರಿಶೂಲವನ್ನೂ ಧರಿಸಿರುವವನು, ಮಂದವಾದ ಕಣ್ಣುಗಳುಳ್ಳವನು, ಕಪ್ಪುಬಟ್ಟೆಯನ್ನುಟ್ಟವನು, ಶಬಲವರ್ಣದ ಎಂಟು ಕುದುರೆಗಳು ಕಟ್ಟಿದ ಕರಿ ಕಬ್ಬಿಣದ ರಥದಲ್ಲಿ ನೆಲಸಿದವನು.

೯೬. ವಾಯುವ್ಯಕೋಣದಲ್ಲಿ ಶ್ವೇತಾಂಬರನೂ, ಶ್ವೇತವರ್ಣನೂ, ಗದೆಯನ್ನು ಕೈಯಲ್ಲಿ ಹಿಡಿದವನೂ, ಎರಡು ಭುಜಗಳುಳ್ಳವನೂ, ರಥಾರೂಢನೂ ಆದ ಚಂದ್ರನನ್ನು ಸ್ಥಾಪಿಸಬೇಕು.

೯೭. ನೂರು ಅರೇ ಕಾಲುಗಳಿಂದ ಕೂಡಿದ ಮೂರು ಚಕ್ರಗಳುಳ್ಳ

ಉತ್ತರೇ ದ್ವಿಭುಜಃ ಸೌಮ್ಯೋ ವರಾಭಯಕರೋಽರುಣಃ ।
ಹರಿದ್ವಾಸಾಷ್ಟಪಿಂಗಾಶ್ವೇ ಕಾರ್ಯೋ ಹೈಮರಥೇ ಸ್ಥಿತಃ ॥ ೯೮ ॥
ಈಶಾನೇ ಚ ಗುರುಃ ಸ್ಥಾಪ್ಯೋ ಹೇಮವರ್ಣಃ ಸಿತಾಂಬರಃ ।
ದ್ವಿಭುಜಃ ಪದ್ಮನಯನೋ ಧೃತದಂಡಕಮಂಡಲುಃ ।
ಪಾಂಡುರಾಷ್ಟಹಯೇ ಹೈಮೇ ನಿಷಣ್ಣಃ ಸ್ಯಂದನೋತ್ತಮೇ ॥ ೯೯ ॥
ಅಂಗದೇವಾನ್ ಭಗವತಃ ಸ್ಥಾಪಯೇದಿತ್ಥಮರ್ಚಕಃ ।
ಕರ್ಣಿಕಾದ್ರಿ ಪುರಾಂತಾಂತಸ್ಥಾನೇಷು ಕ್ರಮಶೋಽಖಿಲಾನ್ ॥ ೧೦೦ ॥
ವಾಸುದೇವಾಂಗದೇವಾನಾಂ ನ್ಯಸೇನ್ಮೂರ್ತೀಸ್ತು ವೈಭವೀ ।
ಪೂಗಫಲಾನೀತರಸ್ತು ನ್ಯಸೇತ್ಪುಷ್ಪಾಕ್ಷತಾದಿ ವಾ ॥ ೧೦೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಪೂಜಾಮಂಡಲವಿಧಿ ನಿರೂಪಣಂ"ನಾಮ ಸಪ್ತವಿಂಶೋಽಧ್ಯಾಯಃ

---

ಜಲಮಯವಾದ ಅವನ ರಥಕ್ಕೆ ಕುಂದಪುಷ್ಪಸಮಾನವಾದ ಹತ್ತು ಕುದುರೆಗಳನ್ನು ಎರಡು ಕಡೆಗಳಲ್ಲೂ ಹೂಡಲಾಗಿರಬೇಕು.

೯೮. ಉತ್ತರದಿಕ್ಕಿನಲ್ಲಿ ಎರಡು ಭುಜಗಳುಳ್ಳವನೂ, ವರ ಮತ್ತು ಅಭಯ ಮುದ್ರೆಗಳನ್ನು ತಳೆದವನೂ, ಅರುಣವರ್ಣನೂ, ಹಸುರುಬಟ್ಟೆಯುಟ್ಟವನೂ, ಪಿಂಗವರ್ಣದ ಎಂಟು ಕುದುರೆಗಳನ್ನು ಹೂಡಿದ ಚಿನ್ನದ ತೇರಿನಲ್ಲಿ ನೆಲಸಿದವನೂ ಆದ ಬುಧನನ್ನು ಸ್ಥಾಪಿಸಬೇಕು.

೯೯. ಈಶಾನ್ಯಮೂಲೆಯಲ್ಲಿ ಹೊಂಬಣ್ಣವುಳ್ಳವನೂ, ಬಿಳಿಯ ಬಟ್ಟೆಯನ್ನುಟ್ಟವನೂ, ಎರಡು ಭುಜಗಳುಳ್ಳವನೂ, ದಂಡಕಮಂಡಲುಗಳನ್ನು ಧರಿಸಿದವನೂ, ಪದ್ಮದಂತೆಸೆಯುವ ಕಣ್ಣುಗಳುಳ್ಳವನೂ, ಪಾಂಡುರ (ಸ್ವಲ್ಪ ಬಿಳಿಯ) ವರ್ಣದ ಎಂಟು ಕುದುರೆಗಳು ಕಟ್ಟಿದ ಅತ್ಯುತ್ತಮವಾದ ಹೊನ್ನತೇರಿನಲ್ಲಿ ಕುಳಿತಿರುವವನೂ ಆದ ಗುರುವನ್ನು ಸ್ಥಾಪಿಸಬೇಕು.

೧೦೦–೧೦೧. ಈ ರೀತಿಯಾಗಿ ಅರ್ಚಕನು ಕರ್ಣಿಕೆ, ಅದ್ರಿ (ಬೆಟ್ಟ), ಪುರ (ಪಟ್ಟಣ), ಇವುಗಳ ಅಂತ (ಕೊನೆ), ಮತ್ತು ಅಂತಸ್ಥಾನಗಳು (ನಡುವಣ ಪ್ರದೇಶಗಳು) ಇವುಗಳಲ್ಲಿ ಕ್ರಮವಾಗಿ ಭಗವಂತನ ಅಂಗದೇವತೆಗಳೆಲ್ಲರನ್ನೂ ಸ್ಥಾಪಿಸಬೇಕು. ವಾಸುದೇವನ ಅಂಗದೇವತೆಗಳಿಗೆ ಬಹಳ ವೈಭವದ ಮೂರ್ತಿಗಳನ್ನೂ ಇಡಬೇಕು. ಇಲ್ಲವಾದರೆ ಪೂಗಫಲಗಳನ್ನು (ಅಡಕೆಕಾಯಿಗಳನ್ನು) ಇಡಬೇಕು. ಅಥವಾ ಪುಷ್ಪ ಅಕ್ಷತೆ ಮೊದಲಾದುವನ್ನಾದರೂ ಇಡಬೇಕು.''

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ ''ಪೂಜಾಮಂಡಲವಿಧಿನಿರೂಪಣ''ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟವಿಂಶೋಽಧ್ಯಾಯಃ

### ಶ್ರೀರಾಧಾಕೃಷ್ಣಸ್ವರೂಪಧ್ಯಾನನಿರೂಪಣಂ

ಶ್ರೀ ನಾರಾಯಣ ಉವಾಚ :—

ಆಚಮ್ಯ ಪ್ರಾಣಾನಾಯಮ್ಯ ತತೋಽಸೌ ಸ್ವಸ್ಥಮಾನಸಃ ।
ನಮಸ್ಕೃತ್ಯೇಷ್ಟದೇವಾದೀನ್ ದೇಶಕಾಲೌ ಚ ಕೀರ್ತಯೇತ್ ॥ ೧ ॥
ಏಕಾಂತಧರ್ಮಸಿದ್ಧ್ಯರ್ಥಂ ವಾಸುದೇವಸ್ಯ ಪೂಜನಂ ।
ಕರಿಷ್ಯ ಇತಿ ಸಂಕಲ್ಪ್ಯ ಕುರ್ಯಾನ್ನ್ಯಾಸವಿಧಿಂ ತತಃ ॥ ೨ ॥
ನ್ಯಾಸೇ ಮಂತ್ರಾ ದ್ವಾದಶಾರ್ಣೋ ಗಾಯತ್ರೀ ವೈಷ್ಣವೀ ತಥಾ ।
ನಾರಾಯಣಾಷ್ಟಾಕ್ಷರಶ್ಚ ಜ್ಞೇಯಾ ವಿಷ್ಣುಷಡಕ್ಷರಃ ॥ ೩ ॥
ಏತೇ ದ್ವಿಜಾನಾಂ ವಿಹಿತಾಃ ತದನ್ಯೇಷಾಂ ತ್ವಿಹ ತ್ರಯಃ ।
ವಾಸುದೇವಾಷ್ಟಾಕ್ಷರಶ್ಚ ಹರಿಪಂಚಾಕ್ಷರಸ್ತಥಾ ।
ಷಡರ್ಣಃ ಕೇಶವಸ್ಯೇತಿ ನ್ಯಾಸೇ ಹೋಮೇ ಚ ಸಮ್ಮತಾಃ ॥ ೪ ॥
ಶ್ರೀವಿಷ್ಣುಪ್ರತಿಮಾಂಗೇಷು ಸ್ವಾಂಗೇಷ್ವಿವ ತತೋಽಖಿಲಾನ್ ।
ಕುರ್ಯಾನ್ನ್ಯಾಸಾಂಶ್ಚ ತೈರ್ಮಂತ್ರೈಃ ತತೋಽರ್ಚಾಂ ವಾಸಸಾಽಽವೃಜೇತ್

---

### ಕನ್ನಡದ ಅನುವಾದ

#### ಶ್ರೀರಾಧಾಕೃಷ್ಣಸ್ವರೂಪಧ್ಯಾನನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ:— "ಆ ಬಳಿಕ ಅರ್ಚಕನು ಆಚಮನಮಾಡಿ ಪ್ರಾಣಾಯಾಮಮಾಡಿ ಸ್ವಸ್ಥವಾದ ಮನಸ್ಸುಳ್ಳವನಾಗಿ ಇಷ್ಟದೇವತೆ ಮೊದಲಾದವರಿಗೆ ನಮಸ್ಕಾರಮಾಡಿ ದೇಶ ಕಾಲಗಳನ್ನು ಹೇಳಬೇಕು (ಘೋಷಿಸಬೇಕು).

೨. 'ಏಕಾಂತಧರ್ಮದ ಸಿದ್ಧಿಗೋಸ್ಕರವಾಗಿ ವಾಸುದೇವನ ಪೂಜೆಯನ್ನು ಮಾಡುತ್ತೇನೆ' ಎಂದು ಸಂಕಲ್ಪಮಾಡಿ ಬಳಿಕ ನ್ಯಾಸವಿಧಿಯನ್ನು ಮಾಡಬೇಕು.

೩. ದ್ವಾದಶಾಕ್ಷರ, ವಿಷ್ಣುಸಂಬಂಧವಾದ ಗಾಯತ್ರಿ, ನಾರಾಯಣಾಷ್ಟಾಕ್ಷರ ಮತ್ತು ವಿಷ್ಣುಷಡಕ್ಷರ ಇವು ನ್ಯಾಸದಲ್ಲಿ ಉಪಯೋಗಿಸಬೇಕಾದ ಮಂತ್ರಗಳೆಂದು ತಿಳಿಯತಕ್ಕುದು.

೪. ಇವು ದ್ವಿಜರಿಗೆ ವಿಧಿಸಿರುವವುಗಳು. ದ್ವಿಜರಲ್ಲದ ಇತರರಿಗೆ ವಾಸುದೇವನ ಅಷ್ಟಾಕ್ಷರ, ಹರಿಪಂಚಾಕ್ಷರ, ಕೇಶವನ ಷಡಕ್ಷರ ಈ ಮೂರೂ ನ್ಯಾಸದಲ್ಲಿಯೂ, ಹೋಮದಲ್ಲಿಯೂ ಸಮ್ಮತಗಳಾಗಿರುವುವು.

೫. ತನ್ನ ಅಂಗಗಳಲ್ಲಿ ಹೇಗೋ ಹಾಗೆಯೇ ಶ್ರೀವಿಷ್ಣುಪ್ರತಿಮೆಯ ಅಂಗಗಳಲ್ಲಿಯೂ ಆ ಆ ಮಂತ್ರಗಳಿಂದ ನ್ಯಾಸವನ್ನು ಮಾಡಬೇಕು. ಬಳಿಕ ಅರ್ಚನೆ ಮಾಡಬೇಕು. ತರುವಾಯ ವಸ್ತ್ರದಿಂದ ಆ ಮೂರ್ತಿಯನ್ನು ಒರಿಸಬೇಕು.

ಕಲಶಂ ವಾಮಭಾಗೇ ಸ್ವೇ ಸಂಸ್ಥಾಪ್ಯಾವಾಹ್ಯ ತತ್ರ ಚ ।
ತೀರ್ಥಾನಿ ಗಂಧಪುಷ್ಪಾದ್ಯೈರುಪಚಾರೈಸ್ತಮರ್ಚಯೇತ್ ॥ ೬ ॥
ಪೂಜಾದ್ರವ್ಯಾಣಿ ಚಾತ್ಮಾನಂ ಪ್ರೋಕ್ಷಯಿತ್ವಾ ತದಂಬುನಾ ।
ಶಂಖಂ ಘಂಟಾಂ ಚ ಸಂಪೂಜ್ಯ ಭೂತಶುದ್ಧಿಂ ಸಮಾಚರೇತ್ ॥ ೭ ॥
ಆಭ್ಯಂತರಾಗ್ನಿವಾಯುಭ್ಯಾಂ ದಗ್ಧ್ವಾ ಪಾಪಾತ್ಮಕಂ ವಪುಃ ।
ಶುದ್ಧಸ್ಯ ಸ್ವಾತ್ಮನಸ್ತ್ವೈಕ್ಯಂ ಭಾವಯೇದ್ಬ್ರಹ್ಮಣೋ ಸ್ಥಿರಃ ॥ ೮ ॥
ತತೋಽಕ್ಷರಬ್ರಹ್ಮರೂಪೋ ರಾಧಾಕೃಷ್ಣಂ ಹೃದಿ ಪ್ರಭುಂ ।
ಧ್ಯಾಯೇದವ್ಯಗ್ರಮನಸಾ ಪ್ರಾಣಾಯಾಮಂ ಸಮಾಚರನ್ ॥ ೯ ॥
ಅಧೋಮುಖಂ ನಾಭಿಪದ್ಮಂ ಕದಲೀಪುಷ್ಪವತ್ಸ್ಥಿತಂ ।
ವಿಭಾವ್ಯಾಪಾನಪವನಂ ಪ್ರಾಣೇನೈಕ್ಯಮುಪಾನಯೇತ್ ॥ ೧೦ ॥
ಪದ್ಮನಾಲೇ ತಮಾನೀಯ ಸಹತೇನ ತದಂಬುಜಂ ।
ಆಕರ್ಷೇದೂರ್ಧ್ವಮಥ ತನ್ನದತ್ತೀವ್ರಮುಪೈತಿಹೃತ್ ।
ಪ್ರಫುಲ್ಲತಿ ಚ ತತ್ರೈತತ್ ಹೃದಯಾಕಾಶ ಉಲ್ಲಸತ್ ॥ ೧೧ ॥

---

೬. ಮೊದಲು ಕಲಶವನ್ನು ತನ್ನ ಎಡಭಾಗದಲ್ಲಿ ಇಟ್ಟುಕೊಂಡು ಅದರಲ್ಲಿ ತೀರ್ಥಗಳನ್ನು ಆವಾಹನೆಮಾಡಿ ಆ ಕಲಶವನ್ನು ಗಂಧಪುಷ್ಪಾದಿ ಉಪಚಾರಗಳಿಂದ ಅರ್ಚಿಸಬೇಕು.

೭. ಆ ನೀರಿನಿಂದಲೇ ಪೂಜಾದ್ರವ್ಯಗಳನ್ನೂ, ತನ್ನನ್ನೂ ಪ್ರೋಕ್ಷಿಸಿ, ಶಂಖವನ್ನೂ ಘಂಟೆಯನ್ನೂ ಪೂಜಿಸಿ ಭೂತಶುದ್ಧಿಯನ್ನು ಮಾಡಬೇಕು.

೮. ಆಭ್ಯಂತರವಾದ ಅಗ್ನಿ ಮತ್ತು ವಾಯುಗಳಿಂದ ಪಾಪರೂಪವಾದ ಶರೀರವನ್ನು ಸುಟ್ಟುಹಾಕಿ ಸ್ಥಿರನಾಗಿ ಕುಳಿತು, ಶುದ್ಧವಾದ ತನ್ನ ಆತ್ಮಕ್ಕೆ ಬ್ರಹ್ಮದೊಡನೆ ಐಕ್ಯವನ್ನು ಭಾವಿಸಬೇಕು.

೯. ಬಳಿಕ ಅಕ್ಷರಬ್ರಹ್ಮರೂಪನಾಗಿ ಮನಸ್ಸಿನ ಕಳವನ್ನು ತೊರೆದು ಪ್ರಾಣಾಯಾಮವನ್ನು ಮಾಡುತ್ತ ಹೃದಯಕಮಲದಲ್ಲಿ ಪ್ರಭುವಾದ ರಾಧಾಕೃಷ್ಣನನ್ನು ಧ್ಯಾನಮಾಡಬೇಕು.

೧೦. ನಾಭಿಕಮಲವು ಬಾಳೆಯ ಹೂವಿನಂತೆ ಅಧೋಮುಖವಾಗಿರುವುದು. ಅಪಾನವಾಯುವನ್ನು ಬಂಧಿಸಿ ಅದನ್ನು ಪ್ರಾಣವಾಯುವಿನೊಡನೆ ಐಕ್ಯಗೊಳಿಸಬೇಕು.

೧೧. ಪದ್ಮನಾಳದ ಮೂಲಕವಾಗಿ ವಾಯುವನ್ನು ತಂದು ಅದರಿಂದ ಆ ಹೃತ್ಪದ್ಮವನ್ನು ಮೇಲಕ್ಕೆ ಆಕರ್ಷಿಸಬೇಕು. ಆಗ ಅದು ತೀವ್ರವಾದ ನಾದವನ್ನುಂಟುಮಾಡುತ್ತ ಹೃದಯವನ್ನು ಸೇರುತ್ತದೆ. ಅಲ್ಲಿ ಹೃದಯಾಶಯದಲ್ಲಿ ಬೆಳಬೆಳಗುತ್ತ ಪ್ರಫುಲ್ಲವಾಗುತ್ತದೆ.

ತೇಜೋರಾಶಿಮಯೇ ತತ್ರ ತತೋಽಪ್ಯಧಿಕತೇಜಸಾ ।
ದರ್ಶನೀಯತಮಂ ಶಾಂತಂ ಧ್ಯಾಯೇಚ್ಛ್ರೀರಾಧಿಕಾಪತಿಂ ॥ ೧೨ ॥
ಉಪವಿಷ್ಟಂ ಸ್ಥಿತಂ ವಾ ತಂ ದಿವ್ಯಚಿನ್ಮಯವಿಗ್ರಹಂ ।
ಧ್ಯಾಯೇತ್ಕಿಶೋರವಯಸಂ ಕೋಟಿಕಂದರ್ಪಸುಂದರಂ ॥ ೧೩ ॥
ರೂಪಾನುರೂಪಸಂಪೂರ್ಣದಿವ್ಯಾವಯವಲಕ್ಷಿತಂ ।
ಶರಚ್ಚಂದ್ರಾವದಾತಾಂಗಂ ದೀರ್ಘಚಾರುಭುಜದ್ವಯಂ ॥ ೧೪ ॥
ಆರಕ್ತಕೋಮಲತಲರಮ್ಯಾಂಗುಲಿಪದಾಂಬುಜಂ ।
ತುಂಗಾರುಣಸ್ನಿಗ್ಧನಖದ್ಯುತಿಲಜ್ಜಾಯಿತೋಡುಪಂ ॥ ೧೫ ॥
ಶಿಂಜತ್ಕಿಂಕಿಣಿಮಂಜೀರ ಹಂಸಕಾಂಘ್ರಿಯುಗಶ್ರಿಯಂ ।
ಸುವೃತ್ತ ಜಂಘಾಯುಗಲಂ ಸಮಜಾನೂರು ಶೋಭನಂ ॥ ೧೬ ॥
ಸದ್ರತ್ನರಶನಾಬದ್ಧಪೀತಾಂಬರಕಟಿಶ್ರಿಯಂ ।
ಉತ್ತುಂಗಕುಕ್ಷಿನಾಭ್ಯಂತರ್ನಿಮ್ನನಾಭಿವಲಿತ್ರಯಂ ॥ ೧೭ ॥

---

೧೨. ತೇಜೋರಾಶಿಮಯವಾದ ಆ ಹೃದಯಪದ್ಮದಲ್ಲಿ ಅದಕ್ಕಿಂತಲೂ ಅಧಿಕವಾದ ತೇಜಸ್ಸಿನಿಂದ ಬೆಳಗುತ್ತ ದರ್ಶನೀಯತಮನಾಗಿರುವ ಶಾಂತ ಸ್ವರೂಪಿಯಾದ ಶ್ರೀರಾಧಾರಮಣನನ್ನು ಧ್ಯಾನಿಸಬೇಕು.

೧೩. ದಿವ್ಯಚಿನ್ಮಯದೇಹವುಳ್ಳವನಾಗಿ ಕೋಟಿಮನ್ಮಥರಂತೆ ಸುಂದರನಾಗಿ ಕಿಶೋರವಯಸ್ಸಿನವನಾದ ಆ ರಾಧಿಕಾಪತಿಯು ಕುಳಿತಿರುವಂತಾಗಲಿ, ನಿಂತಿರುವಂತಾಗಲಿ ಧ್ಯಾನಿಸಬೇಕು.

೧೪. ಆ ರಾಧಾರಮಣನು ತನ್ನ ರೂಪಕ್ಕೆ ಅನುರೂಪವೂ ಸಂಪೂರ್ಣವೂ ಆದ ದಿವ್ಯಾವಯವಗಳನ್ನು ತಳೆದಿರುವನು. ಶರಚ್ಚಂದ್ರನಂತೆ ಬೆಳ್ಳಗೆ ಬೆಳಗುವ ಅಂಗಗಳುಳ್ಳವನು. ಮನೋಹರವಾದ ದೀರ್ಘಭುಜದ್ವಯಗಳುಳ್ಳವನು.

೧೫. ಕೆಂಪೇರಿ ಕೋಮಲವಾಗಿರುವ ಅಂಗಾಲುಗಳಿಂದಲೂ, ರಮ್ಯವಾದ ಬೆರಳುಗಳಿಂದಲೂ ಅವನ ಪಾದಪದ್ಮವು ರಂಜಿಸುತ್ತಿರುವುದು. ತನ್ನ ಉಗುರುಗಳಿಂದ ಹೊರಹೊಮ್ಮುವ ಅರುಣವರ್ಣದ ಸ್ನಿಗ್ಧಕಾಂತಿಯಿಂದ ನಕ್ಷತ್ರಪಾತಿಯಾದ ಚಂದ್ರನನ್ನು ಲಜ್ಜೆಗೀಡುಮಾಡುತ್ತಿರುವುದು.

೧೬–೧೭. ಘಲುಘಲುನೆ ಇನಿದನಿಗೈಯುವ ಕಿರುಗೆಜ್ಜೆಗಳಿಂದ ಕೂಡಿದ ಮಂಜೀರ ಹಂಸಕಗಳನ್ನು ಧರಿಸಿ ಅವನ ಹೆಜ್ಜೆಗಳು ಕಳೆಯೆರಚುತ್ತಿರುವುವು. ದುಂಡಗಿರುವ ಜಂಘೆ (ಮೀನಖಂಡ)ಗಳಿಂದಲೂ, ಸಮವಾದ ಮೊಳಕಾಲು ತೊಡೆಗಳಿಂದಲೂ ಅವನು ಶೋಭಿಸುತ್ತಿರುವನು. ಶ್ರೇಷ್ಠರತ್ನದ ಉಡಿದಾರದಿಂದ ಕಟ್ಟಿ ನಿಲ್ಲಿಸಿದ ಪೀತಾಂಬರದಿಂದೆಸೆಯುವ ಕಟಿಪ್ರದೇಶ (ಸೊಂಟ)ವುಳ್ಳವನು. ಎತ್ತರವಾಗಿರುವ ಹೊಟ್ಟೆಯ ನಡುವೆ ಒಳಗೆ ಆಳವಾಗಿರುವ ನಾಭಿಯಿಂದಲೂ, ವಲಿತ್ರಯದಿಂದಲೂ ಪ್ರಕಾಶಿಸುತ್ತಿರುವನು.

**ವಿತತೋತ್ತುಂಗಹೃದಯಂ ಶ್ರೀವತ್ಸಾವರ್ತಶೋಭಿತಂ ।**
**ಲಲಂತೀಗುಚ್ಛಗುಚ್ಛಾರ್ಧದೇವಚ್ಛಂದಾದಿಭೂಷಿತಂ ॥ ೧೮ ॥**
**ನಾನಾಸುಗಂಧಿಪುಷ್ಪಸ್ರಕ್ ಸ್ವರ್ಣಯಜ್ಞೋಪವೀತಿನಂ ।**
**ಉನ್ನಿದ್ರಶೋಣಪದ್ಮಾಭಕರಕಂಕಣಭೂಷಣಂ ॥ ೧೯ ॥**
**ಸೂಕ್ಷ್ಮಪರ್ವಾಂಗುಲಿದ್ಯೋತನ್ನೈಕಸದ್ರತ್ನಮುದ್ರಿಕಂ ।**
**ನಿನಾದಯಂತಂ ಮಧುರಂ ವೇಣುಂ ಸರ್ವಮನೋಹರಂ ॥ ೨೦ ॥**
**ವಿಪುಲಾಂಸಂ ಗೂಢಜತ್ರುಂ ಮಹಾಬಾಹ್ವಂಗದದ್ಯುತಿಂ ।**
**ಭ್ರಮತ್ಸುಗಂಧಲುಬ್ಧಾಲಿಝುಂಕಾರಿತವನಸ್ರಜಂ ॥ ೨೧ ॥**
**ಕಂಬೂಪಮಗಲಭ್ರಾಜತ್ ಸದ್ಗ್ರೈವೇಯಕಕೌಸ್ತುಭಂ ।**
**ಶೋಭಮಾನಹನುಂ ಬಿಂಬೀಫಲಶೋಣಾಧರದ್ಯುತಿಂ ॥ ೨೨ ॥**
**ಸಿತಸ್ಮಿತಕಲಾರಾಜತ್ ಪೂರ್ಣಚಂದ್ರನಿಭಾನನಂ ।**
**ತಿಲಪುಷ್ಪಸಮಾಕಾರದರ್ಶನೀಯಸುನಾಸಿಕಂ ॥ ೨೩ ॥**

---

೧೮. ವಿಸ್ತಾರವಾಗಿಯೂ ಎತ್ತರವಾಗಿ ಉಬ್ಬಿಯೂ ಇರುವ ವಕ್ಷಸ್ಥಳವುಳ್ಳವನು, ಶ್ರೀವತ್ಸವೆಂಬ ಸುಳಿಯಿಂದ ಶೋಭಿಸುತ್ತಿರುವನು. (ಎದೆಯ ಮೇಲೆ ತೂಗಾಡುತ್ತಿರುವ) ಲಲಂತೀ, ಗುಚ್ಛ (ಗೊಂಡೆ), ಗುಚ್ಛಾರ್ಧ, ದೇವಚ್ಛಂದ ಮೊದಲಾದ ಭೂಷಣಗಳಿಂದ ಭೂಷಿತನಾಗಿರುವನು.

೧೯. ಸುಗಂಧವನ್ನು ಬೀರುವ ನಾನಾ ಬಗೆಯ ಪುಷ್ಪಹಾರಗಳನ್ನು ಧರಿಸಿರುವನು. ಸ್ವರ್ಣಯಜ್ಞೋಪವೀತವನ್ನು ತಳೆದಿರುವನು. ಆಗತಾನೆ ತೆರದರಳುತ್ತಿರುವ ಕೆಂದಾವರೆಯಂತೆ ಮೆರೆಯುವ ಕೈಗಳಲ್ಲಿ ಕಂಕಣಾದಿ ಭೂಷಣಗಳನ್ನು ತಳೆದಿರುವನು.

೨೦. ಸೂಕ್ಷ್ಮವಾದ ಗಿಣ್ಣುಗಳುಳ್ಳ ಬೆರಳುಗಳಲ್ಲಿ ಥಳಥಳಿಸುತ್ತಿರುವ ಅನೇಕ ಶ್ರೇಷ್ಠರತ್ನಮುದ್ರಿಕೆಗಳನ್ನು ಧರಿಸಿ ಸರ್ವಮನೋಹರವಾಗಿ ಕೊಳಲನ್ನು ನುಡಿಸುತ್ತಿರುವನು.

೨೧. ಉಬ್ಬಿದ ಹೆಗಲುಳ್ಳವನು; ಒಳಗಡಗಿ ಮರೆಯಾಗಿರುವ ಹೆಗಲುಬ್ಬಿಯುಳ್ಳವನು. ತನ್ನ ನಿಡುತೋಳುಗಳಲ್ಲಿ ತಳೆದ ತೋಳ್ಬಳೆಗಳ ಬೆಳಗಿನಿಂದ ಬೆಳಗುತ್ತಿರುವನು. ಸುತ್ತಿಸುತ್ತಿ ಬಂದು ಮುತ್ತುತ್ತಿರುವ ದುಂಬಿಗಳ ಝುಂಕಾರದಿಂದ ನಾದಮಯವಾಗಿರುವ ವನಮಾಲೆಗಳನ್ನು ಧರಿಸಿರುವನು.

೨೨. ಶಂಖಕ್ಕೆಣೆಯಾದ ಕುತ್ತಿಗೆಯಲ್ಲಿ ಹೊಳೆಹೊಳೆಯುವ ಗ್ರೈವೇಯಕ (ಅಡ್ಡಿಕೆ) ಮತ್ತು ಕೌಸ್ತುಭಗಳನ್ನು ತಳೆದಿರುವನು. ಶುಭಕಪೋಲಗಳುಳ್ಳವನು. ತೊಂಡೆಹಣ್ಣಿನಂತೆ ಕೆಂಪಾದ ತುಟಿಗಳಿಂದ ರಂಜಿಸುತ್ತಿರುವನು.

೨೩. ಬೆಳ್ಪಿರಚುವ ಮುಗುಳುನಗೆಯಿಂದ ಕೂಡಿ, ಕಲೆಗಳಿಂದ ರಂಜಿಸುವ

ಸಮಾನಕರ್ಣವಿಭ್ರಾಜನ್ಮಕರಾಕೃತಿಕುಂಡಲಂ ।
ಕರ್ಣೋಪರಿ ಲಸಚ್ಚಿತ್ರಪುಷ್ಪಗುಚ್ಛಾವತಂಸಕಂ ॥ ೨೪ ॥
ಸಮಸೂಕ್ಷ್ಮರದಜ್ಯೋತ್ಸ್ನೋಲ್ಲಸದ್ಗಂಡಸ್ಥಲಶ್ರಿಯಂ ।
ಪದ್ಮಪತ್ರಾಯತಾರಕ್ತಪ್ರಾಂತರಮ್ಯವಿಲೋಚನಂ ॥ ೨೫ ॥
ಪೃಥುತುಂಗಲಲಾಟಂ ಚ ಕಾಮಚಾಪಾಯಿತಭ್ರುವಂ ।
ವಕ್ರಸೂಕ್ಷ್ಮಾಸಿತಸ್ನಿಗ್ಧಮನೋಹರಶಿರೋರುಹಂ ॥ ೨೬ ॥
ನಾನಾಸದ್ರತ್ನಖಚಿತಕಿರೀಟಧೃತಶೇಖರಂ ।
ಪ್ರೇಮ್ಣಾ ನಿಜಂ ವೀಕ್ಷಮಾಣಂ ಪ್ರಸನ್ನಂ ಸ್ನಿಗ್ಧಯಾ ದೃಶಾ ॥ ೨೭ ॥
ಧ್ಯಾತ್ವೇತ್ಥಂ ಕೃಷ್ಣಮಥ ತದ್ವಾಮೇ ರಾಧಾಂ ವಿಚಿಂತಯೇತ್ ।
ದ್ವಿಭುಜಾಂ ಸ್ವರ್ಣಗೌರಾಂಗೀಂ ಕೌಸುಂಭಾಮಲವಾಸಸಂ ॥ ೨೮ ॥

---

ಪೂರ್ಣಚಂದ್ರನಿಗೆ ಸಮಾನವಾದ ಮುಖದಿಂದ ಶೋಭಿಸುತ್ತಿರುವನು. ತಿಲಪುಷ್ಪಕ್ಕೆ ಸಮಾನವಾದ ಆಕಾರವುಳ್ಳುದಾಗಿ ದರ್ಶನೀಯವಾದ ನಾಸಿಕವನ್ನು ತಳೆದಿರುವನು.

೨೪. ಒಂದಕ್ಕೊಂದು ಸಮನಾಗಿರುವ ಕಿವಿಗಳಲ್ಲಿ ಹೊಳೆಹೊಳೆಯುವ ಮಕರಾಕಾರದ ಕುಂಡಲಗಳನ್ನು ಧರಿಸಿರುವನು. ಕಿವಿಗಳ ಮೇಲೆ ಚಿತ್ರವರ್ಣದ ಹೂಗೊಂಚಲಿನ ಅಲಂಕಾರಗಳಿಂದ ಭೂಷಿತನಾಗಿರುವನು.

೨೫. ಒಂದೇ ಸಮನಾಗಿಯೂ, ಸೂಕ್ಷ್ಮವಾಗಿಯೂ ಇರುವ ದಂತಪಂಕ್ತಿಯಿಂದ ಹೊರಹೊಮ್ಮುವ ಬೆಳುದಿಂಗಳಿನಿಂದ ಬೆಳಗುವ ಗಂಡಸ್ಥಲದ ಸೊಗಸುಳ್ಳವನು. ಪದ್ಮಪತ್ರದಂತೆ ವಿಸ್ತಾರವಾಗಿಯೂ, ಸುತ್ತಲೂ ಕೆಂಪಗಿರುವ ಅಂಚುಗಳಿಂದ ರಮ್ಯವಾಗಿಯೂ ಇರುವ ನೇತ್ರಗಳುಳ್ಳವನು.

೨೬. ದೊಡ್ಡದಾಗಿಯೂ, ಎತ್ತರವಾಗಿಯೂ ಇರುವ ಹಣೆಯುಳ್ಳವನು. ಕಾಮನಬಿಲ್ಲೋ ಎಂಬಂತಿರುವ ಹುಬ್ಬುಗಳುಳ್ಳವನು. ಸುರುಳಿ ಸುರುಳಿಯಾಗಿ ಸುತ್ತಿಕೊಂಡು ಸೂಕ್ಷ್ಮವಾಗಿ ಕಪ್ಪಾಗಿ ಮೃದುವಾಗಿರುವ ಮನೋಹರವಾದ ತಲೆಗೂದಲುಳ್ಳವನು.

೨೭. ಬಗೆ ಬಗೆಯ ಉತ್ತಮರತ್ನಗಳನ್ನು ಕೆತ್ತಿರುವ ಕಿರೀಟವನ್ನು ಧರಿಸಿರುವನು. ಪ್ರೇಮಪೂರ್ಣವಾದ ಸ್ನಿಗ್ಧದೃಷ್ಟಿಯಿಂದ ತನ್ನನ್ನು (ಅರ್ಚಕನನ್ನು) ನೋಡುತ್ತ ಪ್ರಸನ್ನನಾಗಿರುವನು.

೨೮. ಈ ರೀತಿ ಆ ಶ್ರೀಕೃಷ್ಣನನ್ನು ಧ್ಯಾನಮಾಡಿದ ಬಳಿಕ ಅವನ ಎಡಗಡೆಯಲ್ಲಿ ರಾಧೆಯನ್ನು ಧ್ಯಾನಿಸಬೇಕು. ಆಕೆಯು ಎರಡು ಭುಜಗಳುಳ್ಳವಳು; ಚಿನ್ನದಂತೆ ಗೌರವರ್ಣದ ಅಂಗಗಳುಳ್ಳವಳು; ನಿರ್ಮಲವಾದ ಕೌಸುಂಭವಸ್ತ್ರವನ್ನುಟ್ಟಿರುವವಳು.

ಸಮುತ್ಕರ್ಣೋಲ್ಲಸದ್ರತ್ನಭೂಷಣಾಂ ಶುಕನಾಸಿಕಾಂ ।
ಕಿಶೋರೀಂ ಮೃಗಶಾವಾಕ್ಷೀಂ ಪೀತೋನ್ನತಘನಸ್ತನೀಂ ॥ ೨೯ ॥
ಕೃಶಮಧ್ಯಾಂ ಪೃಥುಶ್ರೋಣೀಂ ರತ್ನಕಾಂಚೀವಿಭೂಷಿತಾಂ ।
ಅನೇಕದಿವ್ಯಾಭರಣಾಂ ವಿಕಚಾಬ್ಜಾನನಸ್ಮಿತಾಂ ॥ ೩೦ ॥
ರತ್ನಾಂಗುಲೀಯಕೇಯೂರಕಂಕಣಾದಿಲಸತ್ಕರಾಂ ।
ಶಿಂಜದ್ಧಂಸಕಮಂಜೀರ ಶೋಭಮಾನಾಂಘ್ರಿಪಂಕಜಾಂ ॥ ೩೧ ॥
ವಿಶಾಲಭಾಲವಿಲಸತ್ ಸತ್ಕಾಶ್ಮೀರಲಲಾಟಿಕಾಂ ।
ಬಿಂಬೋಷ್ಠೀಂ ಸುಕಪೋಲಾಂ ಚ ವೇಣೀಗ್ರಥಿತಮಾಲತೀಂ ॥ ೩೨ ॥
ಪ್ರೇಕ್ಷಮಾಣಾಂ ಪ್ರಭುಂ ಪ್ರೇಮ್ಣಾ ದಧಾನಾಮಂಬುಜಂ ಕರೇ ।
ಧ್ಯಾತ್ವೈವಂ ರಾಧಿಕಾಂ ತತ್ರ ಪ್ರಭುಮರ್ಚೇತ್ತಯಾಸಹ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀ ವಾಸುದೇವಮಾಹಾತ್ಮ್ಯೇ "ಶ್ರೀರಾಧಾಕೃಷ್ಣ ಸ್ವರೂಪಧ್ಯಾನನಿರೂಪಣಂ"ನಾಮಾಷ್ಟಾವಿಂಶೋಽಧ್ಯಾಯಃ

---

೨೯. ಒಂದಕ್ಕೊಂದು ಎಣೆಯಾಗಿರುವ ಕಿವಿಗಳಲ್ಲಿ ಥಳಥಳಿಸುವ ರತ್ನ ಭೂಷಣಗಳನ್ನು ಧರಿಸಿರುವಳು; ಗಿಣಿಮೂಗಿನವಳು; ಕಿಶೋರಾವಸ್ಥೆಯಲ್ಲಿ ರುವವಳು; ಜಿಂಕೆಮರಿಯಂತೆಸೆಯುವ ಕಣ್ಣುಗಳುಳ್ಳವಳು; ದಪ್ಪವಾಗಿ ಉಬ್ಬಿರುವ ಘನಸ್ತನಗಳುಳ್ಳವಳು.

೩೦. ಬಡನಡು, ಮತ್ತು ದಪ್ಪಪೊರವಾರುಗಳುಳ್ಳವಳು. ರತ್ನದೊಡ್ಯಾಣ ದಿಂದಲಂಕೃತಳಾದವಳು. ಅನೇಕ ದಿವ್ಯಾಭರಣಗಳನ್ನು ತೊಟ್ಟವಳು. ಅರಳಿದ ತಾವರೆಯಂತೆಸೆಯುತ್ತಿರುವ ಮುಖದಲ್ಲಿ ಎಳನಗೆಯನ್ನು ಸೂಸುತ್ತಿರುವವಳು.

೩೧. ರತ್ನದುಂಗುರ, ಕೇಯೂರ, ಕಂಕಣ ಮೊದಲಾದುವುಗಳಿಂದ ಮೆರೆಯುವ ಕೈಗಳುಳ್ಳವಳು. ಘಲ್ ಘಲ್ಲೆಂದು ಧ್ವನಿಮಾಡುತ್ತಿರುವ ಹಂಸಕ ಮಂಜೀರ (ರುಳಿ)ಗಳಿಂದ ಶೋಭಿಸುತ್ತಿರುವ ಪಾದಕಮಲಗಳುಳ್ಳವಳು.

೩೨. ವಿಶಾಲವಾದ ಹಣೆಯಲ್ಲಿ ಪ್ರಕಾಶಿಸುತ್ತಿರುವ ಕುಂಕುಮಕೇಸರಿಯ ತಿಲಕವನ್ನಿಟ್ಟಿರುವವಳು ತೊಂಡೆಯ ಹಣ್ಣನ್ನು ಹೋಲುವ ತುಟಿಗಳುಳ್ಳವಳು; ಸೊಗಸಾದ ಕಪೋಲಗಳಿಂದ ಶೋಭಿಸುತ್ತಿರುವವಳು. ಜಡೆಯಲ್ಲಿ ಮಾಲತಿ ಯನ್ನು ಸೇರಿಸಿ ಹೆಣೆದುಕೊಂಡಿರುವವಳು.

೩೩. ಪ್ರೇಮದಿಂದ ಪ್ರಭುವನ್ನೇ ನೋಡುತ್ತ ಕೈಯಲ್ಲಿ ಕಮಲವನ್ನು ತಳೆದು ಶೃಂಗಾರದಿಂದ ಮೆರೆಯುವ ಆ ರಾಧಿಕೆಯನ್ನು ಧ್ಯಾನಮಾಡಿ, ಆಕೆಯೊಡ ಗೂಡಿದ ಶ್ರೀಕೃಷ್ಣಪ್ರಭುವನ್ನು ಅರ್ಚಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಶ್ರೀರಾಧಾಕೃಷ್ಣಸ್ವರೂಪಧ್ಯಾನನಿರೂಪಣ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನತ್ರಿಂಶೋಽಧ್ಯಾಯಃ

## ಶ್ರೀವಾಸುದೇವಪೂಜಾವಿಧಿನಿರೂಪಣಂ

ಶ್ರೀ ನಾರಾಯಣ ಉವಾಚ :—

ಉಪಚಾರೈರ್ಬಹುವಿಧೈರ್ನಾನಸ್ಯೈಸ್ತಂ ಪ್ರಪೂಜ್ಯ ಸಃ ।
ಆವಾಹ್ಯಸ್ಥಾಪಯೇದ್ಭಕ್ತೋ ಮೂರ್ತೌ ಸ್ಥಾಪನಮುದ್ರಯಾ ॥ ೧ ॥
ತತಸ್ತದಂಗದೇವಾಂಶ್ಚ ತತ್ತನ್ಮಂತ್ರೈಃ ಪೃಥಕ್‌ಪೃಥಕ್ ।
ಆವಾಹ್ಯ ನಾಮಮಂತ್ರೈರ್ವಾ ಸುಪ್ರತಿಷ್ಠಾಪಯೇಚ್ಚ ಸಃ ॥ ೨ ॥
ಘಂಟಾದಿ ವಾದಯೇದ್ವಾದ್ಯಂ ಕುರ್ಯಾದ್ವಾ ತಾಲಿಕಾಧ್ವನಿಂ
ಸುಪ್ತೋತ್ಥಿತಮಿವಾಽಥೈನಂ ಕಾರಯೇದ್ದಂತಧಾವನಂ ॥ ೩ ॥
ಶ್ಯಾಮಾಕವಿಷ್ಣುಕ್ರಾಂತಾಭ್ಯಾಂ ದೂರ್ವಾಬ್ಜಾಭ್ಯಾಂ ಸಹೋದರಂ ।
ಪಾದ್ಯಮೇತತ್ಪ್ರಭೋರ್ದದ್ಯಾತ್ ತತೋಽರ್ಘ್ಯಾಚಮನೀಯಕೇ ॥ ೪ ॥
ಚಂದನಾಕ್ಷತಪುಷ್ಪಾಣಿ ದರ್ಭಾಗ್ರತಿಲಸರ್ಷಪಾನ್ ।
ಯವಾನ್ ದೂರ್ವಾಂ ಚಾರ್ಘ್ಯಪಾತ್ರೇ ನಿಕ್ಷಿಪೇದಂಬುನಾ ಭೃತೇ ॥ ೫ ॥

---

### ಕನ್ನಡದ ಅನುವಾದ

#### ಶ್ರೀವಾಸುದೇವಪೂಜಾವಿಧಿನಿರೂಪಣ

೧. ಶ್ರೀನಾರಾಯಣನು ಹೇಳುತ್ತಾನೆ:— "ಆ ತರುವಾಯ ಭಕ್ತನು ವಿವಿಧ ಉಪಚಾರಗಳಿಂದ ಶ್ರೀರಾಧಾಕೃಷ್ಣನನ್ನು ಪೂಜಿಸಿ ಮೂರ್ತಿಯಲ್ಲಿ ಆವಾಹನೆಮಾಡಿ ಸ್ಥಾಪನಮುದ್ರೆಯಿಂದ ಅಲ್ಲಿ ಸ್ಥಾಪಿಸಬೇಕು.

೨. ಆಮೇಲೆ ಅಂಗದೇವತೆಗಳನ್ನೂ, ಆಯಾ ಮಂತ್ರಗಳಿಂದ ಅಥವಾ ನಾಮಮಂತ್ರಗಳಿಂದ ಬೇರೆಬೇರೆಯಾಗಿ ಆವಾಹನೆಮಾಡಿ ಪ್ರತಿಷ್ಠೆಮಾಡಬೇಕು.

೩. ಘಂಟಾದಿವಾದ್ಯಗಳನ್ನು ಬಾಜಿಸಬೇಕು. ಅಥವಾ ತಾಳದ ಧ್ವನಿಯನ್ನು ಮಾಡಬೇಕು. ಆ ಬಳಿಕ ಮಲಗಿ ಎದ್ದವನಿಗೋ ಎಂಬಂತೆ ಆ ಪ್ರಭುವಿಗೆ ದಂತಧಾವನ ಮಾಡಿಸಬೇಕು.

೪. ಶ್ಯಾಮಾಕ ಮತ್ತು ವಿಷ್ಣುಕ್ರಾಂತಗಳಿಂದಲೂ, ದೂರ್ವೆ (ಹುಲ್ಲುಗರಿಕೆ) ಮತ್ತು ಕಮಲಗಳಿಂದಲೂ ಕೂಡಿದ ನೀರನ್ನು ಪ್ರಭುವಿಗೆ ಪಾದ್ಯವಾಗಿ ಅರ್ಪಿಸಬೇಕು. ಆಮೇಲೆ ಅರ್ಘ್ಯವನ್ನು ಕೊಟ್ಟು ಆಚಮನಕ್ಕೆ ನೀರನ್ನೀಯಬೇಕು.

೫. ನೀರು ತುಂಬಿದ ಅರ್ಘ್ಯಪಾತ್ರೆಯಲ್ಲಿ ಚಂದನ, ಅಕ್ಷತ (ಮುರಿಯದೆ ಇಡಿಯಾಗಿರುವ ದುಂಡಕ್ಕಿ), ಹೂವುಗಳು, ದರ್ಭೆಯ ಅಗ್ರ, ಎಳ್ಳು, ಸಾಸವೆ, ಯವ (ಜವೆ) ಮತ್ತು ದೂರ್ವೆ—ಇವನ್ನು ಹಾಕಬೇಕು.

ಜಾತೀಫಲಲವಂಗೈಲಾ ಕಂಕೋಲೋಶೀರವಾಸಿತಂ ।
ದದ್ಯಾದಾಚಮನೀಯಾಂಬು ತತಃ ಸಂಸ್ನಪಯೇದ್ಧರಿಂ ॥ ೬ ॥
ಸುಗಂಧಿಪುಷ್ಪತೈಲೇನ ಕುರ್ಯಾದಭ್ಯಂಗಮಾದಿತಃ ।
ಸುರಭಿದ್ರವ್ಯಕಲ್ಕೇನ ಕುರ್ಯಾಚ್ಚೋದ್ವರ್ತನಂ ತತಃ ॥ ೭ ॥
ಕ್ಷೀರೇಣ ದಧ್ನಾ ಚಾಜ್ಯೇನ ಮಧುನಾ ಸಿತಯಾ ತಥಾ ।
ಸ್ನಪಯೇದ್ಧರಿಮವ್ಯಗ್ರಸ್ತತ್ತನ್ಮಂತ್ರೈಃ ಪೃಥಕ್ ಪೃಥಕ್ ॥ ೮ ॥
ಸುಗಂಧಿನಾ ಚ ಶುದ್ಧೇನ ಸ್ನಾನಮುಷ್ಣೇನ ಚಾಂಬುನಾ ।
ತಂ ಕಾರಯಿತ್ವಾ ಗಂಧಾದ್ಯೈಃ ಸ್ನಾನಪೀಠೇಽರ್ಚಯೇಲ್ಲಘು ॥ ೯ ॥
ನಿರ್ಮಾಲ್ಯಪುಷ್ಪಾದಿ ತತೋ ವಿಸೃಜ್ಯೋತ್ತರತೋ ದ್ವಿಜಃ ।
ರಾಜನಾದ್ಯೈಃ ಸಾಮಭಿರ್ವಾ ಮಹಾಪುರುಷ ವಿದ್ಯಯಾ ॥ ೧೦ ॥
ಶ್ರೀವಿಷ್ಣು ವಿಷ್ಣುಸೂಕ್ತಾಭ್ಯಾಮಭಿಷೇಕಂ ಸಮಾಚರೇತ್ ।
ನಾಮ್ನಾಂ ಸಹಸ್ರೇಣ ಹರೇರಷ್ಟೋತ್ತರಶತೇನ ವಾ ।
ಅಭಿಷೇಕಂ ತು ಕುರ್ವೀರನ್ ಸ್ತ್ರಿಯಃ ಶೂದ್ರಾಶ್ಚ ದೀಕ್ಷಿತಾಃ ॥ ೧೧ ॥

---

೬. ಜಾತೀಫಲ (ಜಾಯಿಕಾಯಿ), ಲವಂಗ, ಏಲಕ್ಕಿ, ಕಂಕೋಲ, ಉಶೀರ— ಇವುಗಳಿಂದ ವಾಸನೆಕಟ್ಟಿದ ನೀರನ್ನು ಆಚಮನಕ್ಕಾಗಿ ಕೊಡಬೇಕು. ಬಳಿಕ ಹರಿಗೆ ಅಭಿಷೇಕಮಾಡಬೇಕು.

೭. ಮೊದಲು ಸುಗಂಧಯುಕ್ತವಾದ ಪುಷ್ಪತೈಲದಿಂದ ಅಭ್ಯಂಗಮಾಡಿಸ ಬೇಕು. ಬಳಿಕ ಪರಿಮಳದ್ರವ್ಯಗಳ ಕಲ್ಕದಿಂದ ಉದ್ವರ್ತನಮಾಡಬೇಕು (ತೊಳೆಯಬೇಕು).

೮. ಹಾಲು, ಮೊಸರು, ತುಪ್ಪ, ಮಧು ಮತ್ತು ಸಕ್ಕರೆ ಎಂಬ ಪಂಚಾಮೃತದಿಂದ ಆದದಕ್ಕೆ ತಕ್ಕ ತಕ್ಕ ಮಂತ್ರಗಳಿಂದ ಬೇರೆ ಬೇರೆಯಾಗಿ ಆತುರವಿಲ್ಲದೆ ಶ್ರೀಹರಿಗೆ ಅಭಿಷೇಕಮಾಡಬೇಕು.

೯. ಸುಗಂಧವುಳ್ಳ, ಶುದ್ಧವಾದ ಬಿಸಿನೀರಿನಿಂದ ಸ್ನಾನಮಾಡಿಸಿ, ಸ್ನಾನ ಪೀಠದಲ್ಲಿ ಗಂಧಾದಿಗಳಿಂದ ಅವನನ್ನು ಲಘುವಾಗಿ ಪೂಜಿಸಬೇಕು.

೧೦. ಆಮೇಲೆ ಆರಾಧನೆಮಾಡುವ ದ್ವಿಜನು ನಿರ್ಮಾಲ್ಯ ಪುಷ್ಪಾದಿಗಳನ್ನು ಉತ್ತರಕ್ಕೆ ಎತ್ತಿಹಾಕಿ, ನೀರಾಜನಾದಿಗಳಿಂದ ಅಥವಾ ಸಾಮಗಳಿಂದ, ಮಹಾ ಪುರುಷವಿದ್ಯೆಯಿಂದ ಶ್ರೀಸೂಕ್ತ ಪುರುಷಸೂಕ್ತಗಳಿಂದ, ಅಭಿಷೇಕ ಮಾಡಬೇಕು.

೧೧. ದೀಕ್ಷಿತರಾದ ಸ್ತ್ರೀಯರೂ, ಶೂದ್ರರೂ ಶ್ರೀಹರಿಯ ಸಹಸ್ರನಾಮಗಳಿಂದಲೋ, ಅಷ್ಟೋತ್ತರಶತನಾಮದಿಂದಲೋ ಅಭಿಷೇಕಮಾಡಬೇಕು.

ತತಃ ಪ್ರಮಾರ್ಜ್ಯ ವಸ್ತ್ರೇಣ ತಮನರ್ಘ್ಯಾಂಶುಕಾನಿ ಚ ।
ಪರಿಧಾಪಯೇದತಿಪ್ರೇಮ್ಣಾ ರಾಧಾಂ ಚಾನ್ಯಾಂಶ್ಚ ಶಕ್ತಿತಃ ॥ ೧೨ ॥
ಉಪವೀತಂ ಭಗವತೇ ದದ್ಯಾತ್ಸೂಕ್ಷ್ಮಂ ಸಿತಂ ಶುಭಂ ।
ರತ್ನಹೇಮಾದ್ಯಲಂಕಾರಾನ್ ಸಂಗಾಯಾಸ್ಮೈ ಚ ಧಾರಯೇತ್ ॥ ೧೩ ॥
ಯಥಾ ಋತು ಯಥಾ ಸ್ಥಾನಂ ಚಂದನೇನ ಯಥೋಚಿತಂ ।
ತಿಲಕಾನುಲೇಪನಂ ಕುರ್ಯಾತ್ ಸಕೇಶರಘನಾದಿನಾ ॥ ೧೪ ॥
ಯಥೋಚಿತಮಲಂಕಾರಾನ್ ಧಾರಯಿತ್ವಾ ಚ ರಾಧಿಕಾಂ ।
ಪತ್ರಲೇಖಾಂ ಚ ತಿಲಕಂ ವಿದಧ್ಯಾತ್ಕುಂಕುಮಾಕ್ಷತೈಃ ॥ ೧೫ ॥
ಆದರ್ಶಂ ದರ್ಶಯಿತ್ವಾಽಥ ಪುಷ್ಪಸ್ರಕ್ಪೇಖರಾದಿಭಿಃ ।
ಪೂಜಯೇತ್ತಂ ಸಹಸ್ರೇಣ ತುಲಸೀಮಂಜರೀದಲೈಃ ॥ ೧೬ ॥
ತುಲಸ್ಯಾ ವಾಽಥ ಪುಷ್ಪೇಣ ಪ್ರತ್ಯೇಕಂ ನಾಮ ವೈಷ್ಣವಂ ।
ನಮಃಪ್ರಾಂತ ಚತುರ್ಥ್ಯಂತಂ ಕೀರ್ತಯನ್ನರ್ಚಯೇತ್ಪ್ರಭುಂ ॥ ೧೭ ॥

---

೧೨. ಆಮೇಲೆ ಶ್ರೀಹರಿಯ ಮೂರ್ತಿಯನ್ನು ಬಟ್ಟೆಯಿಂದ ಒರಸಿ ಅತಿ ಪ್ರೇಮದಿಂದ ಅನರ್ಘ್ಯವಾದ ವಸ್ತ್ರಗಳನ್ನು ಉಡಿಸಬೇಕು. ರಾಧಾಮೂರ್ತಿಗೂ ಇತರ ಮೂರ್ತಿಗಳನ್ನೂ ಶಕ್ತ್ಯನುಸಾರವಾಗಿ ಹೀಗೆಯೆ ಅರ್ಚಿಸಬೇಕು.

೧೩. ಸೂಕ್ಷ್ಮವಾಗಿರುವ ಬೆಳ್ಳನೆಯ ಶುಭಕರವಾದ ಉಪವೀತವನ್ನು ಭಗವಂತನಿಗೆ ಅರ್ಪಿಸಬೇಕು. ಪರಿವಾರ ಸಮೇತನಾದ ಆತನಿಗೆ ಚಿನ್ನ ರನ್ನ ಮೊದಲಾದುವುಗಳ ಅಲಂಕಾರಗಳನ್ನು ಧರಿಸಬೇಕು.

೧೪. ಆಯಾ ಋತುವಿಗೆ ತಕ್ಕಂತೆ ಆಯಾ ಸ್ಥಾನಕ್ಕೊಪ್ಪುವಂತೆ ಕೇಸರಿ ಗಂಧ ಮೊದಲಾದುವುಗಳಿಂದ ಕೂಡಿದ ಚಂದನದಿಂದ ಉಚಿತವರಿತು ತಿಲಕವಿಟ್ಟು ಅನುಲೇಪನವನ್ನು ತೊಡೆಯಬೇಕು.

೧೫. ರಾಧಿಕೆಗೆ ಯಥೋಚಿತವಾಗಿ ಅಲಂಕಾರಗಳನ್ನು ಧರಿಸಿ ಕುಂಕುಮಾಕ್ಷತೆಗಳಿಂದ ಪತ್ರಲೇಖೆಯನ್ನೂ, ತಿಲಕವನ್ನೂ ರಚಿಸಬೇಕು.

೧೬. ಬಳಿಕ ಕನ್ನಡಿಯನ್ನು ತೋರಿಸಿ, ಹೂವು, ಮಾಲೆ, ಕಿರೀಟ ಮೊದಲಾದುವುಗಳಿಂದ ಅಲಂಕರಿಸಿ, ಆ ಭಗವಂತನನ್ನು ತುಳಸಿಯ ಒತ್ತುದಳಗಳಿಂದ ಪೂಜಿಸಬೇಕು.

೧೭. ವಿಷ್ಣುವಿನ ನಾಮಗಳನ್ನು ಒಂದೊಂದನ್ನು ಬೇರೆಬೇರೆಯಾಗಿ ತೆಗೆದುಕೊಂಡು ಚತುರ್ಥೀ ವಿಭಕ್ತಿರೂಪಕ್ಕೆ ಕೊನೆಯಲ್ಲಿ 'ನಮಃ' ಎಂದು ಸೇರಿಸಿ ಹೇಳುತ್ತಾ ತುಳಸಿಯಿಂದಾಗಲಿ, ಪುಷ್ಪದಿಂದಾಗಲಿ ಪ್ರಭುವನ್ನು ಅರ್ಚಿಸಬೇಕು.

ಸುಗಂಧಿದ್ರವ್ಯಚೂರ್ಣಾನಿ ತತಃ ಸೌಭಾಗ್ಯವಂತಿ ಚ ।
ಸಮರ್ಪ್ಯ ಧೂಪಂ ಕುರ್ವೀತ ದಶಾಂಗಂ ವಾಮೃತಾದಿಕಂ ॥ ೧೮ ॥
ದೀಪಂ ಘೃತೇನ ಕುರ್ವೀತ ವರ್ತಿಕಾದ್ವಯದೀಪಿತಂ ।
ಕೃತಂ ಸ್ವಶಕ್ತಿತಃ ಶುದ್ಧಂ ಮಹಾನ್ನೈವೇದ್ಯಮರ್ಪಯೇತ್ ॥ ೧೯ ॥
ಸಂಯಾವಪಾಯಸಾಪೂಪ ಶಷ್ಕುಲೀಖಂಡಲಡ್ಡುಕಾನ್ ।
ಪೂರಿಕಾಃ ಪೋಲಿಕಾ ಮೌದ್ಗಮೋದನಂ ವ್ಯಂಜನಾನಿ ಚ ।
ದಧಿದುಗ್ಧ ಘೃತಾದೀನಿ ಚತುಷ್ಪದ್ಯಾಂ ನಿವೇದಯೇತ್ ॥ ೨೦ ॥
ಭೋಜಯೇತ್ತಂ ತತಃ ಪ್ರೇಮ್ಣಾ ಮಧ್ಯೇ ಪಾನೀಯಮರ್ಪಯನ್ ।
ಮುಹೂರ್ತಾರ್ದ್ಧೇ ಗತೇ ದದ್ಯಾತ್ ಹಸ್ತಪ್ರಕ್ಷಾಲನಾಂಬು ಚ ॥ ೨೧ ॥
ಉಚ್ಛೇಷಣಂ ಭಗವತೋ ವಿಷ್ವಕ್ಸೇನಾದಿ ದೇವತಾಃ ।
ಉಪಕಲ್ಪ್ಯಾನ್ಯತಃ ಸ್ಥಾಪ್ಯ ಸ್ವಾರ್ಥಂ ತದ್ಭುವಮಾಮೃಜೇತ್ ॥ ೨೨ ॥
ಮುಖವಾಸಂ ತತೋ ದದ್ಯಾತ್ ಕೃತಾಂ ತಾಂಬೂಲವೀಟಿಕಾಂ ।
ಪೂಗಚೂರ್ಣಲವಂಗೈಲಾಜಾತೀಜಾದಿಸಮನ್ವಿತಾಂ ॥ ೨೩ ॥

---

೧೮. ಬಳಿಕ ಸೌಭಾಗ್ಯವಂತಗಳಾದ ಸುಗಂಧದ್ರವ್ಯಗಳ ಚೂರ್ಣಗಳನ್ನು ಅರ್ಪಿಸಬೇಕು. ದಶಾಂಗ ಅಥವಾ ಅಮೃತಾದಿರೂಪವಾದ ಧೂಪವನ್ನರ್ಪಿಸಬೇಕು.

೧೯. ಎರಡು ಬತ್ತಿಗಳನ್ನು ಹೊತ್ತಿಸಿದ ತುಪ್ಪದ ದೀಪವನ್ನಿಡಬೇಕು. ಶಕ್ತ್ಯನುಸಾರವಾಗಿ ಸಿದ್ಧಗೊಳಿಸಿದ ಶುದ್ಧವಾದ ಮಹಾನ್ನೈವೇದ್ಯವನ್ನರ್ಪಿಸಬೇಕು.

೨೦. ಸಂಯಾವ (ಸಜ್ಜಿಗೆ), ಪಾಯಸ, ಅಪೂಪ (ಕಡುಬು), ಚಕ್ಕುಲಿ, ಲಡ್ಡಿಗೆ (ಲಾಡು), ಪೂರಿ, ಹೋಳಿಗೆ, ಹೆಸರನ್ನ, ವ್ಯಂಜನಗಳು, ಹಾಲು, ಮೊಸರು, ತುಪ್ಪ ಮೊದಲಾದುವನ್ನು ನಾಗಾಲಿಯಮೇಲೆ ನೇವೇದ್ಯವಿಡಬೇಕು.

೨೧. ಆಮೇಲೆ ಪ್ರೇಮದಿಂದ ಆ ಸ್ವಾಮಿಗೆ ಭೋಜನಮಾಡಿಸಬೇಕು. ಮಧ್ಯೇ ಮಧ್ಯೇ ಕುಡಿಯಲು ಸ್ವಾದೋದಕವನ್ನು ಸಮರ್ಪಿಸಬೇಕು. ಅರ್ಧ ಮುಹೂರ್ತವು ಕಳೆದ ಬಳಿಕ ಕೈತೊಳೆದುಕೊಳ್ಳಲು ನೀರನ್ನು ಕೊಡಬೇಕು.

೨೨. ಭಗವಂತನ ಭೋಜನದಲ್ಲಿ ಉಳಿದ ಶೇಷವನ್ನು ವಿಷ್ವಕ್ಸೇನ ಮೊದಲಾದ ದೇವತೆಗಳನ್ನು ಕಲ್ಪಿಸಿ, ಅವರಿಗಾಗಿ ಬೇರೆಕಡೆ ತೆಗೆದಿಟ್ಟು ಅವರಿಗೆ ನಿವೇದಿಸಿದ ಬಳಿಕ ಆ ಸ್ಥಳವನ್ನು ಸಾರಿಸಬೇಕು.

೨೩. ಬಳಿಕ ಅಡಕೆಪುಡಿ, ಲವಂಗ, ಏಲಕ್ಕಿ, ಜಾಯಿಕಾಯಿ ಮೊದಲಾದುವುಗಳನ್ನು ಸೇರಿಸಿ ರಚಿಸಿದ ತಾಂಬೂಲವನ್ನು ಬಾಯಪರಿಮಳಕ್ಕಾಗಿ ಶ್ರೀಹರಿಗೆ ಸಮರ್ಪಿಸಬೇಕು.

ಫಲಂ ಚ ನಾರಿಕೇಳಾದಿ ದತ್ವಾ ಶಕ್ತ್ಯಾ ಚ ದಕ್ಷಿಣಾಂ ।
ಮಹಾನೀರಾಜನಂ ಕುರ್ಯಾತ್ ಗೀತವಾದಿತ್ರ ಪೂರ್ವಕಂ ॥ ೨೪ ॥
ಸ್ತುಯಾತ್ಪುಷ್ಪಾಂಜಲಿಂದತ್ವಾ ತತ್ಸ್ತೋತ್ರೇಣೈವ ತಂ ತತಃ ।
ನಾಮಸಂಕೀರ್ತನಂ ಕುರ್ಯಾತ್ ಗಾಯನ್ನೃತ್ಯಂಶ್ಚ ತತ್ಪರಃ ॥ ೨೫ ॥
ಮುಹೂರ್ತಂ ಸ ವಿಧಾಯೇತ್ಥಂ ಕೃತ್ವಾ ಚೈವ ಪ್ರದಕ್ಷಿಣಂ ।
ಪ್ರಣಾಮಂ ದಂಡವತ್ಕುರ್ಯಾತ್ ತಿರ್ಯಕ್ತದ್ದಕ್ಷಿಣೇ ಭುವಿ ॥ ೨೬ ॥
ಅಷ್ಟಾಂಗಂ ವಾಪಿ ಪಂಚಾಂಗಂ ಪ್ರಣಾಮಂ ಪುರುಷಶ್ಚರೇತ್ ।
ಪಂಚಾಂಗಮೇವ ನಾರೀ ತು ನಾನ್ಯಥಾ ಮುನಿಸತ್ತಮ ॥ ೨೭ ॥
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಉರಸಾ ಶಿರಸಾ ದೃಶಾ ।
ವಚಸಾ ಮನಸಾ ಚೇತಿ ಪ್ರಣಾಮೋಽಷ್ಟಾಂಗ ಈರಿತಃ ॥ ೨೮ ॥
ಬಾಹುಭ್ಯಾಂ ಚೈವ ಮನಸಾ ಶಿರಸಾ ವಚಸಾ ದೃಶಾ ।
ಪಂಚಾಂಗೋಽಯಂ ಪ್ರಣಾಮಃ ಸ್ಯಾತ್ ಪೂಜಾಸು ಪ್ರವರಾವಿತಿ ॥ ೨೯ ॥

---

೨೪. ತೆಂಗು ಮೊದಲಾದ ಫಲಗಳನ್ನೂ, ಶಕ್ತ್ಯನುಸಾರವಾಗಿ ದಕ್ಷಿಣೆಯನ್ನೂ ಕೊಟ್ಟು, ಗೀತವಾದ್ಯಸಮೇತವಾಗಿ ಮಹಾನೀರಾಜನವನ್ನು ಮಾಡಬೇಕು.

೨೫. ಪುಷ್ಪಾಂಜಲಿಗಳನ್ನರ್ಪಿಸಿ ಆ ಸ್ವಾಮಿಯ ಸ್ತೋತ್ರದಿಂದಲೆ ಅವನನ್ನು ಸ್ತುತಿಸಬೇಕು. ಆ ತರುವಾಯ ಅವನೆದುರಿಗೆ ಗಾನಮಾಡುತ್ತಲೂ ನರ್ತಿಸುತ್ತಲೂ ನಾಮಸಂಕೀರ್ತನಮಾಡಬೇಕು.

೨೬. ಒಂದು ಮುಹೂರ್ತಕಾಲ ಹೀಗೆಮಾಡಿ, ಪ್ರದಕ್ಷಿಣೆಮಾಡಿ, ಅವನ ಬಲಭಾಗದಲ್ಲಿ ನೆಲದಮೇಲೆ ಅಡ್ಡಡ್ಡಲಾಗಿ ದಂಡವತ್ತಾಗಿ ಪ್ರಣಾಮಮಾಡಬೇಕು.

೨೭. ಪುರುಷನು ಅಷ್ಟಾಂಗ ಅಥವಾ ಪಂಚಾಂಗಪ್ರಣಾಮಮಾಡಬೇಕು. ನಾರಿಯಾದರೊ ಪಂಚಾಂಗಪ್ರಣಾಮವನ್ನು ಮಾತ್ರವೇ ಮಾಡಬೇಕು. ಎಲೈ ಮುನಿಶ್ರೇಷ್ಠನೇ! ಅವರು ಬೇರೆ ರೀತಿ ಮಾಡಬಾರದು.

೨೮. ಎರಡು ಪಾದಗಳು, ಎರಡು ಕೈಗಳು, ಎರಡು ಮೊಳಕಾಲುಗಳು, ಎದೆ, ಶಿರಸ್ಸು, ದೃಷ್ಟಿ, ಮಾತು, ಮನಸ್ಸು—ಇವುಗಳಿಂದ ಮಾಡುವ ನಮಸ್ಕಾರವು ಅಷ್ಟಾಂಗಪ್ರಣಾಮವೆನ್ನಿಸುವುದು.

೨೯. ಕೈಗಳು, ಮನಸ್ಸು, ಶಿರಸ್ಸು, ಮಾತು, ದೃಷ್ಟಿ—ಇವುಗಳಿಂದ ಮಾಡುವ ಪ್ರಣಾಮವು ಪಂಚಾಂಗಪ್ರಣಾಮವೆನ್ನಿಸುವುದು. ಪೂಜೆಗಳಲ್ಲಿ ಇವೆರಡು ಬಗೆಯ ಪ್ರಣಾಮಗಳೂ ಬಹು ಶ್ರೇಷ್ಠವಾದುವು.

ಭೀತಂ ಮಾಂ ಸಂಸೃತೇಃ ಪಾಹಿ ಪ್ರಪನ್ನಂ ತ್ವಾಂ ಪ್ರಭೋ ಇತಿ ।
ತತಃ ಸಂಪ್ರಾರ್ಥ್ಯ ಸ್ವಾಧ್ಯಾಯಂ ಶಕ್ತ್ಯಾ ಕುರ್ವೀತ ನೈತ್ಯಕಂ ॥ ೩೦ ॥
ಧ್ಯಾತ್ವಾ ಶೇಷಾಂ ಚ ತದ್ದತ್ತಾಂ ಗೃಹೀತ್ವಾ ಶಿರಸಾದರಾತ್ ।
ಆವಾಹಿತಂ ಯಥಾ ಪೂರ್ವಂ ರಾಧಾಕೃಷ್ಣಂ ಹೃದಂಬುಜೇ ।
ಸಂಸ್ಥಾಪಯೇಚ್ಚಾಂಗದೇವಾನ್ ಸ್ವಸ್ವಸ್ಥಾನೇ ವಿಸರ್ಜಯೇತ್ ॥ ೩೧ ॥
ಕರಂಡಕೇ ವಾ ಶಯ್ಯಾಯಾಂ ಮಂದಿರೇ ಪ್ರತಿಮಾಂ ಹರೇಃ ।
ಶಾಯಯಿತ್ವಾ ಪಿಧಾಯ ದ್ವಾ ವೈಶ್ವದೇವಂ ಸಮಾಚರೇತ್ ॥ ೩೨ ॥
ಪ್ರಾಸಾದಿಕಂ ಹರೇರನ್ನಂ ಸ್ವಪೋಷ್ಯೇಭ್ಯೋ ವಿಭಜ್ಯ ಸಃ ।
ಸ್ವಯಂ ಭುಕ್ತ್ವಾ ತತ್ಕಥಾದ್ಯೈರ್ದಿನಶೇಷಮತಿಕ್ರಮೇತ್ ॥ ೩೩ ॥
ಮಹಾಪೂಜಾವಿಧಾನೇನ ಪ್ರೋಕ್ತೇನಾನೇನ ಯೋಽನ್ವಹಂ ।
ಭಕ್ತ್ಯಾ ಸಮರ್ಚಯೇದ್ವಿಷ್ಣುಂ ಸ ಭವೇತ್ತಸ್ಯ ಪಾರ್ಷದಃ ॥ ೩೪ ॥
ದಿವ್ಯಂ ವಿಮಾನಮಾರುಹ್ಯ ಭಾಸ್ವರಂ ದೇವತೇಪ್ಸಿತಂ ।
ಗೋಲೋಕಾಖ್ಯಂ ಹರೇರ್ಧಾಮ ದಿವ್ಯಾಂಗೋ ಯಾತಿ ಪೂಜಕಃ ॥ ೩೫ ॥

---

೩೦. ಬಳಿಕ, "ಎಲೈ ಪ್ರಭುವೇ! ಸಂಸಾರಕ್ಕೆ ಹೆದರಿ ನಿನ್ನನ್ನೆ ಆಶ್ರಯಿಸಿ ಬಂದಿರುವ ನನ್ನನ್ನು ಕಾಪಾಡು" ಎಂದು ಪ್ರಾರ್ಥನೆಮಾಡಿ, ಯಥಾಶಕ್ತಿಯಾಗಿ ನಿತ್ಯಗಟ್ಟಳೆಯ ಅಧ್ಯಯನವನ್ನು ಮಾಡಬೇಕು.

೩೧. ಬಳಿಕ ಧ್ಯಾನಮಾಡಿ, ಆ ಭಗವಂತನು ಅನುಗ್ರಹಿಸಿಕೊಟ್ಟ ಶೇಷ (ಪ್ರಸಾದ) ವನ್ನು ಆದರದಿಂದ ಶಿರಸಾವಹಿಸಿ ತೆಗೆದುಕೊಂಡು ಆವಾಹಿತನಾದ ಆ ರಾಧಾಕೃಷ್ಣನನ್ನು ಮೊದಲಿನಂತೆಯೇ ಹೃದಯಕಮಲದಲ್ಲಿ ಸ್ಥಾಪಿಸಬೇಕು. ಅಂಗದೇವತೆಗಳನ್ನು ಅವರವರ ಸ್ಥಾನದಲ್ಲಿ ವಿಸರ್ಜನೆ ಮಾಡಬೇಕು.

೩೨. ಶ್ರೀಹರಿಯ ಪ್ರತಿಮೆಯನ್ನು ಕರಂಡಕದಲ್ಲಿ (ಪೆಟ್ಟಿಗೆಯಲ್ಲಿ) ಅಥವಾ ಮಂದಿರದಲ್ಲಿ ಹಾಸಿರುವ ಶಯ್ಯೆಯಲ್ಲಿ ಮಲಗಿಸಿ ಬಾಗಿಲು ಮುಚ್ಚಿ ವೈಶ್ವ ದೇವವನ್ನಾಚರಿಸಬೇಕು.

೩೩. ಭಕ್ತನು ಶ್ರೀಹರಿಯ ಪ್ರಸಾದರೂಪವಾದ ಅನ್ನವನ್ನು ತನ್ನ ಪೋಷ್ಯವರ್ಗದವರಿಗೆಲ್ಲ ಹಂಚಿಕೊಟ್ಟು ತಾನೂ ಊಟಮಾಡಿ, ದಿನದ ಉಳಿದ ಭಾಗವನ್ನು ಆ ಭಗವಂತನ ಕಥಾದಿಗಳಿಂದ ಕಳೆಯಬೇಕು.

೩೪. ಇಲ್ಲಿ ಹೇಳಿರುವ ಈ ಮಹಾಪೂಜಾವಿಧಾನದಿಂದ ಯಾವನು ದಿನ ದಿನವೂ ಭಕ್ತಿಯಿಂದ ವಿಷ್ಣುವನ್ನು ಅರ್ಚಿಸುವನೋ ಅವನು ಆ ಭಗವಂತನ ಪಾರ್ಷದನಾಗುತ್ತಾನೆ.

೩೫. ಆ ಪೂಜಕನು ದೇವತೆಗಳು ಬಯಸುತ್ತಿರುವಂತಹ ಕಾಂತಿಯಿಂದ ಬಹಳವಾಗಿ ಬೆಳಗುವ ದಿವ್ಯವಿಮಾನವನ್ನೇರಿ, ದಿವ್ಯಶರೀರವನ್ನುಧರಿಸಿ, ಗೋಲೋಕ ವೆಂಬ ಶ್ರೀಹರಿಯ ಧಾಮವನ್ನೈದುತ್ತಾನೆ.

ಫಲಾಭಿಸಂಧಿನಾ ವಾಪಿ ಯಸ್ತಮರ್ಚೇದ್ದಿನೇ ದಿನೇ ।
ಸೋಽಪಿ ಧರ್ಮಂ ಕಾಮಮರ್ಥಂ ಮೋಕ್ಷಂ ಚಾಪ್ನೋತ್ಯಭೀಪ್ಸಿತಂ ॥
ಇತ್ಥಂ ಪೂಜಾವಿಧಿಂ ಕರ್ತುಮಶಕ್ತೋ ರಾಧಯಾ ಸಹ ।
ಹರಿಮೇಕಂ ಯಥಾಲಬ್ಧೈರರ್ಚೇದ್ಭಕ್ತ್ಯೋಪಚಾರಕೈಃ ॥ ೩೭ ॥
ದ್ವಾದಶಾಕ್ಷರಮಂತ್ರೇಣ ದ್ವಿಜೋಽನ್ಯೋ ನಾಮಮಂತ್ರತಃ ।
ಶ್ರೀರಾಧಾಕೃಷ್ಣಮಭ್ಯರ್ಚೇತ್ ಭಕ್ತಿರೇವಾಽತ್ರ ಸಿದ್ಧಿದಾ ॥ ೩೮ ॥
ಏಕಾದಶ್ಯಾಂ ಹರೇರ್ಜನ್ಮೋತ್ಸವಾದೌ ತು ವಿಶೇಷತಃ ।
ಮಹಾಪೂಜೈವ ಕರ್ತವ್ಯಾ ಸ್ವಶಕ್ತ್ಯಾಽಖಿಲವೈಷ್ಣವೈಃ ॥ ೩೯ ॥
ಪ್ರತಿಷ್ಠಾಮಾತ್ರಮಪಿ ಯಃ ಕುರ್ಯಾದನ್ಯಕೃತಾಲಯೇ ।
ಸ ಸಾರ್ವಭೌಮರಾಜ್ಯಂ ವೈ ಪ್ರಾಪ್ನುಯಾನ್ನಷ್ಟಕಿಲ್ಬಿಷಃ ॥ ೪೦ ॥
ಕಾರಯೇನ್ಮಂದಿರಂ ರಮ್ಯಂ ಧನಾಢ್ಯಶ್ಚ ಹರೇರ್ದೃಢಂ ।
ಯಃ ಸ ತು ಪ್ರಾಪ್ನುಯಾದ್ರಾಜ್ಯಂ ತ್ರೈಲೋಕ್ಯಸ್ಯಾಪ್ಯಕಂಟಕಂ ॥ ೪೧ ॥

---

೩೬. ಯಾವನು ಫಲಾಪೇಕ್ಷೆಯಿಂದಲೇ ಆದರೂ ದಿನದಿನವೂ ಅವನನ್ನು ಪೂಜಿಸುವನೋ ಅವನು ಕೂಡ ತಾನು ಬಯಸಿರುವ ಧರ್ಮ, ಕಾಮ, ಅರ್ಥ, ಮೋಕ್ಷಗಳನ್ನು ಪಡೆಯುತ್ತಾನೆ.

೩೭. ಈ ರೀತಿಯಾಗಿ ಪೂಜಾವಿಧಿಯನ್ನು ನೆರವೇರಿಸುವುದಕ್ಕೆ ಅಶಕ್ತನಾದವನು ರಾಧೆಯೊಡನೆ ಹರಿಯೊಬ್ಬನನ್ನು ದೊರೆತಷ್ಟು ಉಪಚಾರಗಳಿಂದಲೇ ಭಕ್ತಿಯಿಂದ ಅರ್ಚಿಸಬೇಕು.

೩೮. ದ್ವಿಜನು ದ್ವಾದಶಾಕ್ಷರ ಮಂತ್ರದಿಂದಲೂ, ಉಳಿದವರು ನಾಮ ಮಂತ್ರದಿಂದಲೂ ಶ್ರೀರಾಧಾಕೃಷ್ಣನನ್ನು ಅರ್ಚಿಸಬೇಕು. ಈ ಅರ್ಚನೆಯಲ್ಲಿ ಭಕ್ತಿಯೊಂದೇ ಸಿದ್ಧಿದಾಯಕವಾದುದು.

೩೯. ವಿಶೇಷವಾಗಿ ಏಕಾದಶಿಯ ದಿನ, ಶ್ರೀಹರಿಯ ಜನ್ಮೋತ್ಸವವೇ ಮೊದಲಾದ ಕಾಲಗಳಲ್ಲಿ ಸಮಸ್ತ ವೈಷ್ಣವರೂ ತಮ್ಮ ತಮ್ಮ ಶಕ್ತಿಗನುಸಾರವಾಗಿ ಮಹಾಪೂಜೆಯನ್ನೇ ಮಾಡಬೇಕು.

೪೦. ಮತ್ತೊಬ್ಬನು ನಿರ್ಮಿಸಿರುವ ಆಲಯದಲ್ಲಿ ಪ್ರತಿಷ್ಠೆಯನ್ನೆ ಆದರೂ ಯಾವನು ಮಾಡುವನೋ ಅವನು ತನ್ನ ಪಾಪಗಳನ್ನೆಲ್ಲ ಕಳೆದುಕೊಂಡು ಸಾರ್ವಭೌಮ ರಾಜ್ಯವನ್ನು ಪಡೆಯುತ್ತಾನೆ.

೪೧. ಧನಾಢ್ಯನಾದ ಯಾವನು ಶ್ರೀಹರಿಗೆ ದೃಢವೂ ರಮ್ಯವೂ ಆದ ಮಂದಿರವನ್ನು ಕಟ್ಟಿಸುವನೋ ಅವನು ನಿಷ್ಕಂಟಕವಾದ ತ್ರೈಲೋಕ್ಯ ರಾಜ್ಯಾಧಿಪತ್ಯವನ್ನು ಪಡೆಯುತ್ತಾನೆ.

ವೃತ್ತಿದಾನೇನ ಪೂಜಾಯಾಃ ಪ್ರವಾಹಂ ವರ್ಧಯೇತ್ತು ಯಃ ।
ಸ ಪುಮಾನ್ ಪ್ರಾಪ್ನುಯಾನ್ನೂನಂ ವಿಷ್ಣುಲೋಕೇ ಮಹತ್ಸುಖಂ ॥ ೪೨ ॥
ಪ್ರತಿಷ್ಠಾಂ ಮಂದಿರಂ ಪೂಜಾಂ ಕಾರಯೇತ್ತ್ರೀಣ್ಯಪೀಹ ಯಃ ।
ಸಮಾನೈಶ್ವರ್ಯಮಾಪ್ನೋತಿ ವಾಸುದೇವಸ್ಯ ಸ ಧ್ರುವಂ ॥ ೪೩ ॥
ಹರೇರ್ವೃತ್ತಿಂ ಹರೇದ್ಯಸ್ತು ಕೃತಾಂ ಸ್ವೇನ ಪರೇಣ ವಾ ।
ಕಲ್ಪಮೇಕಂ ಸ ವೈ ಭುಂಕ್ತೇ ನರಕೇ ಯಮಯಾತನಾಃ ॥ ೪೪ ॥
ಕರ್ತಾ ಕಾರಯಿತಾ ಯಶ್ಚ ಸಹಾಯಶ್ಚಾನುಮೋದಕಃ ।
ಚತುರ್ಣಾಂ ಹಿ ಫಲೇ ಭಾಗಃ ಸುಕೃತಸ್ಯೇತರಸ್ಯ ಚ ॥ ೪೫ ॥
ಇತಿ ಕ್ರಿಯಾಯೋಗವಿಧಿರ್ಮಯಾ ನಾರದ ಕೀರ್ತಿತಃ ।
ಯೇನೈಕಾಂತಿಕ ಧರ್ಮೋಽತ್ರ ಸಿದ್ಧ್ಯೇತ್ತತ್ಪ್ರವಣಾತ್ಮನಾಂ ॥ ೪೬ ॥
ವಿಷಯಾಂಶ್ಚಿಂತಯಂಶ್ಚಿತ್ತೇ ಬಹಿಃಪೂಜಾಂ ಹರೇಶ್ಚರನ್ ।
ಸಂಭಾರೇಣಾಪಿ ಮಹತಾ ನ ಯಥೋಕ್ತಂ ಫಲಂ ಲಭೇತ್ ॥ ೪೭ ॥

---

೪೨. ಯಾವನು ವೃತ್ತಿಯನ್ನು ಕೊಟ್ಟು ಆ ಮೂಲಕ ಪೂಜಾಪ್ರವಾಹವನ್ನು ವೃದ್ಧಿಪಡಿಸುವನೋ ಆ ಪುರುಷನು ವಿಷ್ಣುಲೋಕದಲ್ಲಿ ಮಹತ್ತಾದ ಸುಖವನ್ನು ನಿಶ್ಚಯವಾಗಿಯೂ ಪಡೆಯುತ್ತಾನೆ.

೪೩. ಯಾವನು ಪ್ರತಿಷ್ಠೆ, ಮಂದಿರ, ಪೂಜೆ—ಈ ಮೂರನ್ನೂ ಮಾಡಿಸುವನೋ ಅವನು ವಾಸುದೇವನ ಐಶ್ವರ್ಯಕ್ಕೆ ಸಮಾನವಾದ ಐಶ್ವರ್ಯವನ್ನು ಪಡೆಯುತ್ತಾನೆ. ಇದು ನಿಶ್ಚಯವು.

೪೪. ತಾನೇ ಮಾಡಿದ ಅಥವಾ ಪರರು ಮಾಡಿದ ಶ್ರೀಹರಿಯ ವೃತ್ತಿಯನ್ನು ಯಾವನು ಅಪಹರಿಸುವನೋ ಅವನು ಒಂದು ಕಲ್ಪಕಾಲದವರೆಗೂ ನರಕದಲ್ಲಿ ಯಮಯಾತನೆಗಳನ್ನು ಅನುಭವಿಸುತ್ತಾನೆ.

೪೫. ಸುಕೃತವೇ ಆಗಲಿ, ದುಷ್ಕೃತವೇ ಆಗಲಿ ಅದರ ಫಲದಲ್ಲಿ ಕರ್ತನು (ಮಾಡಿದವನು), ಮಾಡಿಸಿದವನು, ಸಹಾಯಕನಾದವನು, ಅನುಮೋದಕನು—ಈ ನಾಲ್ವರಿಗೂ ಭಾಗವುಂಟು.

೪೬. ಎಲೈ ನಾರದನೇ! ಈ ರೀತಿಯಾಗಿ ಕ್ರಿಯಾಯೋಗದ ವಿಧಿಯನ್ನು ನಾನು ನಿನಗೆ ವಿವರಿಸಿದ್ದೇನೆ. ಅದರಲ್ಲಿಯೆ ನಿರತರಾಗಿರುವವರಿಗೆ ಆ ವಿಧಿಯನ್ನನುಸರಿಸುವುದರಿಂದ ಏಕಾಂತಧರ್ಮ (ಭಕ್ತಿಯು)ವು ಸಿದ್ಧಿಯಾಗುವುದು.

೪೭. ಮನಸ್ಸಿನಲ್ಲಿ ವಿಷಯಗಳನ್ನು ಚಿಂತಿಸುತ್ತ ಹೊರಗೆ ಯಾವನು ಶ್ರೀಹರಿಯ ಪೂಜೆಮಾಡುವನೋ ಅವನು ಮಹತ್ತಾಗಿ ಸಲಕರಣೆಗಳನ್ನು ಉಪಯೋಗಿಸಿದರೂ ಯಥೋಕ್ತವಾದ ಫಲವನ್ನು ಪಡೆಯುವುದಿಲ್ಲ.

ಇತಸ್ತತೋ ಗ್ರಾಮ್ಯಸುಖೇ ಭ್ರಮತ್ಸ್ವೀಯಂ ಮನಸ್ತತಃ ।
ನಿಯಮ್ಯ ವಿಷ್ಣುಪೂಜಾಯಾಂ ಮುಮುಕ್ಷುಃ ಪ್ರಯತೋ ಭವೇತ್ ॥
ಮಹಾವ್ರತಾ ಭೂರಿತಪಸ್ವಿನೋಽಪಿ
ಸ್ವಧೀತವೇದಾ ಅಪಿ ಬುದ್ಧಿಮಂತಃ ।
ಸಾಂಖ್ಯಂ ಚ ಯೋಗಂ ಪರಿಶೀಲಯಂತಃ
ಸಿದ್ಧಿಂ ನ ಯಾಂತ್ಯೇವ ವಿನಾರ್ಚನಂ ಹರೇಃ ॥ ೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ
"ಶ್ರೀವಾಸುದೇವಪೂಜಾವಿಧಿನಿರೂಪಣಂ" ನಾಮೈಕೋನತ್ರಿಂಶೋಽಧ್ಯಾಯಃ

೪೮. ಮೋಕ್ಷಾಪೇಕ್ಷಿಯಾದವನು ಗ್ರಾಮ್ಯಸುಖದಲ್ಲಿ ಅತ್ತಿತ್ತ ಓಡಾಡುತ್ತಿರುವ ತನ್ನ ಮನಸ್ಸನ್ನು ಅಡಗಿಸಿ ಅಂಕೆಯಲ್ಲಿಟ್ಟು ವಿಷ್ಣುಪೂಜೆಯಲ್ಲಿ ನಿರತನಾಗಬೇಕು.

೪೯. ಮಹಾವ್ರತಗಳನ್ನಾಚರಿಸುವವರೇ ಆಗಲಿ, ಬಹು ತಪಸ್ಸುಮಾಡಿದವರೇ ಆಗಲಿ, ಚೆನ್ನಾಗಿ ವೇದಾಧ್ಯಯನ ಮಾಡಿದವರೇ ಆಗಲಿ, ಬುದ್ಧಿವಂತರೇ ಆಗಲಿ, ಸಾಂಖ್ಯವನ್ನೂ, ಯೋಗವನ್ನೂ ಪರಿಶೀಲಿಸುವವರೇ ಆಗಲಿ ಶ್ರೀಹರಿಯ ಅರ್ಚನೆಯನ್ನು ಮಾಡದಿದ್ದರೆ ಸಿದ್ಧಿಯನ್ನು ಪಡೆಯುವುದೇ ಇಲ್ಲವು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ
ಮಾಹಾತ್ಮ್ಯದಲ್ಲಿ "ಶ್ರೀ ವಾಸುದೇವಪೂಜಾವಿಧಿನಿರೂಪಣ"ವೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ಅಷ್ಟಾಂಗಯೋಗನಿರೂಪಣಂ

ಸ್ಕಂದ ಉವಾಚ :—

ವಾಸುದೇವಾರ್ಚನವಿಧಿಂ ನಿಶಮ್ಯೇತ್ಥಂ ಸ ನಾರದಃ ।
ಪ್ರಸನ್ನಃ ಪುನರಪ್ರಾಕ್ಷೀತ್ ತಂ ಮುನೀನಾಂ ಪರಂ ಗುರುಂ ॥ ೧ ॥

ನಾರದ ಉವಾಚ :—

ಸಮ್ಯಗುಕ್ತೋ ಭಗವತಾ ಕ್ರಿಯಾಯೋಗೋ ಮಹಾಫಲಃ ।
ಏಕೇನಮನಸಾಯೋಽಸೌ ಕಾರ್ಯಃಸಿದ್ಧಿಮಭೀಪ್ಸುಭಿಃ ॥ ೨ ॥
ಮನಸೋ ನಿಗ್ರಹಸ್ತತ್ರ ಜ್ಞಾನಿನಾಮಪಿ ಸದ್ಗುರೋ ।
ದುಷ್ಕರಃ ಕಿಂ ಪುನಸ್ತರ್ಹಿ ನೃಣಾಂ ಕರ್ಮಾತ್ಮನಾಂ ಭುವಿ ॥ ೩ ॥
ತಮೃತೇ ತು ಹರೇರರ್ಚಾ ನಾಭೀಷ್ಟಫಲದಾಯಿನೀ ।
ಅತಸ್ತನ್ನಿಗ್ರಹೋಪಾಯಮಪಿ ಮೇ ವಕ್ತುಮರ್ಹಸಿ ॥ ೪ ॥

ಸ್ಕಂದ ಉವಾಚ :—

ಇತ್ಯಾಪೃಷ್ಟಃ ಸ ಮುನಿನಾ ಮುನೀಂದ್ರಃ ಸರ್ವದರ್ಶನಃ ।
ನಾರಾಯಣೋ ನರಸಖೋ ನಾರದಂ ತಮಭಾಷತ ॥ ೫ ॥

---

## ಕನ್ನಡದ ಅನುವಾದ

### ಅಷ್ಟಾಂಗಯೋಗನಿರೂಪಣ

೧. ಸ್ಕಂದನು ಹೇಳುತ್ತಾನೆ:—"ಎಲೈ ಸಾವರ್ಣಿಯೇ! ಈ ರೀತಿಯಾಗಿ ವಾಸುದೇವಾರ್ಚನೆಯ ವಿಧಿಯನ್ನಾಲಿಸಿ ಆ ನಾರದನು ಪ್ರಸನ್ನನಾಗಿ ಮುನಿಗಳಿಗೆಲ್ಲ ಪರಮಗುರುವಾದ ಆ ನಾರಾಯಣನನ್ನು ಮತ್ತೆ ಪ್ರಶ್ನೆಮಾಡಿದನು.

೨. ನಾರದನು ಕೇಳುತ್ತಾನೆ:— "ಮಹಾ ಫಲವನ್ನು ಕೊಡತಕ್ಕುದಾದ ಕ್ರಿಯಾಯೋಗವನ್ನು ತಾವು ಚೆನ್ನಾಗಿ ಹೇಳಿದ್ದೀರಿ. ಸಿದ್ಧಿಯನ್ನು ಪಡೆಯಲಪೇಕ್ಷಿಸುವವರು ಇದನ್ನು ಒಂದೇ ಮನಸ್ಸಿನಿಂದ ನಡೆಸಬೇಕು.

೩. ಎಲೈ ಸದ್ಗುರುವೇ! ಮನಸ್ಸನ್ನು ನಿಗ್ರಹಿಸುವುದು ಜ್ಞಾನಿಗಳಿಗೂ ಕೂಡ ಬಹು ಕಷ್ಟಸಾಧ್ಯವಾಗಿರುವುದು. ಹಾಗಿರುವಲ್ಲಿ ಭೂಮಿಯಲ್ಲಿ ಕರ್ಮಾತ್ಮರಾಗಿರುವ ನರರಿಗೆ ದುಸ್ಸಾಧ್ಯವೆಂದು ಹೇಳತಕ್ಕುದೇನಿರುವುದು.

೪. ಮನೋನಿಗ್ರಹವಿಲ್ಲದೆ ಶ್ರೀಹರಿಯ ಪೂಜೆಯು ಅಭೀಷ್ಟಫಲವನ್ನು ನೀಡುವುದಿಲ್ಲ. ಆದುದರಿಂದ ಆ ಮನಸ್ಸನ್ನು ನಿಗ್ರಹಿಸುವ ಉಪಾಯವನ್ನು ಕೂಡ ನನಗೆ ತಿಳಿಸಬೇಕು."

೫. ಸ್ಕಂದನು ಹೇಳುತ್ತಾನೆ:— ಈ ರೀತಿಯಾಗಿ ನಾರದಮುನಿಯಿಂದ

ಶ್ರೀ ನಾರಾಯಣ ಉವಾಚ :—

**ಸತ್ಯಮೇವ ಮುನೇ ವಕ್ಷಿ ಮನಸೋಽಸ್ತಿ ಬಲಂ ಮಹತ್ ।**
**ಜಿತೇಽಪಿ ಯಸ್ಮಿನ್ವಿಶ್ವಾಸಃ ಶತ್ರುವನ್ನ ವಿವೇಕಿನಾಂ ॥ ೬ ॥**
**ಮನಸಾಽಸದೃಶೋನ್ಯಸ್ತು ಶತ್ರುರ್ನಾಸ್ತ್ಯೇವ ದೇಹಿನಾಂ ।**
**ವಿಷ್ಣುಧ್ಯಾನಾಭ್ಯಾಸಯೋಗಾತ್ ನಿರ್ದೋಷಂ ತದ್ಧಿ ಶಾಮ್ಯತಿ ॥ ೭ ॥**
**ಅದಾಂತಾಶ್ವವದೇವೈತದ್ಯತೋಽಸ್ತಿದುರವಗ್ರಹಂ ।**
**ಅತೋ ವೈರಾಗ್ಯಯುಕ್ತ್ಪುಂಭಿಃ ಸದುಪಾಯೈರ್ನಿಗೃಹ್ಯತೇ ॥ ೮ ॥**
**ಉಪಾಯಾಸ್ತತ್ರ ಬಹವಃ ಸಂತಿ ತೇಷ್ವಪಿ ಸನ್ಮತೇ ।**
**ಅಷ್ಟಾಂಗಯೋಗಸ್ಯಾಭ್ಯಾಸಃ ಶ್ರೇಷ್ಠಃ ಸದ್ಯಃ ಫಲಪ್ರದಃ ॥ ೯ ॥**
**ಯಮಾಶ್ಚ ನಿಯಮಾ ಬ್ರಹ್ಮನ್ನಾಸನಾನ್ಯಸುಸಂಯಮಃ ।**
**ಪ್ರತ್ಯಾಹಾರೋ ಧಾರಣಾ ಚ ಧ್ಯಾನಮಂಗಂ ತು ಸಪ್ತಮಂ ।**
**ಸಮಾಧಿಶ್ಚಾಷ್ಟಮಂ ಪ್ರೋಕ್ತಂ ಯೋಗಸ್ಯಾನುಕ್ರಮೇಣ ವೈ ॥ ೧೦ ॥**

---

ಪ್ರಶ್ನಿಸಲ್ಪಟ್ಟವನಾಗಿ ನರಸಖನೂ, ಮುನೀಂದ್ರನೂ ಆದ ನಾರಾಯಣನು ನಾರದನಿಗೆ ಹೀಗೆ ಹೇಳಿದನು :—

೬. ಶ್ರೀನಾರಾಯಣನು ಹೇಳುತ್ತಾನೆ:—"ಎಲೈ ಮುನಿಯೇ! ನೀನು ಸತ್ಯವನ್ನೇ ನುಡಿದಿರುವೆ. ಮನಸ್ಸಿಗೆ ಮಹತ್ತಾದ ಬಲವುಂಟು. ಗೆದ್ದಡಗಿಸಿದರೂ ಶತ್ರುವಿನಲ್ಲಿ ಹೇಗೋ ಹಾಗೆ ವಿವೇಕಿಯಾದವನು ಅದರಲ್ಲಿ ನಂಬಿಕೆಯಿಡಬಾರದು.

೭. ದೇಹಿಗಳಿಗೆ ಮನಸ್ಸಿನಂತಹ ಬೇರೊಂದು ಶತ್ರುವು ಇಲ್ಲವೇ ಇಲ್ಲ. ಆ ಮನಸ್ಸು ವಿಷ್ಣುಧ್ಯಾನದ ಅಭ್ಯಾಸಯೋಗದಿಂದ ದೋಷವನ್ನು ಕಳೆದುಕೊಂಡು ಶಾಂತವಾಗುತ್ತದೆ.

೮. ತುಂಟ ಕುದುರೆಯಂತೆ ಈ ಮನಸ್ಸು ಹಿಡಿದು ನಿಲ್ಲಿಸಲು ಬಹು ಕಷ್ಟ ಸಾಧ್ಯವಾಗಿರುವುದು. ಆದುದರಿಂದ ವೈರಾಗ್ಯವಂತರಾದ ಪುರುಷರು (ಅಂತಹ ಕುದುರೆಯನ್ನು ಹೇಗೋ ಹಾಗೆ ಮನಸ್ಸನ್ನು ಕೂಡ) ಒಳ್ಳೆಯ ಉಪಾಯಗಳಿಂದ ನಿಗ್ರಹಿಸಬೇಕು.

೯. ಈ ಕಾರ್ಯಕ್ಕೆ ಅನೇಕ ಉಪಾಯಗಳಿವೆ. ಎಲೈ ಸನ್ಮತಿಯೇ! ಅವುಗಳಲ್ಲೆಲ್ಲ ಅಷ್ಟಾಂಗಯೋಗದ ಅಭ್ಯಾಸವು ಶ್ರೇಷ್ಠವಾದುದು; ಮತ್ತು ತಕ್ಷಣವೆ ಫಲವನ್ನು ಕೊಡುವಂತಹುದು.

೧೦. ಎಲೈ ಬ್ರಾಹ್ಮಣನೇ! ಯಮಗಳು, ನಿಯಮಗಳು, ಆಸನಗಳು, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ ಈ ಎಂಟೂ ಅನುಕ್ರಮವಾಗಿ ಯೋಗಕ್ಕೆ ಎಂಟು ಅಂಗಗಳೆಂದು ಹೇಳಲಾಗಿದೆ.

ತತ್ರಾಹಿಂಸಾ ಬ್ರಹ್ಮಚರ್ಯಸತ್ಯಾಸ್ತೇಯಾಪರಿಗ್ರಹಾಃ ।
ಏತೇ ಪಂಚ ಯಮಾಃ ಪ್ರೋಕ್ತಾಃ ಸಾಧನೀಯಾಃ ಪ್ರಯತ್ನತಃ ॥ ೧೧ ॥
ಶೌಚಂ ತಪಶ್ಚ ಸಂತೋಷಃ ಸ್ವಾಧ್ಯಾಯೋ ವಿಷ್ಣುಪೂಜನಂ ।
ಏತೇ ಚ ನಿಯಮಾಃ ಪಂಚ ದ್ವಿತೀಯಾಂಗತಯಾ ಮತಾಃ ॥ ೧೨ ॥
ಪರಿಹಾಯಾಂಗಚಾಂಚಲ್ಯಂ ಯಥಾಸುಖತಯಾ ಸ್ಥಿತಿಃ ।
ತದಾಸನಂ ಸ್ವಸ್ತಿಕಾದಿ ಪ್ರೋಕ್ತಂ ದ್ವಂದ್ವಾರ್ತಿಜಿನ್ಮನೇ ॥ ೧೩ ॥
ಚರತಾಂ ಸರ್ವತೋಽಸೂನಾಮೇಕದೇಶೇ ತು ಧಾರಣಂ ।
ಗುರೂಪದಿಷ್ಟರೀತ್ಯೈವ ಪ್ರಾಣಾಯಾಮಃ ಸ ಉಚ್ಯತೇ ॥ ೧೪ ॥
ಚಲೇ ವಾಯೌ ಚಲಂ ಚಿತ್ತಂ ಸ್ಥಿರೇ ತಸ್ಮಿನ್ಸ್ಥಿರಂ ತತಃ ।
ಸುದೇಶೇಽಯಂ ಸದಾಭ್ಯಸ್ಯಃ ಪೂರಕುಂಭಕರೇಚಕೈಃ ॥ ೧೫ ॥
ಮನಸೇಂದ್ರಿಯವೃತ್ತೀನಾಂ ತತ್ತದ್ವಿಷಯತಶ್ಚ ಯತ್ ।
ಆಕರ್ಷಣಂ ಪ್ರತೀಚೀನಂ ಪ್ರತ್ಯಾಹಾರಃ ಸ ಈರಿತಃ ॥ ೧೬ ॥

---

೧೧. ಅವುಗಳಲ್ಲಿ ಅಹಿಂಸೆ, ಬ್ರಹ್ಮಚರ್ಯ, ಸತ್ಯ, ಅಸ್ತೇಯ, ಅಪರಿಗ್ರಹ ಈ ಐದೂ ಯಮಗಳೆಂದು ಹೇಳಲಾಗಿದೆ. ಇವನ್ನು ಪ್ರಯತ್ನಪೂರ್ವಕವಾಗಿ ಸಾಧಿಸಬೇಕು.

೧೨. ಶೌಚ, ತಪಸ್ಸು, ಸಂತೋಷ, ಸ್ವಾಧ್ಯಾಯ, ವಿಷ್ಣುಪೂಜೆ ಇವು ಐದೂ ನಿಯಮಗಳು. ಇವೇ ಯೋಗದ ಎರಡನೆಯ ಅಂಗವೆಂದು ಭಾವಿಸಲಾಗಿದೆ.

೧೩. ಅಂಗಚಾಪಲ್ಯವನ್ನು ಪರಿಹರಿಸಿಕೊಂಡು ಹೇಗಿದ್ದರೆ ಸುಖವೋ ಹಾಗಿರುವುದೇ ಆಸನವೆನ್ನಿಸುವುದು. ಸ್ವಸ್ತಿಕ ಮೊದಲಾದುವೇ ಆಸನಗಳು. ಆಸನವು ದ್ವಂದ್ವಗಳಿಂದುಂಟಾಗುವ ಸಂಕಟವನ್ನು ಗೆಲ್ಲುವ ಸಾಧನವಾಗುವುದು.

೧೪. ಸುತ್ತಮುತ್ತ ಎಲ್ಲ ಕಡೆಗೂ ಹರಿದೋಡುತ್ತಿರುವ ಪ್ರಾಣಗಳನ್ನು ಗುರುವು ಉಪದೇಶಮಾಡಿದ ರೀತಿಯಿಂದಲೇ ಒಂದೇ ಕಡೆಗೆ ಸೆಳೆದು ನಿಲ್ಲಿಸುವುದು ಪ್ರಾಣಾಯಾಮವೆನಿಸಿಕೊಳ್ಳುವುದು.

೧೫. ವಾಯುವು ಚಂಚಲವಾದರೆ ಚಿತ್ತವೂ ಚಂಚಲವಾಗುತ್ತದೆ; ಅದು ಸ್ಥಿರವಾದರೆ ಚಿತ್ತವೂ ಸ್ಥಿರವಾಗುತ್ತದೆ. ಆದುದರಿಂದ ಒಳ್ಳೆಯ ಸ್ಥಳದಲ್ಲಿ ಪೂರಕ, ಕುಂಭಕ, ರೇಚಕಗಳಿಂದ ಕೂಡಿದ ಪ್ರಾಣಾಯಾಮವನ್ನು ಸದಾ ಅಭ್ಯಾಸಮಾಡಬೇಕು.

೧೬. ಇಂದ್ರಿಯಗಳ ವೃತ್ತಿಗಳನ್ನು ಅವವುಗಳಿಗೆ ಗುರಿಯಾಗಿರುವ ವಿಷಯಗಳಿಂದ ಮನಸ್ಸಿನ ಮೂಲಕ ಹಿಂದಕ್ಕೆಳೆದುಕೊಳ್ಳುವುದು ಯಾವುದುಂಟೋ ಅದೇ ಪ್ರತ್ಯಾಹಾರವೆಂದು ಹೇಳಿಸಿಕೊಳ್ಳುವುದು.

ನಾಭ್ಯಾದ್ಯನ್ಯತಮೇ ಸ್ಥಾನೇ ಪ್ರಾಣೇನ ಸಹ ಚೇತಸಃ ।
ವಾಸುದೇವಸ್ವರೂಪೇ ಯತ್ ಧಾರಣಂ ಧಾರಣೋದಿತಾ ॥ ೧೭ ॥
ಏಕೈಕಾವಯವಸ್ಯೈವ ಚಿಂತನಂ ಯತ್ಪೃಥಕ್ ಪೃಥಕ್ ।
ಪದಾಬ್ಜಾದೇರ್ಭಗವತಃ ತದ್ಧ್ಯಾನಮಿತಿ ಕೀರ್ತಿತಂ ॥ ೧೮ ॥
ನಿರೋಧಃ ಪ್ರಾಣಮನಸೋರತಿಪ್ರೇಮ್ಣಾ ಹರೌ ತು ಯಃ ।
ಸ ಸಮಾಧಿರಿತಿ ಪ್ರೋಕ್ತೋ ಯೋಗಿನಾಮಭಿವಾಂಛಿತಃ ॥ ೧೯ ॥
ಅಂಗೈರಷ್ಟಭಿರೇತೈರ್ಹಿ ಶಿಕ್ಷಿತೈಃ ಸಿದ್ಧಸದ್ಗುರೋಃ ।
ಯೋಗಃ ಸಿದ್ಧ್ಯತಿ ವೈ ಪುಂಸಾಂ ಸಮಾಧೇಃ ಪಕ್ವತಾತ್ಮಕಃ ॥ ೨೦ ॥
ನೈತಾದೃಶಂ ಪರಂ ಸಮ್ಯಕ್ ಮನೋನಿಗ್ರಹಸಾಧನಂ ।
ಪುರುಷಾಣಾಂ ಮುಮುಕ್ಷೂಣಾಮಿತಿ ಜಾನೀಹಿ ನಾರದ ॥ ೨೧ ॥
ತಪಸ್ವಿನಾಂ ಮಹಾಶತ್ರೋರ್ಬ್ರಹ್ಮಾಂಡಕ್ಷೋಭಕಾದಪಿ ।
ಮದನಾನ್ನ ಭಯಂ ಕಿಂಚಿತ್ ಯೋಗಿನಸ್ತ್ವಸ್ತಿ ಕರ್ಹಿಚಿತ್ ॥ ೨೨ ॥
ಆಯಾಸ್ಯಂತಂ ವಿಹಿತ್ವೈವ ಸೋಽಂತಕಾಲಂ ಚ ಯೋಗವಿತ್ ।
ಸ್ವಾತಂತ್ರ್ಯೇಣೈವ ದೇಹಂ ಸ್ವಂ ತ್ಯಜತೀತ್ಥಂ ಸಮಾಧಿನಾ ॥ ೨೩ ॥

---

೧೭. ನಾಭಿಯೇ ಮೊದಲಾದ ಯಾವುದಾದರೊಂದು ಸ್ಥಾನದಲ್ಲಿ ಪ್ರಾಣದೊಡನೆ ಚೇತಸ್ಸನ್ನು ವಾಸುದೇವನ ಸ್ವರೂಪವೇ ಆಗಿ ಧಾರಣೆಮಾಡುವುದು 'ಧಾರಣಾ' ಎನ್ನಿಸುವುದು.

೧೮. ಭಗವಂತನ ಪಾದಕಮಲವೇ ಮೊದಲಾದ ಒಂದೊಂದೇ ಅವಯವವನ್ನು ಬೇರೆ ಬೇರೆಯಾಗಿ ಚಿಂತನಮಾಡುವುದು ಧ್ಯಾನವೆಂದು ಹೇಳಲ್ಪಡುವುದು.

೧೯. ಪ್ರಾಣ ಮನಸ್ಸುಗಳೆರಡನ್ನೂ ಅತಿ ಪ್ರೇಮದಿಂದ ಶ್ರೀ ಹರಿಯಲ್ಲಿ ನೆಲೆಗೊಳಿಸಿ ಅಲ್ಲಿಯೇ ನಿರೋಧಿಸುವುದು ಸಮಾಧಿಯೆನಿಸಿಕೊಳ್ಳುವುದು. ಯೋಗಿಗಳಿಗೆ ಈ ಸಮಾಧಿಯು ಬಹು ಇಷ್ಟವಾಗಿರುವುದು.

೨೦. ಯೋಗಸಿದ್ಧನಾದ ಸದ್ಗುರುವಿನಿಂದ ಚೆನ್ನಾಗಿ ಶಿಕ್ಷೆಹೊಂದಿ ಅಭ್ಯಾಸ ಮಾಡಿದ ಈ ಎಂಟು ಅಂಗಗಳಿಂದ ಪುರುಷನಿಗೆ 'ಸಮಾಧಿಯಲ್ಲಿ ಪಕ್ವತ್ವ' ಸ್ವರೂಪವಾಗಿರುವ ಯೋಗವು ಸಿದ್ಧಿಸುತ್ತದೆ.

೨೧–೨೨. ಅಯ್ಯಾ ನಾರದನೇ! ಮೋಕ್ಷಾಪೇಕ್ಷಿಗಳಾದ ಪುರುಷರಿಗೆ ಚೆನ್ನಾಗಿ ಮನಸ್ಸನ್ನು ನಿಗ್ರಹಿಸಲು ಈ ತೆರನಾದ ಒಳ್ಳೆಯ ಸಾಧನವು ಮತ್ತೊಂದಿಲ್ಲವೆಂದು ತಿಳಿದುಕೊ. ತಪಸ್ವಿಗಳಿಗೆ ಮಹಾ ಶತ್ರುವಾಗಿರುವ, ಬ್ರಹ್ಮಾಂಡವನ್ನೇ ಕ್ಷೋಭೆಗೊಳಿಸುವ ಮನ್ಮಥನಿಂದಲೂ ಕೂಡ ಯೋಗಿಯಾದವನಿಗೆ ಯಾವಾಗಲೂ ಸ್ವಲ್ಪವೂ ಭಯವಿರುವುದಿಲ್ಲ.

೨೩. ಯೋಗವನ್ನು ಬಲ್ಲ ಆತನು ತನ್ನನ್ನು ಬಳಿಸಾರುತ್ತಿರುವ ಅಂತಕಾಲ

ಪಾರ್ಷ್ಣಿಭ್ಯಾಂ ಗುದಮಾಪೀಡ್ಯ ವಾಯುಂ ಪಾದದ್ವಯಸ್ಥಿತಂ ।
ಶನೈಃ ಶನೈಃ ಸಮಾಕೃಷ್ಯ ಮೃತ್ಯುಸ್ಥಾನಂ ನಯತ್ಯಮುಂ ॥ ೨೪ ॥
ಮನಸಾ ಕೇಶವಂ ಧ್ಯಾಯಂಸ್ತನ್ಮನುಂ ಚ ಷಡಕ್ಷರಂ ।
ಜಪಂಸ್ತತೋಽಮುಂ ನಯತಿ ವಾಯುಂ ಸ್ಥಾನಂ ಪ್ರಜಾಪತೇಃ ॥ ೨೫ ॥
ತತೋ ನಾಭಿಂ ಚ ಹೃದಯಮುರಃ ಕಂಠಂ ಚ ಯೋಗವಿತ್ ।
ನಯತಿ ಭ್ರುಕುಟಿಂ ವಾಯುಂ ವಾಸುದೇವಪರಾಯಣಃ ॥ ೨೬ ॥
ಏತೇಷು ಷಟ್ಸು ಸ್ಥಾನೇಷು ತ್ವೇಕೈಕಸ್ಮಿನ್ ಪೃಥಕ್ ಪೃಥಕ್ ।
ಯೋಗೀ ಪ್ರಾಣಮನೋಽಕ್ಷಾಣಾಂ ನಿರೋಧಂ ಚ ವಿಸರ್ಜನಂ ।
ತಾವದಭ್ಯಸತಿ ಸ್ವಸ್ಯ ಯಾವತ್ತಾಸ್ವೃತ್ತ್ವಸ್ವತಂತ್ರತಾ ॥ ೨೭ ॥
ಜಿತಂ ಜಿತಂ ವಿಹಾಯೈವ ಸ್ಥಾನಂ ಯಾತಿ ಪರಂಪರಂ ।
ಪ್ರಾಪ್ತಸ್ಯ ಸ್ಥಾನಕಂ ಷಷ್ಠಂ ತದಭ್ಯಾಸೇ ಶ್ರಮೋ ನ ಹಿ ॥ ೨೮ ॥
ಸಪ್ತಚ್ಛಿದ್ರಾಣಿ ರುದ್ಧ್ವಾಽಥ ಪ್ರಾಣಮಕ್ಷಮನೋಽಯುತಂ ।
ಪ್ರಾಪಯ್ಯ ತಾಲು ವ್ರಜತಿ ಬ್ರಹ್ಮರಂಧ್ರಂ ಸ ಯೋಗವಿತ್ ॥ ೨೯ ॥

---

ವನ್ನರಿತುಕೊಂಡು ಈ ರೀತಿಯಾದ ಸಮಾಧಿಯಿಂದಲೇ ಸ್ವಾತಂತ್ರ್ಯದಿಂದ ತನ್ನ ದೇಹವನ್ನು ತ್ಯಜಿಸುತ್ತಾನೆ.

೨೪. ಅವನು ಪಾರ್ಷ್ಣಿಗಳಿಂದ (ಹಿಮ್ಮಡಿಗಳಿಂದ) ಗುದಸ್ಥಾನವನ್ನು ಒತ್ತಿ ಅದುಮಿಕೊಂಡು ಪಾದಗಳೆರಡರಲ್ಲೂ ನೆಲಸಿರುವ ವಾಯುವನ್ನು ಮೆಲ್ಲಮೆಲ್ಲಗೆ ಆಕರ್ಷಿಸಿ ಅದನ್ನು ಮೃತ್ಯುಸ್ಥಾನವನ್ನೈದಿಸುತ್ತಾನೆ.

೨೫. ಮನಸ್ಸಿನಲ್ಲಿ ಕೇಶವನನ್ನು ಧ್ಯಾನಿಸುತ್ತ, ಷಡಕ್ಷರವನ್ನು ಜಪಿಸುತ್ತ, ಆ ವಾಯುವನ್ನು ಬ್ರಹ್ಮಸ್ಥಾನಕ್ಕೆ ಸೆಳೆದೊಯ್ಯುತ್ತಾನೆ.

೨೬. ಬಳಿಕ ಯೋಗಜ್ಞನಾದಾತನು ವಾಸುದೇವಪಾರಾಯಣನಾಗಿ ವಾಯುವನ್ನು ಕ್ರಮವಾಗಿ ನಾಭಿ, ಹೃದಯ, ಉರಸ್ಸು (ಎದೆ), ಕಂಠ, ಭ್ರುಕುಟಿ (ಹುಬ್ಬುಗಳು) ಈ ಸ್ಥಾನಗಳಿಗೆ ತೆಗೆದುಕೊಂಡುಹೋಗುತ್ತಾನೆ.

೨೭. ಯೋಗಿಯು ಈ ಆರು ಸ್ಥಾನಗಳಲ್ಲಿಯೂ ಪ್ರತಿಯೊಂದರಲ್ಲಿಯೂ ಬೇರೆಬೇರೆಯಾಗಿ ತನ್ನ ಪ್ರಾಣ, ಮನಸ್ಸು ಮತ್ತು ಇಂದ್ರಿಯಗಳ ನಿರೋಧ ವನ್ನೂ ವಿಸರ್ಜನೆಯನ್ನೂ ಎಲ್ಲಿಯವರೆಗೆ ಅಭ್ಯಾಸಮಾಡುತ್ತಿರುವನೋ ಅಲ್ಲಿಯ ವರೆಗೂ ಅವನಿಗೆ ಸ್ವತಂತ್ರತೆಯುಂಟಾಗುವುದು.

೨೮. ಗೆದ್ದಗೆದ್ದ ಸ್ಥಾನವನ್ನು ಬಿಟ್ಟುಬಿಟ್ಟೇ ಮುಂದುಮುಂದಿನ ಹೆಚ್ಚಿನ ಸ್ಥಾನವನ್ನು ಸೇರುತ್ತಾನೆ. ಆರನೆಯ ಸ್ಥಾನವನ್ನು ತಲುಪಿದವನಿಗೆ ಅದರ ಅಭ್ಯಾಸದಲ್ಲಿ ಶ್ರಮವಿರುವುದೇ ಇಲ್ಲ.

೨೯. ಆಮೇಲೆ ಆ ಯೋಗಜ್ಞನು ಸಪ್ತಚ್ಛಿದ್ರಗಳನ್ನೂ ಮುಚ್ಚಿ ಇಂದ್ರಿಯ

**ಮಾಯಾಮಯಪದಾರ್ಥಾನಾಂ ತತೋ ಹಿತ್ವೈವ ವಾಸನಾಃ ।**
**ಸ ವಾಸುದೇವೈಕಮನಾಃ ಸ್ತ್ಯಜತಿ ಸ್ವಕಲೇವರಂ ॥ ೩೦ ॥**
**ತತೋ ಭಗವತೋ ಧಾಮ ಶ್ರೀಕೃಷ್ಣಸ್ಯ ತಮಃಪರಂ ।**
**ಉಪೇತ್ಯ ಸೇವಮಾನಸ್ತಂ ನಂದತೇ ದಿವ್ಯವಿಗ್ರಹಃ ॥ ೩೧ ॥**
**ಇತಿ ತೇ ಕಥಿತೋ ಬ್ರಹ್ಮನ್ ಯೋಗಶಾಸ್ತ್ರಸ್ಯ ಸಂಗ್ರಹಃ ।**
**ಜಿತ್ವಾ ತೇನ ಮನಃ ಸ್ವೀಯಂ ತಮಾರಾಧಯ ಸರ್ವದಾ ॥ ೩೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಅಷ್ಟಾಂಗಯೋಗ ನಿರೂಪಣಂ"ನಾಮ ತ್ರಿಂಶೋಽಧ್ಯಾಯಃ**

---

ಮತ್ತು ಮನಸ್ಸುಗಳಿಂದೊಡಗೂಡಿದ ಪ್ರಾಣವನ್ನು ತಾಲುಸ್ಥಾನಕ್ಕೆ ಸೇರಿಸಿ ಬ್ರಹ್ಮರಂಧ್ರವನ್ನೇರಿಸುತ್ತಾನೆ.

೩೦. ಬಳಿಕ ಅವನು ಮಾಯಾಮಯವಾದ ಪದಾರ್ಥಗಳ ವಾಸನೆಗಳನ್ನು ಕಿತ್ತೊಗೆದು ವಾಸುದೇವನೊಬ್ಬನಲ್ಲಿಯೇ ಮನಸ್ಸಿಟ್ಟು ಕಳೇವರವನ್ನು ತೊರೆಯುತ್ತಾನೆ.

೩೧. ಆಮೇಲೆ ಅವನು ತಮಸ್ಸನ್ನು ಮೀರಿದ ಭಗವಂತನಾದ ಶ್ರೀಕೃಷ್ಣನ ಶ್ರೇಷ್ಠವಾದ ದಿವ್ಯಧಾಮವನ್ನು ಸೇರಿ ದಿವ್ಯಶರೀರವನ್ನು ಧರಿಸಿ ಆ ಭಗವಂತನ್ನನೇ ಸೇವಿಸುತ್ತ ಆನಂದಿಸುತ್ತಿರುತ್ತಾನೆ.

೩೨. ಅಯ್ಯಾ ಬ್ರಾಹ್ಮಣನೇ! ಈ ರೀತಿ ಯೋಗಶಾಸ್ತ್ರದ ಸಂಗ್ರಹವನ್ನು ನಿನಗೆ ತಿಳಿಸಿದ್ದೇನೆ. ಆದರಿಂದ ನಿನ್ನ ಮನಸ್ಸನ್ನು ಜಯಿಸಿ ಸದಾಕಾಲವೂ ಆ ಭಗವಂತನನ್ನು ಆರಾಧಿಸು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಅಷ್ಟಾಂಗಯೋಗನಿರೂಪಣ"ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

## ಶ್ರೀನರನಾರಾಯಣಸ್ತುತಿನಿರೂಪಣಂ

ಸ್ಕಂದ ಉವಾಚ :—

ಶ್ರುತ್ವೈತತ್ಸಕಲಂ ಧರ್ಮ್ಯಂ ಯಥಾವದ್ಭಗವದ್ವಚಃ ।
ನಿಃಸಂಶಯೋ ಮುನಿಃ ಪ್ರಾಹ ತಂ ಪ್ರಣಮ್ಯ ಕೃತಾಂಜಲಿಃ ॥ ೧ ॥

ನಾರದ ಉವಾಚ :—

ನಷ್ಟಾ ಮೇ ಸಂಶಯಾಃ ಸರ್ವೇ ಪ್ರಸಾದಾದ್ಭಗವಂಸ್ತವ ।
ವಾಸುದೇವಸ್ಯ ಮಾಹಾತ್ಮ್ಯಂ ಮಯಾಧಿಗತಮಂಜಸಾ ॥ ೨ ॥
ಕಂಚಿತ್ಕಾಲಮಿಹೈವಾಹಂ ತಪಃ ಕುರ್ವಂಸ್ತ್ವಯಾ ಸಹ ।
ಶೃಣ್ವಂಶ್ಚ ನಿತ್ಯಂ ಜ್ಞಾನಾದಿ ಕರಿಷ್ಯೇ ಪಕ್ವಮಾತ್ಮನಃ ॥ ೩ ॥

ಸ್ಕಂದ ಉವಾಚ :—

ಇತ್ಯುಕ್ತ್ವಾ ನಾರದಸ್ತತ್ರ ತೇನ ಚಾಪ್ಯನುಮೋದಿತಃ ।
ಉವಾಸ ದಿವ್ಯವರ್ಷಾಣಾಂ ಸಹಸ್ರಂ ಸ ತಪಶ್ಚರನ್ ॥ ೪ ॥
ಶುಶ್ರಾವ ಚಾನುದಿವಸಂ ಯಥಾಕಾಲಂ ಹರೇರ್ಮುಖಾತ್ ।
ಧರ್ಮಜ್ಞಾನಾನ್ಯಥ ಪ್ರಾಪ ಪಕ್ವತಾಂ ತತ್ರ ಯೋಗಿರಾಟ್ ॥ ೫ ॥

---

## ಕನ್ನಡದ ಅನುವಾದ

### ಶ್ರೀನರನಾರಾಯಣಸ್ತುತಿನಿರೂಪಣ

೧. ಸ್ಕಂದನು ಹೇಳುತ್ತಾನೆ:—ಧರ್ಮವನ್ನೊಳಗೊಂಡ ಭಗವಂತನ ಈ ವಚನಗಳನ್ನೆಲ್ಲ ಕೇಳಿ ತನ್ನ ಸಂಶಯವೆಲ್ಲ ಪರಿಹಾರವಾಗಲು ನಾರದಮುನಿಯು ಪ್ರಣಾಮಮಾಡಿ ಕೈಮುಗಿದುಕೊಂಡು ಹೀಗೆ ಬಿನ್ನವಿಸಿದನು :—

೨. ನಾರದನು ಹೇಳುತ್ತಾನೆ:—"ಎಲೈ ಭಗವಂತನೇ! ನಿನ್ನ ಪ್ರಸಾದದಿಂದ ನನ್ನ ಸರ್ವಸಂಶಯಗಳೂ ನಷ್ಟವಾದುವು. ವಾಸುದೇವನ ಮಾಹಾತ್ಮ್ಯವು ನನಗೆ ಪೂರ್ಣವಾಗಿ ತಿಳಿಯಬಂದಿತು.

೩. ಕೆಲವುಕಾಲದವರೆಗೆ ನಾನು ಇಲ್ಲಿಯೇ ನಿನ್ನೊಡನೆ ತಪಸ್ಸುಮಾಡುತ್ತಲೂ, ನಿತ್ಯವೂ ನಿನ್ನಿಂದ ಭಗವದ್ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಲೂ ನನ್ನ ಜ್ಞಾನಾದಿಗಳನ್ನು ಪಕ್ವಮಾಡಿಕೊಳ್ಳುತ್ತೇನೆ."

೪. ಸ್ಕಂದನು ಹೇಳುತ್ತಾನೆ:— ಈ ರೀತಿಯಾಗಿ ಹೇಳಿ ಆ ನಾರದನು ಆ ನಾರಾಯಣನಿಂದಲೂ ಅನುಮೋದನಹೊಂದಿ ದಿವ್ಯಸಹಸ್ರವರ್ಷಕಾಲ ತಪಸ್ಸುಮಾಡುತ್ತ ಅಲ್ಲಿಯೇ ವಾಸಮಾಡಿದನು.

೫. ಅಲ್ಲಿ ಅನುದಿನವೂ ಶ್ರೀಹರಿಯ ಮುಖದಿಂದ ತಕ್ಕಕಾಲ ಒದಗಿ

ಸ್ನೇಹಂ ಚ ಪರಮಂ ಪ್ರಾಪ ಸ ಶ್ರೀಕೃಷ್ಣೇಽಖಿಲಾತ್ಮನಿ ।
ಗುಣಗಾನಪರೋ ನಿತ್ಯಮಾಸ ಭಾಗವತಾಗ್ರಣೀಃ ॥ ೬ ॥
ಭಕ್ತಿನಿಷ್ಠಾಂ ಪರಾಂ ಪ್ರಾಪ್ತಮಥ ತಂ ಸಿದ್ಧಯೋಗಿನಂ ।
ಉವಾಚ ಭಗವಾನ್ ಪ್ರೀತಃ ಶ್ರೇಯಸ್ಕೃತ್ಸರ್ವದೇಹಿನಾಂ ॥ ೭ ॥

ಶ್ರೀ ನಾರಾಯಣ ಉವಾಚ :—

ಸಿದ್ಧೋಽಸಿ ತ್ವಂ ಮಹರ್ಷೇಽದ್ಯ ಗಚ್ಛ ಲೋಕಹಿತಂ ಕುರು ।
ಏಕಾಂತಧರ್ಮಂ ಸರ್ವತ್ರ ಪ್ರವರ್ತಯಿತುಮರ್ಹಸಿ ॥ ೮ ॥

ಸ್ಕಂದ ಉವಾಚ :—

ಇತ್ಯಾಜ್ಞಾಂ ಶಿರಸಾ ತಸ್ಯ ಸ ಆದಾಯ ಜಗದ್ಗುರೋಃ ।
ಗಚ್ಛಂಸ್ತತಶ್ಚಾಸ್ತೌಷೀತ್ ಪ್ರಣಮ್ಯ ಪ್ರಾಂಜಲಿಃ ಸ್ಥಿತಃ ॥ ೯ ॥

ನಾರದ ಉವಾಚ :—

ನಮೋ ನಮಸ್ತೇ ಭಗವನ್ ಜಗದ್ಗುರೋ
ನಾರಾಯಣಾಽಪ್ರಾಕೃತ ದಿವ್ಯಮೂರ್ತೇ ।
ಅನಂತಕಲ್ಯಾಣಗುಣಾಕರಸ್ತ್ವಂ
ದಾಸೇ ಮಯಿ ಪ್ರೀತಿಕರಃ ಸದಾ ಸ್ಯಾಃ ॥ ೧೦ ॥

---

ಬಂದಾಗ ಧರ್ಮಜ್ಞಾನಾದಿಗಳನ್ನು ಕೇಳಿ ತಿಳಿದುಕೊಂಡನು. ಅನಂತರದಲ್ಲಿ ಆ ಯೋಗಿರಾಜನು ಯೋಗದಲ್ಲಿ ಪಕ್ವತೆಯನ್ನು ಪಡೆದನು.

೬. ಅವನು ಅಖಿಲಾತ್ಮನಾದ ಶ್ರೀಕೃಷ್ಣನಲ್ಲಿ ಪರಮಪ್ರೀತಿಯನ್ನು ಹೊಂದಿದನು. ಆ ಭಾಗವತಾಗ್ರಣಿಯು ಸದಾ ಆ ಭಗವಂತನ ಗುಣಗಾನದಲ್ಲಿಯೇ ನಿರತನಾದನು.

೭. ಪರಮಶ್ರೇಷ್ಠವಾದ ಭಕ್ತಿನಿಷ್ಠೆಯನ್ನು ಪಡೆದು ಸಿದ್ಧಯೋಗಿಯಾದ ಅವನನ್ನು ಕುರಿತು ಸರ್ವದೇಹಿಗಳಿಗೂ ಶ್ರೇಯಸ್ಸನ್ನುಂಟುಮಾಡುವವನಾದ ಭಗವಂತನು ಪ್ರೀತನಾಗಿ ಹೀಗೆ ನುಡಿದನು :—

೮. ಶ್ರೀನಾರಾಯಣನು ಹೇಳುತ್ತಾನೆ:— "ಎಲೈ ಮಹರ್ಷಿಯೇ! ಈಗ ನೀನು ಸಿದ್ಧನಾಗಿದ್ದೀಯೆ. ಹೋಗು; ಲೋಕಹಿತವನ್ನು ಮಾಡು. ಎಲ್ಲ ಕಡೆಯೂ ಏಕಾಂತ (ಭಕ್ತಿ) ಧರ್ಮವನ್ನು ಪ್ರಸಾರಮಾಡು."

೯. ಸ್ಕಂದನು ಹೇಳುತ್ತಾನೆ:—ಆ ಜಗದ್ಗುರುವಿನ ಈ ಆಜ್ಞೆಯನ್ನು ಶಿರಸ್ಸಿನಲ್ಲಿ ಧರಿಸಿ ಹೊರಡುವವನಾಗಿ ನಾರದಮುನಿಯು ಅವನಿಗೆ ಪ್ರಣಾಮ ಮಾಡಿ ಕೈಮುಗಿದು ನಿಂತುಕೊಂಡು ಅವನನ್ನು ಹೀಗೆ ಸ್ತುತಿಸಿದನು :

೧೦. ನಾರದನು ಸ್ತುತಿಸುತ್ತಾನೆ:—"ಭಗವಂತಾ! ನಿನಗೆ ನಮಸ್ಕಾರವು! ಜಗದ್ಗುರುವೇ, ನಾರಾಯಣಾ! ನೀನು ಅಪ್ರಾಕೃತವಾದ ದಿವ್ಯಮೂರ್ತಿ

ತ್ವಂ ವಾಸುದೇವೋಽಸಿ ಜಗನ್ನಿವಾಸಃ
ಕ್ಷೇಮಾಯ ಲೋಕಸ್ಯ ತಪಃ ಕರೋಷಿ ।
ಯೋಗೇಶ್ವರೇಶೋಪಶಮಸ್ಥ ಆತ್ಮಾ
ರಾಮಾಧಿಪಸ್ತ್ವಂ ಪರಹಂಸಸದ್ಗುರುಃ ॥ ೧೧ ॥
ವಿಭುರ್ಋಷೀಣಾಂ ವೃಷಭೋಽಕ್ಷರಾತ್ಮಾ
ಜೀವೇಶ್ವರಾಣಾಂ ಚ ನಿಯಾಮಕೋಽಸಿ ।
ಸಾಕ್ಷೀ ಮಹಾಪೂರುಷ ಆತ್ಮತಂತ್ರಃ
ಕಾಲೋಽಭವದ್ಯದ್ಭ್ರುಕುಟೇರ್ಮಹಾಂಶ್ಚ ॥ ೧೨ ॥
ಸರ್ಗಾದಿಲೀಲಾಂ ಜಗತಾಂ ತ್ವಮೀಶ
ಕರೋಷಿ ಮಾಯಾಪುರುಷಾತ್ಮನೈವ ।
ತಥಾಪ್ಯಕರ್ತಾ ನನು ನಿರ್ಗುಣೋಽಸಿ
ಭೂಮಾ ಪರಬ್ರಹ್ಮ ಪರಾತ್ಪರಶ್ಚ ॥ ೧೩ ॥
ಸತ್ಯಃ ಸ್ವಯಂ ಜ್ಯೋತಿರತರ್ಕ್ಯಶಕ್ತಿ
ಸ್ತ್ವಂ ಬ್ರಹ್ಮಭೂತಾತ್ಮವಿಚಿಂತ್ಯ ಮೂರ್ತಿಃ ।

---

ಯುಳ್ಳವನು; ಅನಂತಗಳಾದ ಕಲ್ಯಾಣಗುಣಗಳಿಗೆ ನೆಲೆಯಾದವನು. ದಾಸನಾದ ನನ್ನಲ್ಲಿ ನೀನು ಸದಾ ಪ್ರೀತಿಯುಳ್ಳವನಾಗಿರು.

೧೧. ನೀನು ವಾಸುದೇವನು; ಜಗನ್ನಿವಾಸನು. ಲೋಕದ ಕ್ಷೇಮಕ್ಕಾಗಿ ತಪಸ್ಸುಮಾಡುತ್ತಿರುವೆ. ಯೋಗೇಶ್ವರರಿಗೆಲ್ಲ ಈಶ್ವರನಾದವನು ನೀನು. ಉಪಶಮ ಭಾವದಲ್ಲಿರುವವನು ನೀನು. ನೀನೇ ಆತ್ಮನು. ರಾಮಾಧಿಪತಿಯೂ, ಪರಮ ಹಂಸನೂ, ಸದ್ಗುರುವೂ ನೀನೇ ಆಗಿರುವೆ.

೧೨. ನೀನು ವಿಭುವು, ಋಷಿಗಳಲ್ಲೆಲ್ಲ ಶ್ರೇಷ್ಠನು; ಅಕ್ಷರಾತ್ಮನು. ಜೀವೇಶ್ವರರೆಲ್ಲರಿಗೂ ನೀನು ನಿಯಾಮಕನಾಗಿದ್ದೀಯೆ. ನೀನು ಸಾಕ್ಷಿಯು, ಮಹಾಪುರುಷನು, ಆತ್ಮತಂತ್ರನು. ನಿನ್ನ ಹುಬ್ಬುಗಂಟಿನಿಂದಲೇ ಮಹತ್ತಾದ ಕಾಲವು ಉದ್ಭವಿಸಿತು.

೧೩. ಎಲೈ ಈಶನೇ! ನೀನು ಮಾಯಾಪುರುಷಸ್ವರೂಪದಿಂದಲೆ ಜಗತ್ತು ಗಳ ಸೃಷ್ಟಿ ಮೊದಲಾದ ಲೀಲೆಯನ್ನು ನಡೆಸುತ್ತೀಯೆ. ಹಾಗಾದರೂ ನೀನು ಅಕರ್ತನೇ ಸರಿ. ನಿರ್ಗುಣನೂ, ಎಲ್ಲಕ್ಕೂ ದೊಡ್ಡವನೂ, ಪರಬ್ರಹ್ಮನೂ, ಪರಾತ್ಪರನೂ ಆಗಿದ್ದೀಯೆ.

೧೪. ಮಹಾವ್ರತಾಚಾರ್ಯ! ಮಹಾಮುನೀಂದ್ರಾ! ಕಂದರ್ಪನ ದರ್ಪ ವನ್ನು ಅಪಹರಿಸುವ ಮಹಾಪ್ರತಾಪಶಾಲಿಯೇ! ಸತ್ಯಸ್ವರೂಪನು ನೀನೇ;

ಬೃಹದ್ವ್ರತಾಚಾರ್ಯ ಮಹಾಮುನೀಂದ್ರ
ಕಂದರ್ಪದರ್ಪಾಪಹರಪ್ರತಾಪ ॥ ೧೪ ॥
ತಪಸ್ವಿನಾಂ ಯೇ ರಿಪವಃ ಪ್ರಸಿದ್ಧಾಃ
ಕ್ರೋಧೋ ರಸೋ ಮತ್ಸರಲೋಭಮುಖ್ಯಾಃ ।
ಅಪ್ಯಾಶ್ರಮಂ ತೇಽಪಿ ಕದಾಪಿ ವೇಷ್ಟುಂ
ನೇಮಂ ಕ್ಷಮಾ ಹ್ಯೇಷ ತವ ಪ್ರತಾಪಃ ॥ ೧೫ ॥
ಛಂದೋಮಯೋ ಜ್ಞಾನಮಯೋಽಮೃತಾಧ್ವಾ
ಧರ್ಮಾತ್ಮಕೋ ಧರ್ಮಸರ್ಗಾಭಿಪೋಷ್ಟಾ ।
ಉನ್ಮೂಲಿತಾಧರ್ಮಸರ್ಗೋ ಮಹಾತ್ಮಾ
ತ್ವಮವ್ಯಯಶ್ಚಾಕ್ಷಯೋಽವ್ಯಕ್ತಬಂಧುಃ ॥ ೧೬ ॥
ನಿರ್ದೋಷರೂಪಸ್ಯ ತವಾಽಖಿಲಾಃ ಕ್ರಿಯಾಃ
ಭವಂತಿ ವೈ ನಿರ್ಗುಣಾ ನಿರ್ಗುಣಸ್ಯ ।
ಧರ್ಮಾರ್ಥಕಾಮೇಪ್ಸುಭಿರರ್ಚನೀಯ
ಸ್ತ್ವಮೀಶ್ವರೋ ನಾಥ ಮುಮುಕ್ಷುಭಿಶ್ಚ ॥ ೧೭ ॥

---

ಸ್ವಯಂಜ್ಯೋತಿಯು ; ಇಷ್ಟೆಂದು ಊಹಿಸಲಾಗದಷ್ಟು ಶಕ್ತಿಯುಳ್ಳವನು ; ಬ್ರಹ್ಮಸ್ವರೂಪವನ್ನೈದಿದವರಿಂದ ಚಿಂತಿಸಲ್ಪಡುವ ಮೂರ್ತಿಯುಳ್ಳವನು.

೧೫. ತಪಸ್ವಿಗಳಿಗೆ ಶತ್ರುಗಳೆಂದು ಯಾವುವು ಪ್ರಸಿದ್ಧವಾಗಿರುವುವೋ ಆ ಕ್ರೋಧ, ರಸ (ರಾಗ), ಮತ್ಸರ, ಲೋಭ ಮೊದಲಾದುವು ಯಾವೊಮ್ಮೆಯೂ ನಿನ್ನ ಈ ಆಶ್ರಮವನ್ನೇ ಆದರೂ ಆವರಿಸಲು ಸಮರ್ಥಗಳಾಗಿಲ್ಲ. ನಿನ್ನ ಪ್ರತಾಪವು ಹೀಗಿರುವುದು.

೧೬. ನೀನು ಛಂದೋಮಯನು ; ಜ್ಞಾನಮಯನು ; ಅಮೃತತತ್ವಕ್ಕೆ ಮಾರ್ಗವಾಗಿರುವವನು ; ಧರ್ಮಾತ್ಮನು ; ಧರ್ಮಸೃಷ್ಟಿಯನ್ನು ಚೆನ್ನಾಗಿ ಪೋಷಿಸುವವನು ; ಅಧರ್ಮಸೃಷ್ಟಿಯನ್ನು ಬೇರು ಸಹಿತ ಕಿತ್ತೆಸೆಯುವವನು ; ಮಹಾತ್ಮನು ; ಅವ್ಯಯನು (ನಾಶರಹಿತನು) ; ಅಕ್ಷಯನು ; ಮತ್ತು ಅವ್ಯಕ್ತಬಂಧುವು.

೧೭. ನಿರ್ದೋಷರೂಪನೂ, ನಿರ್ಗುಣನೂ ಆಗಿರುವ ನಿನ್ನ ಸಮಸ್ತ ಕ್ರಿಯೆಗಳೂ ನಿರ್ಗುಣ (ಗುಣಾತೀತ)ಗಳೇ ಆಗುತ್ತವೆ. ನಾಥಾ! ಧರ್ಮಾರ್ಥಕಾಮಗಳನ್ನಪೇಕ್ಷಿಸುವವರಿಂದಲೂ, ಮೋಕ್ಷಾಪೇಕ್ಷಿಗಳಿಂದಲೂ ಅರ್ಚನೆ ಹೊಂದಲರ್ಹನಾದ ಈಶ್ವರನೇ ನೀನು.

ತ್ವಂ ಕಾಲಮಾಯಾಯಮಸಂಸೃತಿಭ್ಯೋ
ಮಹಾಭಯಾತ್ಪಾತುಮನೇಕಃ ಸಮರ್ಥಃ ।
ಭಕ್ತಾಪರಾಧಾನನವೇಕ್ಷಮಾಣೋ
ಮಹಾದಯಾಲುಃ ಕಿಲ ಭಕ್ತವತ್ಸಲಃ ॥ ೧೮ ॥
ಧೃತಾವತಾರಸ್ಯ ಹಿ ನಾಮಮಾತ್ರಂ
ರೂಪಂ ಚ ವಾ ಯಃ ಸ್ಮರೇದಂತಕಾಲೇ ।
ಸೋಽಪಿ ಪ್ರಭೋ ಘೋರಮಹಾಘಸಂಘಾನ್
ಸದ್ಯೋ ವಿಮುಕ್ತೋ ದಿವಮಾಶು ಯಾತಿ ॥ ೧೯ ॥
ತಂ ತ್ವಾಂ ವಿಹಾಯಾತ್ರ ತು ಯೋ ಮನುಷ್ಯೋ
ದೇಹೇ ತ್ರಿಧಾತಾವಪಿ ದೈಹಿಕೇಷು ।
ಜಾಯಾತ್ಮಜಜ್ಞಾತಿಧನೇಷು ಸಜ್ಜತೇ
ಸ ಮಾಯಯಾ ವಂಚಿತ ಏವ ಮೂಢಃ ॥ ೨೦ ॥
ತ್ವದ್ಭಕ್ತಿಯೋಗ್ಯೋ ನರದೇಹ ಏವ
ಯಂ ಕಾಮಯಂತೇಽಪಿ ಚ ನಾಕಸಂಸ್ಥಾಃ ।
ತ್ವದ್ಭಕ್ತಿಹೀನಂ ಹಿ ದಿವೋಽಪಿ ಸೌಖ್ಯಂ
ಅಹಂ ತು ಜಾನೇ ನರಕೇಣ ತುಲ್ಯಂ ॥ ೨೧ ॥

---

೧೮. ಕಾಲಮಾಯೆ, ಯಮ, ಮತ್ತು ಸಂಸಾರಗಳಿಂದಲೂ ಮಹಾಭಯದಿಂದಲೂ ಕಾಪಾಡುವುದಕ್ಕೆ ನೀನೊಬ್ಬನೇ ಸಮರ್ಥನಾಗಿದ್ದೀಯೆ. ಭಕ್ತರ ಅಪರಾಧಗಳನ್ನು ಗಮನಕ್ಕೆ ತಂದುಕೊಳ್ಳದ ದಯಾಳುವೂ, ಭಕ್ತವತ್ಸಲನೂ ಆಗಿದ್ದೀಯೆ.

೧೯. ಎಲೈ ಪ್ರಭುವೇ! ಅವತಾರಗಳನ್ನೆತ್ತಿದ ನಿನ್ನ ನಾಮಮಾತ್ರವನ್ನಾಗಲಿ, ರೂಪವನ್ನಾಗಲಿ ಯಾವನು ಕೊನೆಗಾಲದಲ್ಲಿ ಸ್ಮರಿಸುವನೋ ಅವನು ಕೂಡ ಘೋರವಾದ ಮಹಾಪಾಪಸಮೂಹದಿಂದ ತಕ್ಷಣವೆ ಬಿಡುಗಡೆಹೊಂದಿ ಬೇಗನೆ ಸ್ವರ್ಗವನ್ನೈದುತ್ತಾನೆ.

೨೦. ಆ ರೀತಿಯ ಮಹಿಮೆಯುಳ್ಳ ನಿನ್ನನ್ನು ಬಿಟ್ಟು ಯಾವ ಮನುಷ್ಯನು ದೇಹದಲ್ಲಿಯೂ, ದೈಹಿಕವಾದ ಮೂರು ಧಾತುಗಳಲ್ಲಿಯೂ, ಹೆಂಡತಿ, ಮಕ್ಕಳು, ಜ್ಞಾತಿಗಳು, ಧನ— ಇವುಗಳಲ್ಲಿಯೂ ಮನಕೊಟ್ಟು ಆಸಕ್ತನಾಗಿರುವನೋ ಆ ಮೂಢನು ಮಾಯೆಯಿಂದ ಮೋಸಹೊಂದಿದವನೇ ಸರಿ.

೨೧. ನಿನ್ನ ಭಕ್ತಿಗೆ ಯೋಗ್ಯವಾದುದು ನರದೇಹವೊಂದೇ ಸರಿ. ಸ್ವರ್ಗದಲ್ಲಿ ನೆಲಸಿರುವವರು ಕೂಡ ಆ ನರದೇಹವನ್ನು ಅಪೇಕ್ಷಿಸುತ್ತಾರೆ. ನಿನ್ನ ಭಕ್ತಿಯಿಲ್ಲದಿರುವ ಸ್ವರ್ಗದ ಸೌಖ್ಯವೂ ಕೂಡ ನರಕಕ್ಕೆ ಸಮಾನವೆಂದು ನಾನು ತಿಳಿಯುತ್ತೇನೆ.

ತಪಸ್ತ್ರಿಲೋಕ್ಯಾಃ ಕುರುಷೇ ಸುಖಾಯ
ತತ್ರಾಪಿ ತೇ ಭಾರತವಾಸಿಪುಂಸು ।
ಅನುಗ್ರಹೋ ಭೂರಿತರೋ ಯದತ್ರ
ಕೃತಾವತಾರೋ ವಿಚರನ್ವಿರಾಜಸೇ ॥ ೨೨ ॥
ತಸ್ಯಾಶ್ರಯಂ ಯೇ ತವ ನಾತ್ರ ಕುರ್ವತೇ
ತ ಏವ ಶಾಸ್ತ್ರೇಷು ಮತಾಃ ಕೃತಘ್ನಾಃ ।
ಅತಸ್ತ್ವದೇಕಾಶ್ರಯಮೇವ ಬಾಢಂ
ಕುರ್ವತ್ಯಜಸ್ರಂ ಮಯಿ ತೇಽಸ್ತು ತುಷ್ಟಿಃ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಶ್ರೀನರನಾರಾಯಣಸ್ತುತಿನಿರೂಪಣಂ" ನಾಮೈಕತ್ರಿಂಶೋಽಧ್ಯಾಯಃ

---

೨೨. ಮೂರು ಲೋಕಗಳ ಸುಖಕ್ಕಾಗಿಯೆ ನೀನು ತಪಸ್ಸುಮಾಡುತ್ತಿದ್ದೀಯೆ. ಅದರಲ್ಲಿಯೂ ಭಾರತವಾಸಿಗಳಾದ ಪುರುಷರಲ್ಲಿ ನಿನಗೆ ಅನುಗ್ರಹವು ಬಹಳ ಹೆಚ್ಚಾಗಿದೆ. ಆದುದರಿಂದಲೇ ಇಲ್ಲಿ ಅವತಾರಮಾಡಿ ಓಡಾಡುತ್ತ ವಿರಾಜಿಸುತ್ತಿದ್ದೀಯೆ.

೨೩. ಅಂತಹ ನಿನ್ನನ್ನು ಯಾರು ಆಶ್ರಯಮಾಡುವುದಿಲ್ಲವೋ ಅವರೇ ಶಾಸ್ತ್ರಗಳಲ್ಲಿ ಕೃತಘ್ನರೆಂದು ಭಾವಿಸಲ್ಪಟ್ಟಿರುವರು. ಆದುದರಿಂದ ಯಾವಾಗಲೂ ನಿಜವಾಗಿ ನಿನ್ನೊಬ್ಬನನ್ನೇ ಏಕೈಕ ಆಶ್ರಯವಾಗಿ ಮಾಡಿಕೊಂಡಿರುವ ನನ್ನಲ್ಲಿ ನಿನಗೆ ಸಂತುಷ್ಟಿಯುಂಟಾಗಲಿ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ಶ್ರೀವಾಸುದೇವ ಮಾಹಾತ್ಮ್ಯದಲ್ಲಿ "ಶ್ರೀನರನಾರಾಯಣಸ್ತುತಿನಿರೂಪಣ" ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶೋಽಧ್ಯಾಯಃ

## ಗ್ರಂಥಸಂಪ್ರದಾಯಪ್ರವೃತ್ತಿನಿರೂಪಣಂ

ಸ್ಕಂದ ಉವಾಚ :—

ಇತಿ ಸ್ತುತ್ವಾ ತಮೀಶಾನಂ ನಾರದಃ ಸ ಯಯೌ ತತಃ ।
ಶಮ್ಯಾಪ್ರಾಸಾಭಿಧಂ ಬ್ರಹ್ಮನ್ ವ್ಯಾಸಸ್ಯಾಶ್ರಮಮಾದಿತಃ ॥ ೧ ॥
ಸಾದರಂ ಮಾನಿತಸ್ತೇನ ಪ್ರತ್ಯುತ್ಥಾನಾಸನಾದಿಭಿಃ ।
ತಸ್ಮಾ ಏಕಾಂತಿಕಂ ಧರ್ಮಂ ಪ್ರಾಹ ಜಿಜ್ಞಾಸವೇ ಸ ಚ ॥ ೨ ॥
ತತೋ ಬ್ರಹ್ಮಸಭಾಂ ಗತ್ವಾ ಬ್ರಹ್ಮಣಃ ಶೃಣ್ವತೋ ಮುನಿಃ ।
ದೇವಾನ್ ಪಿತೄನ್ ಮಹರ್ಷೀಂಶ್ಚ ತತ್ರಸ್ಥಾಂಸ್ತಮುಪಾದಿಶತ್ ॥ ೩ ॥
ತತ್ರ ಸ್ಥಿತೋ ಭಾಸ್ಕರಶ್ಚ ಧರ್ಮಮೇತಂ ಪುನರ್ಮುನೇ ।
ಶುಶ್ರಾವ ನಾರದಾತ್ಸರ್ವಂ ಶ್ರುತಂ ನಾರಾಯಣಾತ್ಪುರಾ ॥ ೪ ॥
ಸಪ್ರಾಹಾತ್ಮಾಗ್ರಯಾಯಿಭ್ಯೋ ವಾಲಖಿಲ್ಯೇಭ್ಯ ಆದರಾತ್ ।
ಮೇರೌ ತೇ ಸಂಗತಾನ್ ದೇವಾನ್ ಇಂದ್ರಾದೀಂಶ್ಚ ನ್ಯಶಾಮಯನ್ ॥

---

### ಕನ್ನಡದ ಅನುವಾದ

#### ಗ್ರಂಥಸಂಪ್ರದಾಯಪ್ರವೃತ್ತಿನಿರೂಪಣ

೧. ಸ್ಕಂದನಿಂತೆಂದನು :— ಎಲೈ ಬ್ರಾಹ್ಮಣನೇ! ಹೀಗೆ ಆ ಈಶನನ್ನು ಸ್ತುತಿಸಿದ ಬಳಿಕ ಆ ನಾರದನು ಶಮ್ಯಾಪ್ರಾಸವೆಂಬ ವ್ಯಾಸನ ಆಶ್ರಮಕ್ಕೆ ಹೋಗಿ ಸೇರಿದನು.

೨. ಆ ವ್ಯಾಸನಿಂದ ಪ್ರತ್ಯುತ್ಥಾನ (ಎದ್ದುಬಂದು ಎದುರುಗೊಳ್ಳುವುದು), ಆಸನ (ಪೀಠ ಕೊಡುವುದು) ಮೊದಲಾದ ರೀತಿಗಳಿಂದ ಆದರಪೂರ್ವಕವಾಗಿ ಸನ್ಮಾನಹೊಂದಿ ಜಿಜ್ಞಾಸುವಾದ (ತಿಳಿಯಬೇಕೆಂದು ಬಯಸುವ) ಅವನಿಗೆ ಏಕಾಂತಿಕಧರ್ಮವನ್ನು ಹೇಳಿದನು.

೩. ಆಮೇಲೆ ಬ್ರಹ್ಮಸಭೆಗೆ ಹೋಗಿ ಬ್ರಹ್ಮನು ಆಲಿಸುತ್ತಿರಲಾಗಿ ಅವನೆದುರಿಗೆ, ಅಲ್ಲಿ ನೆರೆದಿದ್ದ ದೇವತೆಗಳಿಗೂ, ಪಿತೃಗಳಿಗೂ, ಮಹರ್ಷಿಗಳಿಗೂ ಆ ಮುನಿಯು ಆ ಧರ್ಮವನ್ನು ಉಪದೇಶಿಸಿದನು.

೪. ಎಲೈ ಮುನಿಯೇ! ಅಲ್ಲಿದ್ದ ಸೂರ್ಯನು ಪೂರ್ವದಲ್ಲಿ ನಾರಾಯಣನಿಂದ ಕೇಳಿ ತಿಳಿದಿದ್ದ ಈ ಧರ್ಮವೆಲ್ಲವನ್ನೂ ಮತ್ತೆ ನಾರದನಿಂದ ಕೇಳಿದನು.

೫. ಅವನು (ಸೂರ್ಯನು) ತನ್ನ ಮುಂಮುಗಡೆ ಹೋಗುವವರಾದ ವಾಲಖಿಲ್ಯರಿಗೆ ಆದರದಿಂದ ಆ ಧರ್ಮವನ್ನು ಬೋಧಿಸಿದನು. ಅವರು ಮೇರುವಿನಲ್ಲಿ ಸೇರಿದ್ದ ಇಂದ್ರಾದಿ ದೇವತೆಗಳಿಗೆ ಅದನ್ನು ತಿಳಿಸಿದರು.

ತೇಭ್ಯೋಽಸಿತೋ ಮುನಿಃ ಶ್ರುತ್ವಾ ಧರ್ಮಮೇತಂ ದ್ವಿಜೋತ್ತಮ ।
ಪಿತೃಭ್ಯಃ ಕಥಯಾಮಾಸ ಪಿತೃಲೋಕಂ ಗತಃ ಕ್ವಚಿತ್ ॥ ೬ ॥
ಪಿತರಸ್ತೇ ತ್ವರ್ಯಮಾದ್ಯಾ ಊಚಿರೇ ಶಂತನುಂ ನೃಪಂ ।
ಸ ಭೀಷ್ಮಾಯ ಸ್ವಪುತ್ರಾಯ ಕಥಯಾಮಾಸ ತತ್ತ್ವತಃ ॥ ೭ ॥
ಸೋಽಪಿ ಭಾರತಯುದ್ಧಾಂತೇ ಧರ್ಮರಾಜಾಯ ಪೃಚ್ಛತೇ ।
ಶಯಾನಃ ಶರಶಯ್ಯಾಯಾಂ ಪ್ರಾಹ ಸಂಸದಿ ಭೂಯಸಿ ॥ ೮ ॥
ತತ್ರ ಶ್ರುತ್ವಾ ನಾರದೋಽಪಿ ಸ್ಥಿತಃ ಸದಸಿ ಸಾದರಂ ।
ಕೈಲಾಸೇ ಶಂಕರಂ ಪ್ರಾಹ ಸ ಚ ಮಾಂ ಮುನಿಸತ್ತಮ ॥ ೯ ॥
ಮಯಾ ತೇ ಕಥಿತಂ ಬ್ರಹ್ಮನ್ ಪೃಚ್ಛತೇ ಧರ್ಮವರ್ತಿನೇ ।
ಪಾತ್ರಾಯೈತತ್ಪ್ರದಾತವ್ಯಮಿತಿ ಮಾಂ ಹಿ ಪಿತಾಬ್ರವೀತ್ ॥ ೧೦ ॥
ಯೇನ ಯೇನ ಶ್ರುತಂ ಹ್ಯೇತನ್ಮಾಹಾತ್ಮ್ಯಂ ಸಾತ್ವತಾಂ ಪತೇಃ ।
ಸ ಸ ತಸ್ಮಿನ್ ಪರಾಂ ಭಕ್ತಿಂ ಚಕಾರ ಸ್ವವಿಮುಕ್ತಯೇ ॥ ೧೧ ॥
ಯುಧಿಷ್ಠಿರೋಽಪಿ ರಾಜರ್ಷಿಃ ಶ್ರುತ್ವಾ ಭೀಷ್ಮೇಣ ಕೀರ್ತಿತಂ ।
ಮಾಹಾತ್ಮ್ಯಂ ದೇವಕೀಸೂನೋರ್ಮುಮುದೇ ಭ್ರಾತೃಭಿಃ ಸಹ ॥ ೧೨ ॥

---

೬. ಎಲೈ ದ್ವಿಜೋತ್ತಮನೇ! ಅಸಿತಮುನಿಯು ಅವರಿಂದ ಈ ಧರ್ಮವನ್ನಾಲಿಸಿ ಯಾವಾಗಲೋ ಒಮ್ಮೆ ಪಿತೃಲೋಕಕ್ಕೆ ಹೋಗಿದ್ದವನು ಪಿತೃಗಳಿಗೆ ವಿವರಿಸಿ ಹೇಳಿದನು.

೭. ಅರ್ಯಮನೇ ಮೊದಲಾದ ಆ ಪಿತೃಗಳು ಶಂತನುರಾಜನಿಗೆ ಹೇಳಿದರು. ಅವನು ತನ್ನ ಮಗನಾದ ಭೀಷ್ಮನಿಗೆ ಇದನ್ನು ಸಮಗ್ರವಾಗಿ ಹೇಳಿ ತಿಳಿಸಿದನು.

೮–೧೦. ಅವನು ಕೂಡ ಭಾರತಯುದ್ಧದ ಕೊನೆಯಲ್ಲಿ ಶರಶಯ್ಯೆಯಲ್ಲಿ ಮಲಗಿಕೊಂಡು, ತನ್ನನ್ನು ಪ್ರಶ್ನೆಮಾಡಿದ ಧರ್ಮರಾಜನಿಗೆ ದೊಡ್ಡ ಸಭೆಯಲ್ಲಿ ವಿವರಿಸಿಹೇಳಿದನು. ಆ ಸಭೆಯಲ್ಲಿ ಆದರದಿಂದ ನಿಂತಿದ್ದ ನಾರದನು ಅಲ್ಲಿ ಆ ಧರ್ಮದವಿವರಣೆಯನ್ನಾಲಿಸಿ ಕೈಲಾಸಕ್ಕೆ ಹೋಗಿ ಶಂಕರನಿಗೆ ಹೇಳಿದನು. ಎಲೈ ಮುನಿಶ್ರೇಷ್ಠನೇ! ಆ ನನ್ನ ತಂದೆಯು ಅದನ್ನೆ ನನಗೆ ತಿಳಿಸಿದನು. ಧರ್ಮದಲ್ಲಿ ನಡೆಯುವವನಾಗಿ ನನ್ನನ್ನು ಪ್ರಶ್ನೆಮಾಡಿದ ನಿನಗೆ ನಾನು ಅದನ್ನೇ ತಿಳಿಸಿದ್ದೇನೆ. 'ಇದನ್ನು ಸತ್ಪಾತ್ರನಾದವನಿಗೇ ತಿಳಿಸಬೇಕು' ಎಂದು ನಮ್ಮ ತಂದೆಯು ನನಗೆ ಹೇಳಿದ್ದಾನೆ.

೧೧. ಸಾತ್ವತರಿಗೊಡೆಯನಾದ ಶ್ರೀವಾಸುದೇವನ ಈ ಮಾಹಾತ್ಮ್ಯವನ್ನು ಯಾರು ಯಾರು ಕೇಳಿದರೊ ಅವರೆಲ್ಲರೂ ತಮ್ಮ ತಮ್ಮ ಮುಕ್ತಿಗಾಗಿ ಅವನಲ್ಲಿ ಪರಮಭಕ್ತಿಯನ್ನಿಡುವವರಾದರು.

೧೨. ರಾಜರ್ಷಿಯಾದ ಯುಧಿಷ್ಠಿರನು ಕೂಡ ಭೀಷ್ಮನು ವಿವರಿಸಿದ

ತಮಾತ್ಮನೋ ಮಾತುಲೇಯಂ ಸರ್ವಕಾರಣಕಾರಣಂ ।
ನಿಶಮ್ಯಾಶ್ಚರ್ಯಜಲಧೌ ನಿಮಮಜ್ಜ ಮಹಾಮತಿಃ ॥ ೧೩ ॥
ವಾಸುದೇವಾದಿಕಂ ವ್ಯೂಹಂ ವಾರಾಹಾದೀಂಶ್ಚ ಸರ್ವಶಃ ।
ಅವತಾರಾನಪಿ ನೃಪೋ ಮೇನೇಽಸ್ಯೈವ ರಮಾಪತೇಃ ॥ ೧೪ ॥
ತತಃ ಸಹಾನುಜೋ ರಾಜಾ ದಿವ್ಯಮಾನುಷವಿಗ್ರಹೇ ।
ಅತ್ಯಂತಂ ಭಕ್ತಿಮಾನ್ ಕೃಷ್ಣೇ ಬಭೂವ ದ್ವಿಜಸತ್ತಮ ॥ ೧೫ ॥
ಶ್ರುತ್ವೇಮಾಂ ಚ ಕಥಾಂ ಸರ್ವೇ ಬ್ರಹ್ಮರಾಜಸುರರ್ಷಯಃ ।
ಸಭಾಯಾಂ ತತ್ರ ಯೇ ಚಾಸಂಸ್ತೇಽಪ್ಯಭೂವನ್ಸವಿಸ್ಮಯಾಃ ॥ ೧೬ ॥
ಕೃಷ್ಣಮೇವ ಪರಂ ಬ್ರಹ್ಮ ವಿದಿತ್ವಾ ತೇ ನಿರಾಕೃತಿ ।
ಭಕ್ತಿಂ ಪ್ರಪೇದಿರೇ ತಸ್ಮಿನ್ ಪ್ರಣಮಂತಸ್ತಮಾದರಾತ್ ॥ ೧೭ ॥
ಇತ್ಥಂ ತಸ್ಯಾಸ್ತಿ ಮಾಹಾತ್ಮ್ಯಮತಸ್ತ್ವಮಪಿ ಸನ್ಮತೇ ।
ಸರ್ವಾತ್ಮನಾ ವಾಸುದೇವಂ ತಮೇವ ಭಜ ಭಕ್ತಿತಃ ॥ ೧೮ ॥

---

ದೇವಕೀಪುತ್ರನ ಮಾಹಾತ್ಮ್ಯವನ್ನು ಕೇಳಿ ಸೋದರರೊಡನೆ ಬಹು ಆನಂದ ಹೊಂದಿದನು.

೧೩. ತಮ್ಮ ಸೋದರಮಾವನ ಮಗನಾದ ಆ ಶ್ರೀಕೃಷ್ಣನು ಸರ್ವಕಾರಣ ಕಾರಣನಾದವನೆಂದು ಕೇಳಿ ಮಹಾಮತಿಯಾದ ಆ ಯುಧಿಷ್ಠಿರನು ಆಶ್ಚರ್ಯ ಸಮುದ್ರದಲ್ಲಿ ಮುಳುಗಿದನು.

೧೪. ವಾಸುದೇವಾದಿ ವ್ಯೂಹಗಳನ್ನೂ, ವರಾಹಾದಿ ಅವತಾರಗಳನ್ನೂ ಎಲ್ಲವನ್ನೂ ರಮಾಪತಿಯಾದ ಅವನ ರೂಪಗಳನ್ನಾಗಿಯೇ ಆ ನೃಪನು ಅರಿತುಕೊಂಡನು.

೧೫. ಎಲೈ ದ್ವಿಜಶ್ರೇಷ್ಠನೇ! ಆ ಬಳಿಕ ತಮ್ಮಂದಿರೊಡಗೂಡಿ ಆ ರಾಜನು ದಿವ್ಯಮಾನುಷವಿಗ್ರಹನಾದ ಶ್ರೀಕೃಷ್ಣನಲ್ಲಿ ಅತ್ಯಂತ ಭಕ್ತಿವಂತನಾದನು.

೧೬. ಆ ಸಭೆಯಲ್ಲಿ ಯಾರು ಯಾರಿದ್ದರೋ ಅಂತಹ ಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ದೇವರ್ಷಿಗಳೂ ಎಲ್ಲರೂ ಈ ಕಥೆಯನ್ನು ಕೇಳಿ ವಿಸ್ಮಯ ಹೊಂದಿದರು.

೧೭. ಕೃಷ್ಣನೇ ನರಾಕೃತಿಯನ್ನು ತಾಳಿರುವ ಪರಬ್ರಹ್ಮನೆಂದು ತಿಳಿದು ಅವರು ಅವನಲ್ಲಿ ಭಕ್ತಿಯನ್ನು ಪಡೆದರು; ಅವನಿಗೆ ಪ್ರಣಾಮ ಮಾಡಿದರು.

೧೮. ಎಲೈ ಸನ್ಮತಿಯೇ! ಅವನ ಮಾಹಾತ್ಮ್ಯವು ಈ ರೀತಿಯಾಗಿರುವುದು. ಆದುದರಿಂದ ನೀನು ಕೂಡ ಸರ್ವಪ್ರಕಾರದಿಂದ ಆ ವಾಸುದೇವನನ್ನೇ ಭಕ್ತಿಯಿಂದ ಭಜಿಸುತ್ತಿರು.

ಶ್ರೀ ವಾಸುದೇವಮಾಹಾತ್ಮ್ಯಮೇತತ್ತೇ ಕಥಿತಂ ಮಯಾ ।
ದುರ್ವಾಸನೋಪಶಮನಂ ಭಗವದ್ಭಕ್ತಿವರ್ಧನಂ ॥ ೧೯ ॥
ಕಥಿತಾನಿ ಪುರಾಣೇಽತ್ರ ಮಯಾಖ್ಯಾನಾನಿ ಯಾನಿ ತೇ ।
ತೇಷಾಂ ಸಾರ ಇದಂ ಬ್ರಹ್ಮನ್ ನಿರ್ಮಥ್ಯೈವ ಸಮುದ್ಧೃತಃ ॥ ೨೦ ॥
ವೇದೋಪನಿಷದಾಂ ಚೈತದ್ರಸೋ ವೈ ಸಾಂಖ್ಯಯೋಗಯೋಃ ।
ಪಂಚರಾತ್ರಸ್ಯ ಕೃತ್ಸ್ನಸ್ಯ ಧರ್ಮಶಾಸ್ತ್ರಸ್ಯ ಚಾನಘ ॥ ೨೧ ॥
ಧನ್ಯಂ ಯಶಸ್ಯಂ ಚಾಯುಷ್ಯಮೇತತ್ಪರಮಮಂಗಲಂ ।
ಸಾಕ್ಷಾದ್ಭಗವತಾ ಗೀತಂ ಸರ್ವಾಭದ್ರವಿನಾಶನಂ ॥ ೨೨ ॥
ಯ ಏತಚ್ಛೃಣುಯಾತ್ಪುಣ್ಯಂ ಕೀರ್ತಯೇದಥ ಯಃ ಪಠೇತ್ ।
ವಾಸುದೇವೇ ಭವೇತ್ತೇಷಾಮಚಲಾ ನಿರ್ಮಲಾ ಮತಿಃ ॥ ೨೩ ॥
ಭಕ್ತಾ ಏಕಾಂತಿಕಾಸ್ತೇ ಚ ಭವೇಯುಸ್ತಸ್ಯ ಮಾನವಾಃ ।
ಬ್ರಹ್ಮರೂಪಾ ವ್ರಜಂತ್ಯಂತೇ ಬ್ರಹ್ಮಧಾಮ ತಮಃಪರಂ ॥ ೨೪ ॥
ಧರ್ಮಾರ್ಥೀ ಲಭತೇಽನೇನ ಧರ್ಮಂ ಕಾಮಂ ಚ ಕಾಮುಕಃ ।
ಧನಾರ್ಥೀ ಧನಮಾಪ್ನೋತಿ ಮೋಕ್ಷಾರ್ಥೀ ಮೋಕ್ಷಮುತ್ತಮಂ ॥ ೨೫ ॥

---

೧೯. ದುಷ್ಟವಾಸನೆಗಳನ್ನು ಪರಿಹರಿಸುವುದಾಗಿಯೂ, ಭಗವಂತನಲ್ಲಿ ಭಕ್ತಿಯನ್ನು ಹೆಚ್ಚಿಸುವುದಾಗಿಯೂ ಇರುವ ಈ ವಾಸುದೇವಮಾಹಾತ್ಮ್ಯವನ್ನು ನಿನಗೆ ಹೇಳಿದ್ದೇನೆ.

೨೦. ಎಲೈ ಬ್ರಾಹ್ಮಣನೇ! ಈ ಪುರಾಣದಲ್ಲಿ ನಾನು ಯಾವ ಯಾವ ಆಖ್ಯಾನಗಳನ್ನು ನಿನಗೆ ಹೇಳಿದ್ದೇನೆಯೋ ಅವುಗಳನ್ನೆಲ್ಲ ಕಡೆದು ತೆಗೆದಿರುವ ಸಾರವೇ ಇದು.

೨೧–೨೪. ಎಲೈ ಪಾಪರಹಿತನೇ! ವೇದೋಪನಿಷತ್ತುಗಳ ಸಾರವಿದು. ಸಾಂಖ್ಯಯೋಗಗಳು, ಪಂಚರಾತ್ರ ಮತ್ತು ಸಮಸ್ತ ಧರ್ಮಶಾಸ್ತ್ರಗಳು ಇವುಗಳೆಲ್ಲದರ ಸಾರವೂ ಇದೇ. ಇದು ಧನ್ಯವಾದುದು; ಯಶಸ್ಕರವಾದುದು; ಆಯುಷ್ಯವರ್ಧಕವಾದುದು; ಪರಮಮಂಗಳವಾದುದು; ಸಮಸ್ತ ಅಮಂಗಳಗಳನ್ನೂ ನಾಶಮಾಡುವಂತಹುದು; ಸಾಕ್ಷಾದ್ಭಗವಂತನೇ ಹೇಳಿರುವುದು. ಯಾರು ಪುಣ್ಯಕರವಾದ ಇದನ್ನು ಕೇಳುವರೋ, ಯಾರು ಹೇಳುವರೋ ಮತ್ತು ಯಾರು ಪಠಿಸುವರೋ ಅವರ ನಿರ್ಮಲವಾದ ಬುದ್ಧಿಯು ವಾಸುದೇವನಲ್ಲಿ ಅಚಲವಾಗಿ ನೆಲಸುವುದು. ಆ ಮಾನವರು ಅವನ ಏಕಾಂತಿಭಕ್ತರಾಗುತ್ತಾರೆ. ಕೊನೆಗಾಲದಲ್ಲಿ ಬ್ರಹ್ಮಸ್ವರೂಪರಾಗಿ ತಮಸ್ಸನ್ನು ಮೀರಿದ್ದಾದ ಬ್ರಹ್ಮಧಾಮವನ್ನೈದುತ್ತಾರೆ.

೨೫–೩೦. ಧರ್ಮಾರ್ಥಿಯಾದವನು ಇದರಿಂದ ಧರ್ಮವನ್ನು ಪಡೆಯು

ಲಭೇತ ವಿದ್ಯಾಂ ವಿದ್ಯಾರ್ಥೀ ಮುಚ್ಯೇದ್ರೋಗೀ ಚ ರೋಗತಃ ।
ಏತಚ್ಛ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೨೬ ॥
ಬ್ರಾಹ್ಮಂ ತೇಜೋ ಲಭೇದ್ವಿಪ್ರಃ ಕ್ಷತ್ರಿಯಶ್ಚ ನರೇಶತಾಂ ।
ಧನಂ ವೈಶ್ಯಃ ಸುಖಂ ಶೂದ್ರಃ ಶ್ರವಣಾದಸ್ಯ ಚಾಪ್ನುಯಾತ್ ॥ ೨೭ ॥
ಏತಚ್ಛ್ರುತ್ವಾ ರಣಂ ಗಚ್ಛನ್ ವಿಜಯಂ ಚಾಪ್ನುಯಾನ್ನೃಪಃ ।
ಪ್ರಾಪ್ನುಯಾತ್ ಸ್ತ್ರೀ ಚ ಸೌಭಾಗ್ಯಂ ಕನ್ಯಾ ಚ ಸ್ವೇಪ್ಸಿತಂ ವರಂ ॥ ೨೮ ॥
ಏತಸ್ಯ ಶ್ರುತಿಕೀರ್ತಿಭ್ಯಾಂ ಶಾಸ್ತ್ರಜಾತಶಿರೋಮಣೇಃ ।
ಯಂ ಯಂ ಯಃ ಕಾಮಯೇತ್ಕಾಮಂ ತಂ ತಂ ಪ್ರಾಪ್ನೋತಿ ಮಾನವಃ ॥
ತಸ್ಮಾತ್ತ್ವಂ ಸರ್ವದಾ ಭಕ್ತ್ಯಾ ಪಠನೇ ತದ್ದ್ವಿಜೋತ್ತಮ ।
ಕಾಯವಾಙ್ಮನೋಭಿಸ್ತಂ ಭಜೇಥಾ ಭಕ್ತವತ್ಸಲಂ ॥ ೩೦ ॥

ಸೌತಿರುವಾಚ :—

ಏತನ್ಮಹಾಸೇನಮುಖಾಬ್ಜನಿಃಸೃತಂ
ಸಾವರ್ಣಿರಾಕರ್ಣ್ಯ ವಚೋಽಮೃತಂ ಸಃ ।
ಚಕಾರ ಭಕ್ತಿಂ ವಸುದೇವನಂದನೇ
ನರಾಕೃತಿಬ್ರಹ್ಮಣಿ ಸರ್ವಮಂಗಲೇ ॥ ೩೧ ॥

---

ತ್ತಾನೆ; ಕಾಮುಕನು ಕಾಮವನ್ನು ಪಡೆಯುತ್ತಾನೆ. ಮೋಕ್ಷಾಪೇಕ್ಷಿಯು ಉತ್ತಮವಾದ ಮೋಕ್ಷವನ್ನು ಹೊಂದುತ್ತಾನೆ. ವಿದ್ಯಾರ್ಥಿಯು ವಿದ್ಯೆಯನ್ನು ಪಡೆಯುತ್ತಾನೆ. ರೋಗಿಯಾದವನು ಆ ರೋಗದಿಂದ ಬಿಡುಗಡೆಹೊಂದುತ್ತಾನೆ. ಇದನ್ನು ಕೇಳಿದಮಾತ್ರದಿಂದಲೇ ಸರ್ವಪಾಪಗಳೂ ಕ್ಷಯವಾಗಿಹೋಗುತ್ತವೆ. ವಿಪ್ರನು ಬ್ರಹ್ಮತೇಜಸ್ಸನ್ನು ಪಡೆಯುತ್ತಾನೆ. ಕ್ಷತ್ರಿಯನು ದೊರೆತನವನ್ನು ಪಡೆಯುತ್ತಾನೆ. ವೈಶ್ಯನು ಧನವನ್ನೂ, ಶೂದ್ರನು ಸುಖವನ್ನೂ ಪಡೆಯುತ್ತಾರೆ. ಇದನ್ನು ಶ್ರವಣಮಾಡಿ ಯುದ್ಧಕ್ಕೆ ಹೋಗುವ ರಾಜನಿಗೆ ವಿಜಯವು ದೊರೆಯುತ್ತದೆ. ಇದನ್ನಾಲಿಸಿದ ಸ್ತ್ರೀಯು ಸೌಭಾಗ್ಯವನ್ನು ಪಡೆಯುತ್ತಾಳೆ. ಕನ್ಯೆಯು ತನಗಿಷ್ಟನಾದ ವರನನ್ನು ಹೊಂದುತ್ತಾಳೆ. ಈ ಮಾಹಾತ್ಮ್ಯವನ್ನು ಕೇಳುವುದರಿಂದಲೂ, ಹೇಳುವುದರಿಂದಲೂ ಶಾಸ್ತ್ರಸಮೂಹಕ್ಕೆ ಶಿರೋಮಣಿಯಾಗಿರುವ ಯಾವ ಯಾವ ಮಾನವನು ಯಾವ ಯಾವ ಅಭೀಷ್ಟವನ್ನು ಕೋರುವನೊ ಅದನ್ನು ತಪ್ಪದೆ ಪಡೆಯುತ್ತಾನೆ. ಎಲೈ ದ್ವಿಜೋತ್ತಮನೇ! ಆದ್ದರಿಂದ ನೀನು ಯಾವಾಗಲೂ ಭಕ್ತಿಯಿಂದ ಇದನ್ನು ಪಠಿಸುತ್ತಾ ಭಕ್ತವತ್ಸಲನಾದ ಆ ಭಗವಂತನನ್ನು ಮನೋವಾಕ್ಕಾಯಗಳಿಂದಲೂ ಭಜಿಸುತ್ತಿರು.

೩೧. ಸೂತಪುರಾಣಿಕನಿಂತೆಂದನು :—ಮಹಾಸೇನನೆನಿಸಿದ ಷಣ್ಮುಖಸ್ವಾಮಿಯ ಮುಖಕಮಲದಿಂದ ಹೊರಹೊಮ್ಮಿದ ಈ ವಚನಾಮೃತವನ್ನಿಂತು

ಯೂಯಂ ಚ ಸರ್ವೇ ನಿಗಮಾಗಮಜ್ಞಾ
ಬ್ರಹ್ಮಣ್ಯದೇವಂ ಭಜನೀಯಮೀಶಂ ।
ಭಜಧ್ವಮೇಕಂ ತಮುದಾರಕೀರ್ತಿಂ
ಶ್ರೀವಾಸುದೇವಂ ನಿಜಧರ್ಮಸಂಸ್ಥಾಃ ॥ ೩೨ ॥
ಗೋಲೋಕಧಾಮಪತಯೇ ಪ್ರಕಾಶಚಯಮೂರ್ತಯೇ ।
ನಮೋಽಸ್ತು ವಾಸುದೇವಾಯ ಭಕ್ತ್ಯಾನಂದವಿವೃದ್ಧಯೇ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಶ್ರೀವಾಸುದೇವಮಾಹಾತ್ಮ್ಯೇ "ಗ್ರಂಥಸಂಪ್ರದಾಯಪ್ರವೃತ್ತಿನಿರೂಪಣಂ" ನಾಮ ದ್ವಾತ್ರಿಂಶೋಽಧ್ಯಾಯಃ

ಶ್ರೀವಾಸುದೇವಮಾಹಾತ್ಮ್ಯಂ ಸಂಪೂರ್ಣಂ

ವೈಷ್ಣವಖಂಡಃ ಸಮಾಪ್ತಃ

---

ಆ ಸಾವರ್ಣಿಯು ಸರ್ವಮಂಗಳನಾಗಿಯೂ, ನರಾಕಾರದ ಪರಬ್ರಹ್ಮನಾಗಿಯೂ ಇರುವ ವಸುದೇವನಂದನನಲ್ಲಿ ಪರಮಭಕ್ತಿಯನ್ನಿಟ್ಟನು.

೩೨. ನೀವುಗಳೆಲ್ಲರೂ ನಿಗಮಗಳನ್ನೂ ಆಗಮಗಳನ್ನೂ ಚೆನ್ನಾಗಿ ತಿಳಿದವರಾಗಿದ್ದೀರಿ; ನಿಮ್ಮನಿಮ್ಮ ಧರ್ಮದಲ್ಲಿ ನೆಲೆಗೊಂಡಿದ್ದೀರಿ. ಆ ನೀವು, ಬ್ರಹ್ಮಣ್ಯದೇವನೂ, ಭಜಿಸಬೇಕಾದವನೂ, ಈಶ್ವರನೂ, ಉದಾರಕೀರ್ತಿಯೂ, ಏಕೈಕನೂ ಆಗಿರುವ ಆ ಶ್ರೀವಾಸುದೇವನನ್ನು ಭಜಿಸಿರಿ.

೩೩. ಭಕ್ತಿ ಆನಂದಗಳು ವೃದ್ಧಿಹೊಂದಲೆಂಬ ಬಯಕೆಯಿಂದ ಗೋಲೋಕಧಾಮಕ್ಕೆ ಒಡೆಯನೂ, ಪ್ರಕಾಶರಾಶಿಯ ಮೂರ್ತಿಯೂ ಆದ ಶ್ರೀವಾಸುದೇವನಿಗೆ ನಮಸ್ಕಾರವನ್ನು ಮಾಡುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದಲ್ಲಿ ಶ್ರೀವಾಸುದೇವಮಾಹಾತ್ಮ್ಯದಲ್ಲಿ "ಗ್ರಂಥಸಂಪ್ರದಾಯಪ್ರವೃತ್ತಿನಿರೂಪಣ"ವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

ಶ್ರೀವಾಸುದೇವಮಾಹಾತ್ಮ್ಯವು ಸಂಪೂರ್ಣವಾದುದು

ವೈಷ್ಣವಖಂಡವು ಸಮಾಪ್ತವಾದುದು

---

1167–46. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿದುವು